# ಡಾ. ಕೆ.ವಿ. ನಾರಾಯಣ

ಹುಟ್ಟಿದ್ದು 1948ರಲ್ಲಿ. ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕು ಕಂಪಲಾಪುರದಲ್ಲಿ. ಅಮ್ಮ-ಅಪ್ಪನ ಕೆಂಚಮ್ಮ ಮತ್ತು ವೀರಣ್ಣ. ಮೊದಲ ಹಂತದ ಓದು ಹುಟ್ಟೂರು ಮತ್ತು ತಾಲೂಕು ಕೇಂದ್ರ ಪಿರಿಯಾಪಟ್ಟಣದಲ್ಲಿ. ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ ವಿಜ್ಞಾನವನ್ನು ತೆಗೆದುಕೊಂಡು ಪಿ.ಯು.ಸಿ. ಓದಿದರು. ಇಂಜಿನಿಯರಿಂಗ್ ಮಾಡಲು ಅವಕಾಶವಿದ್ದರೂ ಇಂಜಿನಿಯರ್ ಆಗಕೂಡದೆಂದು ತೀರ್ಮಾನಿಸಿದ ಕೆ.ವಿ.ಎನ್ ಮತ್ತೆ ಮೈಸೂರಿನ ಯುವರಾಜಾಸ್ ಕಾಲೇಜಿನಲ್ಲಿ ವಿಜ್ಞಾನದ ಅಭ್ಯಾಸವನ್ನು ಮುಗಿಸಿದರು. ಆನಂತರದಲ್ಲಿ ಬಿಎಡ್ ಮುಗಿಸಿ ಆರಂಭಿಸಿದ್ದು ಹೈಸ್ಕೂಲಿನಲ್ಲಿ ಅಧ್ಯಾಪನ. ಮುಂದಿನ ಓದಿಗಾಗಿ ಮತ್ತೆ ಬೆಂಗಳೂರಿನತ್ತ ಪಯಣ. ಆ ಹೊತ್ತಿಗೇನೆ ಸಾಹಿತ್ಯದ ಓದಿಗೂ ಬಿದ್ದು, ಬರವಣಿಗೆಯಲ್ಲೂ ತೊಡಗಿಸಿಕೊಂಡಿದ್ದ ಕೆ.ವಿ.ಎನ್ ಮುಂದಿನ ಓದಿಗೆ ಆರಿಸಿಕೊಂಡಿದ್ದು ಸಾಹಿತ್ಯವನ್ನು. ಬೆಂಗಳೂರು ವಿಶ್ವವಿದ್ಯಾಲಯದ ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಎಂ.ಎ. ತಮ್ಮ ಜೊತೆ ಓದುಗರಾಗಿದ್ದ, ಕನ್ನಡದಲ್ಲಿ ಮಹತ್ವದ ಸ್ತ್ರೀವಾದಿ ಚಿಂತಕಿಯಾಗಿರುವ ಶ್ರೀಮತಿಯವರೊಡನೆ ಒಲುಮೆ ಸಂಭವಿಸಿದ್ದು ಇಲ್ಲೆ. ಗೆಳೆಯರ ಸಮ್ಮುಖದಲ್ಲಿ ಮದುವೆ. ಅಧ್ಯಾಪನ ಕೆಲಸ ಆರಂಭಿಸಿದ್ದು ಬೆಂಗಳೂರಿನ ನ್ಯಾಷನಲ್ ಕಾಲೇಜಿನಲ್ಲಿ. ಬೆಂಗಳೂರು ವಿಶ್ವವಿದ್ಯಾಲಯದ ಜಿ.ಎಸ್.ಎಸ್ ನೇತೃತ್ತ್ವದಲ್ಲಿದ್ದ ಕನ್ನಡ ಅಧ್ಯಯನ ಕೇಂದ್ರಕ್ಕೆ ಆಗಮನ. ಜಿ.ಎಸ್.ಎಸ್ ಮಾರ್ಗದರ್ಶನದಲ್ಲಿ ಆನಂದವರ್ಧನನ 'ಧ್ವನ್ಯಾಲೋಕ'ವನ್ನು ಅಧ್ಯಯನ ಮಾಡಿ ಪಿಎಚ್‌ಡಿ ಪದವಿ ಪಡೆದರು. ಬೋಧಿಸಿದ್ದು ಸಾಹಿತ್ಯ, ಸಾಹಿತ್ಯ ಮೀಮಾಂಸೆ ಮತ್ತು ಭಾಷಾವಿಜ್ಞಾನವನ್ನು. ವಿಜ್ಞಾನದ ತಾತ್ವಿಕತೆಯನ್ನಿರಿಸಿಕೊಂಡೇ ಕೆ.ವಿ.ಎನ್ ಬೆಳೆದದ್ದು ಸಾಹಿತ್ಯ ವಿಮರ್ಶಕರಾಗಿ, ಭಾಷಾವಿಜ್ಞಾನಿಯಾಗಿ, ಕನ್ನಡ ಸಂಸ್ಕೃತಿ ಚಿಂತಕರಾಗಿ.

ತಿಳುವಳಿಕೆ ಮತ್ತು ನಡುವಳಿಕೆ ಎರಡರಲ್ಲೂ ಸರಳವಾಗಿರುವ ಕೆ.ವಿ.ಎನ್ 1993ರಲ್ಲಿ, ಕನ್ನಡಿಗರ ಕನಸಿನ ಸಂಸ್ಥೆಯಾಗಿದ್ದ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಬಂದ ಶುರುವಿನಲ್ಲೇ ರಿಜಿಸ್ಟ್ರಾರ್ ಆಗಿ ಅಲ್ಲಿನ ಆಡಳಿತ ನಿರ್ವಹಣೆಯೊಳಗೂ ಪ್ರವೇಶ ಪಡೆದರು. ಅಲ್ಲಿಂದ ನಿವೃತ್ತಿಯಾಗಿ ಹೊರಗೆ ಬರುವವರೆಗೆ ಹಲವುಜನ ಕುಲಪತಿಗಳ ಅವಧಿಯಲ್ಲಿ ಆಡಳಿತ ಮತ್ತು ಅಧ್ಯಯನಗಳ ಮೂಲಕ ಕನ್ನಡ ವಿಶ್ವವಿದ್ಯಾಲಯವನ್ನು ಕಟ್ಟುವಲ್ಲಿ ಪ್ರಮುಖ ಪಾತ್ರವನ್ನು ನಿರ್ವಹಿಸಿದರು. ಬೆಂಗಳೂರು ವಿಶ್ವವಿದ್ಯಾಲಯದ ತಮ್ಮ ಅಧ್ಯಾಪನ ಸಂದರ್ಭದಲ್ಲೇ ಶುರುಮಾಡಿದ್ದ ಕನ್ನಡಭಾಷೆ ಮತ್ತು ಕನ್ನಡಸಂಸ್ಕೃತಿಯ ಚಿಂತನೆಗಳನ್ನು ಕನ್ನಡಸಮಾಜದ ಬೇರುಗಳ ಮೂಲಕ ಅರಸುವ ಕೆಲಸವನ್ನು ಮತ್ತಷ್ಟು ಸ್ಪಷ್ಟವಾಗಿ ಮಂಡಿಸುತ್ತಾ ಬಂದರು. ಈಗಲೂ, ಭಾಷೆ, ಸಾಹಿತ್ಯ, ಶಿಕ್ಷಣ ಮತ್ತು ವಿಜ್ಞಾನ ಮೊದಲಾಗಿ ಕನ್ನಡಸಮಾಜಕ್ಕೆ ಸಂಬಂಧಿಸಿದ ಯಾವುದರಲ್ಲೂ ಜರೂರಾಗಿ ನಡೆಯಬೇಕಿರುವ ಕೆಲಸ ಇದೇ ಎಂದು ತೊಡಗಿಸಿಕೊಂಡು ಈ ಕಾಲದ ಕನ್ನಡದ ಮಹತ್ವದ ಚಿಂತಕರಾಗಿದ್ದಾರೆ.

ಪ್ರಗತಿ ಪುಸ್ತಕ ಮಾಲೆ–179

ಕೆ.ವಿ.ಎನ್. ಈವರೆಗಿನ ಬರೆಹಗಳು

# ತೊಂಡುಮೇವು

ಕಂತೆ ಐದು

ಡಾ. ಕೆ.ವಿ. ನಾರಾಯಣ




ಪ್ರಗತಿ ಗ್ರಾಫಿಕ್ಸ್ ಬೆಂಗಳೂರು

**KVN** eevaregina barahagalu **TONDUMEVU - Kante Aidu** by **K.V. NARAYANA,** 329, `Gouri', Duo Marvel Colony, Ananthapura Road, Yelahanka, Bangalore-560064 e-mail:narayana48@gmail.com

Publisher: **M. Byregowda** for **PRAGATI GRAPHICS**, Bengaluru, # 119a, 3red cross, 8th main, Hampi nagara(RPC Layout-Vijayanagara), Bengaluru-560104, Ph: 080-2340 9512.

e-mail: byregowda.m1@gmail.com

ISBN : 978-93-81441-91-6

pages : 22 + 358

First Impression : 2010

Revised Impression : 2020

paper : NS Maplitho 80 GSM

price : Rs. 350/-

size : 1/8 Demy

ಪುಟಗಳು : **22 + 358**

ಮೊದಲ ಆವೃತ್ತಿ : **2010**

ಪರಿಷ್ಕೃತ ಆವೃತ್ತಿ : **2020**

ಕಾಗದ : **ಎನ್.ಎಸ್. ಮ್ಯಾಪ್ಲಿಥೊ 80 ಜಿಎಸ್ಎಂ**

ಬೆಲೆ : **ರೂ 350/-**



ಸೈಜ಼್ : **1/8 ಡೆಮಿ**

ಪ್ರತಿಗಳು : **1000**

ರಕ್ಷಾಪುಟ ವಿನ್ಯಾಸ : **ಸುಧಾಕರ ದರ್ಬೆ**

ಪ್ರಕಾಶಕರು : **ಎಂ. ಬೈರೇಗೌಡ, ಪ್ರಗತಿ ಗ್ರಾಫಿಕ್ಸ್ – ಬೆಂಗಳೂರು**
ನಂ. 119, 3ನೇ ತಿರುವು, 8ನೇ ಮುಖ್ಯ ರಸ್ತೆ, ಹಂಪಿನಗರ
ಬೆಂಗಳೂರು-104. ದೂರವಾಣಿ: 080-23409512

ಮುದ್ರಣ : ಶ್ರೀರಂಗ ಗ್ರಾಫಿಕ್ಸ್ SR Graphics Sreeranga Graphics
Chamarajpet, Bangalore - 560 018
9060312298, 8050437201

# ಮನ್ನಿಸಲು ಕೋರುತ್ತ ಈ ಹಿನ್ನೋಟದ ಮಾತುಗಳು

ಬರೆಯುವುದೇಕೇ? ಇನ್ನೊಬ್ಬರೊಡನೆ ಮಾತನಾಡುವ ಒಂದು ದಾರಿಯಾಗಿ ಬರಹವನ್ನು ಹುಡುಕಿಕೊಳ್ಳುತ್ತೇವೆಂದು ತೋರುತ್ತದೆ. ಆದರೆ ಅದು ನಮ್ಮನ್ನೇ ನಮಗೆ ತೋರಿಸುವ ದಾರಿಯೂ ಆಗಿರುತ್ತದೆ ಎಂಬುದು ಗೊತ್ತಾಗಬೇಕು. ದೀಪವೆಂದರೆ ಬೆಳಕೂ ಹೌದು ದಾರಿಯೂ ಹೌದು ಅಲ್ಲವೇ? ಹೀಗೆ ಬರೆದದ್ದೆಲ್ಲಾ ಬರೆದವರ ಅಪರಾಧ ಖಾತೆಗಳಲ್ಲಿ ಜಮೆಯಾಗತೊಡಗುತ್ತದೆ ಎನ್ನುವುದು ನನಗೆ ಗೊತ್ತಾದದ್ದು ತೀರಾ ಈಚೆಗೆ. ಬರೆದದ್ದನ್ನೆಲ್ಲಾ ಒಂದು ಕಡೆ ಕೂಡಿಸಿ ಅಚ್ಚು ಮಾಡುವ ಇರಾದೆಯನ್ನು ನನ್ನೆದುರಿಗಿಟ್ಟು ನನ್ನ ಒಪ್ಪಿಗೆಯನ್ನು ಗೆಳೆಯರು ಪಡೆದುಕೊಂಡಮೇಲೆ ಈ ದಿಟ ನನಗೆ ತಿಳಿಯಿತು. ಬರೆದಾದ ಮೇಲೆ ಬರಹದ ಮೇಲೆ ನನ್ನ ಹಕ್ಕುಗಳು ಇಲ್ಲ ಎಂದು ತಿಳಿದ ನನಗೆ ಈ ಬರಹಗಳನ್ನು ಒಗ್ಗೂಡಿಸಿ ಅಚ್ಚುಮಾಡಿಸುವ ಕೆಲಸಕ್ಕೆ ಅಡ್ಡಿತರಲು ಯಾವ ಹಕ್ಕುಗಳೂ ಇರಲಿಲ್ಲ. ಆದರೆ ಒಂದೊಂದಾಗಿ ಹಳೆಯ ಬರಹಗಳನ್ನು ಒಗ್ಗೂಡಿಸುತ್ತಿರುವಾಗ ಅನಿಸಿದ್ದೇ ಬೇರೆ.

ಬರೆಯುವುದು ಒಂದು ಅಪರಾಧವಿರಬೇಕು. ಬರೆದು ಮೊದಲು ಅಚ್ಚು ಮಾಡಿಸಿದ ಮೇಲೆ ಆ ಅಪರಾಧಕ್ಕೆ ಬಿ ರಿಪೋರ್ಟ್ ಸಿಕ್ಕಿಬಿಟ್ಟಿರುತ್ತದೆ. ಎಷ್ಟೋ ವರುಷಗಳಾದ ಮೇಲೆ ಅದೇ ಬರಹವನ್ನು ಮರಳಿ ಅಚ್ಚು ಮಾಡಲು ನೋಡಿದರೆ ಯಾರೋ ಹಳೆಯ ಕೇಸಿಗೆ ನೀಡಿದ್ದ ಬಿ ರಿಪೋರ್ಟ್‌ನ್ನು ಹಿಂದಕ್ಕೆ ಪಡೆದು ಕೇಸನ್ನು ಮರಳಿ ತೆರೆದು ಕೂರಿಸಿದಂತೆ ತೋರುತ್ತದೆ. ನನಗಂತೂ ಹಾಗೇ ಅನ್ನಿಸಿದೆ. ಆದರೂ ಇದೊಂದು ತಪ್ಪೊಪ್ಪಿಗೆಯ ಗಳಿಗೆ. ಬರೆದು ಏನು ಮಾಡಿದ್ದೇನೋ ಗೊತ್ತಿಲ್ಲ. ಹೀಗೆ ಬರೆಯುವುದು ಅಗತ್ಯವಾಗಿತ್ತೇ? ಅದೂ ಗೊತ್ತಿಲ್ಲ. ಬರೆಯುವುದು ಕಷ್ಟವಲ್ಲ; ಬರೆಯದಿರುವುದೇ ಕಷ್ಟ ಎಂಬ ಮಾತನ್ನು ನಂಬಿ ಈ ಹಾದಿ ಹಿಡಿದಿದ್ದರೂ ಅಚ್ಚರಿಯಿಲ್ಲ.

ಇದೆಲ್ಲ ಹೇಗೆ ಮೊದಲಾಯಿತು? ಆಗ ಬರೆಯುವುದು ಒಂದು ಹೊಸ ಹೊಣೆ ಎಂಬ ನಂಬಿಕೆ ಗಟ್ಟಿಯಾಗಿತ್ತು. ಅದನ್ನು ಹೊರುವವರಿಗೆ ಹೆಚ್ಚಿನ ಸಿದ್ಧತೆ ಬೇಕೆಂದು ನಂಬಿದ್ದೆವು. ಹಾಗೆಯೇ ಸುಮ್ಮನೆ ಬೇಕಾದ್ದಕ್ಕಿಂತ ಹೆಚ್ಚನ್ನು ಬರೆಯುವ ಬಗೆಯನ್ನೂ ನಗೆಗೀಡು ಮಾಡುತ್ತಿದ್ದೆವು. ನನ್ನ ಎಷ್ಟೋ ಒಡನಾಡಿಗಳು ಇದಕ್ಕಿಂತ ಹೆಚ್ಚು ಬರೆಯಬಹುದಾಗಿದ್ದರೂ ಹಾಗೆ ಬರೆಯದೇ ಈಗಲೂ ನನ್ನಂತಹವರನ್ನು ನೋಡಿ ನಗುತ್ತಿದ್ದಾರೆ. ಇದು ನನಗೂ ಗೊತ್ತಿದೆ.

ಮೊದಮೊದಲು ಮಾತಿನ ಮುಂದುವರಿಕೆಯಾಗಿ ಈ ಬರಹಗಳು ಮೈತಳೆದವೆಂದು ತೋರುತ್ತದೆ. ಮಾತಿನ ಹರಹನ್ನು ಕಡಿಮೆ ಮಾಡಿಕೊಂಡು, ನುಡಿದದ್ದಕ್ಕೆ ಹೊಣೆಗಾರರಾಗುವ ಬಯಕೆಯಿಂದಾಗಿ ಈ ಬರಹಗಳು ಹುಟ್ಟಿಕೊಂಡವು. ಅಂದಂದಿನ ದಂದುಗಕ್ಕೆ ಹೆಣೆದ, ಹೊಸೆದ ಬರಹಗಳೆಂದು ತೋರಿದರೂ ಎಲ್ಲರೊಡನೆ ಆಡುತ್ತಿದ್ದ ಮಾತುಗಳ ಜಾಲದಲ್ಲಿ ಇದ್ದ ನಂಟು ಈ ಬರಹಗಳಲ್ಲೂ ಸೇರಿಕೊಂಡಿದೆ. ಇದು ಸ್ಪಷ್ಟತೆಯೂ ಆಗಿರಬಹುದು; ಕೆಲವೊಮ್ಮೆ ಗೊಂದಲವೂ ಆಗಿದ್ದಿರಬಹುದು. ಆದರೆ ಸುಳ್ಳು ಆಗಿಲಾರದು. ಸಾಹಿತ್ಯದ ಓದುಗರೂ ಮೇಸ್ಟ್ರೂ ಆಗಿದ್ದ ನನ್ನಂತಹವರಿಗೆ ಏಳು ಎಂಟನೆಯ ದಶಕಗಳು ಹೊಸ ಸವಾಲನ್ನು ಎಸೆದಿದ್ದವು. ಸರ್ವರ ಸಮ್ಮತಿಯ ಸಂತೆಯ ದಾರಿಯನ್ನು ಹಿಡಿಯಬಾರದೆಂಬ ಹಟವಿದ್ದರೂ ಆ ಸಮ್ಮತಿಯ ದಾರಿಗೆ ಇದ್ದ ಮನ್ನಣೆಯ ಸೆಳೆತದಿಂದ ತಪ್ಪಿಸಿಕೊಳ್ಳುವುದು ಕಡುಕಷ್ಟವಾಗಿತ್ತು. ಇದು ಎಲ್ಲದರಲ್ಲೂ ಸ್ವಂತಿಕೆ ಇರಬೇಕೆಂಬ ಅಹಂಕಾರದ ಮಾತಲ್ಲ. ಆದರೆ ನಮ್ಮ ಹುಡುಕಾಟದಿಂದ ಹೊಸ ದಾರಿ ಸಿಗಬೇಕು. ಕೊನೆಯ ಪಕ್ಷ ನಮ್ಮ ದಾರಿಯನ್ನು ನಾವೇ ಕಂಡುಕೊಂಡೆವೆಂಬ ಸಂತಸವಾದರೂ ಸಿಗಬೇಕಿತ್ತು. ಅವರೆಗೆ ಕೈಹಿಡಿದು ನಡೆಸುತ್ತಿದ್ದ ಮಾದರಿಗಳು ದಾರಿ ತಪ್ಪಿಸುತ್ತಿರಲಿಲ್ಲವಾದರೂ ಕರೆದುಕೊಂಡು ಹೋಗುತ್ತಿದ್ದ ಹಾದಿಯಲ್ಲಿ ನಮ್ಮತನಕ್ಕೆ ಎರವಾಗಬೇಕೆಂಬ ಅನಿಸಿಕೆ ಮಾತ್ರ ಗಟ್ಟಿಗೊಳ್ಳುತ್ತಿತ್ತು. ಈಗಲೂ ಅದು ಹುಚ್ಚಾಟವಾಗಿರಲಿಲ್ಲ ಎನ್ನುವ ನಂಬಿಕೆ ಇದೆ.

ನೆನಪಿದೆ. 1971ರಲ್ಲಿ ನಡೆದ ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು ಎಂಬ ವಿಷಯದ ವಿಚಾರ ಸಂಕಿರಣವೊಂದರಲ್ಲಿ ಬೇಂದ್ರೆ, ಶಂಕರ ಮೊಕಾಶಿ ಪುಣೇಕರ್ ಮತ್ತು ಲಂಕೇಶ್ ಅವರ ನಡುವೆ ನಡೆದ ಮಾತಿನ ಮಾರಾಮಾರಿಯನ್ನು ಕಂಡು, ಕೇಳಿ ನಾವೆಲ್ಲ ಹುಡುಗರು ದಿಕ್ಕುತಪ್ಪಿದಂತಾಗಿದ್ದ ಗಳಿಗೆ ಈಗಲೂ ನೆನಪಿದೆ. ದಿಕ್ಕುತಪ್ಪಿದಂತೆ ಅನಿಸಿದ್ದಕ್ಕೆ ಆ ಜಗಳ ಮತ್ತು ಅದರ ತಿರುಳು ಮಾತ್ರ ಕಾರಣವಾಗಿರಲಿಲ್ಲ. ಮೊದಲ ಬಾರಿಗೆ ನಾವು ಕಟ್ಟಿಕೊಂಡಿದ್ದ ಗೌರವದ ವಿಗ್ರಹಗಳು ಪುಡಿಪುಡಿಯಾಗುತ್ತಿದ್ದನ್ನು ಕಾಣುತ್ತಿದ್ದ ಅನುಭವವೂ ಕಾರಣವಾಗಿದ್ದಿರಬೇಕು. ಮಾತಿಗೆ ಇರುವ ಬಲವನ್ನು ನಂಬಿದ್ದವರು ಬೇಂದ್ರೆ, ವಾಕ್ ಸ್ವಾತಂತ್ರ್ಯದ ಹೆಚ್ಚಳವನ್ನು ಜವಾಹರ್ ಲಾಲ್ ನೆಹರೂ ಅವರಿಗೆ ತಾವು ಮನವರಿಕೆ ಮಾಡಿಕೊಟ್ಟದ್ದನ್ನು ಹೇಳುತ್ತಿದ್ದರು. ಆದರೆ ನಾಡಿನ ಚರಿತ್ರೆಯ ಆ ಹಂತವನ್ನು ಬಲ್ಲವರಿಗೆ ಅಂದಿನ ಪರಿಸ್ಥಿತಿಯ ಅರಿವಿತ್ತು. ಎಲ್ಲರಿಗೂ ಮಾತಾಡಲು ಅವಕಾಶವಿದ್ದರೂ ಆ ಮಾತನ್ನು ಕೇಳಿಸಿಕೊಳ್ಳುವವರೇ ಇಲ್ಲದಂತಾದರೆ ಆಗ ಮಾತಿಗೇನು ಬಲವೆಂಬುದು ಲಂಕೇಶರ ಪ್ರಶ್ನೆಯಾಗಿತ್ತು. ಇದೆಲ್ಲ ಮುಂದಿನ ನಾಲ್ಕೈದು ವರ್ಷಗಳಲ್ಲಿ ಹರಳುಗಟ್ಟುತ್ತ ನಾಡಿನಲ್ಲಿ ಅನುಶಾಸನ ಪರ್ವ ಮೊದಲಾದಾಗ ಲಂಕೇಶ್ ಹೇಳಿದ್ದರ ತಿರುಳು ಮನವರಿಕೆಯಾಗತೊಡಗಿತ್ತು. ಮಾತುಗಳನ್ನು ಗೋಡೆಯ ಎದುರು ಆಡಬೇಕಾಗಿ ಬಂದರೆ ಏನಾಗುವುದೆಂಬ ಅಂಜಿಕೆಯೇ ಬರಹಕ್ಕೆ ಕೋಡು ಮೂಡಿಸಿದ್ದಿರಲೂಬಹುದು. ಬರಹಕ್ಕೆ ಈಗ ಮತ್ತು ಇಲ್ಲಿ ಎಂಬ ಕಟ್ಟು ಇರುವುದಿಲ್ಲ. ಹಾಗಾಗಿ ಎಲ್ಲಿಯೋ ಯಾರೋ ಅದನ್ನು ಓದಬಹುದಾಗಿದೆ. ಹಾಗಾಗಿ ಬರಹಕ್ಕೆ ಬಲ ಉಳಿದೇ ತೀರುತ್ತದೆ ಎನ್ನುವ ಒತ್ತಾಸೆ ಆಗ ಬಲಗೊಂಡಿದ್ದಿರಬಹುದು. ಮುಂದಿನ ದಶಕಗಳಲ್ಲಿ ಅಕ್ಷರ ಕಲಿತವರಲ್ಲಿ ಹಲವರು ಏಕೆ ಬರಹದ ಮೊರೆ ಹೊಕ್ಕರು

ಎಂಬುದಕ್ಕೆ ಇಲ್ಲಿ ಸೂಚನೆಗಳು ಸಿಕ್ಕಿಯಾವು.

ಹೊಸ ದಾರಿಯನ್ನು, ಇಲ್ಲವೇ ದಾರಿಯನ್ನು ಹೊಸದಾಗಿ ಕಂಡುಕೊಳ್ಳುವ ಮಾತನ್ನು ಮೇಲೆ ಆಡಿದ್ದೇನೆ. ಸಾಹಿತ್ಯವನ್ನು ಅರಿಯಲು ನಮಗೆ ಒದಗಿಸಿಕೊಟ್ಟದ್ದ ಮಾದರಿಗಳು ನಮ್ಮ ಕೃತಿಗಳನ್ನು ಹೊರಗಿನಿಂದ ನೋಡಲು ಒತ್ತಾಯಿಸುತ್ತಿವೆ ಎಂಬ ಅನಿಸಿಕೆ ಮೂಡಿತ್ತು. ನಾವು ತೆರೆದುಕೊಂಡ ಹಾಗಾಗಿಯೇ ಬಳಸುತ್ತಿದ್ದ ಸಾಹಿತ್ಯತತ್ತ್ವ ಮತ್ತು ಪರಿಕರಗಳು ಕನ್ನಡದ ಪರಂಪರೆಯಿಂದ ಹುಟ್ಟಿಕೊಂಡಿರಲಿಲ್ಲ. ಇದಕ್ಕೆ ಚರಿತ್ರೆಯಲ್ಲಿ ಕಾರಣಗಳೇನೇ ಇರಲಿ. ಆದರೆ ಅದೇ ದಾರಿಯನ್ನು ಹಿಡಿದು ನಡೆಯಬೇಕೆಂಬ ಒತ್ತಾಯಕ್ಕೆ ಮಾತ್ರ ಕಾರಣಗಳಿರಲಿಲ್ಲ. ಅರಿಯುವುದು ಮತ್ತು ಬೆಲೆಕಟ್ಟುವುದು ಈ ಎರಡೂ ಕೆಲಸಗಳಲ್ಲಿ ಎರಡನೆಯದಕ್ಕೆ ಮನ್ನಣೆ ಹೆಚ್ಚಾದಾಗ ಕೃತಿಗಳಲ್ಲಿ, ಕೃತಿಕಾರರಲ್ಲಿ ಆಯ್ಕೆಗಳನ್ನು ಮಾಡಿಕೊಳ್ಳುವ ಹಾಗೂ ನಿರಾಕರಣೆ ಮಾಡುವ ನೆಲೆಗಳು ಬೇರೂರತೊಡಗುತ್ತವೆ. ನಮ್ಮ ಸಾಹಿತ್ಯ ಚರಿತ್ರೆಯೆಂಬ ಬರೆವಣಿಗೆಯಲ್ಲಿ ಇದೇ ಕೆಲಸವನ್ನು ಮಾಡಿದ್ದೇವೆ ತಾನೆ. ಇದರಿಂದ ಕೃತಿಗಳ ಲೋಕವನ್ನು ಒಳಹೊಗುವ ದಾರಿಗಳೇ ಮುಚ್ಚಿಹೋಗುತ್ತವೆ. ಹಾಗಿದ್ದರೆ ಬೆಲೆ ಕಟ್ಟುವುದಕ್ಕಿಂತ ಅರಿಯುವ ನೆಲೆಗೆ ಮನ್ನಣೆ ಸಿಗಬೇಕೆಂಬ ಇರಾದೆ ಮುಂಚೂಣಿಗೆ ಬಂತು. ಇದರಿಂದ ನಾನು ಬರೆದದ್ದನ್ನು ಓದಿದವರು ನನ್ನನ್ನು ಸತೃಣಾಭ್ಯವಹಾರಿ ಎಂದು ಬೆರಳುಮಾಡಿ ತೋರಿಸತೊಡಗಿದರು. ಅಂದರೆ ಸಾಹಿತ್ಯಕ ಅಭಿರುಚಿ ಇಲ್ಲದ , ಏನೂ ಸಿಕ್ಕರೂ ಅದೆಲ್ಲವನ್ನೂ ಮೇಯುವವನು ಎಂದಾಯಿತು. ಈ ಬಿರುದಿನಿಂದ ನನಗೇನೂ ಬೇಸರವಾಗಿಲ್ಲ. ಆದರೆ ಹಲವು ಒತ್ತಡಗಳಿಗೆ ಒಳಗಾಗಿ ತನ್ನ ಚಹರೆಗಳಿಗೆ ಎರವಾಗಬೇಕಾಗಿ ಬಂದಿರುವ ಕನ್ನಡ ಬರೆವಣಿಗೆಯನ್ನು ನೋಡಲು ನಮಗೆ ಬೇರೆ ಯಾವುದಾದರೂ ದಾರಿಗಳಿದ್ದವೋ ಇಲ್ಲವೋ ನನಗೆ ತಿಳಿಯದು.

ನಮ್ಮ ಕೃತಿಗಳ ಒಡಲಿನಿಂದಲೇ ನಮಗೆ ಬೇಕಾದ ಅರಿಯುವ ಮಾಪುಗೋಲುಗಳನ್ನು, ಪರಿಕರಗಳನ್ನು ಹುಡಕಿಕೊಳ್ಳಬೇಕೆಂದು ಹೇಳಿದಾಗ ಎರಡು ಬಗೆಯಲ್ಲಿ ಬದಲುಗಳು ಬಂದವು. ಒಂದು ನೆಲೆಯಲ್ಲಿ ನಿಂತವರು ಹೀಗೆ ನಮ್ಮದೇ ಮಾಪುಗೋಲು ಮತ್ತು ಪರಿಕರಗಳನ್ನು ಹುಡುಕುವುದೆಂದರೆ ಹಳೆಯದಕ್ಕೆ ಮರಳುವ, ಮರುಗಳಿಕೆಯ ದಾರಿಯಾಗಿದೆ.ಇದು ಹಳಹಳಿಕೆಯ ದಾರಿ. ಹಾಗಾಗಿಯೇ ಇದು ಮುನ್ನೋಟಕ್ಕೆ ಎರವಾಗುವ ದಾರಿ ಎಂದರು. ಮತ್ತೆ ಕೆಲವರು ಹೀಗೆ 'ಬೇರೆ' ಎಂದು 'ಹೊರಗಿನದು' ಎಂದು ತಿಳಿಯಲಾದ ಪರಿಕರಗಳನ್ನು ತೊರೆದರೆ ನಾವೇ ಬಡವಾಗಿಬಿಡುತ್ತೇವೆ; ಆಗ ನಮಗೆ ದಿಕ್ಕೇ ತೋಚದಂತೆ ಆಗಿಬಿಡಬಹುದು ಎಂದರು. ಆದರೆ ಈ ಎರಡೂ ಬದಲುಗಳ ಬೇರುಗಳು ಗಟ್ಟಿಯಾಗಿರಲಿಲ್ಲ. ಏಕೆಂದು ನೋಡೋಣ.

ಬರೆವಣಿಗೆ ಇಲ್ಲವೇ ಜನರ ನೆನಪಿನಲ್ಲಿರುವ ರಚನೆಗಳನ್ನು ಅರಿಯುವ ಪರಿಕರಗಳು ಒಳಗಿನಿಂದಲೇ ಬರಬೇಕು ಎನ್ನುವ ಮಾತನ್ನು ಸರಿಯಾಗಿ ತಿಳಿದರೆ ಅದು ಕೃತಿಗಳ ಒಡಲು ಮತ್ತು ಪರಿಸರ ಇವೆರಡಕ್ಕೂ ಸಂಬಂಧಿಸಿದ ಸಂಗತಿ ಎನ್ನುವುದು ಗೊತ್ತಾಗುತ್ತದೆ. ಒಂದು ಉದಾಹರಣೆಯನ್ನು ನೋಡೋಣ. ಇಪ್ಪತ್ತನೆಯ ಶತಮಾನದ ಮೊದಮೊದಲ ಮೂರ್‍ನಾಲ್ಕು ದಶಕಗಳಲ್ಲಿ ನಡೆದ ಸಂಗತಿ ಇದು. ಜನರಲ್ಲಿ ಬಾಯ್ದೆರೆಯಾಗಿ ಇದ್ದ

ಜನಪದ ಸಾಹಿತ್ಯವನ್ನು ಆಗ ಕೂಡಿಹಾಕಲು ಹೊರಟವರು ತಳೆದ ನಿಲುವನ್ನು ನೋಡಿ. ಎಲ್ಲ ಬರೆವಣಿಗೆಗೂ ತಾಯಿಬೇರು ಈ ಜನಪದಸಾಹಿತ್ಯ ಎನ್ನುವ ನಿಲುವನ್ನು ತಳೆದರಷ್ಟೆ ಹಲಸಂಗಿಯ ಗೆಳೆಯರು ಕೂಡಿ ಹಾಕಿದ ಇಂತಹ ಬರೆವಣಿಗೆಯನ್ನು ಅವರು ನೋಡಿದ ಬಗೆಯನ್ನು ನೋಡಿ. ಹಾಗೆಯೇ ತೆಂಕಣಸೀಮೆಯಲ್ಲಿ ಮಾಸ್ತಿಯವರೇ ಮೊದಲಾಗಿ ಬಿಎಂಶ್ರೀ,ಗೊರೂರು ಮುಂತಾದವರು ಜನಪದಗೀತೆಗಳನ್ನು ಇಂದಿನ ಬರೆವಣಿಗೆಯ ಬೇರು ಎಂತಲೇ ತಿಳಿದಿದ್ದರು. (ಹಲಸಂಗಿಯ ಗೆಳೆಯರು ಕೊಂಚ ಮುಂದೆ ಹೋಗಿ ತಮ್ಮವೇ ಕೆಲವು ರಚನೆಗಳನ್ನು 'ಗರತಿಯ ಹಾಡು' ಕೃತಿಯಲ್ಲಿ ಜನರ ಹೆಸರಿನಲ್ಲಿ ಬಳಕೆ ತಂದಿದ್ದಾರೆಂದು ನನಗೆ ತೋರುತ್ತದೆ. ಇದು ಆಪಾದನೆಯಲ್ಲ. ಜನರ ನೆನಪಿನ ರಚನೆ ಮತ್ತು ನಮ್ಮ ಇಂದಿನ ರಚನೆಗಳ ನಡುವೆ ಇರುವ ಕರುಳುಬಳ್ಳಿಯ ನಂಟನ್ನು ತಿಳಿಸಿ ಹೇಳುವ ಬಗೆಯೂ ಇದಾಗಿತ್ತು.) ಚರಿತ್ರೆ ಮತ್ತು ಸಂವೇದನೆಗಳು ಕಡಿದುಹೋಗದೆ ಮುಂದುವರೆದುಕೊಂಡು ಬಂದಿವೆ ಎಂಬುದನ್ನು ತೋರಿಸುವುದು ಅಂದಿನ ಪರಿಸರದ ಒತ್ತಾಯವಾಗಿತ್ತಷ್ಟೆ ಹೀಗಾಗಿ ಜನಪದ ರಚನೆಗಳನ್ನು ನೊಡುವ ಈ ಬಗೆಯ ಪರಿಕರ ಹುಟ್ಟಿ ಕೊಂಡದ್ದು ಸರಿಯಾಗಿಯೇ ಇದೆ. ಕೆಲವರು ಇದರ ಹಿನ್ನೆಲೆಯಲ್ಲಿ ಐರ್ಲೆಂಡ್ ನಾಡು ಬಿಡುಗಡೆಗಾಗಿ ಹೋರಾಡುತ್ತಿರುವಾಗ ಅಲ್ಲಿನ ಸಾಂಸ್ಕೃತಿಕ ನಾಯಕರು ಅಲ್ಲಿನ ಜನಪದರಚನೆಗಳನ್ನು ನೋಡಿದ ಬಗೆಯ ಪ್ರಭಾವವಿದೆ ಎನ್ನಬಹುದು. ಆದರೆ ಇದನ್ನು ಗಟ್ಟಿಯಾಗಿ ಹೇಳಲು ಆಗುತ್ತಿಲ್ಲ. ಏಕೆಂದರೆ ಬೇಂದ್ರೆಯವರನ್ನು ಐರ್ಲೆಂಡಿನ ಏಈ ಕವಿಯ ಹಾಗೆ ಉಳಿದವರು–ಅಂದರೆ ಡಬ್ಲ್ಯೂ.ಬಿ. ಯೇಟ್ಸ್, ಲೇಡಿ ಗ್ರೆಗೊರಿ, ನಾಟಕಕಾರ ಜೆ.ಎಂ. ಸಿಂಜ್(ಅಥವಾ ಸಿಂಗ್?) ಸೆಳೆದಂತೆ ತೋರುತ್ತಿಲ್ಲ. ತೆಂಕಣನಾಡಿನಲ್ಲಿ ಕುವೆಂಪು ಅವರಿಗೆ ಕನ್ನಡದಲ್ಲಿ ಬರೆಯಲು ಹೇಳಿದ ಜೆ.ಎಚ್.ಕಸಿನ್ಸ್ ಆ ನಾಡಿನವನೇ ಆಗಿದ್ದರೂ ಇಲ್ಲಿಯ ಬರಹಗಾರರ ಮೇಲೆ ಐರಿಶ್ ಕವಿಗಳ ನೆರಳೂ ಬಿದ್ದಂತೆ ತೋರುತ್ತಿಲ್ಲ. ಹಾಗಾಗಿ ಜನಪದರಚನೆಗಳನ್ನು ನೋಡಲು ಆಯ್ದುಕೊಂಡ ಮಾದರಿ ನಮ್ಮ ಒಳಗಿನ ಒತ್ತಡದಿಂದಲೇ ಹುಟ್ಟಿದ್ದೆಂದು ತೋರುತ್ತದೆ.

ಆದರೆ ಮುಂದೆ ಕನ್ನಡದ ಗುರುತುಗಳನ್ನು ಹುಡುಕಿಕೊಳ್ಳುವ ಕೆಲಸ ಮೊದಲಾದಾಗ ನಾವು ಹಿಡಿದ ದಾರಿಯೇ ಬೇರೆಯಾಯಿತು. ಕನ್ನಡವನ್ನು ದ್ರಾವಿಡ ಸಂಸ್ಕೃತಿಯ ನೆಲೆಯಲ್ಲಿ ನೋಡುವ ಬಗೆ ನೆಲೆಯೂರಿತಷ್ಟೆ ಆಗ ಜನಪದಸಾಹಿತ್ಯ ನಮಗೆ ಶಿಷ್ಟಸಾಹಿತ್ಯಕ್ಕೆ ವಿರುದ್ಧವಾದ ನೆಲೆಯಲ್ಲಿ ಕಾಣತೊಡಗಿತು. ಶಿಷ್ಟವೆಂದು ನಾವು ಗುರುತಿಸಿಕೊಂಡ ಸಾಹಿತ್ಯವು ವೈದಿಕ ಮತ್ತು ಧಾರ್ಮಿಕ ನೆಲೆಗಳಿಂದ ಒತ್ತಾಸೆ ಪಡೆದುಕೊಂಡಿದ್ದರೆ ಜನಪದಸಾಹಿತ್ಯವನ್ನು ಅವೈದಿಕ ನೆಲೆಯಲ್ಲಿ ಇರಿಸಿ ನೋಡತೊಡಗಿದೆವು. ಇದೂ ಕೂಡ ಅಂದಿನ ನಮ್ಮ ಕನ್ನಡ ಗುರುತುಗಳ ಹುಡುಕಾಟದ ಕಾರಣದಿಂದ ಹುಟ್ಟಿಕೊಂಡ ಚಿಂತನೆ. ಒಂದೆರಡು ದಶಕಗಳು ಕಳೆದಮೇಲೆ ನಾವು ಜನಪದಸಾಹಿತ್ಯಕ್ಕೆ ಕೊಟ್ಟುಕೊಂಡಿದ್ದ ಕೃಷಿ ಮೂಲವನ್ನು ಬಿಟ್ಟುಕೊಟ್ಟು ದಲಿತ ನೆಲೆಗಳನ್ನು ಕಂಡುಕೊಳ್ಳಬೇಕಾದ ಅಗತ್ಯ ಉಂಟಾಯಿತು. ಅವರೆಗೆ ಕಡೆಗಣನೆಗೆ ಒಳಗಾಗಿದ್ದ ಹತ್ತಾರು ಒಳಹೊಳೆಗಳು ಈಗ ಮೈದುಂಬಿಕೊಂಡಂತೆ ತೋರತೊಡಗಿದವು. ಇದೆಲ್ಲವನ್ನೂ ಹೇಳಿದ್ದರ ಉದ್ದೇಶವಿಷ್ಟೆ ನಮ್ಮ ಸಾಹಿತ್ಯವನ್ನು ಅರಿಯುವ ಮಾಪುಗೋಲುಗಳನ್ನು ಪರಿಕರಗಳನ್ನು ನಮ್ಮ ಬೇಕು

ಬೇಡಗಳಿಗೆ ತಕ್ಕಂತೆ ಹುಡುಕಿಕೊಳ್ಳಬೇಕು ಎನ್ನುವುದು ಅಷ್ಟೇನೂ ಗಾಬರಿ ಹುಟ್ಟಿಸಬೇಕಾದ ಸಂಗತಿಯಲ್ಲ ಎನ್ನುವುದನ್ನು ಇಲ್ಲಿ ಹೇಳಬೇಕಾಗಿದೆ. ನಮಗೇ ಗೊತ್ತಿಲ್ಲದಂತೆ ನಾವು ಆ ಮಾದರಿಯನ್ನು ನಂಬಿಯೇ ಹೆಜ್ಜೆ ಇಡುತ್ತಿದ್ದೇವೆ. ನಾವು ಹುಡುಕಿಕೊಂಡ ದಾರಿ ಸರಿಯೋ ತಪ್ಪೋ ಎನ್ನುವುದನ್ನು ನೋಡಿಕೊಳ್ಳುವ ಅವಕಾಶವನ್ನು ನಾವು ಕಾಯ್ದುಕೊಂಡಿದ್ದೇವೆಯಷ್ಟೆ

ಸಾಹಿತ್ಯ ಕೃತಿಯ ದಿಟವಾದ ಇರವು ಎಲ್ಲಿದೆ ಎನ್ನುವುದು ನಮ್ಮನ್ನೆಲ್ಲ ಕಾಡಿಸುತ್ತಿದ್ದ ಇನ್ನೊಂದು ಪ್ರಶ್ನೆ. ಭಾಷೆಯೇ ಅದರ ಮೈ ಆಗಿದ್ದರಿಂದ ಅದರ ಭಾಷಿಕ ಶರೀರವನ್ನೇ ನೆಮ್ಮಿ ಅದನ್ನು ಅರಿಯಲು ಮುಂದಾಗಬೇಕೆಂಬುದು ಆಗ ಹೊಳೆದ ದಾರಿ. ಆ ಭಾಷಿಕ ಮೈಯನ್ನು ಬಿಟ್ಟು ನಾವು ಕಟ್ಟಿಕೊಟ್ಟ ಯಾವ ಹೊರ ಪ್ರಭಾವಳಿಯೂ ಕೂಡ ಕೃತಿಯನ್ನು ಅರಿಯಲು ನೇರವಾಗಿ ನೆರವಾಗಲಾರದು ಮತ್ತು ಅಂತಹ ನೆರವನ್ನು ಪಡೆದರೆ ದಾರಿ ತಪ್ಪುವುದಂತೂ ದಿಟ ಎನ್ನುವುದು ಆಗ ಅನಿಸಿತ್ತು. ಹಾಗಾಗಿಯೇ ಕೃತಿಗಳಿಗೆ ನಿನ್ನೆಗಳಿಲ್ಲ ಎಂದು ನಂಬಬೇಕಾಯಿತು. ಅದನ್ನೇ ಪಾಠಗಳನ್ನು ಕೇಳುತ್ತಿದ್ದ ವಿದ್ಯಾರ್ಥಿಗಳಿಗೂ ಹೇಳಬೇಕಾಯ್ತು. ವಿಕ್ರಮಾರ್ಜುನ ವಿಜಯವಿರಲಿ, ಕುಮಾರವ್ಯಾಸ ಭಾರತವಿರಲಿ, ಬಸವರಾಜದೇವರ ರಗಳೆಯಿರಲಿ, ಮಲೆಗಳಲ್ಲಿ ಮದುಮಗಳು ಇರಲಿ, ಜೋಗಿಯಿರಲಿ ಈ ಎಲ್ಲವೂ ಒಂದೇ ಸಾಲಿನಲ್ಲಿ ನಿಂತಂತೆ ತೋರತೊಡಗಿದವು. ಯಾವುದೂ ಒಂದಾದ ಮೇಲೊಂದರಂತೆ ಹುಟ್ಟಿಕೊಂಡಂತೆ ತೋರಲೇ ಇಲ್ಲ. ದಿಟ. ಒಂದು ಹತ್ತನೆಯ ಶತಮಾನದ್ದು, ಇನ್ನಾವುದೋ ಹದಿನೈದರದ್ದು, ಮತ್ತೊಂದು ನಿನ್ನೆ ಮೊನ್ನೆ ಹುಟ್ಟಿದ್ದು ಸರಿ. ಆದರೆ ಓದುವವರಿಗೆ ಅವೆಲ್ಲವೂ ಈಗ ಮತ್ತು ಇಲ್ಲಿ ಮಾತ್ರ ದಿಟ.

ಈ ನೆಲೆಯನ್ನು ಒಪ್ಪಿದಾಗ ಕೃತಿಯೊಳಗೇ ಇರುವ ಅದು ಹುಟ್ಟಿದಕಾಲದ ನೆನಪನ್ನು ಕೈಬಿಡುವುದು ತಪ್ಪಲ್ಲವೇ ಎಂದು ಕೇಳುವುದುಂಟು. ಅದು ಸರಿಯೇ. ಇಲ್ಲಿಯೂ ಯಾವ ನೆನಪೇ ಆದರೂ ಕೂಡ ಅದು ನಮ್ಮ ಕಾಲದೊಡನೆ ನಂಟನ್ನು ಬೆಳೆಸಿಕೊಳ್ಳದಿದ್ದರೆ ಅದು ಕೆಲಸಕ್ಕೆ ಬಾರದಂತೆಯೇ ಸರಿ ಎನ್ನುವುದು ನನ್ನ ತಿಳುವಳಿಕೆ. ನಾವು ನಮಗೆ ಬೇಡದ ನೆನಪುಗಳನ್ನು ಹೊತ್ತು ನಡೆಯುತ್ತಿರುವವರಲ್ಲ. ಹಾಗೆ ಹೊತ್ತು ನಡೆಯಬೇಕೆಂಬ ಒತ್ತಾಯಗಳನ್ನು ನಿರಾಕರಿಸುವವರು. ಹಾಗಾಗಿ ಕೃತಿಯಲ್ಲಿ ಅದು ಹುಟ್ಟಿದಕಾಲಕ್ಕೆ ಮಾತ್ರ ಸಲ್ಲುವ ನೆನಪಿನ ನಂಟುಗಳಿರುತ್ತವೆ ಎನ್ನುವುದನ್ನು ಒಪ್ಪಿ ಅದರಿಂದಾಗಿ ಅದನ್ನು ಅರಿಯುವ ಬಗೆಯಲ್ಲೇ ಬದಲಾವಣೆಯನ್ನು ಮಾಡಿಕೊಳ್ಳಬೇಕು ಎನ್ನುವುದನ್ನು ನಾನು ಒಪ್ಪಲಾರೆ.

ನಾನು ಮತ್ತು ನನ್ನ ಸರೀಕ ಕನ್ನಡ ಮೇಸ್ಟ್ರುಗಳು ಇನ್ನೊಂದು ಇಕ್ಕಟ್ಟನ್ನು ಎದುರಿಸುತ್ತಿದ್ದೆವೆಂದು ತೋರುತ್ತದೆ. ಪಶ್ಚಿಮದ ಸಾಹಿತ್ಯ ಮತ್ತು ಸಾಹಿತ್ಯತತ್ವಗಳ ಚೌಕಟ್ಟನ್ನು ಪರಾಮರ್ಶನ ಬಿಂದುವನ್ನಾಗಿ ಮಾಡಿಕೊಳ್ಳಬೇಕೆಂಬ ಒತ್ತಾಯವನ್ನು ಹೂಡುತ್ತಿದ್ದ ವಿಮರ್ಶಕರ ಒತ್ತಡಗಳಿಗೆ ಹೇಗೆ ಪ್ರತಿಕ್ರಿಯಿಸುವುದು ಎನ್ನುವುದೇ ಆ ಇಕ್ಕಟ್ಟು. ಶರಣಾಗತಿಯ ಹಾದಿಯೊಂದು ತೆರೆದೇ ಇತ್ತು. ಈ ಹಾದಿಯಲ್ಲಿ ಹೋಲಿಕೆಗಳಿಗೆ

ಒತ್ತು ತುಂಬಾ ಇತ್ತು. ಆದರೆ ಹೋಲಿಕೆಗಳು ಯಾವಾಗಲೂ ಒಂದು ನಿಟ್ಟಿನಲ್ಲೇ ಸಾಗುತ್ತಿದ್ದವು. ಬೀಜಚಿಂತನೆಗಳು ಯಾವಾಗಲೂ ಪಶ್ಚಿಮದ ಕಡೆಯಿಂದಲೇ ಹರಿದು ಬಂದಿವೆ ಎನ್ನುವುದನ್ನು ಒಪ್ಪಿಕೊಳ್ಳಲೇಬೇಕಿತ್ತು. ಹಾಗಲ್ಲದೆ ಕನ್ನಡದ್ದೇ ಆದ ಸಾಧನೆಗಳಿದ್ದರೂ ಅವುಗಳನ್ನು ವಿನಾಯತಿಗಳಂತೆ ಆಕಸ್ಮಿಕಗಳಂತೆ ನೋಡಬೇಕಿತ್ತು. ಇಂದಿಗೂ ವಚನಗಳನ್ನು ಹೇಗೆ ಚರ್ಚಿಸಬೇಕು, ಚರ್ಚಿಸುವುದಿರಲಿ ಹೇಗೆ ಓದಬೇಕು ಎಂಬ ಬಗ್ಗೆ ಗೊಂದಲವಿರುವುದು ಇದೇ ಕಾರಣದಿಂದಾಗಿ ಎಂದುಕೊಂಡಿದ್ದೇನೆ. ಈ ದಾರಿಯನ್ನು ಬಿಟ್ಟು ಹೊರಳಲು, ಇಲ್ಲವೇ ನಮ್ಮದೇ ಹಾದಿಗಳನ್ನು ಕಟ್ಟಿಕೊಳ್ಳಲು ಅವಕಾಶಗಳಿದ್ದರೂ ಅದಕ್ಕೆ ಬೇಕಾದ ಕಸುವನ್ನು ಕಟ್ಟಿಕೊಳ್ಳುವುದು ಒಂದು ಸವಾಲಾಗಿಯೇ ಕಾಣುತ್ತಿತ್ತು. ನನ್ನ ಕೆಲವು ಜೊತೆಗಾರರರಾದರೂ ಈ ನಿಟ್ಟಿನಲ್ಲಿ ದಿಟ್ಟ ಹೆಜ್ಜೆಗಳನ್ನು ಇಟ್ಟು ಸಾಗಿದವರಾಗಿದ್ದಾರೆ. ಈಗಲೂ ಕನ್ನಡದ ಮೇಸ್ಟ್ರುಗಳನ್ನು ಈ ದೆವ್ವ ಕಾಡುವುದನ್ನು ನಿಲ್ಲಿಸಿಲ್ಲ.

ಭಾಷೆಯ ಮೈಯನ್ನು, ಕೃತಿಯನ್ನು ತಿಳಿಯುವ ಮೊದಲ ಮತ್ತು ಕೊನೆಯ ಪರಿಕರವನ್ನಾಗಿ ಬಳಸುವ ಹಾದಿಯಲ್ಲಿ ಸಾಗಿದ ಮೇಲೆ ಭಾಷೆಯೇ ಇಲ್ಲಿನ ಬರಹಗಳ ಮುಖ್ಯ ಭಿತ್ತಿಯಾಗುವುದನ್ನು ಕಾಣಬಹುದು. ಇಲ್ಲಿಂದ ಬರಹಗಳ ಮುಖ್ಯ ನೆಲೆ ಕೇವಲ ಭಾಷೆಯೇ ಆಗಿಬಿಟ್ಟವೆ. ಇದಕ್ಕೆ ನಾನು ಕೆಲಸ ಮಾಡತೊಡಗಿದ್ದ ಕನ್ನಡ ವಿಶ್ವವಿದ್ಯಾಲಯದ ವಾತಾವರಣ, ಹೊಣೆ ಮತ್ತು ಅಲ್ಲಿನ ಬೇಡಿಕೆಗಳೂ ಕಾರಣವಾಗಿರಬಹುದು. ಜೊತೆಗೆ ಕಳೆದ ಶತಮಾನದ ಕೊನೆಯ ದಶಕದಿಂದ ಮೊದಲಾಗಿ ಕನ್ನಡ ಭಾಷೆಯನ್ನು ಆತಂಕದಲ್ಲಿರುವ ನುಡಿಯೆಂದು ತಿಳಿದು ಚಿಂತಿಸುವ ಬಗೆ ಬಲವಾಗಿ ಬೇರೂರಿತು. ಅದನ್ನು ಹೀಗೆ ಹೇಳೋಣ. ಕನ್ನಡದಂತಹ ನುಡಿಗಳು ಮತ್ತು ಅದನ್ನು ಅವಲಂಬಿಸಿದ ಸಂಸ್ಕೃತಿಗಳು ಜಾಗತೀಕರಣದ ಉರುಬಿನಲ್ಲಿ ಎದುರಿಸುತ್ತಿರುವ ಬಿಕ್ಕಟ್ಟುಗಳು ಎಲ್ಲರ ಎದುರು ಸವಾಲಾಗಿ ನಿಂತಿವೆ. ಇವು ಕಲ್ಪಿಸಿಕೊಂಡ ಹೋರಾಟದ ನೆಲೆಗಳಲ್ಲ. ದಿಟವಾಗಿಯೂ ಎದುರಿಸುತ್ತಿರುವ ಬಿಕ್ಕಟ್ಟುಗಳು. ಈ ಬಿಕ್ಕಟ್ಟುಗಳಿಗೆ ಚಾರಿತ್ರಿಕ ಒತ್ತಡಗಳಿರುವಂತೆ ಜಾಗತಿಕವಾದ ಒತ್ತಡಗಳೂ ಕಾರಣವಾಗಿವೆ. ಇವೆಲ್ಲವನ್ನೂ ಅರಿಯುವುದು , ಅರಿಯಲು ಬೇಕಾದ ಪರಿಕರಗಳನ್ನು ಹುಡುಕಿಕೊಳ್ಳುವುದು ಇಂದಿನ ಅಗತ್ಯವಾಗಿದೆ.

ಎಲ್ಲಕ್ಕಿಂತ ಮೊದಲು ಅರಿಯಬೇಕಾದ ಸಂಗತಿಯೆಂದರೆ ದೂರದಿಂದ ಬಿರುಕುಗಳಿಲ್ಲದಂತೆ ಕಾಣುತ್ತಿದ್ದ ನೆಲೆಗಳು ಹತ್ತಿರ ಹತ್ತಿರ ಹೋಗುತ್ತಿದ್ದಂತೆ ಹಲವಾರು ಬಿರುಕುಗಳಿರುವ ರಚನೆಗಳೆಂದು ತೋರತೊಡಗಿದ್ದು. ಇದನ್ನು ಇಡೀ ಕನ್ನಡ ಸಂಸ್ಕೃತಿಗೆ ಹೊಂದಿಸಿಕೊಂಡು ನೋಡಬೇಕಾಗಿದೆ. ನಾವು ಹಕ್ಕುದಾರರೂ ಹೊಣೆಗಾರರೂ ಆಗಿರುವ ಚರಿತ್ರೆ ಮತ್ತು ಸಂಸ್ಕೃತಿಗಳು ವಾಸ್ತವವಾಗಿ ನಮ್ಮೆಲ್ಲರದ್ದೂ ಆಗಿರದೆ ಕೆಲವರ ಹೊಣೆ ಮತ್ತು ಹೊರೆಗಳನ್ನು ಎಲ್ಲರೂ ತಮ್ಮದೆಂದು ಹೊರುತ್ತಿರುವ ಬಗೆ ಢಾಳಾಗಿ ಕಾಣತೊಡಗಿತು. ಇದೆಲ್ಲವೂ ಮೊದಲಾದದ್ದು ಸಚಿವ ಬಿ.ಬಸವಲಿಂಗಪ್ಪನವರು ರಾಜ್ಯದಲ್ಲಿ ಮಲಹೊರುವ ಪದ್ಧತಿಯನ್ನು ಕಾನೂನಿನ ಮೂಲಕ ಬಹಿಷ್ಕರಿಸುವ ಯೋಜನೆಯನ್ನು ಕೈಗೊಂಡಾಗ.

ಹಾಗೆ ಮಲಹೊರುವ ಪದ್ಧತಿಯನ್ನು ಮುಂದುವರೆಸುವುದು ಅಪರಾಧವೆಂದು ಹೇಳುವ ಕಾನೂನು ಜಾರಿಗೆ ಬಂತಷ್ಟೆ ಈ ಕಾನೂನಿನ ಪರಿಣಾಮವಾಗಿ ಸಾಮಾಜಿಕ ಪಲ್ಲಟಗಳು ಮೊದಲಾದವು. ಈ ಪಲ್ಲಟಗಳು ನೇರವಾಗಿ ಈ ಕಾನೂನಿನ ಗುರಿಯಾಗಿದ್ದ ಅನಿಷ್ಟ ಪದ್ಧತಿಯೊಂದಕ್ಕೆ ಮಾತ್ರ ತಳುಕು ಹಾಕಿಕೊಂಡಿರಲಿಲ್ಲ. ದಲಿತರು ಹೊರುತ್ತಿದ್ದುದು ಸಮಾಜದ ತ್ಯಾಜ್ಯವನ್ನು. ಈ ಕಾನೂನು ಬದಲು ದಾರಿಯಿಂದ ಹೇಳಿದ್ದೇನು? ದಲಿತರು ತಮ್ಮದಲ್ಲದ ಹಾಗೂ ಇತರರು ತ್ಯಾಜ್ಯವೆಂದು ತಿಳಿದ ಪಾರಂಪರಿಕ ನೆಲೆಗಳಿಗೆ, ಹೊರೆಗಳಿಗೆ ಹಕ್ಕುದಾರರೂ ಅಲ್ಲ; ಹೊಣೆಗಾರರೂ ಅಲ್ಲವೆಂದು ಹೇಳಿದಂತಾಯ್ತು. ಅಲ್ಲವೆ? ಇದರ ಪರಿಣಾಮದಿಂದಾಗಿ ಕನ್ನಡ ಸಮಾಜದಲ್ಲಿ ಉಂಟಾದ ತಿಕ್ಕಾಟಗಳನ್ನು ನೋಡಿ. ಈ ಕಾನೂನು ಜಾರಿಯಾಗಿದ್ದು ಒಂದು ಸಂದರ್ಭವನ್ನು ಹುಟ್ಟುಹಾಕಿತು. ಆದರೆ ಒಳಗಿದ್ದ ಒಡಕುಗಳು ಆಗಲೇ ಹೇಳಿದಂತೆ ಹೊರಗೆ ಕಾಣತೊಡಗಿದ್ದರಿಂದ ತಿಕ್ಕಾಟಗಳು ಮೊದಲಾದವು. ಸಾಮಾಜಿಕವಾಗಿ ನಾವು ಕಲ್ಪಿಸಿಕೊಂಡಿದ್ದ ನಂಟಿನ ಜಾಲ ಹುಸಿಯಾಗಿತ್ತು. ಒಳಗಿನ ಹುನ್ನಾರಗಳು ಎದ್ದು ಕಾಣತೊಡಗಿದವು. ಕೆರೆ ಮೈದೆರೆದಾಗ ಏನೆಲ್ಲ ಕಾಣುವುದೋ ಅದು ಮೊದಲೇ ಅಲ್ಲಿ ಇದ್ದುದು ತಾನೆ. ಈ ಮಾತು ನಮಗಿಲ್ಲಿ ಮುಖ್ಯ. ಏಕೆಂದರೆ ಕನ್ನಡ ನುಡಿಯೂ ಕೂಡ ನಾವು ಆವರೆಗೆ ತಿಳಿದಂತೆ ಎಲ್ಲರ ಕನ್ನಡವಾಗಿರುವ ಬದಲು ಕೆಲವರ ಕನ್ನಡವೇ ಎಲ್ಲರ ಕನ್ನಡವೆಂದು ಸೋಗು ತೊಟ್ಟಿತ್ತೆಂಬುದು ಈಗ ಕಣ್ಣಿಗೆ ರಾಚತೊಡಗಿತ್ತು. ಇದೆಲ್ಲದರ ಹಿಂದಿನ ಸಾಂಸ್ಕೃತಿಕ ರಾಜಕಾರಣವನ್ನು ಸರಿಯಾದ ನಿಟ್ಟಿನಲ್ಲಿ ಅರಿಯುವುದು ಇಂದಿನ ಅಗತ್ಯವಾಗಿದೆ. ಕಳೆದ ಇಪ್ಪತ್ತು ವರುಷಗಳಿಂದ ಬರೆದದ್ದರಲ್ಲಿ ನಾನು ಈ ನೆಲೆಯಲ್ಲಿ ಹೆಜ್ಜೆಗಳನ್ನು ಇಡಲು ಬಯಸಿದ್ದೇನೆಂದು ತೋರುತ್ತಿದೆ.

ಕನ್ನಡ ಬದುಕು ವ್ಯಕ್ತಿಗಳನ್ನು ಅತಿಯಾಗಿ ಹಚ್ಚಿಕೊಳ್ಳುತ್ತದೆ. ಏನನ್ನೇ ಆಗಲಿ ಅದನ್ನು ಯಾರು ಹೇಳಿದರು ಎಂಬುದು ಮುಖ್ಯವಾಗುತ್ತದೆಯೇ ಹೊರತು ಹೇಳಿದ್ದು ಏನು ಎಂಬುದು ಹಿಂದಕ್ಕೆ ಸರಿಯುತ್ತದೆ. ಇದನ್ನು ಕರ್ತೃವನ್ನು ಕಟ್ಟಿಕೊಳ್ಳುವುದು ಎಂದು ಬೇರೆಲ್ಲೋ ಕರೆದಿದ್ದೇನೆ. ಮಾಡಿದ ಕೆಲಸಗಳು ಹಿಂದಕ್ಕೆ ಸರಿದು, ಅದನ್ನು ಮಾಡಿದವರು ಕರ್ತೃಗಳಾಗಿ ಬಿಡುತ್ತಾರೆ. ಇದರಲ್ಲಿ ತಪ್ಪೇನೂ ಇಲ್ಲವಾದರೂ ಕೆಲವೊಮ್ಮೆ ಹೀಗೆ ಕರ್ತೃತ್ವ ದೊರಕಿದ ಮೇಲೆ ವ್ಯಕ್ತಿಗಳ ಎಲ್ಲ ಕೆಲಸಗಳಿಗೂ ಕನ್ನಡ ಬದುಕು ಹೆಚ್ಚಿನ ಮನ್ನಣೆಯನ್ನು ನೀಡ ತೊಡಗುತ್ತದೆ. ಇದೊಂದು ಅಪಾಯಕಾರಿ ಸ್ಥಿತಿ ಎಂದೇ ನನ್ನ ತಿಳುವಳಿಕೆ. ಈ ಅಪಾಯಗಳಿಗೆ ತುತ್ತಾದ ಜೀವನಕ್ರಮಗಳು ಎದುರಿಸುತ್ತಿರುವ ಬಿಕ್ಕಟ್ಟುಗಳನ್ನು ನಾವು ಕಂಡಿದ್ದೇವೆ. ಪ್ರಜಾಪ್ರಭುತ್ವವನ್ನು ಒಪ್ಪಿ ಆಚರಿಸಹೊರಡುವವರು ಇದರಿಂದ ಕಲಿಯಬೇಕಾದ ಪಾಠ ಇದೆ. ಈ ಮಾತನ್ನು ಇಲ್ಲಿ ಹೇಳಿದ್ದಕ್ಕೆ ಕಾರಣಗಳಿವೆ. ಏಕೆಂದರೆ ಈಗ ನಮ್ಮ ತಿಳಿವಿನ ಬದುಕು ಒಂದು ಬಿಕ್ಕಟ್ಟಿನಲ್ಲಿದೆ. ಕರ್ತೃತ್ವ ಪಡೆದವರು– ಅವರು ಸಾಹಿತಿಗಳಾಗಿರಲಿ, ರಾಜಕಾರಣಿಗಳಾಗಿರಲಿ, ಸಂಸ್ಕೃತಿ ಚಿಂತಕರಾಗಿರಲಿ, ಉದ್ಯಮಿಗಳಾಗಿರಲಿ, ದರೋಡೆಕೋರರಿರಲಿ, ಮಾಫಿಯಾ ದೊರೆಗಳಿರಲಿ ಮತ್ತೇನೋ ಆಗಿರಲಿ ಅವರು ನುಡಿದದ್ದು ಮತ್ತು ಬರೆದದ್ದು ಮನ್ನಣೆಯನ್ನು ಪಡೆದುಬಿಡುತ್ತದೆ. ಆದರೆ ಅಪಾಯದ ಮೊಳಗು ಬೇರೆಲ್ಲೋ ಇದೆ. ಏಕೆಂದರೆ ಈಗ ಮಾತಾಡುವವರ

ಎದುರು ಜನರಿಲ್ಲ; ಕನ್ನಡಿಗಳಿವೆ. ಬರೆಯುವವರು ಈಗ ಏಕಾಂತ ಮತ್ತು ಮೌನದ ಸಾಹಚರ್ಯವನ್ನು ಪಡೆದಿಲ್ಲ; ಅವರ ಕಣ್ಣು ಕಿವಿಗಳಿಗೆ ಜನರ ಸಂದಣಿ ಮತ್ತು ಮೊಳಗುಗಳು ಕೇಳುತ್ತಿವೆ. ಇದನ್ನೇ ನಾನು ಅಪಾಯಕಾರಿ ಅವಸ್ಥೆ ಎಂದು ನಾನು ತಿಳಿದಿರುವೆ. ಈಗ ನುಡಿದದ್ದು ಬರೆದದ್ದು ಚಲಾವಣೆಯ ನಾಣ್ಯಗಳಾಗದೆ ತಿಜೋರಿಯಲ್ಲಿ ಭದ್ರವಾಗ ತೊಡಗುತ್ತವೆ. ಕನ್ನಡ ಬದುಕು ಎದುರಿಸುತ್ತಿರುವ ಈ ಬಿಕ್ಕಟ್ಟನ್ನು ಚಿಕ್ಕವರು ತಿಳಿಯತೊಡಗಿದ್ದಾರೆ. ಹೊರಬರಲು ದಾರಿಗಳಿಗಾಗಿ ತಡಕಾಡುತ್ತಿದ್ದಾರೆ. ಇಂತಹ ಹೊತ್ತಿನಲ್ಲಿ ಈ ಬರಹಗಳು ಮತ್ತೊಮ್ಮೆ ಒಗ್ಗೂಡಿ ಅಚ್ಚಾಗುತ್ತಿವೆ. ಇವು ಚಲಾವಣೆಗೆ ಬರುತ್ತವೋ ಇಲ್ಲವೇ ತಿಜೋರಿಯಲ್ಲಿ ಕೊಳೆಯುತ್ತವೋ ಕಾಯ್ದು ನೋಡಬೇಕು.

ಈ ಬರಹಗಳು ಸುಮಾರು ನಲವತ್ತು ವರುಷಗಳ ಹರಹಿನಲ್ಲಿ ಮೈತಳೆದಿವೆ. ಇದೇ ಕಾರಣವಾಗಿ ಬರಹಗಳ ಮಂಡನೆಯ ಬಗೆಯಲ್ಲಿ ಹಲವು ದಾರಿಗಳು ಕಾಣುವುದು ಸಹಜವೇ ಆಗಿದೆ. ಕೆಲವೊಮ್ಮೆ ಯಾವುದೋ ಪೂರ್ವಪಕ್ಷವನ್ನು ಊಹಿಸಿಕೊಂಡು ಉತ್ತರಕೊಡುವ ನೆಲೆ ಕಂಡು ಬಂದರೆ, ಮತ್ತೆ ಕೆಲವೊಮ್ಮೆ ಹೊಸದನ್ನು ಹೇಳಲೇಬೇಕೆಂಬ ಹಂಬಲವೇ ಮೆರೆಯುತ್ತಿರುವಂತೆ ತೋರಬಹುದು. ಮತ್ತೆ ಕೆಲವು ಬರಹಗಳು ಒಮ್ಮೆ ಹೇಳಿದ್ದನ್ನೆ ಬೇರೆ ಮಾತುಗಳಲ್ಲಿ ಮತ್ತೊಮ್ಮೆ ಹೇಳುವಂತೆಯೂ ಇವೆ. ಬಳಸುವ ಭಾಷೆಯೂ ಕೂಡ ಹೀಗೆ ಏರುಪೇರಿನಿಂದ ಕೂಡಿದೆ. ಎಷ್ಟು ಬೇಕೋ ಅಷ್ಟು ಮಾತ್ರ (ಕೆಲವೊಮ್ಮೆ ಬೇಕಾದ್ದಕ್ಕಿಂತಲೂ ಕಡಿಮೆ) ಹೇಳುವ ನೆಲೆ ಕಂಡು ಬಂದರೆ ಮತ್ತೆ ಕೆಲವೊಮ್ಮೆ ಒಪ್ಪಿಸುವ ಹಠದಿಂದ ಹರಡಿಕೊಂಡ ಬಗೆಯ ಮಂಡನೆ ಕಾಣುವುದೂ ಉಂಟು. ಅಲ್ಲಲ್ಲಿ ಪ್ರವಾದಿತನದ ಸೋಗು ಕೂಡ ನುಸುಳಿದ್ದರೆ ಅಚ್ಚರಿಯಿಲ್ಲ. ಅಲ್ಲದೆ ಈ ಬರಹಗಳನ್ನು ಅವುಗಳನ್ನು ಬರೆದ ಕಾಲಕ್ಕೆ ಅನುಗುಣವಾಗಿ ಜೋಡಿಸಿಲ್ಲ. ಇದರಿಂದಲೂ ಇವುಗಳ ನಂಟು ಮತ್ತಷ್ಟು ಜಟಿಲವಾಗಿರಲೂಬಹುದು. ಹೀಗೆ ಮಾಡುವುದಲ್ಲದೆ ನನಗೆ ಬೇರೆ ದಾರಿ ಇರಲಿಲ್ಲ. ಬೇರೆಯವರು ಬರೆದ ಕೆಲವು ಬರಹಗಳನ್ನು ಕನ್ನಡದ ಸಂದರ್ಭದಲ್ಲಿ ಓದುವುದು ಅಗತ್ಯ ಎಂದು ತಿಳಿದದ್ದರಿಂದ ಅಂತಹ ಮೂರ್‍ನಾಲ್ಕರ ಅನುವಾದ ರೂಪಗಳನ್ನು ಇಲ್ಲಿ ಉಳಿಸಿಕೊಂಡಿದ್ದೇನೆ

ಇನ್ನು ಈ ಒಗ್ಗೂಡಿಸಿದ ಹೊತ್ತಗೆಗಳಿಗೆ 'ತೊಂಡುಮೇವು' ಎಂದು ಹೆಸರಿಟ್ಟುದೇಕೆ? ಹೆಸರಿಸುವಾಗ ಹುಬ್ಬುಗಂಟಿಕ್ಕುವಂತೆ ಇರಬಾರದು ಎಂಬುದು ಮೊದಲ ಮಾತು. ಅಲ್ಲದೆ ನಿಡುಗಾಲದಿಂದ ಬೇಂದ್ರೆಯವರ ಕವಿತೆಯ ಸಾಲೊಂದು ನನ್ನ ಬೆನ್ನೇರಿದೆ. ಅವರ ನಭೋವಾಣಿ ಸಂಕಲನದ 'ನವ ವಿಸರ್ಗ' ಕವಿತೆಯ ಸಾಲುಗಳಿವು. **'ನಕ್ಷೆಯನು ಹಿಡಿದು ತಡಕಾಡಬೇಡ ನಕ್ಷತ್ರ ಮಾರ್ಗವನ್ನು/ ತೊಂಡುಮೇವರಿಗೆ ಹಾದಿ ಕೇಳದಿರು, ಹತ್ತು ದುರ್ಗವನ್ನು'**. ಈ ಸಾಲುಗಳಲ್ಲಿದ್ದ ತೊಂಡುಮೇ(ಯು) ಎಂಬ ಕೆಲಸಪದ ನನ್ನನ್ನು ಕಾಡುತ್ತಿದೆ. ಇದರ ತಿರುಳೇನಾದರೂ ಇರಲಿ. ತೊಂಡುಮೇ(ಯು) ಎಂಬ ಈ ಕೆಲಸಪದವನ್ನು ಹೆಸರುಪದವನ್ನಾಗಿ ಇಲ್ಲಿ ಬದಲಿಸಿಕೊಂಡು ತೊಂಡುಮೇವು ಎಂದು ಮಾಡಿಕೊಂಡದ್ದಕ್ಕೂ ಕಾರಣಗಳಿವೆ. ಬೇಂದ್ರೆಯವರು ದುರ್ಗ ಹತ್ತುವವರಿಗೆ ಅವರ ಹಾದಿಯನ್ನು ಅವರೇ ಕಂಡುಕೊಳ್ಳಬೇಕೆಂದೂ, ಅಲ್ಲಲ್ಲಿ ತೊಂಡುಮೇವರು

ಇದ್ದರೂ ಅಂತಹವರಲ್ಲಿ ಹಾದಿ ಕೇಳುವುದು ಬೇಡವೆಂದೂ ಹೇಳಿದ್ದಾರೆ. ಮೊದಲ ಸಾಲಿನಲ್ಲಿ ನಕ್ಷತ್ರ ಮಾರ್ಗ ಮತ್ತು ನಕ್ಷೆಗಳಿಗೆ ಇರುವ ನಂಟನ್ನು ಹೇಳಿದ್ದಾರಷ್ಟೆ. ಕವಿ ನೀಡುವ ಎಚ್ಚರಿಕೆಯೇ ನಮ್ಮ ಬದುಕಿನ ಒಂದು ವಿಪರ್ಯಾಸವನ್ನು ಹೇಳುವಂತಿದೆ. ನೀವು ನಕ್ಷೆಯನ್ನೂ ತೊರೆಯಲಾರಿರಿ; ತೊಂಡುಮೇವರನ್ನೂ ಕಡೆಗಣಿಸಲಾರಿರಿ. ಅವು ನಮ್ಮೊಡನೆ ಇರುವಂತಹವೇ ಆಗಿವೆ. ನಮ್ಮೆಲ್ಲರ ಬರೆಹಗಳು ಹೀಗೆ ನಕ್ಷೆಗಳೋ ತೊಂಡುಮೇವರು ತೋರಿಸುವ ಪರಿಚಿತ ಒಳದಾರಿಗಳೋ ಆಗಿದ್ದರಬಹುದು. ಅಲ್ಲವೇ? ಹಾಗಾಗಿ ಈ ಬರಹಗಳನ್ನು ತೊಂಡುಮೇವು ಎಂದು ಕರೆಯಲು ಮುಂದಾದೆ.

ಇದೂ ಅಲ್ಲದೆ ನನ್ನ ಹಾಗೆ ನನ್ನ ಹಲವು ಸರೀಕರ ಹುಡುಕಾಟವೂ ಒಂದು ಗೊತ್ತಾದ ಕಣ್ಣುಕಟ್ಟಿದ ಹಾದಿಯಲ್ಲಿ ಸಾಗಿಲ್ಲ. ಹೀಗೆ ಸಿಕ್ಕಿದಕಡೆಗೆ ನುಗ್ಗಿ ಸಿಕ್ಕಿದ್ದನ್ನು ತಿಂದು, ಸಿಕ್ಕಿಬಿದ್ದರೆ ಒದೆ ತಿಂದು ಸಾಗಿ ಬಂದಿದ್ದೇವೆ. ಇದು ನಮ್ಮ ಆಯ್ಕೆಯಾಗಿತ್ತೋ ಅಥವಾ ಇದನ್ನು ನಮ್ಮ ಆಯ್ಕೆಯನ್ನಾಗಿ ಮಾಡಿಕೊಳ್ಳುವ ಒತ್ತಾಯವಿತ್ತೋ ಎಂಬುದನ್ನು ಕಡ್ಡಿ ಮುರಿದಂತೆ ಹೇಳಲಾರೆ. ಆದರೆ ಈ ಹಾದಿಯ ಏರುಪೇರುಗಳೇನೇ ಇರಲಿ, ಸಾಗಿಬಂದಾಗ ದೊರಕಿದ ಉಲ್ಲಾಸವನ್ನು ನಿರಾಕರಿಸುವುದು ಆಗದ ಮಾತು. ಈ ಕಾರಣದಿಂದಲೂ ಈ ಎಲ್ಲ ಬರಹಗಳ ಕಟ್ಟಿಗೆ **ತೊಂಡುಮೇವು** ಎಂದು ಹೆಸರಿಸಲು ಹಿಂಜರಿಕೆ ಉಂಟಾಗಿಲ್ಲ.

**ಕೈಮುಗಿವೆ**

ಎಷ್ಟುಜನರಿಗೆ ಕೈಮುಗಿಯುವುದು? ಯಾರನ್ನು ಬಿಟ್ಟರೂ ಈ ಬೈರೇಗೌಡರನ್ನು ಮಾತ್ರ ಬಿಡುವಂತಿಲ್ಲ. ಇವರು ಅದು ಹೇಗೆ ನನಗೆ ಬಲ್ಲವರಾದರೋ ತಿಳಿಯದು. ಮುಗಿಬಿದ್ದು ಮೈದುಂಬಿದಂತೆ ಈ ಕೆಲಸ ಮಾಡಿದ್ದಾರೆ. ಈ ಬರಹಗಳನ್ನು ನಾನು ಒಗ್ಗೂಡಿಸಿ ಕೊಡಲಿಲ್ಲ. ಎಲ್ಲೆಲ್ಲಿಂದಲೋ, ಯಾರು ಯಾರಿಂದಲೋ ತಾವೇ ಹುಡುಕಿ ಜೋಡಿಸಿಕೊಂಡಿದ್ದಾರೆ. ಕೆಲವನ್ನು ಕಸದ ಬುಟ್ಟಿಯಿಂದಲೂ ತೆಗೆದಿರಬೇಕು.(ಅಂತಹವು ಅಲ್ಲೇ ಇರಬೇಕಿತ್ತು ಎಂದು ಓದುವ ನಿಮ್ಮಲ್ಲಿ ಕೆಲವರಿಗಾದರೂ ಅನ್ನಿಸೀತು) ಈ ಒತ್ತಾಸೆ ಯಾರಿಗೆ ದೊರಕುತ್ತದೆ? ಅವರಿಗೆ ಶರಣು ಎಂದು ಕೈಮುಗಿಯುತ್ತೇನೆ. ಇನ್ನು ತಂಪು ಹೊತ್ತಿನಲ್ಲಿ ನೆನೆಯಬೇಕಾದವರ ಪಟ್ಟಿ ಬಲು ದೊಡ್ಡದು. ಅವರನ್ನು ಹೆಸರಿಸಿದರೆ ಕೆಲವರಿಗೆ ಮುಜುಗರ, ಕೆಲವರಿಗೆ ಕೋಪ, ಕೆಲವರಿಗೆ ನಗು ಮತ್ತು ಕೆಲವರು ನನ್ನೊಡನೆ ಮಾತು ಬಿಟ್ಟರೂ ಬಿಟ್ಟರೆ. ಹೀಗೆ ಬಗೆಬಗೆಯಲ್ಲಿ ಅವರು ಪ್ರತಿಕ್ರಿಯೆ ತೋರುತ್ತಾರೆ. ಅವರೆಲ್ಲರೂ ನನ್ನೊಳಗೆ ಇದ್ದಾರಾಗಿ ಬೇರೆಯಾಗಿ ಅವರನ್ನು ಹೆಸರಿಸುವುದನ್ನೇ ಕೈಬಿಟ್ಟಿದ್ದೇನೆ.

ಆದರೆ ಎರಡು ಸಂಸ್ಥೆಗಳನ್ನು ಹೆಸರಿಸಲೇ ಬೇಕು. ನಾನು ಬರೆಯಲು ಕಾರಣವಾದದ್ದು ಬೆಂಗಳೂರು ವಿಶ್ವವಿದ್ಯಾಲಯದ ಅಧ್ಯಯನ ಕೇಂದ್ರ ಮತ್ತು ಕನ್ನಡ ವಿಶ್ವವಿದ್ಯಾಲಯ. ಇವೆರಡೂ ಸಂಸ್ಥೆಗಳು ಬರೆಯಲು ಒತ್ತಾಸೆ ನೀಡಿದ್ದು ಮಾತ್ರವಲ್ಲದೆ ಬರಹಕ್ಕೆ ಯಾವ ಕಡಿವಾಣವನ್ನೂ ಹಾಕಲಿಲ್ಲ ಎಂಬುದನ್ನು ನೆನೆದುಕೊಳ್ಳಬೇಕು. ಪ್ರಜಾವಾಣಿ,

ಉದಯವಾಣಿ, ವಿಜಯ ಕರ್ನಾಟಕ, ಸುಧಾ, ತರಂಗ, ವಿಕ್ರಾಂತ ಕರ್ನಾಟಕ, ಮಯೂರ, ಸಾಕ್ಷಿ, ಅಂಕಣ, ಸಂಚಯ, ಶೂದ್ರ, (ಈ ಪತ್ರಿಕೆಯ ಸಂಪಾದಕರಾದ ಹೆಸರಾಂತ ಗೆಳೆಯ ಶ್ರೀನಿವಾಸ್ ಅವರನ್ನು ಹೆಚ್ಚಾಗಿ ನೆನೆಯಬೇಕು. ಕುತ್ತಿಗೆಯ ಮೇಲೆ ಕುಳಿತು ಬರೆಸಿದ್ದು ಮಾತ್ರವಲ್ಲದೆ ಅವುಗಳನ್ನು ತಮ್ಮದೇ ಆದ ಬಗೆಯಲ್ಲಿ ಅಚ್ಚು ಮಾಡಿ ಹಲವು ಬಾರಿ ನನಗೇ ಗಾಬರಿಯಾಗುವಂತೆ ಮಾಡಿದ್ದಾರೆ. ಆ ಪುರಾಣ ಬೇರೊಮ್ಮೆ ಹೇಳುವೆ.) ರುಜುವಾತು, ಸಮುದಾಯ ವಾರ್ತಾಪತ್ರ, ಮುಕ್ತ ಹೀಗೆ ಹಲವು ಪತ್ರಿಕೆಗಳ ಗೆಳೆಯರು ಇಲ್ಲಿನ ಹಲವು ಬರಹಗಳಿಗೆ ಮತ್ತು ಅವು ಬೆಳಕು ಕಾಣುವುದಕ್ಕೆ ಕಾರಣರಾಗಿದ್ದಾರೆ.

ಬಿ ರಿಪೋರ್ಟು ಹಿಂದಕ್ಕೆ ಪಡೆದ ಈ ಹಳೆಯ ಕೇಸುಗಳನ್ನು ನೀವೀಗ ಮರುಪರಿಶೀಲನೆಗೆ ಗುರಿಪಡಿಸಿರಿ. ಈ ಬರಹಗಳಲ್ಲಿ ಕೆಲವಾದರೂ ಚಿಕ್ಕವರಲ್ಲಿ ಚರ್ಚೆಗೆ ಕಾರಣವಾದರೆ ಅದಕ್ಕಿಂತ ಸಂತಸ ನನಗೆ ಬೇರೊಂದಿಲ್ಲ. ಮೆಚ್ಚುಗೆ, ಹೊಗಳಿಕೆ ನಾನು ಅಷ್ಟು ಪಡುವುದಿಲ್ಲ. ಯಾರೋ ಎಲ್ಲೋ ಹೇಳಿದ ಮಾತನ್ನು ನೆನೆಯುವುದಾದರೆ ಹೊಗಳಿಕೆ ಪೂಸಿಕೊಳ್ಳುವ ಡಿಯೋಡರೆಂಟ್ ಇದ್ದಹಾಗೆ. ಈ ಪೂಸಿಕೊಂಡದ್ದು ದಿಟವನ್ನು ಮರೆ ಮಾಡಿಹುಸಿಯನ್ನು ಮುಂಚೂಣಿಗೆ ತಂದು ಬಿಡುತ್ತದೆ ಅಲ್ಲವೇ? ಇನ್ನು ಎಲ್ಲವೂ ನಿಮಗೆ ಸೇರಿದ್ದು.

**ಕೆ.ವಿ. ನಾರಾಯಣ**

# ತೊಂಡುಮೇವು ಕಂತೆಗಳ ಹೊರೆಹೊತ್ತು...

ಮೂರು ವರ್ಷಗಳ ಹಿಂದಿನ ಮಾತು. ಕೆ.ವಿ.ಎನ್. ಮೇಷ್ಟ್ರು ಮೈಸೂರಿನಲ್ಲಿದ್ದರು. ಸಕಲ ಪುರಾತನರೆಂದು ನಾವೆಲ್ಲ ಪ್ರೀತಿಯಿಂದ ಕರೆಯುವ ಪ್ರೊ. ಶಿವರಾಮಯ್ಯ, ಯಂಗ್ ರುದ್ರ ಎಂದೇ ಖ್ಯಾತಿ ಪಡೆದ ಕೆ.ವೈ.ಎನ್. ಮತ್ತು ನಾನು ಮೂವರೂ ಕೂಡಿ ಡಾ. ಎಲ್. ಬಸವರಾಜು ಅವರನ್ನು ಪಂಪನ ಆದಿಪುರಾಣ ಪುಸ್ತಕ ಬಿಡುಗಡೆಗೆ ಆಮಂತ್ರಿಸಲು ಹೋಗಿದ್ದಾಗ ಕೆ.ವಿ.ಎನ್. ಮೇಷ್ಟ್ರ ಮನೆಗೂ ಭೇಟಿ ನೀಡಿದೆವು. ಕೆ.ವಿ.ಎನ್. ಬರವಣಿಗೆಯನ್ನು ಒಂದು ಕಡೆ ತಂದರೆ! ಬಯಕೆಯನ್ನು ಹತ್ತಿಕ್ಕಲಾರದೆ ಕೇಳಿಯೇಬಿಟ್ಟೆ. ನೋಡುವ ಎಂದಷ್ಟೇ ಕೆ.ವಿ.ಎನ್. ಹೇಳಿದರು. ಮೈಸೂರಿಗೆ ಹೋದಾಗಲೆಲ್ಲ ಸಿ.ಐ.ಐ.ಎಲ್.ನಲ್ಲಿ ಮೇಷ್ಟ್ರನ್ನ ಭೇಟಿಯಾಗುತ್ತಿದ್ದೆ. ಅಲ್ಲಿಯೂ ಪ್ರಕಟಣೆಯ ವಿಷಯ ಮಾತನಾಡಲು ಸಾಧ್ಯವಾಗಲೇ ಇಲ್ಲ. ಮತ್ತೊಮ್ಮೆ ಮೇಷ್ಟ್ರ ಮನೆಗೆ ಡಾ. ಶಿವಪ್ಪ ಅವರೊಡನೆ ಹೋದಾಗ ಪಟ್ಟುಬಿಡದೆ, ಸರ್ ನಿಮ್ಮೆಲ್ಲ ಬರವಣಿಗೆಯನ್ನು ಒಂದೆಡೆ ಕಲೆಹಾಕಿ ತರೋಣ, ಒಪ್ಪಿಗೆ ಕೊಡಿ ಎಂದು ದುಂಬಾಲು ಬಿದ್ದೆ. ಹಸಿರು ನಿಶಾನೆ ತೋರಿದರು. ಈ ಕಾರ್ಯಕ್ಕೆ ಒತ್ತಾಸೆಯಾಗಿ ನಿಂತವರು ಶ್ರೀಮತಿ ಮೇಡಂ. ಕೆ.ವಿ.ಎನ್. ಮೇಷ್ಟ್ರು, ಶ್ರೀಮತಿ ಮೇಡಂ ಇಬ್ಬರಿಗೂ ಅನಂತಾನಂತ ನಮನಗಳು.

ಡಾ. ಕೆ.ವೈ.ಎನ್., ಪ್ರೊ. ಶಿವಪ್ಪ ಮುಂತಾದವರು ಸೇರಿ ವಿವೇಕ ಬಳಗದ ಮೂಲಕ ಪ್ರಕಟಿಸಿದ್ದ ಬೇರು ಕಾಂಡ ಚಿಗುರು ಪುಸ್ತಕದ ಅಕ್ಷರ ಜೋಡಣೆಯಾಯ್ತು. ಸಂಚಯದ ಡಿ.ವಿ. ಪ್ರಹ್ಲಾದ್, ಪುಸ್ತಕ ಮನೆ ಖ್ಯಾತಿಯ ಚಿಂತಕ ಹರಿಹರಪ್ರಿಯ, ಶೂದ್ರ ಪತ್ರಿಕೆಯ ಶ್ರೀನಿವಾಸ್, ಅನ್ವೇಷಣ ಪತ್ರಿಕೆಯ ಆರ್.ಜಿ. ಹಳ್ಳಿ ನಾಗರಾಜ್ ಅವರ ಮನೆಗಳಲ್ಲಿದ್ದ ಅಂಕಣ, ಶೂದ್ರ, ಸಂಚಯ, ಮುಕ್ತ, ಸಮುದಾಯ ವಾರ್ತಾಪತ್ರ ಹೀಗೆ ಹಲವು ಮೂಲಗಳಿಂದ ಕೆ.ವಿ.ಎನ್. ಬರೆಹಗಳನ್ನು ಕಲೆಹಾಕಿದ್ದಾಯ್ತು. ಮೇಲೆ ಹೆಸರಿಸಿರುವ ಎಲ್ಲ ಮಹನೀಯರಿಗೂ ನಮಸ್ಕಾರಗಳು.

ಹಂಪಿ ಕನ್ನಡ ವಿಶ್ವವಿದ್ಯಾಲಯದ ಡಾ. ಅಶೋಕ ಕುಮಾರ್ ರಂಜರೆ, ಡಾ. ಪಿ. ಮಹಾದೇವಯ್ಯ, ಡಾ. ಸುಜ್ಞಾನಮೂರ್ತಿ, ರವೀಂದ್ರ,

ರಾಜಶೇಖರ್, ಶಿವಮೊಗ್ಗದ ಡಿ.ಎಸ್. ನಾಗಭೂಷಣ, ಬೆಂಗಳೂರಿನ ಡಾ. ಬಸವರಾಜ ಕಲ್ಗುಡಿ, ಎಂ.ಎಸ್. ಆಶಾದೇವಿ, –ಹೀಗೆ ತೊಂಡುಮೇವು ಸಂಪುಟಗಳು ರೂಪಗೊಳ್ಳುವಲ್ಲಿ ನೆರವಾದವರು ಅನೇಕರು. ಅಭಿನವ ರವಿಕುಮಾರ್ ಧ್ವನ್ಯಾಲೋಕ ಮತ್ತು ಅಂಕೆ ತಪ್ಪಿದ ಆರ್ಥುರೋ ಊಯಿ ಕೃತಿಗಳ ಸಾಫ್ಟ್ ಮತ್ತು ಹಾರ್ಡ್ ಕಾಪಿ ನೀಡಿ ಸಹಕರಿಸಿದರು. ಎಲ್ಲರನ್ನೂ ಗೌರವದಿಂದ ಸ್ಮರಿಸುವೆ.

ಡಾ. ಸಿ.ಪಿ. ನಾಗರಾಜ್, ಡಾ. ರಾಮಲಿಂಗಪ್ಪ ಟಿ. ಬೇಗೂರು, ಡಾ. ರಂಗನಾಥ ಕಂಟನಕುಂಟೆ, ಶ್ರೀ ಜಯಶಂಕರ್, ಪ್ರದೀಪ್ ಮಾಲ್ಗುಡಿ, ಬ್ರಹ್ಮಾನಂದ್ ಇವರೆಲ್ಲರೂ ಕರಡು ತಿದ್ದುವಲ್ಲಿ ನೆರವಾಗಿದ್ದಾರೆ. ಅವರ ಸೇವೆಯನ್ನು ಕೃತಜ್ಞತಾಪೂರ್ವಕ ಸ್ಮರಿಸುತ್ತೇನೆ.

ಕಳೆದ ಎರಡು ತಿಂಗಳುಗಳಿಂದ ಬೇರೆಲ್ಲಾ ಕೆಲಸಗಳನ್ನೂ ಬದಿಗಿಟ್ಟು ಒಂದು ವ್ರತದಂತೆ ನನ್ನೊಡನೆ ತೊಡಗಿಸಿಕೊಂಡಿರುವ ಡಾ. ಆರ್. ಚಲಪತಿ ಅವರಿಗೆ ಹೇಗೆ ಕೃತಜ್ಞತೆ ಸಲ್ಲಿಸಲಿ?

ಕೆ.ವಿ.ಎನ್. ಅವರ ತೊಂಡುಮೇವು ಸರಣಿಗೆ ಮುಖಪುಟ ಬರೆದ ಸುಧಾಕರ ದರ್ಬೆ, ಡಿ.ಟಿ.ಪಿ. ಮಾಡಿದ ಬಿ.ಕೆ. ಶೋಭಾರಾಣಿ, ಮಂಗಲಾ ಗಣೇಶ್, ಸವಿತಾ, ಜೋಸ್ಫಿನ್, ಸಿಸಿಲಿಯಾ ಎಲ್ಲರನ್ನು ನೆನೆವೆ. ಮುದ್ರಣ ಕಾರ್ಯದ ಜವಾಬ್ದಾರಿ ಹೊತ್ತ ವಿಶ್ವಾಸ್ ಪ್ರಿಂಟ್ಸ್ ಮತ್ತು ಸ್ನೇಹ ಪ್ರಿಂಟ್ಸ್ ಮಾಲೀಕರಾದ ಟಿ.ಎಲ್. ವೆಂಕಟೇಶ ಮತ್ತು ಮಂಜುನಾಥ್, ಡಿ.ಟಿ.ಪಿ. ವಿಭಾಗದ ಪೂರ್ಣಿಮಾ, ವಿ. ರಾಜ್ ಇವರುಗಳ ಸಹಕಾರವನ್ನು ಸ್ಮರಿಸದಿರಲಾರೆ.

ಕೆ.ವಿ.ಎನ್. ಅವರ ಈ ವರೆಗಿನ ಬರೆಹಗಳನ್ನು ಒಂದೆಡೆ ಕಲೆಹಾಕಿ ತೊಂಡುಮೇವು ಹೆಸರಿನಲ್ಲಿ ಒಂಬತ್ತು ಕಂತೆಗಳನ್ನು ಕಟ್ಟಿಕೊಟ್ಟಿದ್ದೇನೆಂಬ ಹೆಮ್ಮೆ ನನ್ನದು. ನನ್ನ ಸಂತೋಷಕ್ಕೆ ಕಾರಣರಾದ ಎಲ್ಲರಿಗೂ ಕೃತಜ್ಞನಾಗಿದ್ದೇನೆ.

**ಎಂ. ಬೈರೇಗೌಡ**

# ಪರಿಷ್ಕೃತ ಮುದ್ರಣ ಕುರಿತು

ತೊಂಡು ಮೇವು ಎಂಬ ಹೆಸರಿನಲ್ಲಿ ಬರಹಗಳ ಒಂಬತ್ತು ಸಂಪುಟಗಳನ್ನು 2010ರಲ್ಲಿ ಹೊರತರಲಾಗಿತ್ತು. ಈಗ ಹತ್ತನೆಯ ಸಂಪುಟವನ್ನು ನಿಮ್ಮ ಮುಂದೆ ಇಡಲಾಗುತ್ತಿದೆ. ಜೊತೆಗೆ ಹಿಂದಿನ ಒಂಬತ್ತು ಸಂಪುಟಗಳನ್ನು ಕೊಂಚ ಬದಲಾವಣೆಗಳೊಂದಿಗೆ ಮತ್ತೆ ಅಚ್ಚು ಮಾಡಿ ಪ್ರಕಟಿಸಲಾಗುತ್ತಿದೆ. ಈ ಹತ್ತು ವರುಶಗಳಲ್ಲಿ ಆಗಿರುವ ಬದಲಾವಣೆಯೊಂದಿದೆ. ಆಗ ಅಲ್ಲಿಯವರೆಗೆ ಬರೆದಿದ್ದರ ಬಗೆಗೆ ನಂಬಿಕೆ ಕಡಿಮೆಯಾಗಿತ್ತು. ಈಗ ಬರೆಯುವುದರ ಬಗೆಗೇ ನಂಬಿಕೆ ಕಡಿಮೆಯಾಗಿದೆ. ಇದು ಸಿನಿಕತನವೆಂದು ಅನಿಸಲೂಬಹುದು. ಆದರೆ ನನಗೆ ಹಾಗನ್ನಿಸುತ್ತಿಲ್ಲ. ಬರವಣಿಗೆಯನ್ನು ಅದರ ತಾಳಿಕೆಯ ಗುಣಕ್ಕಾಗಿಯೇ ಒಪ್ಪಿಕೊಳ್ಳುವ ಕಾಲವೊಂದಿತ್ತು. ಈಗ ಹಾಗಿಲ್ಲ. ಬರೆದದ್ದು ಮಾತಿನಂತೆಯೇ ಹುಟ್ಟಿದ ಕೂಡಲೇ ಸಾಯುತ್ತಿದೆ. ಎಷ್ಟೋ ವೇಳೆಯಲ್ಲಿ ಯಾರಿಗಾಗಿ ಬರೆದದ್ದೋ ಅವರಿಗೆ ತಲುಪುವ ಹೊತ್ತಿಗೆ ಅದರ ಚಹರೆಗಳು ಬದಲಾಗಿಬಿಡುತ್ತಿವೆ. ಇದೆಲ್ಲವನ್ನೂ ಕಂಡರೆ ಬರವಣಿಗೆಗೆ ಒಂದು ಹೆಚ್ಚಿನ ಮನ್ನಣೆ ಇದೆಯೆಂದು ಈಗ ನನಗೆ ತೋರುತ್ತಿಲ್ಲ.

ಅಲ್ಲದೆ ಬರೆಯುವುದರ ಗುರಿಯೇ ಮಾತಿಗೆಳೆಯುವುದು; ಸಂವಾದವನ್ನು ಹುಟ್ಟಿಹಾಕುವುದು. ಈ ನಂಬಿಕೆ ಕೂಡ ಈಗ ಇಲ್ಲವಾಗುತ್ತಿದೆ. ಎದುರು ನಿಲುವುಗಳಿಗೆ ಮಾತುಕತೆಗಳಲ್ಲಿ ಜಾಗವಿರುತ್ತದೆ. ಅವು ಒಪ್ಪದಿರುವ, ಮೆಚ್ಚದ ಮಾತುಗಳನ್ನೂ ಕೇಳಲು ಹಿಂಜರಿಯುವುದಿಲ್ಲ. ಹಾಗೆಯೇ ಎಲ್ಲರೂ ಒಪ್ಪುವ ಇಲ್ಲವೇ ಮೆಚ್ಚುವಮಾತುಗಳನ್ನೇ ಆಡಬೇಕೆಂಬ ಹಪಾಹಪಿ ಇರುವುದಿಲ್ಲ. ಈಗ ಹಾಗಿದೆ ಎಂದು ನನಗೆ ಅನ್ನಿಸುತಿಲ್ಲ. ಎಲ್ಲರೂ ಒಪ್ಪುವುದನ್ನೆ, ಮೆಚ್ಚುವುದನ್ನೇ ಬರೆಯುವ ತವಕವಿದೆ. ಹಾಗೆಯೇ ಓದುವವರೂ ತಮಗೆ ಒಪ್ಪಿಗೆ ಆಗುವುದನ್ನೇ ಓದಲು ಮುಂದಾಗುತ್ತಿದ್ದಾರೆ. ನನ್ನ ಈ ಮಾತುಗಳಿಗೆ ಬುಡವಿಲ್ಲವೆಂದು ಕೆಲವರಿಗೆ ಅನ್ನಿಸಲೂಬಹುದು. ಸರಿಯೇ ಸರಿ. ಆದರೆ ಈ ಬಿಕ್ಕಟ್ಟು ನನ್ನ ತಿಳಿವಿನ ನೆಲೆಗೆ ಬಂದಿದ್ದರಲ್ಲಿ ಸಟೆಯಿಲ್ಲ.

ಇಂತಹ ಹೊತ್ತಿನಲ್ಲಿ ತೊಂಡುಮೇವು ಬರಹಗಳು ಮತ್ತೆ ಅಚ್ಚಾಗುತ್ತಿರುವುದು, ಹತ್ತು ವರುಶಗಳಿಂದ ಈಚೆಗೆ ಬರೆದದ್ದು ಇನ್ನೊಂದು ಕಂತೆಯಾಗಿ ಮೈದಳೆಯುತ್ತಿರುವುದು ಮುಜುಗರದ ಸಂಗತಿಯೇ ಸರಿ. ಆದರೆ ಗೆಳೆಯ ಡಾ. ಬೈರೇಗೌಡರು ಈ ಕೆಲಸಕ್ಕೆ ಮುಂದಾಗಿದ್ದಾರೆ. ಅವರಿಗೆ ಒಳಿತಾಗಲಿ ಎಂದು ಕೋರುವುದಷ್ಟೇ ನನ್ನ ಕೆಲಸ.

**ಕೆ.ವಿ. ನಾರಾಯಣ**

# ಪರಿವಿಡಿ

# ಭಾಷೆ ಕುರಿತು ಚಾಮ್‌ಸ್ಕಿ ಹೇಳುತ್ತಿರುವುದೇನು?

ಮನುಷ್ಯರು ಮಾತನಾಡಬಲ್ಲರು. ಅಲ್ಲದೆ ಮಾತನಾಡಬಲ್ಲವರು ಮನುಷ್ಯರು ಮಾತ್ರ. ಕೆಲವು ಪ್ರಾಣಿಪಕ್ಷಿಗಳು ಮಾತನಾಡಬಲ್ಲವು, ಮತ್ತೆ ಕೆಲವು ನಾವು ಮಾತಾಡಿದ್ದನ್ನು ಅರ್ಥಮಾಡಿಕೊಳ್ಳಬಲ್ಲವು ಎಂಬ ಸಾಮಾನ್ಯ ತಿಳುವಳಿಕೆ ಪ್ರಚಲಿತವಿದೆ. ಆದರೆ ಇದು ಕೇವಲ ಊಹೆ. ಪಕ್ಷಿಗಳ ಕೂಗುಗಳಿಗೆ ನಾವು ಮಾತಿನ ಲಕ್ಷಣಗಳನ್ನು ಆರೋಪಿಸುತ್ತೇವೆ. ಹಾಗೆಯೇ ಪ್ರಾಣಿಗಳ ವರ್ತನೆಗಳನ್ನು ಗಮನಿಸಿ ವರ್ತನೆಗಳು ನಮ್ಮ ಮಾತನ್ನು ಅರ್ಥ ಮಾಡಿಕೊಂಡಿದ್ದರ ಪರಿಣಾಮಗಳು ಎಂದು ತಿಳಿಯುತ್ತೇವೆ. ಪ್ರಾಣಿಪಕ್ಷಿಗಳಲ್ಲಿ ಮತ್ತು ಮನುಷ್ಯ ಪ್ರಾಣಿಪಕ್ಷಿಗಳಲ್ಲಿ ಪರಸ್ಪರ ಸಂವಹನ ನಡೆಯುವುದಿಲ್ಲವೆಂದು ಮೇಲಿನ ಮಾತಿನ ಅರ್ಥವಲ್ಲ. ಈ ಸಂವಹನಕ್ಕೂ ಮನುಷ್ಯರ ಭಾಷೆಗೂ ಇರುವ ಸಂಬಂಧ ಇಲ್ಲವೆನ್ನುವಷ್ಟು ಕಡಿಮೆ; ಹೆಚ್ಚೆಂದರೆ ಧ್ವನಿಗಳಿಂದ ಪ್ರಾಣಿಗಳನ್ನು ಸಂವಹನಕ್ಕೆ ಸಿದ್ಧಗೊಳಿಸುವಷ್ಟಕ್ಕೆ ಸೀಮಿತ. ಹೀಗಾಗಿ ಭಾಷೆ ಮತ್ತು ಮನುಷ್ಯರ ನಡುವೆ ಇರುವ ಸಂಬಂಧ ಅನನ್ಯವಾದುದು.

ಭಾಷೆಯನ್ನು ಒಂದು ಸಂವಹನ ವ್ಯವಸ್ಥೆ ಎಂದು ವ್ಯಾಖ್ಯಾನಿಸುವುದುಂಟು. ಇದು ಉಪಯೋಗವನ್ನು ಆಧರಿಸಿದ ವ್ಯಾಖ್ಯೆ. ಆದರೆ ಭಾಷೆ ಸಂವಹನಕ್ಕೆ ಮಾತ್ರ ಉಪಯೋಗವಾಗುವಂಥದಲ್ಲ. ಹಾಗಿಲ್ಲದೆಯೂ ನಾವು ಭಾಷೆಯನ್ನು ಬಳಸುವ ಪ್ರಸಂಗಗಳು ಇವೆ. ಸಂವಹನದಲ್ಲೂ ಭಾಷೆಯ ಪಾತ್ರ ಸೀಮಿತವಾದುದು. ನಮ್ಮಲ್ಲೇ ಇನ್ನಿತರ ಸಂವಹನ ಮಾದರಿಗಳು, ಸಂವಹನ ಸಾಮಗ್ರಿಗಳು ಇವೆ. ಆದ್ದರಿಂದ ಭಾಷೆಯ ಸ್ವರೂಪವನ್ನು ತಿಳಿಯಲು ಅದನ್ನೊಂದು ಸಂವಹನ ವ್ಯವಸ್ಥೆಯೆಂದು ಗ್ರಹಿಸಿ ಮುಂದುವರೆಯುವುದು ಅಷ್ಟು ಉಪಯುಕ್ತವಾದ ದಾರಿಯಲ್ಲ. ಅಥವಾ ಈ ಹಾದಿ ಹಿಡಿದು ಹೊರಟರೆ ಭಾಷೆಯ ಸ್ವರೂಪವನ್ನು ಪೂರ್ಣವಾಗಿ ತಿಳಿಯಲು ಆಗುವುದಿಲ್ಲ.

ಭಾಷೆಯು ಮನುಷ್ಯರ ಒಂದು ವಿಶೇಷ ಸಾಮರ್ಥ್ಯವೆಂದು ತಿಳಿದು ಅದರ ಸ್ವರೂಪವನ್ನು ಅರಿಯಲು ತೊಡಗಿದ್ದಕ್ಕೆ ಸಾವಿರಾರು ವರ್ಷಗಳ ಚರಿತ್ರೆ ಇದೆ. ಆದರೆ ಈ ಶೋಧವನ್ನು ತೀವ್ರಗತಿಯಲ್ಲಿ ನಡೆಸಿದ್ದು ಕಳೆದ ಐವತ್ತು ವರ್ಷಗಳಲ್ಲಿ. ಭಾಷೆ ಒಂದು ಮಾನಸಿಕ ಸಾಮರ್ಥ್ಯ. ಓಡುವುದು, ಈಜುವುದು, ಕುದುರೆಸವಾರಿ ಮಾಡುವುದು, ನೆಗೆಯುವುದು ದೈಹಿಕ ಸಾಮರ್ಥ್ಯಗಳು. ಆದರೆ ಈ ಸಾಮರ್ಥ್ಯಗಳ ಪ್ರಕಟಣೆಗೆ ನರಮಂಡಲಗಳ ನೆರವು ಬೇಕು. ಹಾಗೆಯೇ ಮಾನಸಿಕ ಸಾಮರ್ಥ್ಯಗಳು ಪ್ರಕಟಗೊಳ್ಳಲು ದೇಹದ ಅಂಗಾಂಗ ವ್ಯವಸ್ಥೆಯ ನೆರವು ಬೇಕು. ಅಂದರೆ ಸಾಮರ್ಥ್ಯವೊಂದನ್ನು

ದೈಹಿಕ ಇಲ್ಲವೇ ಮಾನಸಿಕ ಎಂದು ವಿಂಗಡಿಸುವುದು ಕೇವಲ ಸೌಲಭ್ಯಕ್ಕಾಗಿ ಮಾತ್ರ ಭಾಷೆಯು ಮಾನಸಿಕ ಸಾಮರ್ಥ್ಯವೆಂದಾಗ ಈ ಮಾತು ನಮ್ಮ ನೆನಪಿನಲ್ಲಿರಬೇಕು.

ಭಾಷೆಗೆ ಒಂದು ಒಳಸ್ತರ ಮತ್ತೊಂದು ಹೊರಸ್ತರ ಇರುವುದೆಂದು ಫರ್ಡಿನೆಂಡ್ ಡಿ ಸಸೂರ ಹೇಳಿದರು. ಒಳಸ್ತರವನ್ನು ಲಾಂಗ್ ಎಂದೂ ಹೊರಸ್ತರವನ್ನು ಪರೋಲ್ ಎಂದೂ ಕರೆಯಲಾಗಿದೆ. ನಾವು ಬರೆಯುವ, ಮಾತಾಡುವ ಕನ್ನಡ ಪರೋಲ್ ಆದರೆ ಕನ್ನಡಿಗರೆಲ್ಲರಿಗೂ ಸಮಾನವಾದ ಒಳಸ್ತರವೊಂದಿದ್ದು ಅದು ಲಾಂಗ್. ಪರೋಲ್ ಮೂರ್ತ, ಅದು ಅವಿಷ್ಕಾರ; ಲಾಂಗ್ ಅಮೂರ್ತ ಸಾಮರ್ಥ್ಯ. ಸಸೂರ್ ಮಂಡಿಸಿದ ಈ ಮಾದರಿ ಭಾಷಾಶಾಸ್ತ್ರದಲ್ಲಿ ಹಲವು ಪರಿವರ್ತನೆಗಳಿಗೆ ಕಾರಣವಾಯಿತು. ಅನಂತರದ ದಶಕಗಳಲ್ಲಿ ನೋಮ್ ಚಾಮಸ್ಕಿ ಈ ಎಳೆಯನ್ನು ಆಧರಿಸಿ ಮಂಡಿಸುತ್ತ ಬಂದಿರುವ ಚಿಂತನೆಗಳು ಭಾಷೆಯನ್ನು ಒಂದು ಸಾಮರ್ಥ್ಯವೆಂದು ತಿಳಿಯುವ ನೆಲೆಯನ್ನು ಹೆಚ್ಚು ಭದ್ರಗೊಳಿಸಿವೆ.

ಒಂದೇ ಪಟ್ಟಿನಲ್ಲಿ ಚಾಮ್‌ಸ್ಕಿಯವರ ಚಿಂತನೆಗಳನ್ನು ವಿವರಿಸುವುದು ಸಾಧ್ಯವಿಲ್ಲ. ಅದಕ್ಕೆ ಕೆಲವು ಮುಖ್ಯ ಕಾರಣಗಳಿವೆ. ಒಂದು, ಕನ್ನಡದಲ್ಲಿ ಮಂಡಿತವಾಗಿರುವ ಭಾಷಾಚಿಂತನೆಗಳ ಪರಿಭಾಷೆಯನ್ನು ಬಳಸಿ ಚಾಮ್‌ಸ್ಕಿ ಚಿಂತನೆಗಳನ್ನು ವಿವರಿಸಲು ಆಗುವುದಿಲ್ಲ. ಹೊಸ ಪರಿಭಾಷೆಯನ್ನು ಕಟ್ಟಿಕೊಳ್ಳುವುದು ಅವಶ್ಯ. ಎರಡು, ಐದನೆ ದಶಕದಿಂದ ಮೊದಲಾದ ಚಾಮ್‌ಸ್ಕಿ ವಿಶ್ಲೇಷಣೆ ಐವತ್ತು ವರ್ಷಗಳ ಅವಧಿಯಲ್ಲಿ ಬೆಳೆದುಬಂದಿದೆ. ತಾನು ಮಂಡಿಸಿದ ಪ್ರಮೇಯಗಳನ್ನು ಸ್ವತಃ ಚಾಮ್‌ಸ್ಕಿಯವರೇ ಹೊಸ ಮಾಹಿತಿಯ, ಹೊಸ ಮಾದರಿಗಳ ಹಿನ್ನೆಲೆಯಲ್ಲಿ ಬದಲಿಸಿದ, ಪರಿಷ್ಕರಿಸಿದ ಸಂದರ್ಭಗಳಿವೆ. ಹೀಗಾಗಿ ಎಲ್ಲ ನೆಲೆಗಳನ್ನು ಒಮ್ಮೆಗೇ ಮಂಡಿಸುವುದು ಕಷ್ಟಸಾಧ್ಯ. ಮೂರು, ಚಾಮ್‌ಸ್ಕಿಯವರ ವಿಚಾರ ಪ್ರಣಾಳಿಕೆಗಳನ್ನು ಒಪ್ಪದ ಚಿಂತನೆಗಳೂ ಈ ದಶಕಗಳಲ್ಲಿ ಬೆಳೆದಿವೆ. ಭಾಷಾಶಾಸ್ತ್ರಜ್ಞರಲ್ಲಿ ಇಂಥ ವಿರೋಧಗಳು ಕಂಡುಬಂದಿರುವಂತೆ ಅನ್ಯಜ್ಞಾನಶಿಸ್ತುಗಳಲ್ಲೂ ತೋರಿವೆ. ಮನೋವಿಜ್ಞಾನಿಗಳಲ್ಲಿ ಚಾವಮ್‌ಸ್ಕಿಯುವರ ಚಿಂತನೆಗಳನ್ನು ಒಪ್ಪದವರಿದ್ದಾರೆ. ಈ ವಿರೋಧಕ್ಕೆ ಬೇರೆ ಕಾರಣಗಳಿವೆ. ಚಾಮ್‌ಸ್ಕಿಯವರ ಚಿಂತನೆಗಳು ಮೊದಲಾದದ್ದೇ ವರ್ತನಾತ್ಮಕ ಮನೋವಿಜ್ಞಾನದ ನೆಲೆಗಳನ್ನು ನಿರಾಕರಿಸುವ ಮೂಲಕ. ಬಿ. ಎಫ್. ಸ್ಕಿನರ್ ಅವರ ಗ್ರಂಥವನ್ನು ವಿಮರ್ಶಿಸುತ್ತ ಚಾಮ್‌ಸ್ಕಿ ತನ್ನ ವಿರೋಧಗಳನ್ನು ಮಂಡಿಸಿದ್ದರು. ಅನಂತರದ ದಶಕಗಳಲ್ಲಿ ವರ್ತನಾತ್ಮಕ ಮನೋವಿಜ್ಞಾನಿಗಳು ಚಾಮ್‌ಸ್ಕಿಯ ಚಿಂತನೆಗಳನ್ನು ನಿರಾಕರಿಸಲು ಬೇಕಾದ ಪರಿಕರಗಳನ್ನು ಶೋಧಿಸುತ್ತಲೇ ಇದ್ದಾರೆ. ಈ ವಾಗ್ವಾದ ಇನ್ನೂ ಮುಗಿದಿಲ್ಲ. ಈ ವಾಗ್ವಾದದ ಹಿನ್ನೆಲೆಯನ್ನು ಗಮನಿಸದೆ ಚಾಮ್‌ಸ್ಕಿಯನ್ನು ಕನ್ನಡದಲ್ಲಿ ಮಂಡಿಸುವುದು ಕಷ್ಟ.

ಈ ಮೇಲಿನ ಆತಂಕಗಳು ಇದ್ದರೂ ಚಾಮ್‌ಸ್ಕಿಯವರ ಭಾಷಾ ಚಿಂತನೆಗಳನ್ನು ಮಂಡಿಸಲು ಈ ಮುಂದೆ ಪ್ರಯತ್ನಿಸಲಾಗಿದೆ. ಈಚಿನ ವರ್ಷಗಳಲ್ಲಿ ಚಾಮ್‌ಸ್ಕಿ ತನ್ನ ಶೋಧಗಳನ್ನು ವಿವರಿಸಲು ನಾಲ್ಕು ಮೂಲಭೂತ ಪ್ರಶ್ನೆಗಳನ್ನು ಮುಂದಿರಿಸುತ್ತಾರೆ. ಆ ನಾಲ್ಕು ಪ್ರಶ್ನೆಗಳು ಹೀಗಿವೆ.

ಭಾಷೆ ನಮಗೆ ಗೊತ್ತು ಎನ್ನುತ್ತೇವೆ. ಕನ್ನಡ ನಮಗೆ ಗೊತ್ತಿರುವುದಕ್ಕೆ ಪುರಾವೆ ಏನು? ಯಾರಾದರೂ ಕನ್ನಡದಲ್ಲಿ ಮಾತನಾಡಿದರೆ ನಮಗೆ ಅರ್ಥವಾಗುತ್ತದೆ. ಮತ್ತು ನಾವು ಮಾತಾಡಿದುದು ಕನ್ನಡಿಗರಿಗೆ ಗೊತ್ತಾಗುತ್ತದೆ. ಹೀಗೆ ಮಾತಾಡದಿದ್ದರೂ ಅಥವಾ ಯಾವ ಮಾತನ್ನೂ ಕೇಳಿ ಅರ್ಥ ಮಾಡಿಕೊಳ್ಳದಿದ್ದರೂ ನಮಗೆ ಕನ್ನಡ ಗೊತ್ತಿರುವುದು ಸುಳ್ಳಾಗುವುದಿಲ್ಲ. ಅಂದರೆ ಬಳಕೆಯಿಂದಲೇ ಈ ಸಾಮರ್ಥ್ಯದ ಪರೀಕ್ಷೆಯಾಗಬೇಕೆಂದಿಲ್ಲ. ಕನ್ನಡ ಬಳಕೆಯ ಸಾಧ್ಯತೆಯು ಲವಲೇಶವೂ ಇಲ್ಲದ ಚೈನಾದ ಒಂದು ಊರಿನಲ್ಲಿ ನಾವು ಇದ್ದೇವೆಂದುಕೊಳ್ಳಿ. (ಕನ್ನಡ ಬಲ್ಲ ಏಕಾಂಗಿಯಾಗಿ) ಅಲ್ಲಿಯೂ ನನಗೆ ಗೊತ್ತಿರುವುದು ಸುಳ್ಳಾಗಲಾರದು. ಬಳಸದಿದ್ದರೂ ಅದು ನಮ್ಮಲ್ಲಿ ಇದ್ದೇ ಇರುತ್ತದೆ. ಅಲ್ಲದೆ ಕನ್ನಡ ನನಗೆ ಗೊತ್ತಿರುವುದಷ್ಟೇ ಅಲ್ಲದೆ ನನಗೆ ಅದು ಗೊತ್ತಿದೆ ಎಂಬುದೂ ನನಗೆ ಗೊತ್ತು. ಅಂದರೆ ಒಂದು ಸಾಮರ್ಥ್ಯ ಇರುವುದು ಬೇರೆ, ಅದು ಇದೆಯೆಂದು ಗೊತ್ತಿರುವುದು ಬೇರೆ; ಭಾಷೆ ಈ ಎರಡೂ ನೆಲೆಗಳಲ್ಲಿ ಪ್ರವೃತ್ತವಾಗುತ್ತದೆ. ಅಂದರೆ ನಮಗೆ ಭಾಷೆಯೂ ಗೊತ್ತು. ಭಾಷೆ ಗೊತ್ತು ಎಂಬುದೂ ಗೊತ್ತು. ಚಾಮ್‌ಸ್ಕಿಯವರ ಮೊದ ಮೊದಲನೆಯ ಪ್ರಶ್ನೆ ಇಲ್ಲಿಂದ ಮೊದಲಾಗುತ್ತದೆ. ನಮಗೆ ಗೊತ್ತಿರುವ ಭಾಷೆಯನ್ನು ಕುರಿತ ನಮ್ಮ ತಿಳುವಳಿಕೆಯ ಸ್ವರೂಪ ಎಂಥದು. ಕನ್ನಡ, ತಮಿಳು, ಜರ್ಮನ್ ಹೀಗೆ ಬೇರೆ ಬೇರೆ ಭಾಷೆಗಳು ಹೇಗೆ ಈ ತಿಳುವಳಿಕೆಯ ಭಾಗಗಳಾಗುತ್ತವೆ?

ಈ ಮೇಲೆ ವಿವರಿಸಿದಂತೆ ಪ್ರತಿ ಭಾಷಿಕರಲ್ಲೂ ತಾವಾಡುವ ಭಾಷೆಯ ಬಗ್ಗೆ ಅಂತಸ್ಥ ತಿಳಿವು ಇದ್ದೇ ಇರುತ್ತದೆ. ಆದರೆ ಅವರಿಗೆ ಆ ತಿಳುವಳಿಕೆಯ ಸ್ವರೂಪ ಗೊತ್ತಿರುವುದಿಲ್ಲ. ಆ ತಿಳಿವನ್ನು ಹುಡುಕಿ ತೆಗೆಯುವುದು ಬೇರೊಂದು ಅನ್ವೇಷಣೆ. ವೈಯಾಕರಣರು, ತಾರ್ಕಿಕರು, ನೈಯಾಯಿಕರು, ಮೀಮಾಂಸಕರು ಇದೇ ಗುರಿಯನ್ನು ಹೊಂದಿದವರಾಗಿದ್ದಾರೆ. ಭಾಷಿಕರು ಮಾತ್ರ ತಮಗೇನು ಗೊತ್ತು ಎಂಬುದರ ಅರಿವಿಲ್ಲದೆಯೂ ಆ ಸಾಮರ್ಥ್ಯವನ್ನು ಬಳಸಬಲ್ಲರು. ಇದಕ್ಕೆ ಹಲವು ನಿದರ್ಶನ ಸಾಧ್ಯ.

ಅ) ನಾವು ಎಂದೆಂದೂ ಕೇಳಿರದ, ಓದಿರದ ವಾಕ್ಯಗಳನ್ನು ಯಾವುದೇ ನೆನಪಿನ ಆಧಾರವಿಲ್ಲದೆಯೂ ಅಥವಾ ವಿಶೇಷ ಪ್ರಯತ್ನವಿಲ್ಲದೆಯೂ ಹೇಳಬಲ್ಲೆವು ಮತ್ತು ಅಂಥ ವಾಕ್ಯಗಳನ್ನು ಕೇಳಿ ಓದಿ ಅರ್ಥಮಾಡಿಕೊಳ್ಳಬಲ್ಲೆವು.

ಆ) ನಾವು ಬಲ್ಲ ಭಾಷೆಗೆ ಅಸಹಜವಾದ ವಾಕ್ಯ ರಚನೆಯನ್ನು ಹೊಂದಿರುವ ವಾಕ್ಯಗಳು ಯಾವುವು ಎಂಬುದನ್ನು ಸುಲಭವಾಗಿ ಗುರುತಿಸಬಲ್ಲೆವು. ಉದಾ: ಮರಗಳು ಓಡುತ್ತಾಳೆ, ಜನರು ಊರನ್ನು ಹೋಗುತ್ತಾರೆ, ಇತ್ಯಾದಿ ಈ ವಾಕ್ಯಗಳು ಏಕೆ ಸರಿಯಲ್ಲವೆಂದು ಹೇಳಲಾಗದಿದ್ದರೂ ಅವು ಸರಿಯಲ್ಲ ಎಂಬ ನಮ್ಮ ತೀರ್ಮಾನ ಮಾತ್ರ ತಪ್ಪಾಗಿರುವುದಿಲ್ಲ.

ಈ ತಿಳುವಳಿಕೆ ಅಥವಾ ಸಾಮರ್ಥ್ಯ ಮನಸ್ಸಿಗೆ ಸಂಬಂಧಿಸಿದ್ದು. ಆದರೆ ಮನಸ್ಸು ಅಮೂರ್ತ. ಅದೆಲ್ಲಿದೆ? ಅಸಂಬದ್ಧವಾಗಿ ಮಾತಾಡುವವರನ್ನು ವರ್ಣಿಸುವಾಗ 'ತಲೆ

ಸರಿ ಇಲ್ಲ' ಎನ್ನುತ್ತೇವೆ. ತಲೆ ಎಂದರೆ ಬುದ್ಧಿ ಸ್ಥಿಮಿತತೆ. ಅದು ಪರ್ಯಾಯವಾಗಿ ಮೆದುಳನ್ನು ಸೂಚಿಸುತ್ತದೆ. ಅಂದರೆ ಭಾಷೆ ಮೆದುಳಿನ ಒಂದು ಸಾಮರ್ಥ್ಯವೆಂದು ಹೇಳುವುದು ಅನಿವಾರ್ಯ. ಮೆದುಳಿಗೆ ಅಥವಾ ಅದರ ಕೆಲವು ಭಾಗಗಳಿಗೆ ಆಘಾತವಾದಾಗ ಮಾತನಾಡುವ ಸಾಮರ್ಥ್ಯ ತಾತ್ಕಾಲಿಕವಾಗಿ ಅಥವಾ ಪೂರ್ಣವಾಗಿ ಕಳೆದುಹೋಗುತ್ತದೆ. ಇದರಿಂದಲೂ ಮೆದುಳಿಗೂ ಭಾಷೆಗೂ ಇರುವ ಸಂಬಂಧ ಗೊತ್ತಾಗುತ್ತದೆ. ಈ ಸಂಗತಿ ಖಚಿತಗೊಂಡ ಮೇಲೆ ಮೆದುಳಿನ ರಚನೆಯನ್ನು ಅಭ್ಯಾಸ ಮಾಡುವವರು ಭಾಷಾ ಸಾಮರ್ಥ್ಯವು ಆ ಅಂಗದಲ್ಲಿ ನಿಯಂತ್ರಿತವಾಗುತ್ತಿರುವ ಕ್ರಮವನ್ನು ಅಧ್ಯಯನ ಮಾಡತೊಡಗಿದ್ದಾರೆ.

ಪ್ರಶ್ನೆ 2: ಈ ಭಾಷಾ ಸಾಮರ್ಥ್ಯವು ಮೆದುಳಿನಲ್ಲಿ ಇರುವುದಾದರೆ ಅದು ಅಲ್ಲಿ ನೆಲೆಯಾಗಿದ್ದು ಹೇಗೆ, ಅಂದರೆ ಈ ಸಾಮರ್ಥ್ಯವು ಹುಟ್ಟಿನಿಂದಲೇ ಇರುವುದೋ ಅಥವಾ ಕಲಿಕೆಯ ಭಾಗವಾಗಿ ರೂಪುಗೊಳ್ಳುತ್ತದೋ, ಅಥವಾ ಇವೆರಡೂ ಬಗೆಗಳಲ್ಲೂ ಈ ಸಾಮರ್ಥ್ಯವೂ ನಮಗೆ ಲಭಿಸುತ್ತದೋ, ಎಂದು ಈ ಪ್ರಶ್ನೆಯನ್ನು ಮರುರೂಪಿಸಬಹುದು. ವರ್ತನಾವಾದಿಗಳು ಭಾಷೆಯು ಜನ್ಮಜಾತ ಎಂಬುವುದನ್ನು ಒಪ್ಪುವುದಿಲ್ಲ. ಅದು ನಾವು ಪಡೆದುಕೊಳ್ಳುವ ಸಾಮರ್ಥ್ಯವೆಂದು ತಿಳಿಯುತ್ತಾರೆ. ಎಂದರೆ ಕಲಿಕೆಗೆ ಅವರಲ್ಲಿ ಮನ್ನಣೆ. ಈಗಾಗಲೇ ಈ ತಿಳುವಳಿಕೆ ಬಲವಾಗಿ ಬೇರೂರಿದೆ. ಜನರ ಸಾಮಾನ್ಯ ತಿಳುವಳಿಕೆಯ ಭಾಗವಾಗಿಯೂ ತೋರುತ್ತದೆ. ಮಗು ಮಾತು ಕಲಿಯುತ್ತದೆ, ನಾನು ತಮಿಳು ಕಲಿತಿದ್ದೇನೆ ಮುಂತಾದ ವಾಕ್ಯಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ.

ಭಾಷೆ ಎಂಬ ಸಾಮರ್ಥ್ಯ ಕಲಿಕೆಯ ಮೂಲಕ ಲಭಿಸುವುದು ಎಂದಾದರೆ ಆಗ ನಾವು ಕೆಲವು ಪ್ರಶ್ನೆಗಳನ್ನು ಎದುರಿಸಬೇಕಾಗುತ್ತದೆ. ಸಾಮಾನ್ಯ ಕಲಿಕೆಯ ತತ್ತ್ವಗಳು ಹೇಳುವ ಚೌಕಟ್ಟುಗಳಿಂದ ನೋಡಿದರೆ ಭಾಷೆಯೆಂಬ ಸಾಮರ್ಥ್ಯ ಮನುಷ್ಯರಲ್ಲಿ ಮೂಡುವ ಕ್ರಮವನ್ನು ವಿವರಿಸುವುದು ಕಷ್ಟ. ಚಾಮ್‌ಸ್ಕಿ ಇದನ್ನು ಪ್ಲೇಟೋನ ಸಮಸ್ಯೆ ಎಂದಿದ್ದಾರೆ. ಪ್ಲೇಟೋ ನೇರವಾಗಿ ಭಾಷೆಗೆ ಸಂಬಂಧಿಸಿ ಯಾವ ಪ್ರಶ್ನೆಯನ್ನೂ ಎತ್ತಿಲ್ಲ. ಜ್ಞಾನ ಸಂಬಂಧದಲ್ಲಿ ಆತ ಎತ್ತುವ ಸಮಸ್ಯೆಯಿದು. ಪ್ಲೇಟೋನ ವಿಚಾರಗಳನ್ನು ಸಂಗ್ರಹಿಸುತ್ತ ಬರ್ಟ್ರಂಡ್ ರಸೆಲ್ ಹೀಗೆ ಹೇಳುತ್ತಾರೆ. ಮಾನವರಿಗೆ ಈ ಜಗತ್ತಿನ ಸಂಪರ್ಕ ಒದಗುವುದು ಅತ್ಯಲ್ಪ ಅವಧಿಯಷ್ಟು ಮಾತ್ರ. ಅಲ್ಲದೇ ಅದು ವೈಯಕ್ತಿಕ ನೆಲೆಯಲ್ಲಿದ್ದು ಸೀಮಿತ ಪ್ರಮಾಣದಲ್ಲಿರುತ್ತದೆ. ಆದರೂ ಅವರಿಗೆ ಅಪಾರವಾದ ಜ್ಞಾನ ಒದಗುವುದು. ಇದು ಹೇಗೆ ಸಾಧ್ಯ? ಕಲಿಕೆಗೆ ದೀರ್ಘಾವಧಿ ತರಬೇತಿ, ಸಾರ್ವತ್ರಿಕ ಉದ್ದೇಶ ಮತ್ತು ಪ್ರಮಾಣಬಾಹುಳ್ಯ ಅತ್ಯವಶ್ಯ. ಇವೆಲ್ಲ ಇಲ್ಲದೆಯೂ ಭಾಷೆಯನ್ನು, ಜ್ಞಾನವನ್ನು ಪಡೆಯುವುದು ಹೇಗೆ ಸಾಧ್ಯ? ಪ್ಲೇಟೋನ ಗುರು ಸಾಕ್ರಟಿಸ್ ಒಂದು ಪ್ರಯೋಗ ಮಾಡಿದ್ದನು. ಅಥವಾ ಹಾಗೆ ವರದಿಯಾಗಿದೆ. ಅದರಂತೆ ಸಾಕ್ರಟಿಸ್ ಒಬ್ಬ ಸೇನಾವೃತ್ತಿಯ ಹುಡುಗನನ್ನು ಕೂರಿಸಿಕೊಂಡು ಕೆಲವು ಯಕ್ತ ಪ್ರಶ್ನೆಗಳನ್ನು ಒಂದಾದ ಮೇಲೆ ಒಂದರಂತೆ ಕೇಳುತ್ತಾನೆ. ಹಾಗೆ ಕೇಳುತ್ತ ಹೋದಂತೆ ಆ ಹುಡುಗನಿಗೆ ರೇಖಾಗಣಿತದ ಅತಿ ಸಂಕೀರ್ಣ ಪ್ರಮೇಯಗಳ ಅರಿವು ಇರುವುದು ಗೊತ್ತಾಗುತ್ತದೆ. ಏನೂ ಕಲಿಯದೇ,

ಮಾಹಿತಿ ಪಡೆಯದೇ ಆ ಹುಡುಗ ರೇಖಾಗಣಿತದ ತತ್ತ್ವಗಳನ್ನು ತಿಳಿದದ್ದು ಹೇಗೆ? ಪ್ಲೇಟೋ ಈ ಪ್ರಶ್ನೆಗೆ ಉತ್ತರಿಸಿದ್ದಾನೆ. ರೇಖಾಗಣಿತದ ತತ್ತ್ವಗಳು ಹುಡುಗನ ಮನಸ್ಸಿನಲ್ಲಿ ಅವನ ಪೂರ್ವಜನ್ಮದ ಸಂಚಯವಾಗಿ ನೆಲೆಗೊಂಡಿರುತ್ತವೆ. ಈ ತತ್ತ್ವಗಳನ್ನು ಸಾಕ್ರಟಿಸ್‌ನ ಪ್ರಶ್ನೆಗಳು ಹೊರಬರುವಂತೆ ಪ್ರಚೋದಿಸುತ್ತವೆ. ಹಲವು ಶತಮಾನಗಳ ಅನಂತರ ಬಂದ ಚಿಂತಕ ಲಿಬ್ನಿಜ್ ಈ ವಿವರಣೆಯನ್ನು ಒಪ್ಪುತ್ತಾನೆ. ಆದರೆ ಅವನಿಗೆ ಪುನರ್ಜನ್ಮದ ವಿವರ ಒಪ್ಪಿಗೆಯಾಗಲಿಲ್ಲ. ಹಾಗಿದ್ದಲ್ಲಿ ಈ ಅಂತಸ್ಥಜ್ಞಾನದ ಆವಿರ್ಭಾವವನ್ನು ಹೇಗೆ ವಿವರಿಸುವುದು? ಈ ಜ್ಞಾನದ ಒಂದಂಶವು ಹುಟ್ಟಿನಿಂದ ನಮಗೆ ಒದಗುತ್ತದೆ. ಜೈವಿಕ ನೆಲೆಯಲ್ಲಿ ಲಭಿಸುತ್ತದೆಂದು ತಿಳಿಯುವುದೊಂದೇ ಸರಿಯಾದ ಮಾರ್ಗ. ಮಗು ಬೆಳೆಯುತ್ತ ಹೋದಂತೆ ಅದಕ್ಕೆ ಕೈಕಾಲುಗಳು ಬೆಳೆಯುತ್ತವೆಯೇ ಹೊರತು ರೆಕ್ಕೆಗಳು ಬರುವುದಿಲ್ಲ. ಏಕೆಂದರೆ ಹೀಗೆ ಯಾವುದು ಬೆಳೆಯಬೇಕು, ಯಾವುದು ಬೆಳೆಯಬಾರದು ಎಂಬುದು ಜೈವಿಕವಾಗಿ ನಿರ್ಧಾರಿತವಾಗಿರುತ್ತದೆ. ಭಾಷೆಯ ಸಾಮರ್ಥ್ಯವೂ ಹೀಗೆಯೇ ಹುಟ್ಟಿನಿಂದಲೇ ಲಭಿಸುತ್ತದೆ. ಅದು ಸಾಮೂಹಿಕವಾಗಿ ಪೂರ್ಣಸಾಮರ್ಥ್ಯವಾಗಿ ಆಕಾರ ಪಡೆದು ನಮ್ಮ ಬಳಕೆಗೆ ಉಪಲಬ್ದವಾಗುತ್ತದೆ. ಚಾಮ್‌ಸ್ಕಿಯ ಈ ಪ್ರಮೇಯ ಬಹು ಚರ್ಚಿತವಾಗಿದೆ. ಭಾಷೆಗೆ ಜೈವಿಕ ಮೂಲವಿರುವುದನ್ನು ಸಮರ್ಥಿಸುವ ಹಲವಾರು ಅಧ್ಯಯನಗಳು ಕಳೆದ ದಶಕಗಳಲ್ಲಿ ನಡೆದಿವೆ. ಮೆದುಳಿನ ಯಾವ ಯಾವ ಭಾಗಗಳು ಭಾಷೆಯ ಯಾವ ಯಾವ ಅಂಶಗಳನ್ನು ನಿಯಂತ್ರಿಸುತ್ತವೆ, ನಿರ್ದೇಶಿಸುತ್ತವೆ ಎನ್ನುವುದನ್ನು ಗುರುತಿಸುವ ಶೋಧಗಳು ಮುಂದುವರೆದಿವೆ. ಮೆದುಳಿಗೆ ಅಂಶಿಕ ಅಘಾತ ಉಂಟಾಗಿರುವ ವ್ಯಕ್ತಿಗಳ ಅಧ್ಯಯನದಿಂದ ಈ ಶೋಧಗಳು ಸಾಧ್ಯವಾಗಿವೆ.

ಜನ್ಮಜಾತವಾದ ಭಾಷಾ ಸಾಮರ್ಥ್ಯವನ್ನು ಯೂನಿವರ್ಸಲ್ ಗ್ರಾಮರ್ (ಯುಜಿ) ಎಂದು ಕಲ್ಪಿಸಿಕೊಳ್ಳಲಾಗಿದೆ. ಇದು ಯಾವುದೇ ಭಾಷೆಯನ್ನು ಪ್ರತಿನಿಧಿಸುವುದಿಲ್ಲ; ಜಗತ್ತಿನ ಎಲ್ಲ ಸಹಜಭಾಷೆಗಳ ಸಾಧ್ಯತೆಗಳೂ ಯುಜಿಯಲ್ಲಿರುತ್ತವೆ. ಹಾಗೆಂದರೆ ಅದನ್ನು ಎಲ್ಲ ಭಾಷೆಗಳ ಚೀಲವೆಂದು ಪರಿಗಣಿಸಬಾರದು. ಯಾವುದೇ ಭಾಷೆಗಾದರೂ ಅನ್ವಯವಾಗುವ ಕೆಲವು ನಿಯಮಗಳು ಮಾತ್ರ ಇಲ್ಲಿ ಮುಖ್ಯ. ಒಂದು ನಿದರ್ಶನವನ್ನು ನೋಡೋಣ. ಜಗತ್ತಿನಲ್ಲಿ ಈವರೆಗೆ ಗಮನಕ್ಕೆ ಬಂದಿರುವ ಭಾಷೆಗಳಲ್ಲೆಲ್ಲಾ ವಾಕ್ಯಗಳು ಪದಗಳ ಪದಮಾಹಿತಿಗಳ ಸರಣಿಯಾಗಿರುವುದು ಖಚಿತಗೊಂಡಿದೆ. ಇದು ಒಂದು ನಿಯಮ. ಈ ಪದಗಳಲ್ಲಿ ವಿಷಯ (S) ಅನುಭೋಗಿ (O) ಕ್ರಿಯಾಪದ (V)ಗಳೆಂಬ ಭೇದಗಳಿವೆ. ಈ ಮೂರು ಯಾವ ಆನುಪೂರ್ವಿ ಬರಬೇಕೆಂಬುದು ಪ್ರತಿಭಾಷೆಗೂ ನಿಯತವಾಗಿರುತ್ತದೆ. ಈ ಪದಗಳ ಆನುಪೂರ್ವಿಗೆ ಯಾವ ಮಹತ್ವವನ್ನು ನೀಡುವ ಭಾಷೆಗಳೂ ಇವೆ. ಇತರ ಭಾಷೆಗಳಲ್ಲಿ ಇವು ಯಾವ ಯಾವ ಆನುಪೂರ್ವಿಯಲ್ಲಿ ಬರಲು ಸಾಧ್ಯ ಎಂಬುದೂ ನಿರ್ದಿಷ್ಟ ಸಂಖ್ಯೆಗಳಲ್ಲಿ ಇರುತ್ತದೆ. 1)SOV 2) SVO 3) OVS 4) OSV 5) VSO 6) VOS ಈ ಆರು ಸಾಧ್ಯತೆಗಳನ್ನೇ ಜಗತ್ತಿನ ಭಾಷೆಗಳು ಬಳಸುತ್ತವೆ. ಅಂದರೆ ಇವು ಮೂಲಭೂತ ನಿಯಮದ ವಿಕಲ್ಪಗಳು. ಅಂದರೆ ಮೂಲಭೂತ ನಿಯಮ ಜಾರಿಗೊಳ್ಳಲು ಇರುವ ಸಾಧ್ಯತೆಗಳು. ಈ ನಿಯಮ ಮತ್ತು ವಿಕಲ್ಪಗಳ ಸಿದ್ಧಾಂತವನ್ನು 1980ರ ಸುಮಾರಿನಲ್ಲಿ ಚಾಮ್‌ಸ್ಕಿ ಮಂಡಿಸಿದರು.

ನಿಯಮಗಳು ಮತ್ತು ವಿಕಲ್ಪಗಳು (PP) ಸಿದ್ಧಾಂತದ ಪ್ರಸ್ತುತತೆ ಮತ್ತು ಸ್ವರೂಪಗಳನ್ನು ಚರ್ಚಿಸುವುದೇ ಕಳೆದ ಎರಡು ದಶಕಗಳ ಮುಖ್ಯ ಶೋಧ ಚಟುವಟಿಕೆಯಾಗಿದೆ.

ನಿಯಮಗಳ ಶೋಧ ಅತ್ಯಂತ ಅಮೂರ್ತ ನೆಲೆಯಲ್ಲಿ ನಡೆಯುತ್ತದೆ. ಯುಜಿಯ ನಿಯಮಗಳೆಂದರೆ ಜಗತ್ತಿನ ಎಲ್ಲ ಭಾಷೆಗಳ ನಿಯಮಗಳ ಮೊತ್ತವಲ್ಲ. ಆ ಎಲ್ಲ ನಿಯಮಗಳ ಅತ್ಯಂತ ಸಾಧಾರಣೀಕೃತ ನೆಲೆಗಳಲ್ಲಿ ನಿಯಮಗಳನ್ನು ರೂಪಿಸಿರಬೇಕಾಗುತ್ತದೆ. ಒಂದು ಸರಳ ನಿದರ್ಶನವನ್ನು ನೋಡೋಣ. ಯಾವುದೇ ಭಾಷೆಯ ವಾಕ್ಯದಲ್ಲಿ ನಾಮಗುಚ್ಛದಟಟು ಒಂದು ನಾಮಪದವಿದ್ದು ಅದೇ ಆ ರಚನೆಯ ಶಿರವಾಗಿರುತ್ತದೆ. ಹಾಗೆಯೇ ಕ್ರಿಯಾಪದಗುಚ್ಛದಲ್ಲಿ ಒಂದು ಕ್ರಿಯಾಧಾತುವಿದ್ದರೆ ಅದೇ ಆ ರಚನೆಯ ಶಿರವಾಗಿರುತ್ತದೆ. ಈ ಮಾದರಿ ವಿಶೇಷಗುಚ್ಛಗಳಿಗೂ ಅನ್ವಯಿಸುತ್ತದೆ. ಈ ಮೂರು ನಿಯಮಗಳನ್ನು ಬೇರೆ ಬೇರೆ ಹೇಳಬೇಕಾದ ಅವಶ್ಯವಿಲ್ಲ. ಯಾವುದೇ ಪದಗುಚ್ಛದಲ್ಲಿ, ನಾಮಪದ, ಕ್ರಿಯಾಪದ ಇಲ್ಲವೇ ವಿಶೇಷಣ ಪದಗುಚ್ಛವಾಗಿರಲಿ, ಅದರಲ್ಲಿ ಆಯಾ ಹೆಸರುಳ್ಳ ಪದವೇ ಶಿರವಾಗಿರುತ್ತದೆ ಎಂದರೆ ಸಾಕಾಗುತ್ತದೆ. ಅಂದರೆ ಅತ್ಯಂತ ಕಡಿಮೆ ಮಾಹಿತಿಯಿಂದ ಅತಿ ಹೆಚ್ಚು ವ್ಯಾಪಕತೆಯುಳ್ಳ ನಿಯಮಗಳನ್ನು ಯುಜಿ ಹೊಂದಿರುತ್ತದೆ, ಅಥವಾ ಅಂಥ ನಿಯಮಗಳನ್ನು ಶೋಧಿಸಬೇಕಾಗುತ್ತದೆ.

ಚಾಮ್‌ಸ್ಕಿ ಮಂಡಿಸುವ ಮೂರನೆಯ ಪ್ರಶ್ನೆ: ಈ ಅಂತಸ್ಥ ತಿಳುವಳಿಕೆಯು ನುಡಿಯಾಗಿ, ಮಾತಾಗಿ ಪರಿವರ್ತಿತವಾಗುವುದು ಹೇಗೆ? ಇದರಲ್ಲಿ ಎರಡು ನೆಲೆಗಳಿವೆ. ಗ್ರಹಿಕೆಯ ನೆಲೆ ಮತ್ತು ಅಭಿವ್ಯಕ್ತಿಯ ನೆಲೆ. ನಾವು ನುಡಿಯ ಮೂಲಕ ಕೇಳಿದ್ದನ್ನು ಲೋಕಾನುಭವಕ್ಕೆ ಹೇಗೆ ಪರಿವರ್ತಿಸಿಕೊಳ್ಳುತ್ತೇವೆ ಎಂಬುದು ಒಂದು ನೆಲೆ. ಇದು ಗ್ರಹಿಕೆಗೆ ಸಂಬಂಧಿಸಿದೆ. ನಾವು ವಾಕ್ಯಗಳನ್ನು ಹೇಗೆ ಉತ್ಪಾದಿಸುತ್ತೇವೆ ಮತ್ತು ಹಾಗೆ ಉತ್ಪಾದಿಸಲು ಇರುವ ಕಾರಣಗಳೇನು ಎಂಬುದು ಇನ್ನೊಂದು ನೆಲೆ. ಇದು ಅಭಿವ್ಯಕ್ತಿಗೆ ಸಂಬಂಧಿಸಿದೆ. ಈ ಎರಡನೆಯ ನೆಲೆ ತುಂಬಾ ಸಂಕೀರ್ಣವಾದುದು. ಏಕೆಂದರೆ ಮಾನವನ ಭಾಷಾಬಳಕೆಯನ್ನು ಗಮನಿಸಿದರೆ ಕೆಲವು ಲಕ್ಷಣಗಳು ವಿಶಿಷ್ಟವಾಗಿ ಕಾಣುತ್ತದೆ. ಬಹುಮಟ್ಟಿಗೆ ನಾವು ಸದಾಕಾಲ ಹೊಸಹೊಸ ವಾಕ್ಯಗಳನ್ನೇ ಉತ್ಪಾದಿಸುತ್ತೇವೆ. ಒಂದೇ ವಿಷಯವನ್ನು ಹೇಳಲು ಬೇರೆಬೇರೆ ಸಂದರ್ಭದಲ್ಲಿ ಬೇರೆಬೇರೆ ವಾಕ್ಯಗಳನ್ನು ರಚಿಸುತ್ತೇವೆ. ವಾಕ್ಯಗಳ ಸ್ವರೂಪವೂ ಅತ್ಯಂತ ಸರಳನೆಲೆಯಿಂದ ಅತ್ಯಂತ ಸಂಕೀರ್ಣನೆಲೆಯವರೆಗೆ ವ್ಯಾಪಿಸಿರುತ್ತದೆ. ಈ ವಾಕ್ಯಗಳ ರಾಚನಿಕ ಸ್ವರೂಪವನ್ನು ಹೊರಗಿನ ಪ್ರೇರಣೆಗಳಾಗಲೀ, ಮಾನಸಿಕ ಅವಸ್ಥೆಗಳಾಗಲೀ ನೇರವಾಗಿ ನಿರ್ದೇಶಿಸುತ್ತವೆಂದು ವಾದಿಸಲು ಬರುವುದಿಲ್ಲ. ಹೀಗಿದ್ದರೂ ಬಳಕೆಯಾಗುವ ಸಂದರ್ಭಕ್ಕೆ ಯುಕ್ತವಾಗುವಂತೆ ಮತ್ತು ಅರ್ಥಪೂರ್ಣವಾಗಿರುವಂತೆ ಈ ವಾಕ್ಯಗಳು ರಚನೆಯಾಗುತ್ತವೆ. ಡೆಕಾರ್ಟೆ ಎಂಬ ತತ್ತ್ವಶಾಸ್ತ್ರಜ್ಞನು ಭಾಷೆಯ ಈ ಲಕ್ಷಣವನ್ನು ಗಮನಿಸಿ, ಇದನ್ನು 'ಸೃಜನಶೀಲತೆ' ಎಂದು ಹೆಸರಿಸಿದನು.

ಭಾಷೆಯ ಈ ಸೃಜನಶೀಲತೆಯ ಗುಣವನ್ನು ಇನ್ನಷ್ಟು ವಿವರವಾಗಿ ನೋಡಬೇಕಿದೆ. ಮನುಷ್ಯರಿಗೂ ಇತರ ಜೀವಿಗಳಿಗೂ ಇರುವ ವ್ಯತ್ಯಾಸವನ್ನು ನಿರ್ಧರಿಸುವ ಅಂಶವನ್ನಾಗಿ

ಭಾಷೆಯನ್ನು ಹೆಸರಿಸುತ್ತೇವೆ. ಇತರ ಜೀವಿಗಳಿಗೆ ಈ ಸೌಲಭ್ಯವಿಲ್ಲ ಎಂಬಷ್ಟಕ್ಕೆ ಮಾತ್ರ ಈ ವ್ಯತ್ಯಾಸ ಸೀಮಿತವಾಗಿಲ್ಲ. ಮಾನವ ಮತ್ತು ಮಾನವ ಪರಿಸರದ ನಡುವೆ ಇರುವ ಒಂದು ಮೂಲಭೂತ ಲಕ್ಷಣವನ್ನು ನಾವಿಲ್ಲಿ ಪರಿಗಣಿಸಬೇಕು. ಇತರ ಜೀವಿಗಳು ಸಂದರ್ಭಗಳಿಗೆ ಪ್ರತಿಕ್ರಿಯಿಸುವ ರೀತಿಯು ಪೂರ್ವನಿರ್ಧಾರಿತ ಅಥವಾ ಹೀಗೇ ವರ್ತಿಸುತ್ತವೆಂದು ನಾವು ಊಹಿಸಬಹುದು. ಹೀಗೆ ವರ್ತಿಸಬೇಕೆಂಬುದು ಅವುಗಳ ಜೈವಿಕ ರಚನೆಯಲ್ಲಿ ನಿಶ್ಚಿತವಾಗಿರುತ್ತವೆ. ಆದರೆ ಮನುಷ್ಯರ ಪ್ರತಿಕ್ರಿಯೆಗಳನ್ನು ಕುರಿತು ಹೀಗೆ ಕಣಿ ಹೇಳಲು ಬರುವುದಿಲ್ಲ. ಪ್ರತಿಕ್ರಿಯೆ ನೀಡಲೇಬೇಕಾದ ಒತ್ತಾಯ ಇರುತ್ತದೆ ಮತ್ತು ಪ್ರತಿಕ್ರಯಿಸಲು ಬೇಕಾದ ಮನಸ್ಥಿತಿಯೂ ಇರುತ್ತದೆ. ಆದರೆ ಪ್ರತಿಕ್ರಿಯೆ ಏನಾಗಿರುತ್ತದೆ ಎಂಬುದು ಮಾತ್ರ ನಿಶ್ಚಿತವಲ್ಲ. ಇಲ್ಲಿ ಆ ಮನುಷ್ಯರಿಗೆ ಅಗಾಧ ಪ್ರಮಾಣದ ಸ್ವಾತಂತ್ರ್ಯವಿರುತ್ತದೆ. ಈ ಸ್ವಾತಂತ್ರ್ಯವನ್ನು ಎಲ್ಲರೂ ಬಳಸುತ್ತಾರೆಂದಾಗಲೀ ಬಳಸಬೇಕೆಂಬ ಒತ್ತಾಯವಾಗಲೀ ಇಲ್ಲ. ಈ ಸ್ವಾತಂತ್ರ್ಯವು ಹೊರ ಆಕಾರ ತಳೆಯುವ ನೆಲೆಗಳಲ್ಲಿ ಭಾಷೆಯೂ ಒಂದಾಗಿದೆ. ಹೀಗಾಗಿ ಮಾನವರಿಗೆ ಇರುವ ಸ್ವಾತಂತ್ರ್ಯಕ್ಕೂ ಭಾಷೆಗೂ ನೇರವಾದ ಸಂಬಂಧವಿದೆ.

ಈ ಸ್ವಾತಂತ್ರ್ಯವನ್ನು ಬಳಸಲೇಬೇಕೆಂಬ ಒತ್ತಾಯವಿಲ್ಲ ಎಂಬ ಮಾತು ಬಂತು. ಬಳಸದಿದ್ದಲ್ಲಿ ಆ ಸ್ವಾತಂತ್ರ್ಯ ಮನುಷ್ಯರಿಗೆ ಲಭ್ಯವಿಲ್ಲವೆಂದು ವಾದಿಸಲು ಬರುವುದಿಲ್ಲ. ಈ ಅಂಶವನ್ನು ನಾವು ಎಚ್ಚರದಿಂದ ಗಮನಿಸಬೇಕು. ಕೆಲವರು ಭಾಷೆಯೆಂಬುದನ್ನು ಮಾತನಾಡುವ ಮತ್ತು ಕೇಳಿದ್ದನ್ನು ಅರಿಯುವ ಸಾಮರ್ಥ್ಯವೆಂದು ಮಾತ್ರ ತಿಳಿಯುತ್ತಾರೆ. ಈ ಸಾಮರ್ಥ್ಯದ ಸ್ವರೂಪವನ್ನು ಅರಿತರೆ ಭಾಷೆಯ ಸ್ವರೂಪವನ್ನು ಅರಿತಂತೆ ಎಂದು ವಾದಿಸುತ್ತಾರೆ. ಆದರೆ ಬಳಸುವ ಸಾಮರ್ಥ್ಯಕ್ಕೂ ಅಂತಸ್ಥ ಸಾಮರ್ಥ್ಯಕ್ಕೂ ಸಂಬಂಧವಿದೆಯಾದರೂ ಇವೆರಡೂ ಒಂದೇ ಅಲ್ಲ. ಸರಳವಾದ ಉದಾಹರಣೆಯೊಂದನ್ನು ನೋಡೋಣ. ಕನ್ನಡ ಬಲ್ಲವರಿಬ್ಬರಲ್ಲಿ ಅಂತಸ್ಥವಾಗಿರುವ ಕನ್ನಡ ಒಂದೇ. ಆದರೆ ಬಳಕೆಯ ಸಾಮರ್ಥ್ಯ ಇಬ್ಬರಲ್ಲೂ ಬೇರೆಬೇರೆ ಆಗಿರುತ್ತದೆ. ಒಬ್ಬ ವ್ಯಕ್ತಿಯಲ್ಲಿ ದಿನನಿತ್ಯದ ವ್ಯವಹಾರಕ್ಕೆ ಮಾತ್ರ ಆ ಸಾಮರ್ಥ್ಯ ಸೀಮಿತವಾಗಿದ್ದರೆ ಮತ್ತೊಬ್ಬ ವ್ಯಕ್ತಿಯಲ್ಲಿ ಅದು ಕವಿತ್ವವಾಗಿ ಪ್ರಕಟವಾಗುವುದು. ಈ ಬಳಕೆಯ ವ್ಯತ್ಯಾಸಕ್ಕೆ ಬೇರೆ ಏನೇ ಕಾರಣಗಳಿದ್ದರೂ ಖಂಡಿತವಾಗಿ ಅದು ಅವರಿಬ್ಬರೂ ಬಲ್ಲ ಕನ್ನಡದ ಸ್ವರೂಪದಲ್ಲೇ ಇರುವ ವ್ಯತ್ಯಾಸವಂತೂ ಅಲ್ಲ. ಆದ್ದರಿಂದ ಭಾಷೆಯ ಅಂತಸ್ಥ ಸಾಮರ್ಥ್ಯಗಳು ಬೇರೆಬೇರೆ. ಒಂದನ್ನು ಅರಿತರೆ ಇನ್ನೊಂದನ್ನು ಅರಿತಂತೆ ಅಲ್ಲ.

ಇನ್ನೊಂದು ಇಂಥದೇ ನಿದರ್ಶನ. ಕನ್ನಡವನ್ನು ಬಲ್ಲ ವ್ಯಕ್ತಿಯೊಬ್ಬರನ್ನು X ಎಂದು ಹೆಸರಿಸೋಣ. Xಗೆ ಯಾವುದೋ ಅಪಘಾತದಲ್ಲಿ ಮೆದುಳಿನ ನಿರ್ದಿಷ್ಟ ಭಾಗಕ್ಕೆ ಪೆಟ್ಟು ಬಿದ್ದಿತೆಂದುಕೊಳ್ಳಿ. ಆಗ ಆ ವ್ಯಕ್ತಿಗೆ ಕನ್ನಡ ಮಾತಾಡುವ ಅಥವಾ ಕೇಳಿದರೆ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಉಡುಗಿ ಹೋಗುತ್ತದೆ. ಸಾಮಾನ್ಯವಾಗಿ ಇಂಥ ಸ್ಥಿತಿಯನ್ನು ವಾಕ್‌ಸ್ತಂಭನವೆನ್ನುತ್ತಾರೆ. ಆದರೆ ಕೆಲಕಾಲ ಕಳೆದ ಮೇಲೆ ಆರೈಕೆಯಿಂದ ಚೇತರಿಸಿಕೊಂಡ X ಮತ್ತೆ ಮಾತಾಡಲು, ಕೇಳಿ ಅರಿಯಲು ತೊಡಗುವುದು ಸಾಧ್ಯ.

ಈಗ Xಗೆ ಲಭಿಸುವ ಭಾಷೆ ಕನ್ನಡವೇ ಹೊರತು ಬೇರೆಯಲ್ಲ. ವಾಕ್ ಸ್ತಂಭನದ ಕಾಲದಲ್ಲಿ ಅಥವಾ ಅನಂತರ X ಕನ್ನಡವನ್ನು ಮರಳಿ ಕಲಿಯುವುದು ಅವಶ್ಯವಿಲ್ಲ. ಒಂದು ವೇಳೆ ಇಂಥ ಅಪಘಾತ, ಆರೈಕೆಗಳು ಜರ್ಮನಿಯಲ್ಲಿ ಆಯಿತೆಂದುಕೊಳ್ಳಿ. ಅಲ್ಲಿನ ಆಸ್ಪತ್ರೆಯ ಪರಿಸರದಲ್ಲಿ ಕೇಳಸಿಗುವುದು ಜರ್ಮನ್ ಭಾಷೆಯೇ ಆದರೂ X ಮರಳಿ ಪಡೆಯುವುದು ಜರ್ಮನ್ ಭಾಷೆಯನ್ನಲ್ಲ, ಕನ್ನಡವನ್ನೇ. ಇದು ಸಾಧ್ಯವಾದುದು ಹೇಗೆ? ಬಳಕೆಯ ಸಾಮರ್ಥ್ಯ ಇಲ್ಲದಾಗಲೂ ಭಾಷೆಯ ಅಂತಸ್ಥ ಸಾಮರ್ಥ್ಯ Xನಲ್ಲಿ ಇದ್ದೇ ಇದ್ದಿತು. ಆರೈಕೆಯ ಅನಂತರ ಪಡೆದದ್ದು ಕಳೆದುಹೋಗಿದ್ದ ಬಳಕೆಯ ಸಾಮರ್ಥ್ಯವನ್ನಲ್ಲದೆ ಅಂತಸ್ಥ ಸಾಮರ್ಥ್ಯವನ್ನಲ್ಲ. ಇಲ್ಲಿಯೂ ನಮಗೆ ಇವೆರಡೂ ಬೇರೆಬೇರೆ ಎಂಬುದು ಗೊತ್ತಾಗುತ್ತದೆ.

ನಾವು ಬಲ್ಲ ನಮ್ಮ ಭಾಷೆಯ ಅಂತಸ್ಥ ಸಾಮರ್ಥ್ಯದಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆದರೆ ಬಳಕೆಯ ಸಾಮರ್ಥ್ಯದಲ್ಲಿ ಬದಲಾವಣೆಗಳಾಗಬಹುದು. ಮಾತಾಡಲು ಹಿಂಜರಿಯುವ ವ್ಯಕ್ತಿ ಉತ್ತಮ ವಾಕ್ಪಟುವಾಗಬಹುದು. ದಿಟ್ಟತನದಿಂದ ಎಲ್ಲರೊಡನೆ ಸಂಭಾಷಿಸಲು ಬಲ್ಲ ವ್ಯಕ್ತಿ ಕಾರಣಾಂತರಗಳಿಂದ ಮುಖಹೇಡಿಯಾಗಿ ಒಂದೆರಡು ಶಬ್ದಗಳಲ್ಲಿ ತನ್ನ ಮಾತುಕತೆ ಮುಗಿಸಬಹುದು. ಇಂಥ ಸಂದರ್ಭಗಳಲ್ಲಿ ವ್ಯಕ್ತಿ ಬಲ್ಲ ಭಾಷೆಯ ಅಂತಸ್ಥ ಸಾಮರ್ಥ್ಯದಲ್ಲಿ ಯಾವ ಪಲ್ಲಟವೂ ಆಗುವುದಿಲ್ಲ; ಬಳಕೆಯ ಸಾಮರ್ಥ್ಯದಲ್ಲಿ ಏರುಪೇರುಗಳು ಉದ್ದೇಶಿತವಾಗಿ ಅಥವಾ ತಂತಾನೇ ಆಗುವುದಿಲ್ಲ. ಈ ಸಂಗತಿಯು ಸೂಚಿಸುವುದಿಷ್ಟೇ, ಭಾಷೆಯನ್ನು ಕುರಿತ ನಮ್ಮ ಅರಿವು ಮತ್ತು ಅದನ್ನು ಬಳಸುವ ಸಾಮರ್ಥ್ಯಗಳನ್ನು ಸಮೀಕರಿಸಲು ಬರುವುದಿಲ್ಲ.

ಚಾಮ್‌ಸ್ಕಿ ಮುಂದಿಟ್ಟ ನಾಲ್ಕನೆಯ ಪ್ರಶ್ನೆ: ಈ ಭಾಷೆಯ ಅಂತಸ್ಥ ತಿಳುವಳಿಕೆ ಮೆದುಳಿನಲ್ಲಿ ನೆಲೆಗೊಂಡಿರುವ ವಿಧಾನವೇನು? ಯಾವ ಬಗೆಯ ಜೈವಿಕ ಪ್ರಕ್ರಿಯೆಗಳು ಇಲ್ಲಿ ಪ್ರಯುಕ್ತವಾಗುತ್ತಿವೆ. ಹಲವು ಅಂಗಾಂಗಳು ಭಾಷೆಯ ಉತ್ಪಾದನೆಯಲ್ಲಿ ಪಾತ್ರವಹಿಸುತ್ತವೆ. ಕಣ್ಣು, ಕಿವಿ, ಧ್ವನ್ಯಂಗಗಳು ಪ್ರಧಾನವಾದವು. ಈ ಅಂಗಾಂಗಗಳಿಗೆ ಸಂಬಂಧಿಸಿದ ನರವ್ಯೂಹಗಳ ಕಾರ್ಯವಿಧಾನಗಳ ಸಮನ್ವಯ ಹೇಗೆ ನಡೆಯುತ್ತದೆ? ಅಂದರೆ ಕಣ್ಣಿನಿಂದ ದೊರಕುವ ಐಂದ್ರಿಯಿಕ ಮಾಹಿತಿ ಭಾಷಾಮಾಹಿತಿಯಾಗಿ ಪರಿವರ್ತನೆ ಹೊಂದುವುದು ಹೇಗೆ? ಇವೆಲ್ಲವೂ ಈ ಶತಮಾನದ ಉತ್ತರಾರ್ಧದ ಪ್ರಶ್ನೆಗಳು. ಭಾಷಾಶಾಸ್ತ್ರಜ್ಞರು ಪ್ರಶ್ನೆಗಳನ್ನು ಮುಂದಿಟ್ಟರೂ ಬಿಡಿಸುವ ಹೊಣೆ ಮತ್ತು ತಜ್ಞತೆಯುಳ್ಳವರು ಮೆದುಳಿನ ರಚನೆಯನ್ನು ಅಭ್ಯಾಸ ಮಾಡುವ ವಿಜ್ಞಾನಿಗಳು. ಅವರ ಶೋಧಗಳಿಗೆ ಅನುವು ಮಾಡಿಕೊಡುವ ಪ್ರಶ್ನೆಗಳನ್ನು ಸರಿರೂಪದಲ್ಲಿ ಭಾಷಾಶಾಸ್ತ್ರಜ್ಞರು ಮುಂದಿಡಬೇಕಾಗಿದೆ. ಇದು ಮುಂದಿನ ದಶಕಗಳಲ್ಲಿ ನಡೆಯಬೇಕಾಗಿರುವ ಶೋಧಗಳಿಗೆ ಕಾರಣವಾಗುತ್ತದೆ.

ಈಗ ಮತ್ತೆ ಹಳೆಯ ಸಮಸ್ಯೆಯೊಂದಕ್ಕೆ ಹಿಂದಿರುಗೋಣ. ಪ್ರಚಲಿತ ತಿಳುವಳಿಕೆಯಂತೆ ಪ್ರತಿಯೊಂದು ಮಗುವೂ ಭಾಷೆಯನ್ನು ಕಲಿಯುತ್ತದೆ. ಈ ಕಲಿಯುವಿಕೆಯ ಸ್ವರೂಪವನ್ನು ವಿವರಿಸುವ ಸಿದ್ಧಾಂತಗಳೂ ಬಳಕೆಯಲ್ಲಿವೆ. ಚಾಮ್‌ಸ್ಕಿ

ಮಂಡಿಸುತ್ತಿರುವ ಭಾಷಾತತ್ತ್ವದ ನೆಲೆಯಲ್ಲಿ ಈ ಸಿದ್ಧಾಂತಗಳು ಹೇಳುವ ರೀತಿ ಭಾಷಾಕಲಿಕೆಯೆಂಬುದು ನಡೆಯುವುದಿಲ್ಲ. ಏಕೆಂದರೆ ಅಂತಸ್ಥ ಸಾಮರ್ಥ್ಯವಾಗಿ ಮಗುವಿನಲ್ಲಿ ಭಾಷೆಯೆಂಬುದು ಹುಟ್ಟಿನಿಂದಲೇ ಇರುತ್ತದೆ. ಈ ಮಾತನ್ನು ಸರಿಯಾಗಿ ಗ್ರಹಿಸುವುದು ಅವಶ್ಯ. ಹುಟ್ಟಿನಿಂದ ಲಭಿಸುವುದು ನಿಜವಾಗಿ ಯಾವ ಭಾಷೆಯೂ ಅಲ್ಲ. ಜಗತ್ತಿನ ಯಾವುದೇ ಭಾಷೆಯಾಗಿ ಪರಿವರ್ತಿತವಾಗಬಲ್ಲ ಮೂಲವಸ್ತು ಎನ್ನಬಹುದು.(ಈ ಮೊದಲು ಹೇಳಿದ ಯುಜಿಯೇ ಇದು).

ಇದು ಪ್ರತಿ ವ್ಯಕ್ತಿಯಲ್ಲೂ ಒಂದು ನಿರ್ದಿಷ್ಟ ಭಾಷೆಯಾಗಿ ಆಕಾರ ಪಡೆಯುವುದನ್ನು ಭಾಷಾಕಲಿಕೆ ಎನ್ನಬೇಕು. ಆದರೆ ಸಾಮಾನ್ಯ ಕಲಿಕೆಗಳಂತೆ ಇದು ಅಲ್ಲ. ಹಾಗಾಗಿ ಭಾಷಾಗಳಿಕೆ ಎಂಬ ಪರಿಕಲ್ಪನೆಯನ್ನು ಈಚೆಗೆ ಬಳಸಲಾಗುತ್ತದೆ. ಸಾಮಾನ್ಯ ಕಲಿಕೆಯಲ್ಲಿ ಇರುವ ಯಾವ ಹಂತವೂ ಮಗು ಭಾಷೆಯನ್ನು ಪಡೆದುಕೊಳ್ಳುವ ಪ್ರಕ್ರಿಯೆಯಲ್ಲಿ ಕಾಣಬರುವುದಿಲ್ಲ. ಪೋಷಕರು ಭಾಷೆಯ ಕಲಿಕೆಗೆ ನೆರವಾಗುತ್ತಾರೆನ್ನುವಂತಿಲ್ಲ. ಏಕೆಂದರೆ ಏನನ್ನು ಕಲಿಸುವುದೆಂಬುದು ಅವರಿಗೆ ಗೊತ್ತಿರುವುದು ಅಸಾಧ್ಯ. ತಿದ್ದುವಿಕೆಗೆ ಮಾತ್ರ ಅವರ ಪಾತ್ರ ಸೀಮಿತವಾಗಿರುತ್ತದೆ. ಕಲಿಕೆ ಎಂಬ ಪ್ರಕ್ರಿಯೆಗೆ ಅವಶ್ಯವಾದ ಮಾಹಿತಿ, ಅನುಗಮನ, ನಿಗಮನ, ಸೂತ್ರೀಕರಣ, ನಿದರ್ಶನ ಇತ್ಯಾದಿ ಯಾವುದೇ ಪ್ರಕ್ರಿಯೆಗೆ ಮಗು ಸಿದ್ಧಗೊಳ್ಳುವ ಮೊದಲೇ ಅದಕ್ಕೆ ಭಾಷೆ ಲಭಿಸಿಬಿಟ್ಟಿರುತ್ತದೆ. ಈ ಎಲ್ಲ ಸಂಗತಿಗಳಿಂದ ತಿಳಿಯುವುದೇನು? ಮಗುವಿನಲ್ಲಿ ಈಗ ಬಹುಮಟ್ಟಿಗೆ ಒಪ್ಪಲಾಗುವಂತೆ ಮಗುವಿನ ಮೆದುಳಿನಲ್ಲಿ ಮಾನವರು ಆಡುವ ಯಾವುದೇ ಭಾಷೆಯಾಗಿ ರೂಪುಗೊಳ್ಳಲು ಬೇಕಾದ ಪರಿಕರಗಳು ದತ್ತವಾಗಿರುತ್ತವೆ. ಪರಿಸರದಿಂದ ದೊರಕುವ ಸಾಮಾಗ್ರಿಯು ಚೋದಕವಾಗಿ ಪರಿಣಮಿಸಿ ಈ ಪರಿಕರಗಳು ಒಂದು ನಿರ್ದಿಷ್ಟ ಭಾಷೆಯಾಗಿ ರೂಪುಗೊಳ್ಳುತ್ತವೆ. ಹಾಗಾಗಿ ಇದು ಭಾಷಾಕಲಿಕೆಯಲ್ಲ, ಭಾಷಾಗಳಿಕೆ.

ಈಗಾಗಲೇ ಹೇಳಿದಂತೆ ಆ ಪರಿಕರಗಳನ್ನು 1980ರ ಈಚಿನ ಚಾಮ್‌ಸ್ಕಿ ಸಿದ್ಧಾಂತವು, ನಿಯಮ ಮತ್ತು ವಿಕಲ್ಪಗಳೆಂದು ಗುರುತಿಸುತ್ತದೆ. ನಿಯಮಗಳು ಜಗತ್ತಿನ ಎಲ್ಲ ಭಾಷೆಗಳಿಗೂ ಅನ್ವಯಿಸುವ ಅತ್ಯಂತ ಸಾಧಾರಣೀಕೃತ ನೆಲೆಗಳಾಗಿರುತ್ತವೆ. ವಿಕಲ್ಪಗಳು ನಿರ್ದಿಷ್ಟ ಭಾಷೆಯ ಲಕ್ಷಣಗಳನ್ನು ಸೂಚಿಸುವ ಆಯ್ಕೆ ಶ್ರೇಣಿಯಾಗಿರುತ್ತದೆ. ಇದು ಅತ್ಯಂತ ಸರಳ ವ್ಯಾಖ್ಯಾನ.

ಎಲ್ಲ ಭಾಷೆಗಳೂ ರಚನಾಬದ್ಧವಾಗಿರುತ್ತವೆ ಎಂಬುದೊಂದು ನಿಯಮ. ಅಂದರೆ ಭಾಷೆಯ ಧ್ವನಿಸ್ತರ, ಪದಸ್ತರ, ವಾಕ್ಯಸ್ತರ–ಹೀಗೆ ಯಾವುದೇ ಸ್ತರದಲ್ಲಾದರೂ ರಚನೆ ಎಂಬುದೊಂದು ಇದ್ದೇ ಇರುತ್ತದೆ. ಈ ರಚನೆಯನ್ನು ಆಧರಿಸಿಯೇ ಭಾಷಾವ್ಯಾಕರಣ ನಿಯಮಗುಚ್ಛಗಳು ಸಿದ್ಧವಾಗುತ್ತವೆ. ವಾಕ್ಯದಲ್ಲಿ ನಾಮಪದ, ಕ್ರಿಯಾಪದಗಳಿರುತ್ತವೆಂದು ಹೇಳುತ್ತೇವೆ. ಇವುಗಳ ನಡುವೆ ಯಾದೃಚ್ಛಿಕ ಸಂಬಂಧವಿರುವುದಿಲ್ಲ, ನಿಯತ ಸಂಬಂಧವಿರಬೇಕು.

ರಾಮ ಬಂದನು 1
| |
ನಾಮಪದ ಕ್ರಿಯಾಪದ 2

ಸರಳವಾಗಿ ಹೇಳುವುದಾರೆ (1) ನೇ ಸ್ತರದಲ್ಲಿ ರಾಮ ಮತ್ತು ಬಂದನು ಎಂಬ ಪದಗಳೊಡನೆ ಇರುವ ಸಂಬಂಧ (2) ನೇ ಸ್ತರದಲ್ಲಿ ಅವು ಹೊಂದಿರುವ ಪಟ್ಟಿಕೆಗಳ ಸಂಬಂಧದಿಂದ ನಿಶ್ಚಿತವಾಗಿತ್ತದೆ. ಇದು ಎಲ್ಲ ಭಾಷೆಗಳ ಲಕ್ಷಣ.

ವಿಕಲ್ಪಗಳೆಂದರೆ ಬೇರೆಬೇರೆ ಭಾಷೆಗಳಲ್ಲಿ ಇರುವ ಸಾಧ್ಯತೆಗಳು. ಉದಾಹರಣೆಗೆ ಯಾವುದೇ ರಚನೆಗೆ ಒಂದು ಪ್ರಧಾನ ಅಂಗ (ಶಿರ) ಇರುವುದೆಂದು ತಿಳಿಯೋಣ. ರಚನೆಯಲ್ಲಿರುವ ಇತರ ಅಂಗಗಳು ಈ ಪ್ರಧಾನ ಅಂಗದ ಮುಂಬದಿಗೆ ಬರುತ್ತವೋ ಅಥವಾ ಹಿಂಬದಿಗೆ ಬರುತ್ತವೋ ಎಂಬುದು ಒಂದು ವಿಕಲ್ಪ. ರಚನೆಯಲ್ಲಿ ಪ್ರಧಾನ ಅಂಗ ಕೊನೆಗೆ ಬಂದು ಅಧೀನ ಅಂಗಗಳು ಮುಂಬದಿಯಲ್ಲಿರುವುದು ಕನ್ನಡದ ಲಕ್ಷಣವಾದರೆ, ಇದಕ್ಕೆ ತದ್ವಿರುದ್ಧವಾಗಿ ಪ್ರಧಾನ ಅಂಗ ಮೊದಲಲ್ಲಿ ಬಂದು ಅಧೀನ ಅಂಗಗಳು ಅನಂತರ ಮುಂಬದಿಗೆ ಬರುವುದು ಇಂಗ್ಲಿಶ್‌ನ ಲಕ್ಷಣ. ಜಗತ್ತಿನ ಯಾವುದೇ ಭಾಷೆಯಾದರೂ ಈ ಎರಡರಲ್ಲಿ ಒಂದು ಬಗೆಯ ರಚನೆಯನ್ನು ಹೊಂದಿರುತ್ತವೆ. ಅಂದರೆ ಆಯ್ಕೆಗೆ ಹಲವು ಅವಕಾಶವಿರುವುದಿಲ್ಲ. ಎರಡೇ ಆಯ್ಕೆಗಳು. ಮತ್ತೂ ಗಮನಿಸುವುದಾದರೆ ಒಂದೇ ಭಾಷೆಯಲ್ಲಿ ಕೆಲವು ರಚನೆಗಳಲ್ಲಿ ಶಿರವು ಮೊದಲಲ್ಲಿ, ಮತ್ತೆ ಕೆಲವು ರಚನೆಗಳಲ್ಲಿ ಕೊನೆಗೆ ಬರುವುದಿಲ್ಲ. ಅಂದರೆ ವಿಕಲ್ಪದಲ್ಲಿ ಯಾವ ಆಯ್ಕೆಯು ಭಾಷೆಗೆ ನಿಗದಿಯಾಗಿರುವುದೋ ಅದು ನಿಯತವಾಗಿ ಭಾಷೆಯ ಎಲ್ಲ ರಚನೆಗಳಲ್ಲೂ ಕಂಡುಬರುತ್ತದೆ.

ಈ ಮಾತು ಎಲ್ಲ ವಿಕಲ್ಪಗಳ ಮಟ್ಟಿಗೂ ನಿಜ. ಅಂದರೆ ಎರಡೇ ಆಯ್ಕೆಗಳಿರುತ್ತವೆ. ಇವೆರಡರಲ್ಲಿ ಯಾವುದಾದರೊಂದು ಪ್ರತಿಯೊಂದು ಭಾಷೆಗೂ ನಿಗದಿಯಾಗುತ್ತದೆ. ಮತ್ತು ಒಂದೇ ಭಾಷೆಯಲ್ಲಿ ವಿಕಲ್ಪದ ಎರಡೂ ಆಯ್ಕೆಗಳ ಬಳಕೆ ಅಸಾಧ್ಯ. ಇಂಥ ವಿಕಲ್ಪಗಳು ಎಷ್ಟಿವೆ ಎಂಬುದು ಈಗ ನಡೆಯುತ್ತಿರುವ ಅಧ್ಯಯನಗಳಿಂದ ತಿಳಿಯುತ್ತಾ ಹೋಗುತ್ತದೆ. ಪ್ರತಿ ಭಾಷೆಯಲ್ಲೂ ಈ ವಿಕಲ್ಪಗಳಲ್ಲಿ ಆಯ್ಕೆ ಹೇಗೆ ಆಗಿದೆ ಎಂಬುದು ಆಯಾ ಭಾಷೆಯ ಅಧ್ಯಯನಗಳಿಂದ ತಿಳಿಯುವಂಥದು. ಈ ವಿಕಲ್ಪಗಳ ನಡುವೆ ಒಳ ಸಂಬಂಧವೂ ಇದೆ. ಅಂದರೆ ಯಾವುದೋ ಒಂದು ವಿಕಲ್ಪದಲ್ಲಿ ಮಾಡಿಕೊಂಡ ಆಯ್ಕೆಯು ಇನ್ನೊಂದು ವಿಕಲ್ಪದ ಆಯ್ಕೆಯನ್ನು ನಿರ್ದೇಶಿಸುತ್ತದೆ. ಅಥವಾ ಅವೆರಡರ ನಡುವೆ ನಿಯತ ಬಂಧವಿರುತ್ತದೆ. ಮತ್ತೆ ಸರಳವಾದ ನಿದರ್ಶನ ನೋಡೋಣ. ಎ ಮತ್ತು ಬಿ ಭಾಷೆಗಳಲ್ಲಿ ಎ ಆದಿ ಶಿರ ಭಾಷೆ ಮತ್ತು ಬಿ ಅಂತ್ಯ ಶಿರ ಭಾಷೆ ಎಂದುಕೊಳ್ಳಿ. ಈ ಎರಡೂ ಭಾಷೆಗಳ ವಾಕ್ಯಗಳಲ್ಲಿ ನಾಮಪದಗಳ ನಡುವಣ ಸಂಬಂಧವನ್ನು ವ್ಯಕ್ತಪಡಿಸಲು ಪೂರ್ವಪದ (ಪ್ರಿಪೊಸಿಷನ್) ಬಳಕೆಯಾಗುತ್ತವೋ ಅಥವಾ ವಿಭಕ್ತಿ ಪ್ರತ್ಯಯ (ಅಥವಾ ಪದೋತ್ತರಿ)ಗಳು ಬಳಕೆಯಾಗುತ್ತವೋ ಎಂಬ ವಿಕಲ್ಪದ ಆಯ್ಕೆ ನಡೆದಿರುತ್ತದೆ. ಇವೆರಡರಲ್ಲಿ ಯಾವುದಾದರೊಂದು ಆಯ್ಕೆಯನ್ನು

ಪ್ರತಿಭಾಷೆಯೂ ಮಾಡಿಕೊಂಡಿರುತ್ತದೆ. ಪರಿಶೀಲನೆಯಿಂದ ತಿಳಿಯುವುದೇನೆಂದರೆ ರಚನೆಯ ಮೊದಲಲ್ಲಿ ಶಿರವುಳ್ಳ ಭಾಷೆಗಳಲ್ಲಿ ಪೂರ್ವಪದಗಳೂ ರಚನೆಯ ಕೊನೆಯಲ್ಲಿ ಶಿರವುಳ್ಳ ಭಾಷೆಗಳಲ್ಲಿ ಪದೋತ್ತರಿಗಳೂ ಬಳಕೆಯಾಗುವುದು ಕಂಡುಬಂದಿದೆ. ಅಂದರೆ ಈ ಎರಡು ವಿಕಲ್ಪಗಳಲ್ಲಿ ಒಂದರಲ್ಲಿ ಆಯ್ಕೆ ಮಾಡಿಕೊಂಡರೆ ಸಾಕು, ಇನ್ನೊಂದು ತಂತಾನೇ ನಿಗದಿಗೊಳ್ಳುವುದು.

ಭಾಷೆಯ ಗಳಿಕೆಯಲ್ಲಿ ಏನಾಗುತ್ತದೆ? ಯುಜಿಯಲ್ಲಿ ನಿಯಮಗಳಿರುತ್ತವೆ. ಅವುಗಳನ್ನು ಕಲಿಯುವ ಅಥವಾ ಅವುಗಳನ್ನು ನಿಯೋಜಿಸುವ ಮಾತಂತೂ ಇಲ್ಲ. ವಿಕಲ್ಪಗಳಲ್ಲಿ ಯಾವ ಯಾವ ಆಯ್ಕೆ ಮಾಡಿಕೊಳ್ಳಬೇಕೆಂದು ತಿಳಿದರೆ ನಿರ್ದಿಷ್ಟ ಭಾಷೆಯೊಂದರ ಅಂತಸ್ಥ ಸಾಮರ್ಥ್ಯ ಮಗುವಿಗೆ ಲಭಿಸಿಬಿಡುತ್ತದೆ. ವಿಕಲ್ಪಗಳಲ್ಲಿ ಆಯ್ಕೆ ನಿಗದಿಯಾಗುವುದನ್ನು ಪ್ರೇರೇಪಿಸಲು ತಕ್ಕ ವಾತಾವರಣ, ಮಾಹಿತಿ, ಪರಸ್ಪರ ಸಂಪರ್ಕ ಅವಶ್ಯ. ಇದು ಹೀಗೇ ಇರುವುದೆಂದು ಆದರ್ಶ ಚೌಕಟ್ಟನ್ನು ರಚಿಸಲು ಬರುವುದಿಲ್ಲ. ಮಗುವಿಗೆ ಈ ಹಂತದಲ್ಲಿ ನೆರವಾಗಲು ಮೆದುಳಿನಲ್ಲಿ ಮತ್ತೊಂದು ವ್ಯವಸ್ಥೆಯುಂಟೆಂದು ಹೇಳುತ್ತಿದ್ದಾರೆ. ಇದನ್ನು ಭಾಷಾ ಗಳಿಕೆಯ ಸಾಧನ (ಲಾಂಗ್ವೆಜ್ ಆಕ್ವೈರಿಂಗ್ ಡಿವೈಸ್–LAD) ಎನ್ನುತ್ತಾರೆ. ಇದು ಒಂದು ಕಲ್ಪಿತ ನೆಲೆ. ಅಂದರೆ ಈ ಸಾಧನದ ಜೈವಿಕ ನೆಲೆಗಳು ಮೆದುಳಿನಲ್ಲಿ ಸ್ಥಿರಗೊಂಡಿರುವ ಕ್ರಮವನ್ನು ಇನ್ನೂ ಅರಿಯಬೇಕಾಗಿದೆ. ಇದೇನೂ ಕೊರತೆಯಲ್ಲ. ಲ್ಯಾಡ್ (LAD )ನ ಕೆಲಸ ವಿಕಲ್ಪಗಳಲ್ಲಿ ಆಯ್ಕೆ ಮಾಡಿಕೊಳ್ಳಲು ನೆರವಾಗುವುದು.

ಎಲ್ಲ ಜೈವಿಕ ವಿಕಾಸ ಕ್ರಿಯೆಗಳೂ ನಿರ್ದಿಷ್ಟ ಸಂದರ್ಭದಲ್ಲಿ ಚೈತನ್ಯ ಪಡೆಯುವುದು ಅತ್ಯವಶ್ಯ. ಪಾರಿವಾಳದ ಮರಿಗೆ ಹಾರುವ ಸಾಮರ್ಥ್ಯ ಅಂತಸ್ಥವಾಗಿ ಹುಟ್ಟಿನಿಂದಲೇ ಲಭಿಸಿರುತ್ತದೆ. ಪ್ರಯೋಗಗಳಿಂದ ತಿಳಿದುಬಂದ ಸಂಗತಿಯೆಂದರೆ ಮರಿ ಪಾರಿವಾಳವು ನಿರ್ದಿಷ್ಟ ವಯೋಮಾನದಲ್ಲಿ–ಹುಟ್ಟಿದ ಕೆಲವು ವಾರಗಳಲ್ಲಿ–ಈ ಸೌಲಭ್ಯವನ್ನು ಬಳಸಿಕೊಂಡು ದೈಹಿಕ ಚಲನವಲನಗಳ ನಿಯಂತ್ರಣದಿಂದ ಹಾರಲು ತೊಡಗಬೇಕು. ಹಾಗಿಲ್ಲದೆ ಅವಧಿ ತೀರಿದ ಅನಂತರ ಹಾರಲು ತೊಡಗಿದರೆ, ಅಥವಾ ನಿಗದಿತ ವಯೋಮಾನದಲ್ಲಿ ಈ ಅಂತಸ್ಥ ಸಾಮರ್ಥ್ಯವನ್ನು ಬಳಸಿಕೊಳ್ಳದಿದ್ದರೆ ಅದು ಹಾರಲಾರದು. ಈ ಮಾತು ಲ್ಯಾಡ್‌ಗೂ ನಿಜ. ಮಗುವಿನ ಮೆದುಳಿನಲ್ಲಿರುವ ಈ ಸಾಧ್ಯತೆಯ ಬಳಕೆ ನಿಗದಿತ ವಯೋಮಾನದಲ್ಲಿ ಆಗಬೇಕು. ಇಲ್ಲದಿದ್ದರೆ ಭಾಷಾಗಳಿಕೆ ಎಂಬುದು ಅಸಾಧ್ಯ. ಈಗ ಸಾಕಷ್ಟು ಖಚಿತಗೊಂಡಿರುವಂತೆ ಮಗುವೂ ಬೆಳೆದು ಕೌಮಾರ್ಯಾವಸ್ಥೆ ದಾಟುವವರೆಗೆ (10–12 ವರ್ಷಗಳು) ಲ್ಯಾಡ್‌ನ ಸೌಲಭ್ಯ. ಅನಂತರ ಅದು ನಿರುಪಯುಕ್ತ. ಯಾರಾದರೂ ಇಲ್ಲಿ ಒಂದು ಸಂದೇಹವನ್ನು ವ್ಯಕ್ತಪಡಿಸಬಹುದು. ವಯಸ್ಕರೂ ಭಾಷೆ ಕಲಿಯುತ್ತಾರಲ್ಲ. ಅವರ ಕಲಿಕೆಗೆ ಲ್ಯಾಡ್ ನೆರವಾಗುವುದಿಲ್ಲವೇ? ಇಲ್ಲ. ಲ್ಯಾಡ್ ನಿಷ್ಕ್ರಿಯಗೊಂಡ ಮೇಲಿನ ಭಾಷಾಕಲಿಕೆಯೆಲ್ಲವೂ ಇತರ ಕಲಿಕೆಗಳ ಹಾದಿಯಲ್ಲೇ ಇರುತ್ತವೆ. ನಿಯಮಾವಳಿಗಳನ್ನು ಕಲಿತು ಭಾಷೆಯನ್ನು ಕಲಿಯುವ ವಿಧಾನವನ್ನು ಅನುಸರಿಸಬೇಕಾಗುತ್ತದೆ.

ಚಾಮ್‌ಸ್ಕಿ ಮಂಡಿಸುತ್ತಿರುವ ಭಾಷಾತತ್ತ್ವಗಳು ಈವರೆಗಿನ ನಮ್ಮ ತಿಳುವಳಿಕೆಗಳನ್ನು ಪ್ರಶ್ನಿಸುತ್ತವೆ. ಹೊಸದಾದ ಪರ್ಯಾಯ ಚಿಂತನಾಕ್ರಮಗಳನ್ನು, ಮಾದರಿಗಳನ್ನು ಮುಂದಿಡುತ್ತವೆ. ಚಾಮ್‌ಸ್ಕಿಯ ವಿಚಾರಗಳನ್ನು ಸಾರಾಸಗಟಾಗಿ ಒಪ್ಪಲಾಗಿದೆ ಎಂದಲ್ಲ. ಭಾಷಾಬಳಕೆಯನ್ನು ಪ್ರಧಾನವೆಂದು ತಿಳಿಯುವವರು ಈ ತತ್ತ್ವಗಳ ಗೊಡವೆಗೆ ಹೋಗದೆ ಉಳಿದಿದ್ದಾರೆ. ಮೊದಲಲ್ಲೇ ಹೇಳಿದಂತೆ, ಚಾಮ್‌ಸ್ಕಿಯು ನಿರಾಕರಿಸಿದ ವರ್ತನಾಮನೋವಿಜ್ಞಾನಿಗಳು ಬದಲಾದ ಪರಿಕರಗಳೊಂದಿಗೆ ತಮ್ಮ ವಾದಗಳನ್ನು ಮಂಡಿಸುತ್ತಿದ್ದಾರೆ. ಈ ವಾಗ್ವಾದ ಮುಂದುವರೆಯುತ್ತದೆ. ತನ್ನ ಈಚಿನ ಗ್ರಂಥದಲ್ಲಿ ಚಾಮ್‌ಸ್ಕಿ ಭಾಷಾತತ್ತ್ವಗಳ ಹೊಸ ದಿಗಂತಗಳನ್ನು ಕುರಿತು ಚಿಂತಿಸುತ್ತಿರುವುದು ಕಂಡುಬಂದಿದೆ.(ಅವರ ಹೊಸ ಪುಸ್ತಕದ ಹೆಸರು ನ್ಯೂ ಹೊರೈಜನ್ಸ್ ಎಂದೇ ಮೊದಲಾಗುತ್ತದೆ.) ಈ ಚಿಂತನೆಗಳು ಸುಮಾರು ಅರ್ಧ ಶತಮಾನಗಳ ಕಾಲ ನಿರಂತರವಾಗಿ ಸಾಗಿರುವುದು, ಅನ್ಯ ಜ್ಞಾನಶಿಸ್ತುಗಳು ಭಿನ್ನವಾಗಿ ಯೋಚಿಸುವಂತೆ ಪ್ರೇರೇಪಿಸುತ್ತಿರುವುದು ಒಂದು ದೊಡ್ಡ ಬೌದ್ಧಿಕ ಸಾಹಸವೇ ಸರಿ. ಒಂದು ಸಿದ್ಧಾಂತವನ್ನು ಅನುಯಾಯಿಗಳು ಬೆಳೆಸುವ ಮಾದರಿಗಳು ಅನೇಕ ಇರಬಹುದಾದರೂ ಚಾಮ್‌ಸ್ಕಿಯ ವಿಚಾರದಲ್ಲಿ ಇದು ಭಿನ್ನವಾಗಿದೆ. ಒಬ್ಬನೇ ವ್ಯಕ್ತಿ ಇಷ್ಟು ದೀರ್ಘಾವಧಿಯವರೆಗೆ ಮಾನವ ಸಂಬಂಧಿಯಾದ ಸಂಗತಿಯೊಂದನ್ನು ಕುರಿತ ವೈಚಾರಿಕ ಸಂವಾದವನ್ನು ಜಾಗ್ರತವಾಗಿರಿಸಿರುವುದು ಸಾಟಿಯಿಲ್ಲದ ಸಾಧನೆಯೇ ಸರಿ.

# ಪಠ್ಯ, ಪಾಠ್ಯ, ಮಾಹಿತಿ ಮತ್ತು ಸತ್ಯ

ಈ ತಲೆಬರೆಹವೇ ವಿಚಿತ್ರವೆನಿಸುವಂತಿದೆ. ಆದರೆ ನಾವು ಈಗ ಗಮನಿಸುತ್ತಿರುವ ಒಂದು ಚರ್ಚೆಯನ್ನು ಬೆಳೆಸಲು ಈ ನಾಲ್ಕೂ ಪರಿಕಲ್ಪನೆಗಳು ಅಗತ್ಯ ಎನಿಸಿದ್ದರಿಂದ ಈ ತಲೆಬರೆಹವನ್ನು ರೂಪಿಸಿಕೊಂಡು ಈ ಟಿಪ್ಪಣಿಯನ್ನು ಬರೆಯಲಾಗಿದೆ.

ಭಾಷೆಯಲ್ಲಿ ರೂಪಿತವಾದ ನಿಯಮಿತ ಆಕಾರವುಳ್ಳ ಅಭಿವ್ಯಕ್ತಿಯೆಲ್ಲವೂ ಪಠ್ಯವೆನಿಸಿಕೊಳ್ಳುತ್ತದೆ. ಒಂದು ನಗೆಹನಿ, ಹಾಡು, ಗಾದೆಮಾತು, ಸ್ವಾನುಭವ ನಿರೂಪಣೆಯಿಂದ ಮೊದಲಾಗಿ ಬಲುದೀರ್ಘವಾದ ಕಥಾನಕಗಳವರೆಗೆ ಪಠ್ಯದ ವ್ಯಾಪ್ತಿ ಇದೆ. ಪಠ್ಯಗಳು ಏಕವ್ಯಕ್ತಿಕೃತವಾಗಿರುವಂತೆ ಬಹುವ್ಯಕ್ತಿಕೃತವೂ ಆಗಿರುತ್ತವೆ. ಒಮ್ಮೆ ರೂಪುಗೊಂಡು ಬದಲಾಗದೇ ಉಳಿಯುವ ಪಠ್ಯಗಳಿರುವಂತೆ ಸದಾ ಬದಲಾಗುತ್ತಲೇ ಇರುವ ಪಠ್ಯಗಳೂ ಇರುತ್ತವೆ. ಪಠ್ಯಗಳು ಸಂವಹನದ ಗುರಿಯನ್ನು ಹೊಂದಿರುತ್ತವೆ. ಆ ಗುರಿಯನ್ನು ಸಾಧಿಸುತ್ತವೆಯೋ ಇಲ್ಲವೋ ಎಂಬುದು ಮುಖ್ಯವಲ್ಲ. ಆದರೆ ಉದ್ದೇಶ ಮಾತ್ರ ಸಂವಹನ. ಪಾಠ್ಯವಾಗುವುದು ಪಠ್ಯ. ಪಠ್ಯವು ಅಧ್ಯಯನಕ್ಕೆ ಗುರಿಯಾದಾಗ ಪಾಠ್ಯವಾಗುತ್ತದೆ. ಈಗ ಪಠ್ಯದ ಮುಖ್ಯ ಗುರಿ ಸಂವಹನವಾಗಿ ಉಳಿಯುವುದಿಲ್ಲ. ಭಾಷೆಯ ರಚನೆ, ಪಠ್ಯದ ಆಶಯ, ಅದರ ಸಾಂಸ್ಕೃತಿಕ ನೆಲೆಗಳು ಇತ್ಯಾದಿಗಳು ಈಗ ಮುಂಚೂಣಿಗೆ ಬರುತ್ತವೆ. ಹೀಗಾಗಿ ಪಾಠ್ಯಗಳೆಲ್ಲವೂ ಮೂಲದಲ್ಲಿ ಪಠ್ಯಗಳೇ ಆದರೂ ಎಲ್ಲ ಪಠ್ಯಗಳೂ ಪಾಠ್ಯಗಳಾಗುವುದಿಲ್ಲ. ಕವಿಯೊಬ್ಬರ ಕವಿತೆಯು ತಂತಾನೇ ಒಂದು ಪಠ್ಯ. ಅದು ಶಾಲೆಯಲ್ಲಿ ವಿದ್ಯಾರ್ಥಿಗಳ ಅಭ್ಯಾಸಕ್ಕೆ ನಿಗದಿತವಾದಾಗ ಪಾಠ್ಯವಾಗುತ್ತದೆ. ವಿಮರ್ಶಕರು ಕೃತಿಯೊಂದನ್ನು ವಿಶ್ಲೇಷಣೆಗೆ ಗುರಿಪಡಿಸಿದಾಗಲೂ ಆ ಕೃತಿಯು ಪಾಠ್ಯವಾಗುತ್ತದೆ. ಆದರೆ ಅದೇ ಕೃತಿಯೊಂದನ್ನು ಓದುಗರು ಓದುವಾಗ ಮಾತ್ರ ಅದು ಕೇವಲ ಪಠ್ಯ ಮಾತ್ರ

ಈ ವಿಭಜನೆಯ ಉದ್ದೇಶವೇನು? ಮುಖ್ಯವಾಗಿ ಪಠ್ಯದ ಮೂಲೋದ್ದೇಶವು ಪಲ್ಲಟಗೊಂಡು ಮತ್ತೊಂದು ಉದ್ದೇಶಕ್ಕಾಗಿ ಆ ಭಾಷಾರಚನೆಯು ಬಳಕೆಯಾಗುತ್ತಿರುವುದೇ ಈ ವ್ಯತ್ಯಾಸಕ್ಕೆ ಕಾರಣ. ಆದ್ದರಿಂದ ಪಠ್ಯ ಮತ್ತು ಪಾಠ್ಯಗಳೆಂಬ ವಿಭಜನೆಯನ್ನು ರೂಪಿಸಿಕೊಳ್ಳುವ ಅಗತ್ಯವಿದೆ. ಒಂದೇ ರಚನೆ ಪಠ್ಯವಾಗಿರುವಂತೆ ಪಾಠ್ಯವಾಗಿರಲೂಬಹುದು ಎಂಬುದನ್ನೂ ಮರೆಯಬಾರದು. ಕೆಲವೊಮ್ಮೆ ಪಾಠ್ಯವಾಗಲೆಂದೇ ಒಂದು ಭಾಷಾರಚನೆಯನ್ನು ರೂಪಿಸುವುದುಂಟು. ಉದಾಹರಣೆಗೆ ಶಾಲೆಯ ಅಭ್ಯಾಸ ಪುಸ್ತಕಕ್ಕಾಗಿಯೇ 'ಕುಡಿತದ ದುಷ್ಪರಿಣಾಮಗಳು' ಎನ್ನುವ

ರಚನೆಯೊಂದನ್ನು ಯಾರಾದರೂ ಬರೆದರೆಂದುಕೊಳ್ಳಿ. ಆಗ ಅದು ಕೇವಲ ಪಾಠ್ಯವಾಗಿ ಬಳಕೆಯಾಗುವ ಸಾಧ್ಯತೆ ಮಾತ್ರ ಉಳಿದಿರುತ್ತದೆ. ಈ ರಚನೆಯನ್ನು ವಿದ್ಯಾರ್ಥಿಗಳು ಮತ್ತು ಅವರಿಗೆ ಪಾಠ ಮಾಡುವ ಅಧ್ಯಾಪಕರನ್ನು ಹೊರತುಪಡಿಸಿ ಬೇರೆ ಯಾರೂ ಓದುವ ಸಾಧ್ಯತೆ ಕಡಿಮೆ. ಭಾಷೆಯಲ್ಲಿ ಪಠ್ಯಗಳ ಸಂಖ್ಯೆ ಹೆಚ್ಚು. ಅವುಗಳಲ್ಲಿ ಕೆಲವು ಮಾತ್ರ ಪಾಠ್ಯವಾಗುತ್ತವೆ. ಓದುವವರು ಪಠ್ಯಗಳನ್ನು ಓದುತ್ತಾರೆ. ವಿದ್ಯಾರ್ಥಿಗಳು ಪಾಠ್ಯಗಳನ್ನು ಅಭ್ಯಾಸ ಮಾಡುತ್ತಾರೆ.

ಯಾಕೆ ಈ ವಿವರಣೆ ಅಗತ್ಯವಾಯಿತೆಂಬುದನ್ನು ಈಗ ವಿವರಿಸಬಯಸುತ್ತೇನೆ. ಆಗಾಗ ನಮ್ಮ ಸಾಮಾಜಿಕರಲ್ಲಿ ಒಂದು ಚರ್ಚೆ ನಡೆಯುತ್ತಿರುತ್ತದೆ. ಅದರ ಮುಖ್ಯ ನೆಲೆ: ವಿದ್ಯಾರ್ಥಿಗಳಿಗೆ ನಾವು ಶಾಲಾ ಪುಸ್ತಕಗಳಲ್ಲಿ "ನಿಜ" ವನ್ನು ಹೇಳುತ್ತಿದ್ದೇವೆಯೇ, ಅವರಿಗೆ ಆ ಪುಸ್ತಕಗಳಲ್ಲಿರುವ ಪಾಠಗಳು 'ಸೂಕ್ತವಾದ ಮೌಲ್ಯಗಳನ್ನು' ತಿಳಿಸುತ್ತಿವೆಯೇ ಎಂಬುದಾಗಿರುತ್ತದೆ. ಪರಸ್ಪರ ವಿರುದ್ಧವಾದ ವಾದಗಳನ್ನು ಬುದ್ಧಿಜೀವಿಗಳು ಮಂಡಿಸುತ್ತಾ ಈ ವಿವಾದಗಳನ್ನು ವಿಸ್ತರಿಸುತ್ತಾ ಹೋಗುವುದನ್ನು ನಾವು ಹಲವು ಸಂದರ್ಭಗಳಲ್ಲಿ ಗಮನಿಸಿರುತ್ತೇವೆ. ಸಾಮಾನ್ಯವಾಗಿ ಚರಿತ್ರೆಯ ಪಾಠಗಳ ವಿಷಯದಲ್ಲಿ ಈ ಚರ್ಚೆ ತಾರಕಕ್ಕೆ ಹೋಗುತ್ತದೆ. ಹಿಂದಿನವರು ಚರಿತ್ರೆಯನ್ನು ತಮ್ಮ ಮೂಗಿನ ನೇರಕ್ಕೆ ಬರೆದಿದ್ದಾರೆಂದು ವಾದಿಸಿ, ಆಗಿರುವ ತಪ್ಪುಗಳನ್ನು ಸರಿಪಡಿಸಿ ಚರಿತ್ರೆಯನ್ನು 'ಸರಿಯಾಗಿ' ಬರೆಯಬೇಕೆಂದು ಹೇಳುವವರಲ್ಲಿ ಪರಸ್ಪರ ವಿರುದ್ಧ ತಾತ್ವಿಕತೆಯವರು ಇರುತ್ತಾರೆಂಬುದು ಕುತೂಹಲದ ಸಂಗತಿ. ಎಲ್ಲ ಬಣದವರದ್ದೂ ಎರಡು ಅಂಶದ ಕಾರ್ಯಕ್ರಮಗಳಿರುತ್ತವೆ. ಒಂದು: ಚರಿತ್ರೆಯ ರಚನೆಯಲ್ಲಿ ಆಗಿರುವ ತಪ್ಪುಗಳನ್ನು ಗುರುತಿಸುವುದು. ಎರಡು: ತಪ್ಪುಗಳನ್ನು ಸರಿಪಡಿಸಿ ಸರಿಯಾದ ಚರಿತ್ರೆಯನ್ನು ಬರೆಯುವುದು. ಈ ವಿವಾದದ ವಿಶ್ಲೇಷಣೆಗೆ ಇಲ್ಲಿ ಅವಕಾಶವಿಲ್ಲ. ನಮಗಿಲ್ಲಿ ಮುಖ್ಯವಾಗಿರುವ ಸಂಗತಿ ಇಷ್ಟೆ: ಚರಿತ್ರೆಯ ಪಠ್ಯವನ್ನು ಒಂದು ಸಾಮಾಜಿಕ ಸಂದರ್ಭದಲ್ಲಿ ಎಲ್ಲರೂ ತಮಗೆ ಒಪ್ಪಿತವೆಂದು ತಿಳಿದಿರುವುದಿಲ್ಲ ಮತ್ತು ಅವರಿಗೆ ತಮ್ಮ ದೃಷ್ಟಿಯಲ್ಲಿ ಸರಿಯಾದ ಚರಿತ್ರೆಯ ಪಾಠವೊಂದು ಬೇರೆ ಇರುತ್ತದೆ. ಹೀಗಾಗಿ ತಮಗೆ ಒಪ್ಪಿತವಲ್ಲದ ಪಠ್ಯವನ್ನು ವಿದ್ಯಾರ್ಥಿಗಳಿಗೆ 'ಪಾಠ್ಯ'ವನ್ನಾಗಿ ಮಾಡುವುದಕ್ಕೆ ಸಮ್ಮತಿ ಇರುವುದಿಲ್ಲ. ಹೀಗೆ ಮಾಡುವುದರಿಂದ ವಿದ್ಯಾರ್ಥಿಗಳನ್ನು ತಪ್ಪುದಾರಿಗೆ ಎಳೆದಂತಾಗುತ್ತದೆ ಎನ್ನುವುದು ಅವರ ವಾದ.

ನಮ್ಮ ಚರ್ಚೆ ಪ್ರಾರಂಭವಾಗುವುದು ಇಲ್ಲಿಂದ. ಪಠ್ಯವೊಂದು ಪಾಠ್ಯವಾದಾಗ ಅದು ಬೀರುವ ಪರಿಣಾಮಗಳನ್ನು ತಿಳಿಯಲು ಇರುವ ಮಾರ್ಗಗಳೇನು? ಪಠ್ಯವೆಂಬುದು ಸಾರ್ವಜನಿಕ ವಲಯದ ಸ್ವತ್ತು. ಅದು ತನ್ನ ಪಾಡಿಗೆ ತಾನು ಇರುತ್ತದೆ. ತೀರಾ ಅತಿರೇಕದ ಸ್ಥಿತಿಯನ್ನು ತಲುಪದ ಹೊರತು ಎಲ್ಲ ಪಠ್ಯಗಳೂ ಸಾರ್ವಜನಿಕರಿಗೆ ಲಭ್ಯವಾಗುವಂತೆ ಇರುತ್ತವೆ. ಅತಿರೇಕದ ಹಂತವೆಂದರೆ ಪಠ್ಯವನ್ನು ಬಹಿಷ್ಕರಿಸುವುದು. ಅದು ಸಾರ್ವಜನಿಕರಿಗೆ ಲಭ್ಯವಾಗದಂತೆ ಕಾನೂನಿನ ಕ್ರಮಗಳ ಮೂಲಕ ಮುಟ್ಟುಗೋಲು ಹಾಕಿಕೊಳ್ಳುವುದು. ಪೌರಸಮಾಜಗಳಲ್ಲಿ ಈ ಬಗೆಯ ಘಟನೆಗಳು ಆಗಾಗ ಸಂಭವಿಸುತ್ತಲೇ ಇರುತ್ತವೆ. ಹೀಗಾದಾಗಲೂ ಈ ಪಠ್ಯಗಳು ನುಸುಳಿಕೊಂಡು ಆಸಕ್ತರ ಓದಿಗೆ, ಪರಿಭಾವನೆಗೆ ಲಭ್ಯವಾಗುತ್ತಲೇ ಇರುತ್ತವೆ. ಇಂದಿನ ಅಂತರ್ಜಾಲದ

ದಿನಮಾನಗಳಲ್ಲಿ ಹೀಗೆ ಬಹಿಷ್ಕೃತವಾದ ಪಠ್ಯಗಳ ಮಾಹಿತಿಯನ್ನು ಒದಗಿಸಬಲ್ಲ ಜಾಲತಾಣಗಳೂ ಇವೆ. ಅಂದರೆ ಯಾವುದೇ ಪಠ್ಯವನ್ನು ಸಂಪೂರ್ಣವಾಗಿ ಸಾರ್ವಜನಿಕ ವಲಯದಿಂದ ದೂರವಿಡಲು ಆಗುವುದಿಲ್ಲ ಎಂದಾಯ್ತು. ಹೆಚ್ಚೆಂದರೆ ಅದು ಲಭಿಸಲು ಇರುವ ದಾರಿಗಳನ್ನು ದುರ್ಗಮಗೊಳಿಸಬಹುದು ಅಷ್ಟೆ.

ಆದರೆ ಪಠ್ಯವನ್ನು ಪಾಠ್ಯವನ್ನಾಗಿ ಪರಿವರ್ತಿಸುವುದು ಒಂದು ಆಯ್ಕೆಯಾಗಿರುತ್ತದೆ. ಅಂದರೆ ನಿರ್ದಿಷ್ಟ ತರಗತಿಗೆ ನಿರ್ದಿಷ್ಟ ಪಠ್ಯವನ್ನು ಓದಲು ನಿಗದಿಪಡಿಸುವುದು ಒಂದು ಜವಾಬ್ದಾರಿಯುತ ಸಮಿತಿಯ ನಿರ್ಧಾರವಾಗಿರುತ್ತದೆ. ಹೀಗೆ ಪಾಠ್ಯವಾದ ಪಠ್ಯದ ಬಗೆಗೆ ತಕರಾರುಗಳು ಆಗಿಂದಾಗ್ಗೆ ಸಾಮಾಜಿಕರಿಂದ, ಅವರನ್ನು ಪ್ರತಿನಿಧಿಸುವ ಸಂಘ ಸಂಸ್ಥೆಗಳಿಂದ ಬರುತ್ತಲೇ ಇರುತ್ತವೆ. ಈ ಒತ್ತಡದ ವಲಯಗಳ ಬೇಡಿಕೆ ಯಾವಾಗಲೂ ಎರಡು ಅಂಶಗಳ ಸುತ್ತಾ ಕೇಂದ್ರಿಕೃತವಾಗಿರುವುದುಂಟು. ಒಂದು, ನಿಗದಿತ ಪಾಠ್ಯವನ್ನು ಕೈಬಿಡುವುದು. ಎರಡು: ನಿಗದಿತ ಪಾಠ್ಯದ ಪಠ್ಯವನ್ನು ತಿದ್ದುವುದು.

ಈ ಬದಲಾವಣೆ ಬೇಕೆಂಬ ಒತ್ತಾಯದ ಹಿಂದಿನ ತರ್ಕವಾದರೂ ಏನು? ಪಠ್ಯವು ಸರಿಯಾದ ಮಾಹಿತಿಯನ್ನು ಒಳಗೊಂಡಿಲ್ಲ ಎನ್ನುವುದು ಒಂದು ತಕರಾರಾಗಿರುವುದು ಸಾಧ್ಯ. ಅಥವಾ ಮಾಹಿತಿಗಳ ನಿಟ್ಟಿನಲ್ಲಿ ಸರಿಯಾಗಿದ್ದರೂ ವಿಶ್ಲೇಷಣೆಯಿಂದ ತಲುಪಲಾದ ನಿರ್ಣಯಗಳು, ಆ ಮೂಲಕ ಪ್ರತಿಪಾದಿತವಾಗುವ ಮೌಲ್ಯಗಳು ಸೂಕ್ತವಾಗಿಲ್ಲ ಎನ್ನುವುದು ಇನ್ನೊಂದು ತಕರಾರಾಗಿರುವುದು ಸಾಧ್ಯ. ಅಂದರೆ ಎರಡನೆಯ ತಕರಾರಿನ ಮೂಲಕ ಪರೋಕ್ಷವಾಗಿ ಪಠ್ಯವು ಸತ್ಯವನ್ನು ಪ್ರತಿಪಾದಿಸುತ್ತಿಲ್ಲವೆಂದು ಆರೋಪಿಸುತ್ತಿರುತ್ತಾರೆ. ಈಗ ನಮ್ಮೆದುರು ಮಾಹಿತಿ ಮತ್ತು ಸತ್ಯ ಎಂಬ ಎರಡು ಪರಿಕಲ್ಪನೆಗಳು ಬಂದು ನಿಂತಿವೆ. ಮಾಹಿತಿಯ ಕೊರತೆ ಅಥವಾ ಮಾಹಿತಿಯ ಲೋಪ ಎಂಬುದು ಸಂದರ್ಭಾನುಸಾರ ಭಿನ್ನ ರೀತಿಯಲ್ಲಿ ಎದುರಾಗುವ ಸಂಗತಿಯಾಗಿವೆ. ಮಾಹಿತಿ ಇಲ್ಲದಿರುವುದು ಒಂದು ಕಾರಣವಾದರೆ, ಇರುವ ಮಾಹಿತಿ ಸಂಪೂರ್ಣವಾಗಿಲ್ಲದಿರುವುದು ಅಥವಾ ತಪ್ಪಾಗಿರುವುದು ಇನ್ನೊಂದು ಕಾರಣವಾಗುವುದು. ಇವು ಪಠ್ಯರಚನೆ ಮಾಡುವವರಿಂದ ಸಂಭವಿಸಿದ ತಪ್ಪುಗಳಲ್ಲ. ಆದರೆ ಲಭ್ಯವಿರುವ ಮಾಹಿತಿಯನ್ನು ಬೇಕೆಂತಲೇ ಮುಚ್ಚಿಡುವುದು ಅಥವಾ ಪರ್ಯಾಯ ಮಾಹಿತಿಯನ್ನು ಸೃಷ್ಟಿಸುವುದು ಪಠ್ಯರಚನೆ ಮಾಡುವವರಿಂದ ಪ್ರಜ್ಞಾಪೂರ್ವಕವಾಗಿ ಸಂಭವಿಸುವ ತಪ್ಪುಗಳೆಂದು ಪರಿಗಣಿತವಾಗಬೇಕು. ಪಠ್ಯದ ಈ ಕೊರತೆಗಳನ್ನು ಸರಿಯಾಗಿ ವಿಶ್ಲೇಷಿಸುವುದು ಜವಾಬ್ದಾರಿಯ ಕೆಲಸವಾಗಿರುತ್ತದೆ. ಮಾಹಿತಿಯ ಕೊರತೆ ಎನ್ನುವುದು ಅಲ್ಲಿಯವರೆಗಿನ ಅಧ್ಯಯನಗಳ ಮಿತಿಯನ್ನು ಸೂಚಿಸುತ್ತದೆ. ಲಭ್ಯವಿರುವ ಮಾಹಿತಿಯೇ ಸರಿಯೆಂದು ಸಾಮಾನ್ಯವಾಗಿ ತಿಳಿದಿದ್ದರೆ ಅದು ಅಧ್ಯಯನ ವಲಯದ ಸಮ್ಮತಿಯ ಮೂಲಕವೇ ಮಾಹಿತಿ ಜಾರಿಯಲ್ಲಿದೆ ಎನ್ನುವುದನ್ನು ಸೂಚಿಸುತ್ತದೆ. ಹೀಗಿರುವಾಗ ಈ ಕಾರಣಗಳಿಂದ ಪಠ್ಯವನ್ನು ಪಾಠ್ಯವಾಗಬಾರದೆಂದು ವಾದಿಸುವುದು ಸರಿಯಾದ ವಿಧಾನವಾಗಲಾರದು.

ಇನ್ನು ಬೇಕೆಂತಲೇ ಮಾಹಿತಿಯನ್ನು ಮುಚ್ಚಿಟ್ಟು ರೂಪಿಸಿರುವ ಪಠ್ಯ, ಸಹಜವಾಗಿಯೇ ಪಾಠ್ಯವಾಗಲು ಅನರ್ಹವಾಗಿರುತ್ತದೆ. ಆದರೆ ನಮ್ಮ ಸಮಸ್ಯೆ ಇದಲ್ಲ. ಒಂದು ವೇಳೆ ಅಪೂರ್ಣ ಮಾಹಿತಿಯ ಅಥವಾ ಅಸತ್ಯ ಮಾಹಿತಿಯ ಪಠ್ಯವನ್ನು ಓದಿದ ವಿದ್ಯಾರ್ಥಿಗಳು ಅದರಿಂದ ಪ್ರಭಾವಿತರಾಗಿ ಅಸತ್ಯವನ್ನೇ ನಂಬಿಕೊಳ್ಳುತ್ತಾರೆ ಎಂದು ವಾದಿಸಲು ಬರುತ್ತದೆಯೇ? ಇನ್ನೂ ಮುಂದುವರೆದು ಪಠ್ಯವು ವ್ಯಾಖ್ಯಾನ ಮತ್ತು ವಿಶ್ಲೇಷಣೆಗಳ ನೆಲೆಯಲ್ಲಿ 'ತಪ್ಪು ಮಾಡಿದೆ' ಎಂಬ ಆರೋಪವನ್ನು ಹೊರಿಸಲಾಗಿದೆ ಎನ್ನೋಣ. ಈಗಲೂ ಈ ಮೌಲಿಕ ದೋಷದ ಪಠ್ಯವನ್ನು ಓದುವ ವಿದ್ಯಾರ್ಥಿಗಳು ಆ ಪಠ್ಯದ ನಿಲುವನ್ನೇ ತಮ್ಮ ನಿಲುವನ್ನಾಗಿ ಹೊಂದುತ್ತಾರೆ ಎಂದು ಹೇಳಬಹುದೇ?

ಈ ಮಾತನ್ನು ಇನ್ನೂ ಒಂದು ಕಡೆಯಿಂದ ಅರಿಯಲು ಪ್ರಯತ್ನಿಸೋಣ. ಕೆಲವು ನಿರೂಪಣೆಗಳು 'ಸತ್ಯ'ವನ್ನೇ ಪ್ರತಿಪಾದಿಸುತ್ತವೆ ಮತ್ತು 'ಮಾಹಿತಿದೋಷ'ದಿಂದ ಮುಕ್ತವಾಗಿರುತ್ತವೆ ಎಂದುಕೊಳ್ಳೋಣ. ಆ ನಿರೂಪಣೆಗಳು ವಿದ್ಯಾರ್ಥಿಗಳನ್ನು ತಮ್ಮ ದೃಷ್ಟಿಕೋನಕ್ಕೆ ಪರಿವರ್ತಿಸುತ್ತವೆ ಎಂದು ಖಡಾಖಂಡಿತವಾಗಿ ವಾದಿಸಲು ಬರುವುದಿಲ್ಲ. ವಿಜ್ಞಾನದ ಪಾಠಗಳು ಇದಕ್ಕೊಂದು ನಿದರ್ಶನವನ್ನು ಒದಗಿಸುತ್ತವೆ. ಅಲ್ಲಿನ ನಿರೂಪಣೆಗಳು ಮಾಹಿತಿ ಮತ್ತು ಸತ್ಯಗಳಿಗೆ ಯಾವುದೇ ಬಗೆಯ ವಂಚನೆಯನ್ನು ಮಾಡಿರುವುದಿಲ್ಲ. ಆದರೆ ವಿಜ್ಞಾನದ ವಿದ್ಯಾರ್ಥಿಗಳೆಲ್ಲರೂ ವೈಜ್ಞಾನಿಕವಾಗಿ ಚಿಂತಿಸಲು ಸನ್ನದ್ಧರಾಗುವುದಿಲ್ಲ. ಹಾಗೆಯೇ "ಅವೈಜ್ಞಾನಿಕ" ಎಂದು ನಾವು ಗುರುತಿಸಬಹುದಾದ ಪಾಠ್ಯವೊಂದನ್ನು ಓದಿದ ವಿದ್ಯಾರ್ಥಿಗಳೆಲ್ಲರೂ ವೈಜ್ಞಾನಿಕವಾಗಿ ಚಿಂತಿಸುವುದರಿಂದ ವಂಚಿತರಾಗುತ್ತಾರೆಂದು ತಿಳಿಯಬೇಕಿಲ್ಲ. ಆದ್ದರಿಂದ ಪಾಠ್ಯದ ಕೊರತೆಗಳಿಂದ ಅದನ್ನು ಶಿಕ್ಷಣದ ಹಾದಿಯಿಂದ ವಿಚಲಿತಗೊಳಿಸಬೇಕೆಂದು ವಾದಿಸುವವರು ಒಟ್ಟಾರೆ ಶಿಕ್ಷಣದ ಪರಿಣಾಮವನ್ನು ಸರಿಯಾಗಿ ತಿಳಿದಿರುವಂತಿಲ್ಲ.

ಪಾಠ್ಯಗಳು ಸುಳ್ಳನ್ನು ಪ್ರತಿಪಾದಿಸುತ್ತವೆ ಅಥವಾ ಅನುಚಿತ ಮೌಲ್ಯಗಳನ್ನು ಪ್ರತಿಪಾದಿಸುತ್ತವೆ ಎನ್ನುವ ಕಾರಣಕ್ಕಾಗಿ ಅವುಗಳನ್ನು ಶಿಕ್ಷಣದ ವ್ಯಾಪ್ತಿಯಿಂದ ಹೊರಗಿಡಬೇಕು ಅಥವಾ ಅವುಗಳನ್ನು ಸರಿಪಡಿಸಬೇಕು ಎನ್ನುವವರು ಸಾಮಾನ್ಯವಾಗಿ ಮರೆಯುವ ಸಂಗತಿಗಳು ಕೆಲವಿವೆ. ಒಂದು: ಪಾಠ್ಯವಾಗದಿದ್ದರೂ ಒಂದು ನಿರೂಪಣೆ ಪಠ್ಯವಾಗಿ ಇರಬಲ್ಲುದು; ಅದು ಓದುಗರಿಗೆ ಲಭ್ಯವಾಗಬಲ್ಲುದು. ಹಾಗಾಗಿ ಅದರ ಪರಿಣಾಮಗಳಿಗೆ ಒಳಗಾಗುವುದನ್ನು ತಪ್ಪಿಸುವುದು ಅಸಾಧ್ಯ. ಎರಡು: ಅನುಚಿತ ಮೌಲ್ಯಗಳನ್ನು ಪ್ರಚುರಪಡಿಸುತ್ತವೆಂದು ವಾದಿಸುವಾಗ ಸಮಾಜವನ್ನು ಇಡಿಯಾಗಿ ಗಮನಿಸುತ್ತಿರುವುದಿಲ್ಲ. ಏಕೆಂದರೆ ವಿದ್ಯಾರ್ಥಿಗಳು ಕೇವಲ ಶಾಲೆಯ ಪಾಠ್ಯಗಳಿಗೆ ಮಾತ್ರ ತೆರೆದುಕೊಳ್ಳುತ್ತಿರುವುದಿಲ್ಲ. ಅವರು ಸಮಾಜದ ವಿವಿಧ ವಲಯಗಳಲ್ಲಿ ಬಗೆಬಗೆಯ ಮೌಲ್ಯಗಳನ್ನು ಒಳಗೊಂಡಿರುವ ಹತ್ತಾರು ಬಗೆಯ ಭಾಷಿಕ ಮತ್ತು ಭಾಷೇತರ ನಿರೂಪಣೆಗಳಿಗೆ ತೆರೆದುಕೊಳ್ಳುತ್ತಿರುತ್ತಾರೆ. ಆದ್ದರಿಂದ ಅವರ ವ್ಯಕ್ತಿತ್ವದ ಬೆಳವಣಿಗೆ ಕೇವಲ ಶಾಲೆಯ ಪಾಠ್ಯದ ಮೂಲಕವೇ ಆಗುತ್ತದೆ ಎಂದು ತಿಳಿಯುವುದು ಅಷ್ಟು ಸರಿಯಲ್ಲ. ಸತ್ಯವನ್ನು ಮತ್ತು ಉಚಿತ

ಮೌಲ್ಯವನ್ನು ಪ್ರತಿಪಾದಿಸುವ ಪಾಠ್ಯವಿದ್ದ ಮಾತ್ರಕ್ಕೆ ಅದರಿಂದ ವಿದ್ಯಾರ್ಥಿಗಳು ಸೂಕ್ತ ಮಾರ್ಗದರ್ಶನವನ್ನು ಪಡೆದುಕೊಳ್ಳುತ್ತಿರುತ್ತಾರೆ ಎಂದು ತಿಳಿಯುವುದೂ ಕೂಡ ಸರಿಯಾಗಲಾರದು. ಈ ಎಲ್ಲ ಕಾರಣಗಳಿಂದ ಸತ್ಯ ಮತ್ತು ಮಾಹಿತಿಯ ನೆಲೆಯಿಂದ ಶಾಲಾಪಾಠ್ಯಗಳನ್ನು ವಿರೋಧಿಸುವ ಅಥವಾ ನಿರಾಕರಿಸುವ ವಿವಾದಗಳಿಗೆ ತಾತ್ವಿಕ ನೆಲೆಗಳು ಭದ್ರವಾಗಿರುವುದಿಲ್ಲ ಎಂದು ತಿಳಿಯಬೇಕಾಗುತ್ತದೆ.

# ಮೌಖಿಕ, ಲಿಖಿತ ಮತ್ತು ತಂತ್ರಜ್ಞಾನ

ಕನ್ನಡ ಸಂಸ್ಕೃತಿಯನ್ನು ಅಭ್ಯಾಸ ಮಾಡುವ ಯಾರಿಗಾದರೂ ಕೆಲವು ಪಾರಿಭಾಷಿಕ ಪದಗಳು ನಿತ್ಯ ಬಳಕೆಯ ಪದಗಳಷ್ಟೇ ಪರಿಚಿತವಾಗಿರುತ್ತವೆ. ಈ ಪದಗಳನ್ನು ಹೊರತುಪಡಿಸಿ ಯಾವುದೇ ಚರ್ಚೆ ಮೊದಲಾಗುವುದಾಗಲೀ ಕೊನೆಯಾಗುವುದಾಗಲೀ ಸಾಧ್ಯವೇ ಇಲ್ಲ ಎನ್ನುವಷ್ಟು ಅವು ಪ್ರಭಾವಶಾಲಿಯಾಗಿವೆ. ಅಂತಹ ಪದಗಳಲ್ಲಿ ಮೌಖಿಕ ಮತ್ತು ಲಿಖಿತ ಎಂಬ ಪದಗಳನ್ನು ಇಲ್ಲಿ ನೆನಪಿಸಿಕೊಳ್ಳುತ್ತಿದ್ದೇನೆ. ಕನ್ನಡದ ಎಲ್ಲ ಭಾಷಾಸಂಕಥನಗಳನ್ನೂ ಮುಖ್ಯವಾಗಿ ಈ ಎರಡು ಪದಗಳು ಸೂಚಿಸುವ ಗುಂಪಿನಲ್ಲಿ ಇರಿಸುವುದು ಸಾಧ್ಯವೆಂಬ ತಿಳುವಳಿಕೆ ಬಹುಮಟ್ಟಿಗೆ ಪ್ರಚುರವಾಗಿದೆ. ಪಂಪನ ಕೃತಿಗಳನ್ನು ಲಿಖಿತ ಮಾದರಿಗೆ ಸೇರಿಸಿದರೆ ಕೆರೆಗೆ ಹಾರ ಎಂಬ ಗೀತೆಯನ್ನು ಮೌಖಿಕ ಮಾದರಿಗೆ ಸೇರಿಸುತ್ತೇವೆ. ಎರಡು ಬಗೆಗಳಲ್ಲಿ ಅಗಾಧ ಪ್ರಮಾಣದ ಸಂಕಥನಗಳು ಲಭ್ಯವಿದೆ. ಈ ವರ್ಗೀಕರಣವನ್ನು ಸಾಮಾನ್ಯವಾಗಿ ಯಾವುದೇ ಸಂದೇಹವಿಲ್ಲದೆ ಒಪ್ಪಿಕೊಳ್ಳುವ ಪರಿಪಾಠವಿದೆ.

ಹತ್ತೊಂಬತ್ತನೆಯ ಶತಮಾನದ ಕೊನೆಯ ವೇಳೆಗೆ ಫ್ಲೀಟ್ ಎಂಬ ವಿದೇಶಿ ವಿದ್ವಾಂಸ ಜನರು ಹಾಡುತ್ತಿದ್ದ ಲಾವಣಿಗಳನ್ನು 'ಸಂಗ್ರಹಿಸಿ' ಲಿಖಿತ ರೂಪದಲ್ಲಿ ಮುದ್ರಿಸಿಕೊಡುವ ಮೂಲಕ ಮೌಖಿಕವಾಗಿದ್ದುದು ಜನರ 'ಕಣ್ಣಿಗೆ' ಬೀಳುವಂತಾಯಿತು. ಅಲ್ಲಿಂದ ಅವ್ಯಾಹತವಾಗಿ ಈ ಕ್ರಿಯೆ ನಡೆಯುತ್ತಲೇ ಬಂದಿದೆ. ಹಾಡುಗಳು, ಕಥೆಗಳು, ಒಗಟುಗಳು ಮೊದಲಾಗಿ ಹತ್ತಾರು ಬಗೆಯ ಭಾಷಾಸಂಕಥನಗಳು ಹೀಗೆ ಸಂಗ್ರಹಗೊಂಡು ಕಲಿತವರ ಅವಗಾಹನೆಗೆ ಲಭಿಸುತ್ತಲೇ ಬಂದಿವೆ. ವಿಶ್ವವಿದ್ಯಾಲಯದ ವಿಭಾಗಗಳಲ್ಲಿ ತರಬೇತು ಪಡೆದ ಜನರ ತಂಡಗಳು, ಹವ್ಯಾಸಿಗಳು ಈ ವ್ಯಾಪಕ ಕಾರ್ಯಕ್ರಮವನ್ನು ಮುಂದುವರೆಸುತ್ತಿದ್ದಾರೆ. ಕಳೆದ ಕೆಲವು ವರ್ಷಗಳಿಂದ ಈ ಚಟುವಟಿಕೆ ಮೊದಲಿನಷ್ಟು ತೀವ್ರವಾಗಿ ನಡೆಯುತ್ತಿಲ್ಲವಾದರೂ ನಿಂತೇ ಹೋಗಿದೆ ಎನ್ನುವಂತಿಲ್ಲ.

ಹೀಗೆ ಮೌಖಿಕವಾಗಿದ್ದ ಭಾಷಾಸಂಕಥನಗಳನ್ನು ಲಿಖಿತ ಮಾದರಿಗೆ ಪರಿವರ್ತಿಸುವಲ್ಲಿ ನಾಲ್ಕು ಮಾದರಿಗಳಿವೆ. ಇವುಗಳಲ್ಲಿ ಮೊದಲನೆಯದು ಕೊಂಚ ವಿಚಿತ್ರವಾದ ಹಾದಿಯನ್ನು ಹಿಡಿಯುತ್ತದೆ. ಇಲ್ಲದ ಮೌಖಿಕ ಸಂಕಥವನ್ನು ಇದೆಯೆಂದು ಭ್ರಮೆ ಹುಟ್ಟಿಸುವ ರೀತಿಯಲ್ಲಿ 'ರಚಿಸಿ'ಕೊಟ್ಟ ದಾಖಲೆಗಳು ನಮಗೆ ಸಿಗುತ್ತವೆ. ಉದಾಹರಣೆಗೆ ತ್ರಿಪದಿಯ ದಾಟಿಯಲ್ಲಿ ಜಾಣರು ತಾವೇ ರಚನೆಯೊಂದನ್ನು ಮಾಡಿ ಅದು ಜನರ ಬಾಯಲ್ಲಿ ಲಭ್ಯವಿದ್ದುದೆಂದು ಹೇಳಿ ಮುದ್ರಿತ ರೂಪದಲ್ಲಿ ಒದಗಿಸುವುದು.

ಈ ಹಾದಿಯನ್ನು ಹಿಡಿದ ಸಂಕಥನಗಳ ಬಗ್ಗೆ ಬೇರೆಯೇ ಚರ್ಚೆಯನ್ನು ಮುಂದೆ ಎತ್ತಿಕೊಳ್ಳಲಾಗುತ್ತದೆ.

ಎರಡನೆಯ ಮಾದರಿ: ಒಂದೇ ಸಂಕಥನದ ಹಲವು ನಿರೂಪಣೆಗಳನ್ನು ಕೇಳಿ ದಾಖಲೆಕಾರರು ತಮಗೆ "ಸರಿ ಎನಿಸಿದ" ಪಾಠವನ್ನು ಲಿಖಿತಗೊಳಿಸುವುದು. ಇಲ್ಲಿ ಹಲವು ತಿದ್ದುಪಾಟುಗಳಿಗೂ ಅವಕಾಶವಿರುತ್ತದೆ. ಈ ಪಾಠಗಳನ್ನು ಸಿದ್ಧಪಡಿಸುವವರು ತಮ್ಮ ವಿದ್ವತ್ತು ಮತ್ತು ಇತರ ಸಂಕಥನಗಳ ಪರಿಚಯದಿಂದ "ಉತ್ತಮ" ಪಾಠಗಳನ್ನು ನೀಡುವ ಉತ್ಸುಕತೆಯನ್ನು ಹೊಂದಿರುತ್ತಾರೆ.

ಮೂರನೆಯ ಮಾದರಿ: ಸಂಕಥನಗಳನ್ನು ನಿರೂಪಕರ/ನಿವೇದಕರ ಮಾತಿನ ರೀತಿಯಲ್ಲೇ ನಿರೂಪಿಸುವುದು; ಅವರ ಭಾಷಾಮಾದರಿಗಳನ್ನೇ ಯಥಾವತ್ತಾಗಿ ಲಿಖಿತಗೊಳಿಸುವುದು. ಹೀಗೆ ದಾಖಲೆ ಮಾಡುವವರು ನಿರೂಪಣೆಯ ಭಾಷಾ ಮಾದರಿಯನ್ನು ಇರುವಂತೆಯೇ ದಾಖಲಿಸಲು ಅಪೇಕ್ಷಿಸಿರುತ್ತಾರೆ. ಆದರೆ ಅವರಿಗೆ ಗೊತ್ತಿಲ್ಲದೆ ಕೆಲವು ಹಂತಗಳಲ್ಲಿ ಅವರು ಮಧ್ಯೆ ಪ್ರವೇಶ ಮಾಡುವುದು ಅನಿವಾರ್ಯವೂ ಆಗಿರುತ್ತದೆ. ಉದಾಹರಣೆಗೆ ಕಥೆಯೊಂದನ್ನು ನಿರೂಪಿಸುವವರು ಒಂದೇ ಸಮನೆ ಕಥೆಯನ್ನು ಹೇಳಿದ್ದರೂ ನಿಲುಗಡೆಯ ಸಂದರ್ಭಗಳನ್ನು ದಾಖಲೆಕಾರರು ಊಹಿಸಿ ತಮ್ಮ ಮುದ್ರಿತ ರೂಪದಲ್ಲಿ ಕಂಡಿಕೆಗಳಾಗಿ ವಿಭಜಿಸಿರುತ್ತಾರೆ. ದೀರ್ಘ ಕಥನಗಳಲ್ಲಿ ಸಾಲುಗಳಾಗಿ ಒಡೆದು ಮುದ್ರಿಸುವುದೂ ಕೂಡ ಇದೇ ನೆಲೆಗೆ ಸೇರಿದ ಮಧ್ಯ ಪ್ರವೇಶವಾಗಿರುತ್ತದೆ.

ನಾಲ್ಕನೆಯ ಮಾದರಿ: ನಿರೂಪಣೆಯಲ್ಲಿ ಸಂಕಥನಕಾರರು ಯಾವುದೇ ಉಪಭಾಷೆಯನ್ನು ಬಳಸಿದ್ದರೂ ಲಿಖಿತ ರೂಪಕ್ಕೆ ತರುವಾಗ ಅದನ್ನು ಪ್ರಮಾಣ ಕನ್ನಡಕ್ಕೆ ಪರಿವರ್ತಿಸುವುದು. ಈ ನಾಲ್ಕು ಮಾದರಿಗಳಲ್ಲಿ ಮೊದಲನೆಯ ಮಾದರಿಯಲ್ಲಿ ಲಭಿಸುವ ದಾಖಲೆಗಳನ್ನು ಬೇರೆ ಮಾಡಲು ವಿಧಾನಗಳು ಸದ್ಯ ಲಭ್ಯವಿಲ್ಲ. ಆದರೆ ಇದರ ಪರಿಣಾಮಗಳು ಅಧಿಕವಾಗಿವೆ. ಎರಡನೆಯ ಮಾದರಿಯನ್ನು ಅಧ್ಯಯನಕಾರರು ನಿರಾಕರಿಸುತ್ತಾರೆ. ದಾಖಲೆಕಾರರು ಪಠ್ಯವನ್ನು "ಉತ್ತಮಗೊಳಿಸುವ" ಕೆಲಸಕ್ಕೆ ಕೈಹಾಕಬಾರದೆಂದು ಎಲ್ಲರಿಗೂ ಸಮ್ಮತವಾದ ನಿಲುವಾಗಿರುವಂತೆ ತೋರುತ್ತದೆ. ಮೂರನೆಯ ಮಾದರಿಯು ದಾಖಲೆಕಾರರಿಂದ ಅತ್ಯಂತ ಹೆಚ್ಚಿನ ಶ್ರಮ ಮತ್ತು ತಜ್ಞತೆಯನ್ನು ಬಯಸುತ್ತದೆ. ಕೇಳಿದ ಮಾತಿನ ಧಾಟಿಯನ್ನು ಯಥಾವತ್ತಾಗಿ ಲಿಖಿತಗೊಳಿಸಲು ನಮ್ಮ ಬರವಣಿಗೆಯ ಸಾಮಗ್ರಿಗಳು ಸಾಲದಾಗುತ್ತವೆ. ವಿಶೇಷವಾದ ಪರಿಕರಗಳನ್ನು ರೂಪಿಸಿಕೊಂಡು ಅದನ್ನು ಲಿಖಿತರೂಪಕ್ಕೆ ಪರಿವರ್ತಿಸಬೇಕಾಗುತ್ತದೆ. ಈ ತಜ್ಞತೆ ಇಲ್ಲದಿರುವಲ್ಲಿ ಹಲವರು ಯಥಾವತ್ತಾಗಿ ದಾಖಲಿಸುತ್ತೇವೆಂದು ಹೊರಟರೂ ಪಾಠವನ್ನು ತಮಗೆ ತೋಚಿದ ರೀತಿಯಲ್ಲಿ ಪರಿವರ್ತಿಸಿರುವುದನ್ನು ನಿದರ್ಶನವನ್ನಾಗಿ ನೋಡಬಹುದು. ಮೌಖಿಕ ಕಾವ್ಯಗಳ ಛಂದಸ್ಸು ಅಂಶಗಣ ಘಟಿತವಾಗಿರುವುದರಿಂದ ಎಷ್ಟೋ ವೇಳೆ ನಿರೂಪಕರು ಒಂದು ಮಾತ್ರೆಯ ಕಾಲದ ವರ್ಣಗಳನ್ನು ಎಳೆದು ಎರಡು ಮಾತ್ರೆಯ ಕಾಲಕ್ಕೆ ಉಚ್ಚರಿಸುತ್ತಾರೆ. ನಿರೂಪಕರು ಅಲ್ಲಿ ದೀರ್ಘಸ್ವರವಿದೆಯೆಂದು

"ಭಾವಿಸಿ" ಹಾಗೆಯೇ ದೀರ್ಘಸ್ವರಗಳನ್ನು ತಮ್ಮ ಲಿಖಿತ ರೂಪದಲ್ಲಿ ದಾಖಲಿಸುತ್ತಾರೆ. ಈ ಮಾದರಿಯನ್ನು ಅನುಸರಿಸುವವರ ಸಂಖ್ಯೆ ಕಡಿಮೆ. ನಾಲ್ಕನೆಯ ಮಾದರಿ ಸುಲಭದ್ದೆಂದು ಅನ್ನಿಸುತ್ತದೆ. ಆದರೆ ಇದರಲ್ಲೂ ಕೆಲವು ತೊಂದರೆಗಳಿವೆ. ಮುಖ್ಯವಾಗಿ ನಿರೂಪಣೆಯಲ್ಲಿರುವ ಯಾವ ಯಾವ ಅಂಶಗಳನ್ನು ಪ್ರಮಾಣ ಕನ್ನಡಕ್ಕೆ ಪರಿವರ್ತಿಸಬೇಕು ಎಂಬ ಬಗ್ಗೆ ಕೆಲವು ಆಯ್ಕೆಗಳು ದಾಖಲೆಕಾರರಿಗೆ ಇರುತ್ತವೆ. ಈ ಆಯ್ಕೆಯನ್ನು ಬಳಸುವಾಗ ದಾಖಲೆಕಾರರು ತಪ್ಪುಗಳನ್ನು ಮಾಡುವ ಸಾಧ್ಯತೆ ಇರುತ್ತದೆ. ಉದಾಹರಣೆಗೆ ನಿರೂಪಣೆಯಲ್ಲಿ ಕೆಲವು ಪದಗುಚ್ಛಗಳು ಮತ್ತೆ ಮತ್ತೆ ಆವರ್ತನೆಯಾಗುತ್ತಿರುತ್ತವೆ. ಅವುಗಳನ್ನು ದಾಖಲೆಕಾರರು ನಿರರ್ಥಕವೆಂದು ತಾವೇ ಭಾವಿಸಿ ಅವುಗಳನ್ನು ಕೈಬಿಡಬಹುದು. ಮದುವೆಯ ವರ್ಣನೆಯ ಸಂದರ್ಭ ಬಂದಾಗ ಸಾಮಾನ್ಯವಾಗಿ ಆಕಾಶಕ್ಕೆ ಚಪ್ಪರಹಾಕಿ, ಭೂಮಿಯನ್ನು ಹಸೆಮಣೆ ಮಾಡಿ ನೆಲವಿಡೀ ರಂಗೋಲೆ ಬರೆದ ಬಣ್ಣನೆ ಮತ್ತೆ ಮತ್ತೆ ಬರುತ್ತದೆ. ಈ ರೂಪಿತ ಪದಗುಚ್ಛವನ್ನು ದಾಖಲೆಕಾರರು 'ಬೇಡ'ವೆಂದು ತಮ್ಮ ಲಿಖಿತ ದಾಖಲೆಯಲ್ಲಿ ಕೈಬಿಡುವ ಸಾಧ್ಯತೆಗಳು ಹೆಚ್ಚು. ಇದಲ್ಲದೆ ಸಂಕಥನಗಳಲ್ಲಿ ಇರುವ ಕಥನ ಮತ್ತು ವರ್ಣನೆಯ ಭಾಗಗಳನ್ನು ಬೇರೆ ಮಾಡುವಲ್ಲಿ ದಾಖಲೆಕಾರರು ಎಡವಬಹುದು. ವರ್ಣನೆಯ ಭಾಗವನ್ನು ಸಂಕ್ಷಿಪ್ತಗೊಳಿಸಿ ಅದನ್ನು ಕಥನಕ್ಕೆ ಅಧೀನವಾಗುವಂತೆ ಮಾಡಿದರೆ ಆಗಲೂ ಮೂಲದ ವಿನ್ಯಾಸ ಕೈತಪ್ಪಿಹೋಗುತ್ತದೆ. ಕನ್ನಡ ಜಾನಪದ ನಿರೂಪಣೆಯಲ್ಲಿ ಎ.ಕೆ. ರಾಮಾನುಜನ್ ಅವರು ಇದೆಯೆಂದು ಹೇಳುವ ಎರಡು ಜಗತ್ತುಗಳು ಈ ಬಗೆಯ ಗೊಂದಲದಿಂದ ಮರೆಯಾಗಿ ಹೋಗುವ ಸಾಧ್ಯತೆಗಳು ಹೆಚ್ಚು.

ಈ ಟಿಪ್ಪಣಿಯ ಇನ್ನೊಂದು ನೆಲೆಯನ್ನು ಈಗ ಗಮನಿಸೋಣ. ಲಿಖಿತ ಎಂದು ನಾವು ತಿಳಿಯುವ ಮಾದರಿಯ ಸಂಕಥನಗಳೂ ಕೂಡ ವಾಸ್ತವವಾಗಿ ಇಪ್ಪತ್ತನೆಯ ಶತಮಾನದವರೆಗೂ ಮೌಖಿಕವೇ ಆಗಿದ್ದವು. ಅವುಗಳ ಪ್ರಸಾರವು ಓದಿನ ಮೂಲಕ ನಡೆಯುತ್ತಿರಲಿಲ್ಲ. ಯಾರಾದರೂ ಓದಬೇಕು; ಉಳಿದವರು ಕೇಳಬೇಕು. ಕನ್ನಡ ನಾಡಿನಲ್ಲಿ ಪ್ರಚಾರದಲ್ಲಿದ್ದ ವಾಚನ ಪರಂಪರೆಯಲ್ಲಿ ಹೀಗೆ ಕೃತಿಗಳು ಜನರ ಕಿವಿಗಳ ಮೂಲಕ ಅವರನ್ನು ತಲುಪುತ್ತಿದ್ದವು. ಲಿಖಿತ ಎಂದು ನಾವು ತಿಳಿಯುವ, ಸಾಮಾನ್ಯವಾಗಿ ಜನಪದ ಅಧ್ಯಯನಗಳಿಂದ ಹೊರಗಿಡುವ ವಚನ, ಕೀರ್ತನೆ ಮತ್ತು ತತ್ತ್ವಪದಗಳಂತೂ ನೂರಕ್ಕೆ ನೂರುಪಾಲು ಮೌಖಿಕ ಉಗಮ ಮತ್ತು ಪ್ರಸಾರವನ್ನು ಹೊಂದಿದ್ದವು. ಬೇರೆ ಬೇರೆ ಕಾರಣಗಳಿಂದ ಅವು ಲಿಖಿತ ಮಾದರಿಗೆ ಪರಿವರ್ತನೆಯನ್ನು ಪಡೆದಿವೆ. ಆದರೂ ಅವುಗಳ ಪ್ರಸಾರ ಮಾತ್ರ ವಾಚನ ಪರಂಪರೆಗೆ ಸೇರಿದ್ದಾಗಿತ್ತು. ಹರಿಹರನಿಂದ ಮೊದಲಾದ ದೇಸೀ ಕಾವ್ಯಪರಂಪರೆಯ ಬಹುಪಾಲು ಕೃತಿಗಳು ಹೀಗೆ ವಿವಿಧ ಆಚರಣೆಗಳ ಸಂದರ್ಭದಲ್ಲಿ ವಾಚನಗೊಳ್ಳುವುದು ಅನಿವಾರ್ಯವಾಗುತ್ತಿತ್ತು. "ಓದುವವರು" ಇದ್ದರು; ಆದರೆ "ಓದಿಕೊಳ್ಳುವವರು" ಬಹುಮಟ್ಟಿಗೆ ಇರಲಿಲ್ಲ. ಕೇಳುವವರು ಯಾರು ಮತ್ತು ಅವರು ಸಮುದಾಯದ ಯಾವ ನೆಲೆಗಳನ್ನು

ಪ್ರತಿನಿಧಿಸುತ್ತಿದ್ದರು ಎಂಬುದು ಬೇರೆ ವಿಷಯ. ಆದರೆ ಈ ಭಾಷಾಸಂಕಥನಗಳೂ ಕೂಡ ಮೌಖಿಕ ನೆಲೆಯನ್ನೇ ನಂಬಿದ್ದವು.

ಲಿಖಿತವೆಂದು ತಿಳಿಯಲಾದ ಮಾದರಿಯ ಸಂಕಥನಗಳಲ್ಲೇ ಅಂತರ್ಗತವಾಗಿರುವ ಕೇಳುಗ ಪರಂಪರೆಯ ಬಗ್ಗೆ ಈಗಾಗಲೇ ಅಧ್ಯಯನಕಾರರು ಗಮನ ಸೆಳೆದಿದ್ದಾರೆ. ನಿರೂಪಣೆಯ ವಿಧಾನದಲ್ಲೇ ಅದು ಯಾರೋ ಕೇಳುವವರನ್ನು ಉದ್ದೇಶಿಸಿದೆಯೇ ಹೊರತು ಓದುವವರನ್ನಲ್ಲ ಎನ್ನುವುದು ಹಲವು ಕೃತಿಗಳಲ್ಲಿ ಸ್ಪಷ್ಟವಾಗಿ ತಿಳಿಯುವಂತಿದೆ. ಅಲ್ಲದೆ ಈ ಸಂಕಥನಗಳ ನಿರೂಪಣೆಯ ಭಾಷೆ ಕೂಡ ಕಣ್ಣಿನ ಓದಿಗೆ ಅನುಕೂಲವಾಗುವಂತೆ ಇಲ್ಲ. ಬದಲಿಗೆ ಕಿವಿಯೋದಿಗೆ ತಕ್ಕಂತೆ ಇರುತ್ತದೆ. "ಕಣ್ಣಿಗೆ ಕಾಣುವಂತೆ" ಹೇಳುವುದಕ್ಕಿಂತ "ಕಣ್ಣಿಗೆ ಕಟ್ಟುವಂತೆ" ಹೇಳುವುದು ಇಲ್ಲಿನ ಧಾಟಿ.

ತಂತ್ರಜ್ಞಾನದ ನೆರವಿನಿಂದ ಲಿಖಿತ ಮಾದರಿಯ ಸಂಕಥನಗಳನ್ನು ಮುದ್ರಿತ ರೂಪಕ್ಕೆ ತರುವುದು ಸಾಧ್ಯವಾಯಿತು. ಜೊತೆಗೆ ಅಕ್ಷರ ಬಲ್ಲವರ ಸಂಖ್ಯೆಯೂ ಹೆಚ್ಚಾಯಿತು. ಇವೆರಡು ಸಂಗತಿಗಳು ಒಟ್ಟಾಗಿ ಸೇರಿ ಕೃತಿಗಳನ್ನು "ಓದಿಕೊಳ್ಳುವವರ" ಪರಂಪರೆಯೊಂದು ಕನ್ನಡದಲ್ಲಿ ಬೆಳೆಯಿತು. ಹೀಗೆ ಓದಿಕೊಳ್ಳುವವರು ಈಗ ಮೂಲದಲ್ಲಿ ಲಿಖಿತ ಮಾದರಿಗೆ ಸೇರಿದ ಸಂಕಥನಗಳ ರೀತಿಯಲ್ಲೇ ಮೂಲದಲ್ಲಿ ಮೌಖಿಕವಾಗಿದ್ದ ಸಂಕಥನಗಳನ್ನೂ ಓದಿಕೊಳ್ಳುತ್ತಿದ್ದಾರೆ. ಓದುವ ಬಗೆಯಲ್ಲಿ ಯಾವ ವ್ಯತ್ಯಾಸವೂ ಈಗ ಇಲ್ಲವಾಗಿದೆ. ಉಗಮದಲ್ಲಿ ಇದ್ದಿರಬಹುದಾದ ವಿಕಲ್ಪಗಳನ್ನು ತಂತ್ರಜ್ಞಾನ ಇಲ್ಲವಾಗಿಸಿದೆ. ಮೌಖಿಕ ಮಾದರಿಯ ಸಂಕಥನಗಳನ್ನು ಬರವಣಿಗೆಗೆ ಇಳಿಸುವ ನಾಲ್ಕು ಬಗೆಗಳನ್ನು ಮೊದಲಲ್ಲಿ ಗಮನಿಸಿದ್ದೇವಷ್ಟೆ. ಇವುಗಳಲ್ಲಿ ಮೊದಲೆರಡು ಬಹುಮಟ್ಟಿಗೆ ನಿರಾಕರಣೆಗೆ ಒಳಗಾಗಿವೆ. ಮೂರನೆಯದು ಭಾಷಾಅಧ್ಯಯನಕಾರರಿಗೆ ಆಸಕ್ತಿಯ ಮಾದರಿಯಾಗಿದೆ. ನಾಲ್ಕನೆಯ ಮಾದರಿಯೇ ಓದುಗರಿಗೆ ಮತ್ತು ಅಧ್ಯಯನಕಾರರಿಗೆ ಹೆಚ್ಚು ಉಪಯುಕ್ತವಾದ ದಾಖಲೆಗಳನ್ನು ಒದಗಿಸುತ್ತಿದೆ.

ಈ ಎರಡು ಬಗೆಯ ಸಂಕಥನಗಳಿಗಿಂತ ಭಿನ್ನವಾದ ಮತ್ತೊಂದು ಸಂಕಥನ ನಮಗೀಗ ಲಭ್ಯವಾಗುತ್ತಿದೆ. ಭಾಷೇತರ ಸಂಗತಿಗಳನ್ನು ಭಾಷೆಯ ಮೂಲಕ ನಿರೂಪಿಸುವ ಸಂಕಥನಗಳಿವು. ದಿನದಿನದ ಪತ್ರಿಕಾವರದಿಗಳಿಂದ ಹಿಡಿದು ಸಂಸ್ಕೃತಿಯ ವಿವಿಧ ನೆಲೆಗಳನ್ನು ನಿರೂಪಿಸುವ ಸಂಕಥನಗಳವರೆಗೆ ಈ ಮಾದರಿಯ ವ್ಯಾಪ್ತಿ ಹರಡಿಕೊಂಡಿದೆ. ಕೈಫಿಯತ್ತು ಬಖೈರುಗಳಿಂದ ಮೊದಲಾದ ಈ ಮಾದರಿಯ ಬರವಣಿಗೆ ಈಗ ಅಧಿಕ ಪ್ರಮಾಣದಲ್ಲಿ ಸಿದ್ಧಗೊಳ್ಳುತ್ತಿದೆ. ಇದರ ಒಂದು ಬಗೆಯನ್ನು ನಾವಿಲ್ಲಿ ಗಮನಿಸುವುದು ಅಗತ್ಯ. ಜಾನಪದ ಅಧ್ಯಯನದಲ್ಲಿ, ಸಂಸ್ಕೃತಿ ಅಧ್ಯಯನದಲ್ಲಿ ಹಲವಾರು ಭಾಷಿಕ ನಿರೂಪಣೆಗಳನ್ನು ರಚಿಸಲಾಗುತ್ತದೆ. ಭಾಷೇತರ ಸಂಗತಿಗಳನ್ನು ಹೀಗೆ ಭಾಷೆಯ ಮೂಲಕ ಕಟ್ಟಿಕೊಡುವ ಬಗೆ ಕನ್ನಡದಲ್ಲಿ ಏಳೆಂಟು ದಶಕಗಳಿಂದ ಬಳಕೆಯಲ್ಲಿದೆ. ಈ ಭಾಷಿಕ ನಿರೂಪಣೆಗಳಿಗೆ ಪರ್ಯಾಯವಾಗಿ ತಂತ್ರಜ್ಞಾನದ ನೆರವಿನಿಂದ ದಾಖಲೆಗಳನ್ನು ರೂಪಿಸುವ ಕ್ರಮವನ್ನೂ ಅಧ್ಯಯನಕಾರರು ಶೋಧಿಸುತ್ತಿದ್ದಾರೆ. ಒಂದು ಜನಪದ

ಆಚರಣೆ ಇದೆಯೆಂದುಕೊಳ್ಳಿ. ಆ ಆಚರಣೆಯ ವಿವರಗಳನ್ನು ಭಾಷೆಯಲ್ಲಿ ನಿರೂಪಿಸುವ ಮಾದರಿಯೊಂದನ್ನು ಸಾಮಾನ್ಯವಾಗಿ ಬಳಸಲಾಗುತ್ತದೆ. ಈಗ ಅದಕ್ಕೆ ಪರ್ಯಾಯವಾಗಿ ದೃಶ್ಯ ಶ್ರವ್ಯ ದಾಖಲಾತಿಗಳ ಮೂಲಕ ಭಾಷೆಯ ನಿರೂಪಣೆಯನ್ನು ನಿರಾಕರಿಸುವ ಸಾಧ್ಯತೆ ಇದೆ. ಒಂದು ವೇಳೆ ಈ ದಾಖಲಾತಿಯಲ್ಲಿ ಭಾಷೆಯ ವ್ಯಾಖ್ಯಾನಗಳಿದ್ದರೂ ಅದು ಕಣ್ಣು ಮತ್ತು ಕಿವಿಗೆ ಲಭ್ಯವಾಗುತ್ತಿರುವ ಸಂಗತಿಗಳ ಜೊತೆಯಲ್ಲಿ ಇರುತ್ತದೆ. ಹಾಗಾಗಿ ಅದರ ಸ್ಥಾನ ಗೌಣ. ಆಚರಣೆಯೊಂದರ ಭಾಷಿಕ ದಾಖಲಾತಿಯನ್ನು ಅದರ ದೃಕ್ ಶ್ರವ್ಯ ದಾಖಲಾತಿಯೊಡನೆ ಹೋಲಿಸಿದರೆ ಒಂದು ಸಂಗತಿ ಸ್ಪಷ್ಟವಾಗುತ್ತದೆ. ಇವೆರಡರಲ್ಲಿ ಯಾವುದು ಅಧಿಕೃತ ಎಂಬ ಪ್ರಶ್ನೆಯನ್ನು ನಾವಿಲ್ಲಿ ಮುಂದುವರಿಸುವುದು ಬೇಡ. ಹಾಗಿಲ್ಲದೆಯೂ ಎರಡನೆಯ ದಾಖಲಾತಿಯಲ್ಲಿ ಭಾಷೆ ಕೇವಲ ಪರಿಕರವಾಗಿದ್ದರೆ ಮೊದಲನೆಯ ದಾಖಲಾತಿಯಲ್ಲಿ ಅದೇ ಸಂಕಥನಕ್ಕೆ ಕರ್ತೃವಾಗಿರುತ್ತದೆ. ತಂತ್ರಜ್ಞಾನ ಭಾಷೆಯ ಒಂದು ಸಾಧ್ಯತೆಯನ್ನು ಮೊಟಕುಗೊಳಿಸಿರುವುದಕ್ಕೆ ಇದೊಂದು ನಿದರ್ಶನ.

ಮೌಖಿಕ ಸಂಕಥನಗಳನ್ನು ಲಿಖಿತವಾಗಿ ದಾಖಲಿಸುವ ನಾಲ್ಕು ಬಗೆಗಳನ್ನು ಮೊದಲಲ್ಲಿ ಹೇಳಿದೆಯಷ್ಟೆ. ಅವುಗಳಲ್ಲಿ ಮೊದಲನೆಯದು, ಇಲ್ಲದ ಮೌಖಿಕ ಸಂಕಥನವನ್ನು ಇದೆಯೆಂದು ಲಿಖಿತ ರೂಪದಲ್ಲಿ ಸೃಷ್ಟಿಸಿ ಭ್ರಮೆಯನ್ನು ಉಂಟು ಮಾಡುತ್ತದೆ. ಭಾಷೇತರ ಸಂಭವಗಳನ್ನು ಭಾಷಿಕವಾಗಿ ದಾಖಲಿಸುವ ಲಿಖಿತ ಸಂಕಥನಗಳು ಇದೇ ಮಾದರಿಯವು. ಹಲವಾರು ಗಾಯಕರು ಜನಪದ ಗೀತೆಗಳೆಂದ ತಮ್ಮದೇ ಆದ ದಾಟಿಯಲ್ಲಿ ಹಾಡುವ ಗೀತೆಗಳು ವಾಸ್ತವವಾಗಿ ಯಾರೋ ಬರೆದ ಗೀತೆಗಳಾಗಿರುತ್ತವೆ. ಅವು ಮೌಖಿಕ ಸಂಕಥನದ ಭಾಗವಾಗಿ ಇರುವುದಿಲ್ಲ. ಆದರೆ ಅವುಗಳಿಗೆ ಜನಪದವೆಂಬ ಮನ್ನಣೆಯನ್ನು ತರಲು ಹೀಗೆ ಹೆಸರಿಸುವುದು ಒಂದು ವಿಧಾನವಾಗಿದೆ. ಭಾಷೇತರ ಸಂಭವಗಳನ್ನು ಭಾಷಿಕವಾಗಿ ಸಮರ್ಥಿಸುವ ಬಗೆಯೂ ಹೀಗೆ ಅನಧಿಕೃತವಾಗಿ ಬಿಡುವ ಸಾಧ್ಯತೆ ಇರುತ್ತದೆ. ಸಾಮಾನ್ಯವಾಗಿ ಪತ್ರಿಕಾವರದಿಗಳಲ್ಲಿ ಇಂತಹ ಸಂಭವಗಳು ಹೆಚ್ಚು. ಆದರೆ ಹಲವು ಮಾನವಶಾಸ್ತ್ರೀಯ ಅಧ್ಯಯನ ದಾಖಲೆಗಳು ಹೀಗೆ ಅಧ್ಯಯನಕಾರರ ಊಹೆಯ ನೆಲೆಯಲ್ಲಿ ಮಾತ್ರ ಇದ್ದು ವಾಸ್ತವದಲ್ಲಿ ಅವುಗಳಿಗೆ ಆಧಾರವಿಲ್ಲದಿರುವುದನ್ನು ಅನಂತರದ ಅಧ್ಯಯನಕಾರರು ಗೊತ್ತು ಮಾಡಿದ್ದಾರೆ. ಲೇಖನ ಸಾಧ್ಯತೆ ಎನ್ನುವ ತಂತ್ರಜ್ಞಾನದ ಬಳಕೆ ಹೀಗೆ ಇಲ್ಲದುದನ್ನು ಇದೆಯೆಂದು ಭ್ರಮೆಯನ್ನು ಹುಟ್ಟಿಸಲು ಅನುವು ಮಾಡಿಕೊಟ್ಟಿದೆ.

ತಂತ್ರಜ್ಞಾನದ ಹೊಸ ಆವಿಷ್ಕಾರಗಳು ಈಗ ಇನ್ನೊಂದು ನೆಲೆಗೆ ನಮ್ಮನ್ನು ದಾಟಿಸುತ್ತಿವೆ. ಮಾನವ ಚರಿತ್ರೆಯಲ್ಲಿ ಅತ್ಯಲ್ಪ ಕಾಲದಲ್ಲೇ ಒಂದು ಬದಲಾವಣೆಯ ಹಂತ ದಾಟಿ ಬಂದಿರುವುದು ನಮಗೆ ಗೋಚರವಾಗುವಂತಿದೆ. ಅದೆಂದರೆ ಓದಿಕೊಳ್ಳುವ ಪರಂಪರೆಯನ್ನು ಮೊಟಕುಗೊಳಿಸಿರುವುದು. ಸಂಪರ್ಕ ಮಾಧ್ಯಮಗಳಲ್ಲಿ ಆಗಿರುವ ಪ್ರಗತಿಯಿಂದಾಗಿ ಲಿಖಿತ ದಾಖಲೆಗಳೂ ಕೂಡ ಈಗ ಕೇಳುವ ಮಾದರಿಗೆ ಪರಿವರ್ತನೆಯಾಗುತ್ತಿವೆ. ಅಂದರೆ ಸಾಮಾನ್ಯವಾಗಿ ನವ ಮೌಖಿಕತೆ ಎಂದು ಕರೆಯಲಾಗುತ್ತಿರುವ ಹಂತಕ್ಕೆ ನಾವು ದಾಟಿ ಬಂದಿದ್ದೇವೆ.

ತಂತ್ರಜ್ಞಾನದ ಹೊಸ ಸಾಧ್ಯತೆಗಳಿಂದಾಗಿ ಭಾಷಿಕ ಸಂಕಥನಗಳು ಅತಿವೇಗವಾಗಿ ಮತ್ತು ವ್ಯಾಪಕವಾಗಿ ಪ್ರಚುರಗೊಳ್ಳಬಲ್ಲವು. ಸಂಕಥನಗಳು ಸಿದ್ಧಗೊಳ್ಳುವ ಕಾಲಕ್ಕೂ ಸಂವಹನಗೊಳ್ಳುವ ಕಾಲಕ್ಕೂ ಇರುವ ಅಂತರ ನಗಣ್ಯವಾಗಿದೆ. ಈ ಸಂವಹನ ಕ್ರಮ ಸಂಕಥನಗಳ ಭಾಷಾಸ್ವರೂಪವನ್ನು ತೀವ್ರವಾಗಿ ಪ್ರಭಾವಿಸಿವೆ. ಲಿಖಿತ ರೂಪದಲ್ಲೇ ಸಿದ್ಧಗೊಳ್ಳುವ ಭಾಷಾಸಂಕಥನಗಳು ಕಣ್ಣೋದಿನ ಮೂಲಕವೇ ಸಂವಹನಗೊಳ್ಳಬೇಕೆಂಬ ಒತ್ತಾಯ ಈಗ ಉಳಿದಿಲ್ಲ. ಟಿವಿ ಮಾಧ್ಯಮಕ್ಕಾಗಿ ಸಿದ್ಧಗೊಳ್ಳುವ 'ವರದಿ'ಗಳನ್ನು ಗಮನಿಸಿ. ಅವು ಬರೆಹಗಳಾಗಿ ಮೈ ತಳೆದರೂ ನಾವು ಅವನ್ನು 'ಓದುವುದಿಲ್ಲ'; 'ಕೇಳುತ್ತೇವೆ'. ಟಿವಿ ಪರದೆಯ ಮೇಲಿರುವ ವ್ಯಕ್ತಿಗಳೂ ಯಾವಾಗಲೂ ಆ ಬರೆಹವನ್ನು 'ಓದಿ ಹೇಳು'ವುದಿಲ್ಲ; ಮಾತಾಡುತ್ತಿರುತ್ತಾರೆ. ಅಂದರೆ ತೋರಿಕೆಗೆ ಲಿಖಿತ ಸಂಕಥನವೆಂದು ಕೊಂಡರೂ ವಾಸ್ತವದಲ್ಲಿ ಅದು ಮೌಖಿಕದ ಗುಣಲಕ್ಷಣಗಳನ್ನು ಪಡೆದುಕೊಳ್ಳುತ್ತದೆ. ಚಲನಚಿತ್ರ, ಟಿವಿ ಕಥಾಮಾಲಿಕೆಗಳು, ದೃಶ್ಯಚಿತ್ರಗಳು, ನಿರೂಪಣಾ ವರದಿಗಳು ಎಲ್ಲ ಕಡೆಗಳಲ್ಲೂ ಲಿಖಿತ ಸಂಕಥನಗಳು ಸಿದ್ಧಗೊಂಡರೂ ಅವು ಸಂವಹನದ ಯಾವುದೇ ಹಂತದಲ್ಲಿ ಲಿಖಿತ ರೂಪದಲ್ಲಿ ಮುಂಚೂಣಿಗೆ ಬರುವುದಿಲ್ಲ; ಅವುಗಳ ಮೌಖಿಕ ಅವತಾರಗಳು ಮಾತ್ರ ನಮಗೆ ಲಭ್ಯ. ಮೌಖಿಕ ಸಂಕಥನಗಳಿಗಿಂತ ಲಿಖಿತ ಸಂಕಥನಗಳಿಗೆ ಜೀವಿತಾವಧಿ ಹೆಚ್ಚು ಎಂಬ ನಮ್ಮ ಸಾಮಾನ್ಯ ತಿಳುವಳಿಕೆಗಳೆಲ್ಲ ಈಗ ತಲೆಕೆಳಗಾಗಿವೆ. ಲಿಖಿತ ಸಂಕಥನಗಳ ಸಂವಹನದ ಸಂದರ್ಭದಲ್ಲಿ 'ಓದುಗ'ರಿಗೆ ಲಭಿಸುತ್ತಿದ್ದ ಏಕಾಂಗಿ ಸ್ಥಿತಿಯ ಮನನ ಸಾಧ್ಯತೆಗಳು ಈಗ ರೂಪುಗೊಂಡಿರುವ ಸ್ಥಿತಿಯಲ್ಲಿ ಮಾಯವಾಗಿವೆ. 'ಕೇಳುವ' ಜನತಾ ಜನಾರ್ದನರಾಗಿ ಮಾತ್ರ ನಾವು ಬದಲಾಗಿದ್ದೇವೆ. ಈ ಬದಲಾವಣೆಗಳ ಹಿನ್ನೆಲೆಯಲ್ಲಿ ಉಂಟಾಗಿರುವ ಸಾಂಸ್ಕೃತಿಕ ಪರಿಣಾಮಗಳನ್ನು ವಿವರವಾಗಿ ಅಭ್ಯಾಸ ಮಾಡಬೇಕಾಗಿದೆ.

# ತಂತ್ರಜ್ಞಾನದ ದಾಪುಗಾಲು: ಮುಂದಿನ ದಾರಿ

ಅಂತರ್ಜಾಲದಲ್ಲಿ ನಿಮಗೆ ಬೇಕಾದ ಮಾಹಿತಿ ಎಲ್ಲಿ ಸಿಗಬಹುದೆಂದು ಹುಡುಕಿ ತೋರಿಸುವ ಶೋಧಕಗಳಿವೆ. 'ಗೂಗಲ್' ಎಂಬುದೊಂದು ಅಂಥ ತುಬ್ಬುಗಾರ. ತೀರಾ ಈಚೆಗೆ ಅಲ್ಲಿ 'ನಿಮ್ಮ ಭಾಷೆಯಲ್ಲಿ ನಿಮಗೆ ಬೇಕಾದ ಮಾಹಿತಿಯನ್ನು ಹುಡುಕಿಕೊಳ್ಳಿ' ಎಂಬ ಆಯ್ಕೆಯನ್ನು ನೀಡಲಾಗಿದೆ. ಆ ಭಾಷೆಗಳ ಪಟ್ಟಿಯಲ್ಲಿ ಕನ್ನಡವೂ ಇದೆ. ಕುತೂಹಲದಿಂದ ಮುನ್ನುಗ್ಗಿದರೆ ನಿಮಗೆ ಅಚ್ಚರಿ ಕಾದಿದೆ. ನಿಮಗೆ ಬೇಕಾದ ಮಾಹಿತಿಯನ್ನು ಹುಡುಕಲು ನೀವು ಸಿದ್ಧರಾದಿರೆಂದರೆ ಮಾಹಿತಿ ಲಭಿಸುತ್ತದೆ. ಆದರೆ ರೋಮನ್ ಲಿಪಿಯಲ್ಲಿ ಅದು ಸಿಗುತ್ತದೆ. ನೀವು ಕುವೆಂಪು ಎಂಬ ಪದವನ್ನು ನೀಡಿ ಉಲ್ಲೇಖಗಳನ್ನು ಹುಡುಕಲು ಹೇಳಿದರೆ ಕೆಲವೇ ಸೆಕೆಂಡುಗಳಲ್ಲಿ 16 ಸಾವಿರಕ್ಕೂ ಮಿಕ್ಕಿ ಉಲ್ಲೇಖಗಳ ಪಟ್ಟಿಯಾಗುತ್ತದೆ. ಆದರೆ ನೀವು ಕನ್ನಡವನ್ನು ರೋಮನ್ ಲಿಪಿಯಲ್ಲಿ ಓದಲು ಸಿದ್ಧರಿರಬೇಕು. ಗೂಗಲ್‌ಗೆ ಕನ್ನಡವನ್ನು ರೋಮನ್ ಲಿಪಿಗೆ ಪರಿವರ್ತಿಸಲು ಹೇಳಿಕೊಟ್ಟವರು ಯಾರೋ ತಿಳಿಯದು. ಅವರು ಯಾವ ಮಾದರಿಯನ್ನೂ ಅವಲಂಬಿಸಿಲ್ಲ. ಈ ಬಗ್ಗೆ ಮತ್ತೆ ಚರ್ಚಿಸುವುದಿದೆ.

ಈ ಸುದ್ದಿಯನ್ನು ಹೇಳುತ್ತಿರುವುದಕ್ಕೆ ಕಾರಣಗಳಿವೆ. ಕಂಪ್ಯೂಟರ್‌ನಲ್ಲಿ ಕನ್ನಡವನ್ನು ಅಳವಡಿಸುವ ನಮ್ಮ ಹತ್ತಾರು ಪ್ರಯತ್ನಗಳು ನಡೆಯುತ್ತಿರುವಾಗಲೇ ತಂತ್ರಜ್ಞಾನದ ದಾಪುಗಾಲುಗಳು ಒಳದಾರಿಗಳನ್ನು ಕಂಡುಕೊಳ್ಳುತ್ತಿವೆ. ಗೂಗಲ್ ಶೋಧಕ ಕನ್ನಡವನ್ನು ಒಂದು ಆಯ್ಕೆಯ ಭಾಷೆಯನ್ನಾಗಿ ನೀಡಬೇಕೆಂದು ತೀರ್ಮಾನಿಸಿದ್ದೇಕೆ ಎಂಬುದು ಬೇರೆಯೇ ಪ್ರಶ್ನೆ. ಹಾಗೆ ನಿರ್ಧರಿಸಿದ ಮೇಲೆ ಅದನ್ನು ಜಾರಿಗೆ ತರಲು ಇರುವ ಅಡ್ಡಿಗಳನ್ನು ನಿವಾರಿಸಿಕೊಳ್ಳಲು ಹಿಂದೆ ಮುಂದೆ ನೋಡಲಿಲ್ಲ. ಕನ್ನಡದ ಯಾವ ಫಾಂಟ್‌ಗಳನ್ನು ಆಯ್ದುಕೊಳ್ಳಬೇಕೆಂದು ಚಿಂತಿಸುತ್ತ ಕೂರಲಿಲ್ಲ. ಯಾವುದಾದರೊಂದನ್ನು ಆಯ್ದು ಅದನ್ನು ಶೋಧಕದ ಬಳಕೆದಾರರು ಡೌನ್‌ಲೋಡ್ ಮಾಡಿಕೊಳ್ಳಲು ಹೇಳಬಹುದಿತ್ತು. ಆದರೆ ಇದು ಯಾವುದೂ ಬೇಡವೆಂದು ರೋಮನ್ ಲಿಪಿಯನ್ನು ಆಯ್ದುಕೊಂಡುಬಿಟ್ಟಿತು. ಇದೆಲ್ಲದರ ನೀತಿ ಇಷ್ಟೆ. ಭಾಷೆಯ ಬಳಕೆ ಮತ್ತು ತಂತ್ರಜ್ಞಾನದ ಸಂಬಂಧವೀಗ ಹಿಂದಿನಂತಿಲ್ಲ. ತಂತ್ರಜ್ಞಾನದ ತುರ್ತುಗಳು ಈಗ ಭಾಷಾಬಳಕೆಯ ದಿಕ್ಕುಗಳನ್ನು ನಿಯಂತ್ರಿಸುತ್ತಿವೆ; ನಿರ್ದೇಶಿಸುತ್ತಿವೆ. ತಂತ್ರಜ್ಞಾನವನ್ನು ನಮಗೆ ಅವಶ್ಯವಿರುವಂತೆ ಬಳಸುವ ಅವಕಾಶಗಳು ಕನ್ನಡದಂಥ ಭಾಷೆಗಳಿಗೆ ಕಡಿಮೆಯಾಗುತ್ತಿವೆ.

ತಾಳೆಗರಿಗಳಿಂದ ಕಾಗದಕ್ಕೆ, ಕಂಟದಿಂದ ಮುದ್ರಣಕ್ಕೆ ಬದಲಾಗುವ ಸಂದರ್ಭ ಶತಮಾನಗಳ ಹದವನ್ನು ಪಡೆದಿತ್ತು. ಭಾಷಿಕರು-ಅಕ್ಷರಸ್ಥ ಭಾಷಿಕರು-ಹಲವು ತಲೆಮಾರುಗಳವರೆಗೆ ತಂತಮ್ಮ ಆಯ್ಕೆಗಳನ್ನು ಕಾಯ್ದುಕೊಳ್ಳಬಹುದಿತ್ತು. ಅಥವಾ ಬದಲಾವಣೆಯ ಮಂದಗತಿಯಿಂದಾಗಿಯೇ ಪರಿಣಾಮ ಅಷ್ಟೊಂದು ತೀವ್ರವಾಗಿದ್ದಂತೆ ತೋರುವುದಿಲ್ಲ. ಈಗ ಪರಿಸ್ಥಿತಿ ಹಾಗಿಲ್ಲ. ತಂತ್ರಜ್ಞಾನ ಗತಿಯ ತೀವ್ರತೆಯಿಂದ ಒಂದೇ ತಲೆಮಾರಿನಲ್ಲಿ ಆಯ್ಕೆಗಳು ಕಡಿಮೆಯಾಗುತ್ತಿರುವುದನ್ನು ನಾವು ಅನುಭವಿಸುತ್ತಿದ್ದೇವೆ.

ಮೇಲೆ ಹೇಳಿದ ಸಂದರ್ಭವನ್ನೇ ನೋಡೋಣ. ಗೂಗಲ್ ಶೋಧಕ ಈಗ ಆಯ್ದುಕೊಂಡಿರುವ ಭಾಷೆಗಳ ಸಂಖ್ಯೆ ಇಂಗ್ಲಿಶ್ ಸೇರಿದಂತೆ ಅರವತ್ತು. ಇವುಗಳಲ್ಲಿ ಕನ್ನಡವನ್ನೂ ಸೇರಿಸಲು ಗೂಗಲ್ ನಿರ್ವಾಹಕರು ನಿರ್ಧರಿಸುವಲ್ಲಿ ಜಾಗತೀಕರಣದ ಇಂದಿನ ಅವತಾರದ ಪ್ರೇರಣೆಗಳಿವೆ. 'ಇಂಗ್ಲಿಶ್ ಒಂದೇ' ಅಥವಾ 'ಇಂಗ್ಲಿಶ್ ಮಾತ್ರ' ಎಂಬ ನಿಲುವಿನಿಂದ ಮಾರುಕಟ್ಟೆಯು ಮಿತವ್ಯಾಪ್ತಿ ಪಡೆಯುವುದೆ ಸತ್ಯ ಈಗ ಗೋಚರವಾಗತೊಡಗಿದೆ. ಆದ್ದರಿಂದ 'ಇಂಗ್ಲಿಶ್ ಜತೆಗೆ' ಅಥವಾ 'ಇಂಗ್ಲಿಶ್ ಕೂಡಾ' ಎಂಬ ನಿಲುವನ್ನು ಆಶ್ರಯಿಸಬೇಕಾಗಿದೆ. ಇಲ್ಲದಿದ್ದರೆ ಅಮೇರಿಕದ ಯಾವುದೋ ಮೂಲೆಯ ಗೂಗಲ್ ಶೋಧಕದ ನಿರ್ವಾಹಕರಿಗೆ ಕನ್ನಡದ ಬಗ್ಗೆ ಪ್ರೀತಿ ಮೂಡಲು ಯಾವ ಕಾರಣಗಳೂ ಇಲ್ಲ. ಕನ್ನಡವನ್ನು ಒಳಗೊಳ್ಳುವ ನಿರ್ಣಯ ಕೈಗೊಂಡ ಮೇಲೆ ನಿರ್ವಾಹಕರು ತಮ್ಮಿಂದ ತಾವೇ ತಮಗೆ ಬೇಕಾದ ವಿಧಾನವನ್ನು ಆಯ್ದುಕೊಂಡರೂ ಅದಕ್ಕಾಗಿ ಕನ್ನಡಿಗರನ್ನಾಗಲೀ ಕರ್ನಾಟಕದ ಸರಕಾರವನ್ನಾಗಲೀ ಸಮಾಲೋಚನೆಗೆ ಒಳಗು ಮಾಡುವ ಅವಶ್ಯಕತೆಯಿದೆಯೆಂದು ತಿಳಿಯಲಿಲ್ಲ. ಹೀಗಿರುವಾಗ ನಾವೇನು ಮಾಡಬೇಕು?

ನಾವಿಲ್ಲಿ ಕನ್ನಡ ಲಿಪಿಯ ಪ್ರಾಚೀನತೆ, ಸೌಷ್ಠವತೆ, ಚೆಲುವು ಇತ್ಯಾದಿಗಳನ್ನು ಕಾಯ್ದುಕೊಳ್ಳುವ ತರದೂದಿನಲ್ಲಿ ಕಾಲಹರಣ ಮಾಡುತ್ತಿದ್ದೇವೆ. ಇದು ಒಂದು ಹಂತದವರೆಗೆ ಸರಿ. ಆದರೆ ನಮ್ಮ ಹುನ್ನಾರಗಳಲ್ಲಿ ಹಲವು ಬದಲಾವಣೆ ಆಗಬೇಕಿದೆ.; ನಾವು ಯೋಚಿಸುವ ವಿಧಾನದಲ್ಲೇ ಬದಲಾವಣೆ ಆಗಬೇಕಿದೆ. ಏಕೆಂಬುದನ್ನು ನೋಡೋಣ. ಲಿಪಿ ಇಲ್ಲವೇ ಬರವಣಿಗೆಯನ್ನು ಶಾಶ್ವತವೆಂದು ನಂಬುವವರು ನಾವು. ಮಾತಿನ ಅಲ್ಪಾಯುಷ್ಯವನ್ನು ವೃದ್ಧಿಗೊಳಿಸಲು ಬರೆವಣಿಗೆಯನ್ನು ಸಾಧನವಾಗಿ ರೂಪಿಸಿಕೊಂಡಿದ್ದೇವೆಂದು ನಂಬಿದ್ದೇವೆ ಸರಿ. ಆದರೆ ಬರೆವಣಿಗೆಗೆ ಬಳಸಲಾಗುವ ಭಿತ್ತಿಗಳು ಬದಲಾಗುತ್ತಾ ಬಂದಂತೆ ಬರೆವಣಿಗೆಯ ಆಯುಷ್ಯವೂ ಕಡಿಮೆಯಾಗುತ್ತ ಬಂದಿದೆ. ಸುಮ್ಮನೆ ಈ ಉದಾಹರಣೆ ಗಮನಿಸಿ. ಕ್ರಿ.ಶ. 450ರ ಸುಮಾರಿನ ಕಲ್ಲಿನ ಶಾಸನದ ಬರೆವಣಿಗೆ ಇಂದೂ ಕಾಣಲು ಸಿಗುತ್ತದೆ. ಆದರೆ ತಾಳೆಗರಿ ಗ್ರಂಥಗಳಲ್ಲಿ ಆರು ಶತಮಾನಗಳಿಗಿಂತ ಹಿಂದೆ ಹೋಗುವಂತಿಲ್ಲ. ಇನ್ನು ಕಾಗದದ ಮಾತಿಗೆ ಬಂದರೆ ಅರವತ್ತು ಎಪ್ಪತ್ತು ವರ್ಷಗಳ ಹಿಂದಿನ ಪುಸ್ತಕವೂ ಕಾಯ್ದಿರಿಸಿದ ಪ್ರತಿಯಾಗಿದೆ. ಕಳೆದ ಒಂದೆರಡು ದಶಕಗಳಲ್ಲಿ ಬರೆಹದ ಆಯುಷ್ಯ ಮತ್ತಷ್ಟು ಕಡಿಮೆಯಾಗಿದೆ. ಈ ಆಯುಷ್ಯದ ಕೊರತೆಯನ್ನು ಪ್ರತಿಗಳ ಸಂಖ್ಯೆಯನ್ನು ಹೆಚ್ಚಿಸಿಕೊಳ್ಳುವ ಮೂಲಕ ತುಂಬಿಕೊಳ್ಳಲಾಗುತ್ತದೆ.

ಪ್ರತಿಗಳೂ ಬಾಹ್ಯ ಪ್ರತೀಕಗಳು. ಆದರೆ ಈಗ ಬೇಕೆಂದಾಗ ಕಂಪ್ಯೂಟರ್ ತೆರೆಯ ಮೇಲೆ ಪ್ರತಿ ಸಿದ್ಧ. ಆದರೂ ಇದು ಪರ್ಯಾಯವಾಗಿ ಕಾರ್ಯ ನಿರ್ವಹಿಸಬಲ್ಲುದು. ನಮ್ಮ ನೆನಪಿಗೆ ಇರುವ ಅನಿಯಂತ್ರಿತ ಮರೆವು ಕಂಪ್ಯೂಟರಿಗೆ ಇಲ್ಲ; ಇದ್ದರೂ ತೊಡಕುಗಳು ಅನಿಯಂತ್ರಿತ. ಅಂದರೆ ಅಕ್ಷರವೆಂಬುದು ಈಗ ಭ್ರಮೆಯಾಗತೊಡಗಿದೆ. ಕೀಲಿಮಣೆಯ ಕೀಲಿ ಒತ್ತಿದೊಡನೆ ಎಲ್ಲಿಂದಲೋ ಮೂಡಿ, ಮತ್ತೊಂದು ಕೀಲಿ ಒತ್ತಿದಾಗ ಮಾಯವಾಗತೊಡಗಿದೆ. ಈ ಎಲ್ಲ ವಿವರಣೆ ಏಕೆ ಬೇಕಾಯ್ತು? ಲಿಪಿಯ ಬಗೆಗೆ ಬರೆವಣಿಗೆಯ ಬಗೆಗೆ ನಾವು ಯೋಚಿಸುವ ವಿಧಾನ ಬದಲಾಗುವ ಅವಶ್ಯವಿದೆ ಎನ್ನುವುದಕ್ಕೆ ಹಿನ್ನೆಲೆಯಾಗಿ ಈ ಎಲ್ಲ ಮಾತೂ ಬಂದಿವೆ. ಗೂಗಲ್ ಶೋಧಕ ಆಯ್ದ ಮಾರ್ಗ ಒಂದು ಪರ್ಯಾಯ. ಕನ್ನಡವು, ತಂತ್ರಜ್ಞಾನದ ದಾಪುಗಾಲಿನೊಡನೆ ಹೆಜ್ಜೆಯಿಡಬೇಕೆಂದರೆ ಕನ್ನಡವನ್ನು ರೋಮನ್ ಲಿಪಿಯ ಮೂಲಕ ಪ್ರತಿನಿಧಿಸುವ ವಿಧಾನವನ್ನು ಒಂದು ಪರ್ಯಾಯ ಮಾರ್ಗವನ್ನಾಗಿ ಒಪ್ಪಬೇಕು. ಕನ್ನಡ ಲಿಪಿಯ ಜತೆಗೆ ರೋಮನ್ ಲಿಪಿಯನ್ನು ಬಳಸಲು ಮನಸ್ಸನ್ನು ಒಗ್ಗಿಸಬೇಕು. ಇಲ್ಲದಿದ್ದರೆ ನಿಧಾನಗತಿಯ ನಮ್ಮ ಕ್ರಮಗಳು ಆಕಾರ ತಳೆಯುವ ಹೊತ್ತಿಗೆ ತಂತ್ರಜ್ಞಾನ ತನಗೆ ಬೇಕಾದ ಒಳದಾರಿಗಳನ್ನು ರೂಪಿಸಿಕೊಂಡು ಅದನ್ನೇ ರಾಜಮಾರ್ಗವೆಂದು ರೂಪಿಸತೊಡಗಿರುತ್ತದೆ.

# ಮತ್ತೊಂದು ಮಾಹಿತಿಕ್ರಾಂತಿ

ಮೊಗಲ್ ರಾಜ ಜಹಂಗೀರನ ಅಸ್ಥಾನಕ್ಕೆ ಬಂದ ಐರೋಪ್ಯ ರಾಯಭಾರಿ ಮುದ್ರಣಯಂತ್ರವನ್ನು ಕಾಣಿಕೆಯಾಗಿ ನೀಡಿದನಂತೆ. ಆಗ ರಾಜ ಆ ಯಂತ್ರದ ಉಪಯುಕ್ತತೆಯನ್ನು ಮನಗಾಣದೆ ಅದನ್ನು ಮೂಲೆಗುಂಪು ಮಾಡಿದನಂತೆ. ಭಾರತ ಮೊದಲ ಮಾಹಿತಿಕ್ರಾಂತಿಯಲ್ಲಿ ಪಾಲ್ಗೊಳ್ಳುವ ಅವಕಾಶ ಇದರಿಂದ ಕೈತಪ್ಪಿ ಹೋಯಿತೆಂದು ಈಚೆಗೆ ನಾಡಿನ ಮಾಹಿತಿ ತಂತ್ರಜ್ಞರೊಬ್ಬರು ಹೇಳಿದ್ದಾರೆ.

ಮುದ್ರಣದ ಸೌಲಭ್ಯ, ಮಾಹಿತಿಯ ನಕಲು ಪ್ರತಿ ಮಾಡುವುದಕ್ಕೆ ಮತ್ತು ಪ್ರಸಾರಕ್ಕೆ ಅಗಾಧ ಅವಕಾಶಗಳನ್ನು ಸೃಷ್ಟಿಸಿತು. ಕಾಗದದ ಬಳಕೆಯಿಂದಾಗಿ ಪುಸ್ತಕಗಳು, ವಾರ್ತಾಪತ್ರಗಳು ವೇಗವಾಗಿ ಪ್ರತಿಗೊಂಡು ಸಾವಿರಾರು ಮೈಲಿಗಳನ್ನು ಕ್ರಮಿಸಿ ತಲುಪುವುದು ಸಾಧ್ಯವಾಯಿತು. ಭಾರತಕ್ಕೆ ಮುದ್ರಣಯಂತ್ರ ಬಂದದ್ದೇ ಅದು ಆವಿಷ್ಕಾರಗೊಂಡ ಮೂರು ಶತಮಾನಗಳ ಅನಂತರ. 1800ರ ಅನಂತರ ಡಚ್ ಅಧೀನದ ಮಿಶನರಿಗಳು ಕಲ್ಕತ್ತಕ್ಕೆ ಅದನ್ನು ತಂದರು. ಈ ಅವಧಿಯಲ್ಲಿ ಕಾಗದ ಹಸ್ತಪ್ರತಿಗಳು ಸೀಮಿತ ಪ್ರಮಾಣದಲ್ಲಿ ಬಳಕೆಯಾದದ್ದಿದೆ. 19ನೇ ಶತಮಾನದ ಅನಂತರ ತೀವ್ರಗತಿಯಲ್ಲಿ ಮುದ್ರಣ ವ್ಯಾಪ್ತಿಯನ್ನು ಪಡೆಯಿತು. ಭಾರತ ತಡವಾಗಿಯಾದರೂ ಮಾಹಿತಿಕ್ರಾಂತಿಯಲ್ಲಿ ಭಾಗಿಯಾಗತೊಡಗಿತ್ತು.

ಇಪ್ಪತ್ತನೇ ಶತಮಾನದ ಕೊನೆಗೆ ಎರಡನೇ ಅಥವಾ ಮೂರನೇ- ಏಕೆಂದರೆ ಲಿಪೀಕರಣವೆ ನಿಜವಾಗಿ ಮೊದಲ ಮಾಹಿತಿಕ್ರಾಂತಿ. ಮುದ್ರಣವೇನಿದ್ದರೂ ಎರಡನೆಯದು-ಮಾಹಿತಿಕ್ರಾಂತಿಯ ಮಾತು ಕೇಳಿಬರುತ್ತಿದೆ. ಗಣಕಗಳು ಮತ್ತು ಉಪಗ್ರಹಗಳ ನೆರವಿನ ಜಾಗತಿಕ ಸಂಪರ್ಕ ವ್ಯವಸ್ಥೆಗಳು ಒಗ್ಗೂಡಿ ರೂಪಿಸಿರುವ ಅಂತರ್ಜಾಲ (ಹೀಗೆಂದು ಇಂಟರ್‌ನೆಟ್ ಪದವನ್ನು ಅನುವಾದಿಸಿಕೊಳ್ಳಲಾಗಿದೆ)ದಿಂದಾಗಿ ಈ ಮಾಹಿತಿಕ್ರಾಂತಿ ಸಾಧ್ಯವಾಗಿದೆ. ಮಾಹಿತಿಯು ಅತಿಕ್ಷಿಪ್ರ ವೇಗದಲ್ಲಿ ಅತಿ ದೂರದವರೆಗೆ ಏಕಕಾಲಕ್ಕೆ ಅಸಂಖ್ಯ ಮಂದಿಯನ್ನು ತಲುಪುವ ಅವಕಾಶ ಈ ಅಂತರ್ಜಾಲದಿಂದ ಒದಗಿಬಂದಿದೆ. ಮೇಲೆ ಹೇಳಿದ ಮಾಹಿತಿ ತಂತ್ರಜ್ಞಾನಿಗಳು, ಜಹಂಗೀರ್ ಮಾಡಿದ ತಪ್ಪನ್ನು ಭಾರತ ಈಗ ಮತ್ತೆ ಮಾಡಬಾರದೆಂದು ಈಗ ಸಂಭವಿಸುತ್ತಿರುವ ಮಾಹಿತಿ ಕ್ರಾಂತಿಯಲ್ಲಿ ಭಾರತ ಕೂಡಲೇ ಭಾಗಿಯಾಗಲು ಕರೆಯುತ್ತಿದ್ದಾರೆ.

ಮುದ್ರಣದಿಂದ ಒದಗಿದ ಎರಡು ಸೌಲಭ್ಯಗಳನ್ನು ಪರಿಶೀಲಿಸೋಣ.

1. ಈವರೆಗೆ ಬೇರೆ ಮಾಧ್ಯಮಗಳಲ್ಲಿ ಲಿಖಿತಗೊಂಡು ಲಭ್ಯವಿದ್ದ ಬರೆಹವನ್ನು ಕಾಗದದ ಮೇಲೆ ತರುವುದು.

2. ಮೌಖಿಕವಾಗಿದ್ದ ಭಾಷಾಸಂಕಥನಗಳನ್ನು ಲಿಖಿತ ರೂಪಕ್ಕೆ ತರುತ್ತಲೇ ಮುದ್ರಣದ ವ್ಯಾಪ್ತಿಗೆ ಒಳಪಡಿಸುವುದು. ಕನ್ನಡದ ಮಟ್ಟಿಗೆ ಹೇಳುವುದಾದರೆ ಇದಿನ್ನೂ ಮುಗಿದಿಲ್ಲದ ಕ್ರಾಂತಿ. ಇನ್ನೂ ಅಸಂಖ್ಯಾತ ಹಸ್ತಪ್ರತಿಗಳು ಮುದ್ರಿತ ರೂಪಕ್ಕೆ ರವಾನೆಯಾಗಿಲ್ಲ. ಮೌಖಿಕ ಸಂಕಥನಗಳು ಹೀಗೆ ಸಾಕಷ್ಟು ದಾಖಲೆಗೆ ಸಿಗದೇ ಉಳಿದಿವೆ. ಇದು ಹಾಗಿರಲಿ.

ಮುದ್ರಣ ಕನ್ನಡ ಬರವಣಿಗೆಗೆ ತಂದ ಪರಿವರ್ತನೆಯ ಸ್ವರೂಪವನ್ನು ನಾವಿನ್ನೂ ಪೂರ್ಣವಾಗಿ ಗ್ರಹಿಸಿಲ್ಲ. ಮುಖ್ಯವಾದ ಕೆಲವು ಸಂಗತಿಗಳನ್ನು ಪರಿಶೀಲನೆಗಾಗಿ ಕೈಗೆತ್ತಿಕೊಳ್ಳೋಣ. ಮುದ್ರಣದಿಂದಾಗಿ ಒಂದು ಕೃತಿಯ ಬಹುಪ್ರತಿಗಳು ತ್ವರಿತಗತಿಯಲ್ಲಿ ಲಭಿಸುತ್ತವೆ. ಹಾಗೆಯೇ ಹೆಚ್ಚು ಪ್ರಮಾಣದ ಬರೆಹ ಪ್ರಸಾರಕ್ಕೆ ಲಭಿಸುತ್ತದೆ. ಅಂದರೆ ಹಸ್ತಪ್ರತಿಗಳ ರೂಪದಲ್ಲೇ ಉಳಿಯದೆ ಬೇಗನೆ ಮುದ್ರಣಗೊಳ್ಳುವ ಕೃತಿಗಳ ಸಂಖ್ಯೆಯೂ ಹೆಚ್ಚುತ್ತದೆ. ಈ ಪ್ರಮಾಣ ಬಾಹುಳ್ಯದಿಂದ ಬರೆಹ ಹೆಚ್ಚು ಸಾಮಾಜಿಕ ಪ್ರಸರಣವನ್ನು ಪಡೆಯಿತೆಂದು ತಿಳಿಯಲು ಅಡ್ಡಿಯಿಲ್ಲ. ಆದರೆ ವಾಸ್ತವವಾಗಿ ಬೇರೊಂದು ಸಂಗತಿ ಸಂಭವಿಸುತ್ತಿರುವುದು ನಮ್ಮ ಗಮನವನ್ನು ಸೆಳೆಯಬೇಕು. ಮುದ್ರಣವು, ಕೃತಿಸಮುದಾಯವನ್ನು ವಿಸ್ತರಿಸಿದಷ್ಟೂ ಅವುಗಳ ಜೀವಿತಾವಧಿ ಕಡಿಮೆಯಾಗುತ್ತದೆ. ಅಂದರೆ ಕೃತಿಗಳ ಸಂಖ್ಯೆಗೂ ಪುಸ್ತಕಗಳ ಜೀವಿತಾವಧಿಗೂ ವಿಲೋಮ ಅನುಪಾತದ ಸಂಬಂಧವಿದ್ದಂತಿದೆ. ಈ ಅಂಶವನ್ನು ಕೆಲವು ಸರಳ ನಿದರ್ಶನಗಳ ಮೂಲಕ ತಿಳಿಯಲು ಯತ್ನಿಸೋಣ. ಹತ್ತೊಂಬತ್ತನೇ ಶತಮಾನದ ಎಷ್ಟು ಮುದ್ರಿತ ಕೃತಿಗಳು ಈಗ ಲಭ್ಯ? ಇಪ್ಪತ್ತನೇ ಶತಮಾನದ ನೂರಾರು ಕೃತಿಗಳು ಹತ್ತಿಪ್ಪತ್ತು ವರ್ಷಗಳಲ್ಲಿ ಕೇವಲ ಹೆಸರುಗಳಾಗಿ ಉಳಿಯುತ್ತವೆ. ಹೆಚ್ಚೆಂದರೆ ಆರ್ಕಿವ್ಸ್‌ಗಳ ಧೂಳುಕೋಣೆ ಸೇರುತ್ತಿವೆ. ಮುದ್ರಣ ಪೂರ್ವದ ದಾಖಲೆಯ ಮಾಧ್ಯಮದ ಹಸ್ತಪ್ರತಿಗಳು ಸಾವಿರಾರು ಈಗಲೂ ಲಭಿಸುತ್ತಿವೆ. ಮುದ್ರಣದ ಅಥವಾ ಬರೆಹದ ಸೋಂಕಿಲ್ಲದ ಮೌಖಿಕ ಸಂಕಥನಗಳು ಇನ್ನು ಉಳಿದಿವೆ. ತಾಳೆಗರಿಯ ಗ್ರಂಥವೊಂದು ಯಾವುದೇ ವಿಶೇಷ ಸಂರಕ್ಷಣೆಯ ಕ್ರಮಗಳಿಲ್ಲದೆಯೂ ಎರಡು ಮೂರು ಶತಮಾನದ ಆಯಸ್ಸು ಪಡೆದಿದ್ದರೆ ಮುದ್ರಿತ ಪುಸ್ತಕದ ಕಾಗದಕ್ಕೆ ಅರ್ಧಶತಮಾನದ ಆಯಸ್ಸೂ ದುರ್ಲಭ. ಇದಲ್ಲದೆ ಕೃತಿ ಸಂಖ್ಯೆಯಲ್ಲಿ ಹೆಚ್ಚಳವಾದಷ್ಟೂ ಅವುಗಳನ್ನು ಕಡಿಮೆ ಕಾಲದಲ್ಲಿ ನಿರಾಕರಿಸುವುದು ಓದುಸಂಸ್ಕೃತಿಯ ಅಥವಾ ಮಾಹಿತಿ ಕ್ರಾಂತಿಯ ಲಕ್ಷಣವೂ ಆಗಿರಬಹುದು.

ಈ ಮೇಲಿನ ವಿವರಣೆ ನೀಡಿದ್ದು ಬರೆಹ/ಮುದ್ರಣವನ್ನು ವಿರೋಧಿಸುವ, ನಿರಾಕರಿಸುವ ಉದ್ದೇಶದಿಂದ ಅಲ್ಲ. ನಾವು ಯೋಚಿಸುವ ಕ್ರಮದಲ್ಲಿ ಇರುವ ಕೆಲವು ತೊಡಕುಗಳನ್ನು ನಿವಾರಿಸಿಕೊಳ್ಳಬೇಕಾಗಿದೆ. ಬರೆಹ ಮತ್ತು ಮುದ್ರಣಗಳು ಮಾತಿಗೆ ಹೆಚ್ಚು ಆಯಸ್ಸನ್ನು, ವ್ಯಾಪಕತೆಯನ್ನು ತಂದುಕೊಡುತ್ತವೆ ಎಂದು ವಾದಿಸುವುದನ್ನು ಕಂಡಿದ್ದೇವೆ. ಮುದ್ರಣಗೊಂಡದ್ದು ಹೆಚ್ಚು ಪ್ರಮಾಣೀಕೃತ ಆಕಾರ ಪಡೆದು ಸಂವಹನಕ್ಕೆ

ಅನುಕೂಲಕಾರಿಯೆಂದು ತಿಳಿಯುತ್ತೇವೆ. ಮಾಹಿತಿಯ ಕ್ಷಿಪ್ರಲಭ್ಯತೆ ಮತ್ತು ವ್ಯಾಪಕ ಪ್ರಸಾರ ಇವು ಮುದ್ರಣದ ಗುಣವಾದರೆ ಮಾಹಿತಿಯ ಕ್ಷಿಪ್ರಮೃತಿ ಅದರ ಮಿತಿಯಾಗಿದೆ. ಇದು ಕಾಗದವೆಂಬ ಭೌತಿಕ ವಸ್ತುವಿನ ಲಕ್ಷಣವನ್ನು ಮಾತ್ರ ಅವಲಂಬಿಸಿದ ಮಿತಿಯಲ್ಲ ಮುದ್ರಣವೆಂಬ ತಾಂತ್ರಿಕ ವಿಧಾನಕ್ಕೇ ಇರುವ ಮಿತಿಯೆಂದು ತಿಳಿಯಬೇಕು.

ಈಗ ಎದುರಾಗುತ್ತಿರುವ ಮೂರನೆಯ ಮಾಹಿತಿಕ್ರಾಂತಿಗೆ ಬರೋಣ. ಇಲ್ಲಿ ಮಾಹಿತಿಯ ಪ್ರಸರಣ ವೇಗ ಮತ್ತು ವ್ಯಾಪ್ತಿ ನಾವು ಕಲ್ಪಿಸಲೂ ಸಾಧ್ಯವಾಗದಷ್ಟು ಹೆಚ್ಚಿದೆ. ಅಂತರ್ಜಾಲದಲ್ಲಿ ಮಾಹಿತಿ ಬರೆಹವಾಗಿ, ಮಾತಾಗಿ, ಚಿತ್ರವಾಗಿ ಲಭಿಸುತ್ತದೆ. ಏಕಕಾಲಕ್ಕೆ ಎಷ್ಟು ಜನರಿಗಾದರೂ ಜಗತ್ತಿನ ಯಾವ ಮೂಲೆಯಲ್ಲಾದರೂ ಈ ಮಾಹಿತಿ ಲಭ್ಯ. ಮೊದಲ ಕೆಲವು ವರ್ಷ ಈ ಜಾಲದಲ್ಲಿ ಇಂಗ್ಲಿಶ್ ತನ್ನ ಯಾಜಮಾನ್ಯವನ್ನು ಉಳಿಸಿಕೊಂಡಿತ್ತು. ಈಗ ಜಗತ್ತಿನ ನೂರಾರು ಭಾಷೆಗಳು ಓಟದಲ್ಲಿ ಸೇರಿವೆ.

ಅಂತರ್ಜಾಲದ ಎಲ್ಲ ತಾಂತ್ರಿಕ ಅಂಶಗಳನ್ನೂ ನಾವಿಲ್ಲಿ ಪರಿಗಣಿಸುವುದು ಸಾಧ್ಯವಾಗದು. ಕಾಗದವನ್ನು ನಿರಾಕರಿಸುವ ಈ ಮಾಹಿತಿ ಜಾಲದಲ್ಲಿ ಬರೆಹ ಒಂದು ಚಿತ್ರ ಮಾತ್ರ. ಗಣಕದ ತಾಂತ್ರಿಕತೆ ಈ ಚಿತ್ರವನ್ನು ತನ್ನಲ್ಲಿ ಇರಿಸಿಕೊಂಡು ಕೇಳಿದಾಗ ಒದಗಿಸುತ್ತದೆ. ಗಣಕದ ನೆನಪನ್ನು ಈ ಚಿತ್ರಗಳು ಬೇಡುತ್ತವೆ. ಹಾಗಾಗಿ ನೆನಪು ಹೆಚ್ಚು ತುಟ್ಟಿಯಾಗುತ್ತದೆ. ಅಂದರೆ ಅತಿ ಕಡಿಮೆ ನೆನಪಿನಲ್ಲಿ ಅತಿ ಹೆಚ್ಚು ಉಪಯುಕ್ತ ಮಾಹಿತಿಯನ್ನು ತುಂಬುವುದು ಮುಖ್ಯವಾಗುತ್ತದೆ. ಅಲ್ಲದಿದ್ದರೆ ಗಣಕದ ನೆನಪಿನ ದುಂದುವೆಚ್ಚವಾಗುತ್ತದೆ. ಇದರಿಂದಾಗಿ ಬರುವ ದಿನಗಳಲ್ಲಿ ನಮ್ಮ ಬರವಣಿಗೆಯ ಲಕ್ಷಣಗಳನ್ನು ಪರಿವರ್ತಿಸಬೇಕಾಗುತ್ತದೆ. ಮಾಹಿತಿಯ ತುಣುಕುಗಳು ಕ್ಲುಪ್ತ ಗಾತ್ರದಲ್ಲಿದ್ದು ಸಂವಹನ ಸುಭಗತೆಯನ್ನು ಉಳಿಸಿಕೊಳ್ಳಬೇಕಾಗುತ್ತದೆ.

ಅಂತರ್ಜಾಲದಲ್ಲಿ ಗಣಕದ ನೆನಪಿಗೆ ಹೆಚ್ಚು ಬೇಡಿಕೆ ಇರುವುದರಿಂದ ಬೇಡದ ಮಾಹಿತಿಯನ್ನು ಕಸದ ಬುಟ್ಟಿಗೆ ಹಾಕುವ ಪ್ರಕ್ರಿಯೆಯೂ ತೀವ್ರಗತಿಯಲ್ಲಿ ನಡೆಯುವುದು ಅನಿವಾರ್ಯ. ಇದರಿಂದಾಗಿ ಮಾಹಿತಿಯ ಹುಟ್ಟು ಮತ್ತು ಸಾವುಗಳ ನಡುವೆ ಅಂತರ ತೀವ್ರವಾಗಿ ಕುಗ್ಗತೊಡಗುತ್ತದೆ. ಇದೆಲ್ಲದರ ಪರಿಣಾಮ ಬೇರೇನೇ ಇದ್ದರೂ ಬರೆಹಕ್ಕಿರುವ ಚಿರಕಾಲ ಜೀವಿತದ ಭ್ರಮೆ ಮತ್ತಷ್ಟು ನಿರಸನಗೊಳ್ಳಲಿದೆ.

ಅಂತರ್ಜಾಲದಲ್ಲಿ ಬಳಸುವ ಪರಿಭಾಷೆಯೂ ಕುತೂಹಲಕಾರಿ. ಜಾಗಗಳನ್ನು (ವೆಬ್‌ಸೈಟ್) ಕಾದಿರಿಸುವ ಮಾತಾಡುತ್ತಾರೆ. ಈ ಜಾಗ ವಾಸ್ತವವಾಗಿ ಬೃಹತ್ ಗಣಕದ ನೆನಪಿನ ಒಂದು ಅಂಶ (Kb, Mb, Gbಗಳಲ್ಲಿ ಅಳೆಯುತ್ತಾರೆ.) ಇದು ಹಣವನ್ನು ಬೇಡುವ, ಹಣ ತೊಡಗಿಸುವ ಉದ್ಯಮ, ಆದ್ದರಿಂದ ಮೇಲಾಟ ಸಹಜ. ಈ ಎಲ್ಲ ಸಂಕೀರ್ಣ ಸ್ಥಿತಿಯಲ್ಲಿ ಕನ್ನಡವನ್ನು ಅಂತರ್ಜಾಲದಲ್ಲಿ ಈಗ ಕೆಲವು ವಾರ್ತಾಪತ್ರಿಕೆಗಳ ಮೂಲಕ, ಸ್ವತಹ ವೆಬ್‌ಸೈಟ್‌ಗಳಲ್ಲಿ ಕಾಣಿಸುತ್ತಿದ್ದಾರೆ. ಏನೇ ಆದರೂ ಇದು ಒಂದು ಸಮಾನಂತರ ಮಾಹಿತಿ ಪ್ರಸರಣವಾಗಿ ನಮಗೆ ದೊರಕಬಹುದು. ವಾಸ್ತವವಾಗಿ

ಇನ್ನೂ ಮುಗಿಯದಿರುವ ಮುದ್ರಣ ಕ್ರಾಂತಿಯೇ ನಮಗಿನ್ನು ಮುಖ್ಯ ದಾರಿಯೆಂದು ತೋರುತ್ತದೆ. ಇದರಲ್ಲಿ ಇರುವ ಮಾಹಿತಿಯ ಕ್ಷಿಪ್ರಗತಿಯ ಮಾಯವಾಗುವಿಕೆಯನ್ನು ಹೇಗೆ ನಿಭಾಯಿಸಬೇಕೆಂಬುದು ಸದ್ಯ ನಾವು ಎದುರಿಸ ಬೇಕಾಗಿರುವ ಸಮಸ್ಯೆ. ಇದನ್ನು ಬಳಸುವುದು ಅವಶ್ಯವಾದರೆ ಈ ದಿಕ್ಕಿನಲ್ಲಿ ಆಲೋಚಿಸಬೇಕಾದ ಅಗತ್ಯ ಎಂದಿಗಿಂತ ಈಗ ಹೆಚ್ಚಾಗಿದೆ.

# ಭಾಷೆಯಲ್ಲಿ ಬದಲಾವಣೆ

ಭಾಷೆಯು ನಿರಂತರವಾಗಿ ಬದಲಾಗುತ್ತಿರುತ್ತದೆ ಎಂದು ಭಾಷಾಶಾಸ್ತ್ರದ ಮೊದಲ ಪಾಠಗಳು ನಮಗೆ ತಿಳಿಸಿಕೊಡುತ್ತವೆ. ಧ್ವನಿಯಲ್ಲಿ, ಪದರಚನೆಯಲ್ಲಿ, ಅರ್ಥರಚನೆಯಲ್ಲಿ, ವಾಕ್ಯರಚನೆಯಲ್ಲಿ ಆಗುವ ಬದಲಾವಣೆಗಳನ್ನು ನಮಗೆ ಭಾಷಾಚರಿತ್ರೆಗಳು ತೋರಿಸಿಕೊಡುತ್ತವೆ. ಉದಾ: ಹಳಗನ್ನಡದ ಪದಾದಿಯ ಪಕಾರ ಹಕಾರವಾದದ್ದು, ಕನ್ನಡದ ವಿಭಕ್ತಿ ಪ್ರತ್ಯಯ ಉಳ್ ಎಂದಿದ್ದು ಒಳ್ ಆದದ್ದು, ಸಬಿಂದುಕ ಪದಗಳು ಅಬಿಂದುಕಗಳಾದದ್ದು (ತೋಂಟ>ತೋಟ) ಇವೇ ಮುಂತಾದವನ್ನು ಕನ್ನಡ ಭಾಷಾಚರಿತ್ರೆಯನ್ನು ಬಲ್ಲವರು ತಿಳಿದಿದ್ದಾರೆ.

ಸಾಮಾನ್ಯವಾಗಿ ಈ ಬದಲಾವಣೆಗಳನ್ನು ವರ್ಣಿಸಲಾಗುತ್ತದೆ. ಆದರೆ ಆ ಬದಲಾವಣೆಗಳು ಏಕೆ ಉಂಟಾದವು ಎಂಬುದನ್ನು ವಿವರಿಸಲು ನಮ್ಮ ಭಾಷಾಚರಿತ್ರೆಗಳು ಮನಸ್ಸು ಮಾಡುವುದಿಲ್ಲ. ಪದಾದಿಯ ಪಕಾರ ಹಕಾರವಾಯಿತು ಎಂದು ಹೇಳುವುದು ಒಂದು ಪ್ರಕ್ರಿಯೆಯನ್ನು ವರ್ಣಿಸಿದಂತೆ. ಆದರೆ ಅದರ ಕಾರಣಮೀಮಾಂಸೆಯನ್ನು ಮಾಡಿದಂತಲ್ಲ. ಈ ಬದಲಾವಣೆಯು ನಮ್ಮಲ್ಲಿ ಕೆಲವು ಪ್ರಶ್ನೆಗಳಿಗೆ ಕಾರಣವಾಗುತ್ತದೆ.

1. ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ಮತ್ತು ನಿರ್ದಿಷ್ಟ ಪ್ರದೇಶದಲ್ಲಿ ಮಾತ್ರ ಈ ಬದಲಾವಣೆ ಆಗಲು ಕಾರಣಗಳೇನು? ಉದಾ: ಪದಾಂತ್ಯದ ನಾಮಪದಗಳ ಎಕಾರ ಕನ್ನಡದ ಕೆಲವು ಪ್ರಭೇದಗಳಲ್ಲಿ ಮಾತ್ರ ಇಕಾರವಾಗುತ್ತದೆ (ಮನೆ>ಮನಿ, ಕತ್ತೆ>ಕತ್ತಿ) ಉಳಿದೆಡೆಗಳಲ್ಲಿ ಈ ಬದಲಾವಣೆ ಕಾಣಿಸಿಕೊಳ್ಳುವುದಿಲ್ಲ. ಬದಲಾದರೂ ಅದು ಬೇರೆ ಧ್ವನಿಯಾಗಿ ಕಾಣಿಸಿಕೊಳ್ಳುತ್ತದೆ, ಇವೇ ಪದಗಳು ಕನ್ನಡದ ಇನ್ನೊಂದು ಪ್ರಭೇದದಲ್ಲಿ ಅಕಾರಾಂತವಾಗುತ್ತವೆ. (ತಲೆ>ತಲ) ಏಕೆ ಹೀಗೆ?

2. ಪ್>ಹ್ ಬದಲಾವಣೆಯನ್ನೇ ನೋಡೋಣ. ಸ್ವರಗಳ ನಡುವೆ ಬರುವ ಪಕಾರ ಹಕಾರವಾಗುವ ಬದಲು ವಕಾರವಾಗುವುದನ್ನು ನೋಡುತ್ತೇವೆ. ಹೀಗೆ ಒಂದೇ ಧ್ವನಿ ಭಿನ್ನ ಪರಿಸರದಲ್ಲಿ ಎರಡು ರೀತಿಯಲ್ಲಿ ಬದಲಾದುದೇಕೇ?

3. ಪ್>ಹ್ ವ್ಯತ್ಯಾಸ ಕನ್ನಡದ ಪದಗಳಿಗೆ ಮಾತ್ರ ಅನ್ವಯಿಸುತ್ತದೆ. ಸಂಸ್ಕೃತದಿಂದ ಬಂದು ಸೇರಿದ ಪಕಾರಾದಿಯುಳ್ಳ ಪದಗಳಿಗೆ ಈ ಬದಲಾವಣೆ ವ್ಯಾಪಿಸಿಲ್ಲ. ಇದು ಏಕೆ? ಈ ಎಲ್ಲ ಪ್ರಶ್ನೆಗಳಿಗೆ ನಾವು ಉತ್ತರಗಳನ್ನು ಕಂಡುಕೊಂಡಿಲ್ಲ.

ಈ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳುವುದು ಅವಶ್ಯ. ಏಕೆಂದರೆ ಆ ಮೂಲಕ ನಾವು ವರ್ಣಿಸುತ್ತಿರುವ ವ್ಯತ್ಯಾಸಗಳು ಕೇವಲ ನಮ್ಮ ಭಾಷೆಗೆ ಮಾತ್ರ ಸೀಮಿತವಾದವೋ ಅಥವಾ ಎಲ್ಲ ಭಾಷೆಗಳಲ್ಲೂ ಕಂಡುಬರುವ ಸಾಮಾನ್ಯ ಪ್ರವೃತ್ತಿಯನ್ನು ತೋರಿಸುತ್ತವೆಯೋ ಎಂಬುದನ್ನು ತಿಳಿದುಕೊಳ್ಳಬಹುದು. ಪ್ರತಿ ಭಾಷೆಯಲ್ಲೂ ವಿವಿಧ ಬಗೆಯ ಭಾಷಾ ಬದಲಾವಣೆಗಳು ಕಂಡುಬಂದರೂ ಆ ಬದಲಾವಣೆಗಳ ಹಿಂದೆ ಇರುವ ಸಾಮಾನ್ಯ ತತ್ತ್ವಗಳು ನಮ್ಮ ಭಾಷೆಗೆ ಮಾತ್ರ ಸೀಮಿತವಾಗಿರುವುದಿಲ್ಲ. ಅಂದರೆ ನಮ್ಮ ಭಾಷೆಯಲ್ಲಿ ನಾವು ಕಂಡುಕೊಳ್ಳುವ ವ್ಯತ್ಯಾಸಗಳು ಜಗತ್ತಿನ ಬೇರೆ ಹಲವು ಭಾಷೆಗಳಲ್ಲೂ ಕಂಡುಬರುವ ಸಾಧ್ಯತೆಗಳಿರುತ್ತವೆ.

ಧ್ವನಿವ್ಯತ್ಯಾಸಕ್ಕೆ ಸಂಬಂಧಿಸಿದಂತೆ ಈ ಮೇಲಿನ ಮಾತನ್ನು ಸ್ವಲ್ಪ ವಿವರಿಸಿಕೊಳ್ಳೋಣ. ಒಂದು ಧ್ವನಿ ಇನ್ನೊಂದು ಧ್ವನಿಯಾಗುವುದೆಂದರೇನು? ಪ್ರತಿಧ್ವನಿಯು ಹಲವಾರು ಉಚ್ಚಾರಣಾ ಲಕ್ಷಣಗಳ ಮೊತ್ತ. ಈ ಲಕ್ಷಣಗಳಲ್ಲಿ ಒಂದೋ ಎರಡೋ ಬದಲಾದರೆ ಅದು ಬೇರೆಯೇ ಧ್ವನಿಯಾಗಿಬಿಡುತ್ತದೆ. ಅಂದರೆ ಧ್ವನಿವ್ಯತ್ಯಾಸವೆಂದರೆ ಈ ಲಕ್ಷಣಗುಚ್ಛದಲ್ಲಿ ಅಗುವ ಬದಲಾವಣೆ ಎಂದು ತಿಳಿಯಬೇಕಾಗುತ್ತದೆ. ಮೊದಲು ಇದ್ದ ಧ್ವನಿಗೂ ಬದಲಾದ ಧ್ವನಿಗೂ ಇರುವ ಲಕ್ಷಣಗುಚ್ಛದಲ್ಲಿ ಹಲವು ಸಮಾನ ಅಂಶಗಳಿರುತ್ತವೆ. ಅವುಗಳಲ್ಲಿ ಒಂದೆರಡು ಬದಲಾವಣೆಗಳಿರುತ್ತವೆ. ಈ ವ್ಯತ್ಯಾಸದ ಲಕ್ಷಣಗಳು ಬದಲಾದಾಗ ಧ್ವನಿವ್ಯತ್ಯಾಸವಾಯಿತು ಎನ್ನುತ್ತೇವೆ. ಹಳಗನ್ನಡದ ೞಕಾರ ಳಕಾರವಾದುದನ್ನೇ ಗಮನಿಸಿ. ಈ ಎರಡೂ ಧ್ವನಿಗಳ ಉಚ್ಚಾರಣೆಯ ವಿಧಾನದಲ್ಲಿ ಮಾತ್ರ ವ್ಯತ್ಯಾಸವಿದೆ. ಉಳಿದಂತೆ ಅವೆರಡೂ ಸಮಾನ ಲಕ್ಷಣಗಳನ್ನು ಹೊಂದಿವೆ. ೞಕಾರವು ಘರ್ಷ ಧ್ವನಿಯಾದರೆ ಳಕಾರವು ಪಾರ್ಶ್ವಿಕ ಧ್ವನಿಯಾಗಿದೆ. ೞಕಾರದ ಉಚ್ಚಾರಣೆಯ ವಿಧಾನದಲ್ಲಿ ಬದಲಾವಣೆಯಾದರೆ ಅದು ಳಕಾರವಾಗಿಬಿಡುತ್ತದೆ. ಆದ್ದರಿಂದ ನಾವು ಒಂದು ನಿಯಮವನ್ನು ಮಾಡಿಕೊಳ್ಳುವುದು ಸಾಧ್ಯ. ಒಂದು ಧ್ವನಿ ಇನ್ನೊಂದು ಧ್ವನಿಯಾಗಿ ಬದಲಾಗಬೇಕಾದರೆ ಅವೆರಡರ ನಡುವೆ ಹಲವು ಸಾಮಾನ್ಯ ಲಕ್ಷಣಗಳಿರಬೇಕು. ಅಥವಾ ಸಾಮಾನ್ಯ ಲಕ್ಷಣಗಳಿಂದ ಎರಡು ಧ್ವನಿಗಳು ಒಂದು ಇನ್ನೊಂದಾಗಿ ಬದಲಾಗುವುದು ಸಾಧ್ಯವಿಲ್ಲ. ರಕಾರ ಮತ್ತು ಪಕಾರಗಳನ್ನು ಗಮನಿಸೋಣ. ಇವೆರಡರ ನಡುವೆ ಲಕ್ಷಣ ಸಮಾನತೆ ಎನ್ನುವುದು ಇಲ್ಲವೇ ಇಲ್ಲ. ಆದ್ದರಿಂದ ಯಾವುದೇ ಭಾಷೆಯಲ್ಲಾದರೂ ರಕಾರ ಪಕಾರವಾಗುವುದಾಗಲೀ ಪಕಾರ ರಕಾರವಾಗುವುದಾಗಲೀ ಸಾಧ್ಯವಿಲ್ಲ. ಈ ರೀತಿ ಧ್ವನಿ ಬದಲಾವಣೆಯ ನಿಯಂತ್ರಣವನ್ನು ಧ್ವನಿ ಬದಲಾವಣೆಯ ಸಹಜತೆ ಎಂದು ಕರೆಯಬಹುದು.

ಈ ಅಂಶಕ್ಕೆ ಪೂರಕವಾಗಿ ಇನ್ನೊಂದು ಸಂಗತಿಯನ್ನು ಈಗ ನೋಡೋಣ. ಭಾಷಾವ್ಯತ್ಯಾಸಗಳನ್ನು ವಿವರಿಸುವವರು ಅದನ್ನು ಎರಡು ಕಾಲಘಟ್ಟಗಳ ಅಂತರದಲ್ಲಿ ಆದ ಬದಲಾವಣೆ ಎಂದು ವಿವರಿಸಬಯಸುತ್ತಾರೆ. ಯಾವುದೋ ಒಂದು ಕಾಲಘಟ್ಟದಿಂದ ಮೊದಲಾಗಿ ಇನ್ನೊಂದು ಕಾಲಘಟ್ಟದಲ್ಲಿ ಮುಗಿತಾಯಗೊಂಡ ಬದಲಾವಣೆ ಎಂದು ಗುರುತಿಸುವುದು ಒಂದು ಸಾಮಾನ್ಯ ಪದ್ಧತಿ. ಆದರೆ ಭಾಷಾವ್ಯತ್ಯಾಸವೆಂಬುದು

ಸಂಪೂರ್ಣ ಪರಿವರ್ತನೆಯಾದ ಮೇಲೆ ಮಾತ್ರ ಗಮನಕ್ಕೆ ಬರುವಂತಹುದೆಂದು ತಿಳಿಯಬೇಕಿಲ್ಲ. ಭಾಷಾಬದಲಾವಣೆ ನಡೆಯುವುದುಂಟು. ಆದರೆ ಭಾಷೆಯಲ್ಲಿ ನಡೆಯುವ ಬದಲಾವಣೆಯನ್ನು ದಿನದಿನದ ಭಾಷೆಯನ್ನು ಪರಿಶೀಲಿಸುವುದರಿಂದಲೂ ಗುರುತಿಸಬಹುದು ಎಂಬುದು ಈಚಿನ ತಿಳುವಳಿಕೆ. ಅಂದರೆ ನಮ್ಮ ಗ್ರಹಿಕೆಗೆ ಬರುವ ಭಾಷಾವ್ಯತ್ಯಯಗಳು ಯಾವುದೋ ಒಂದು ನಡೆಯಲಿರುವ ಭಾಷಾಬದಲಾವಣೆಯನ್ನು ಸೂಚಿಸುತ್ತಿರುವುದು ಸಾಧ್ಯ. ಉದಾಹರಣೆಗೆ ಕನ್ನಡದಲ್ಲಿ ಮಹಾಪ್ರಾಣಗಳನ್ನು ಸಾಮಾನ್ಯವಾಗಿ ಉಚ್ಚಾರಣೆಯಲ್ಲಿ ಬಿಟ್ಟುಕೊಡುತ್ತಿರುವುದನ್ನು ಗಮನಿಸಿ. ಇದನ್ನು ಸಾಮಾಜಿಕ ಭಾಷಾಶಾಸ್ತ್ರಜ್ಞರು ಸಾಮಾಜಿಕ ಸನ್ನಿವೇಶವನ್ನು ಸೂಚಿಸಲು ನಿದರ್ಶನವನ್ನಾಗಿ ನೀಡುತ್ತಾರೆ. ಅಂದರೆ ಬ್ರಾಹ್ಮಣ-ಅಬ್ರಾಹ್ಮಣ ಪ್ರಬೇಧಗಳನ್ನು ಸೂಚಿಸುವ ಅಂಶವಾಗಿ ಈ ಮಹಾಪ್ರಾಣ ಲೋಪವನ್ನು ಗುರುತಿಸುತ್ತಾರೆ. ಆದರೆ ಕನ್ನಡ ಭಾಷೆಯಲ್ಲಿ ನಡೆಯುತ್ತಿರುವ ಒಂದು ಭಾಷಾವ್ಯತ್ಯಾಸವನ್ನು ಇದು ಸೂಚಿಸುತ್ತಲೂ ಇರುವುದು ಸಾಧ್ಯ. ಅಂದರೆ ನಾವು ಭಾಷಾವ್ಯತ್ಯಯಗಳೆಂದು ಗುರುತಿಸುವ ಅಂಶಗಳು ಭಾಷೆಯಲ್ಲಿ ನಡೆಯುತ್ತಿರುವ ಬದಲಾವಣೆಯ ಸೂಚಕಗಳಾಗಿರುತ್ತವೆ ಎನ್ನುವುದನ್ನು ನಾವು ಗಮನಿಸಬೇಕು. ಮಹಾಪ್ರಾಣಗಳನ್ನು ಉಚ್ಚಾರಣೆಯಲ್ಲಿ ಬಿಟ್ಟುಕೊಡುವುದು ಎಂದರೇನು? ಧ್ವನಿಯನ್ನೇ ನಾವು ಬಿಟ್ಟುಕೊಡುವುದಲ್ಲ. ಮಹಾಪ್ರಾಣದ ಬದಲು ಅದರ ಅಲ್ಪಪ್ರಾಣ ರೂಪವನ್ನು ಉಚ್ಚರಿಸುತ್ತೇವೆ. ಇನ್ನೂ ಖಚಿತವಾಗಿ ಹೇಳಬೇಕೆಂದರೆ ಮಹಾಪ್ರಾಣ ಧ್ವನಿಯ ಉಚ್ಚಾರಣಾ ಲಕ್ಷಣಗುಚ್ಛದಲ್ಲಿ ಮಹಾಪ್ರಾಣತ್ವದ ಲಕ್ಷಣವನ್ನು ಬಿಟ್ಟುಕೊಡುತ್ತೇವೆ. ಅಂದರೆ ಈ ಧ್ವನಿವ್ಯತ್ಯಾಸವನ್ನು ನಾವು ಉಚ್ಚಾರಣೆಯಲ್ಲಿ ಒಂದು ಉಚ್ಚಾರಣಾ ಲಕ್ಷಣವನ್ನು ಬಿಟ್ಟುಕೊಡುವ ಪ್ರಕ್ರಿಯೆಯನ್ನಾಗಿ ಗುರುತಿಸಲು ಸಾಧ್ಯ. ಈ ಬದಲಾವಣೆ ಕನ್ನಡಕ್ಕೆ ಮಾತ್ರ ಸೀಮಿತವಾದುದಲ್ಲ. ಜಗತ್ತಿನ ಹಲವು ಭಾಷೆಗಳಲ್ಲಿ ಇಂಥ ಬದಲಾವಣೆ ಪ್ರಕ್ರಿಯೆ ನಡೆಯುತ್ತಿರುವುದನ್ನು ಗುರುತಿಸಲಾಗಿದೆ. ಕನ್ನಡದಲ್ಲಿ ಪದಾದಿಯ ಹಕಾರವನ್ನು ಉಚ್ಚರಿಸದೆ ಇರುವ ಕೆಲವು ಸಾಮಾಜಿಕ ಪ್ರಭೇದಗಳನ್ನು ವರ್ಣಿಸಲಾಗಿದೆ. ಹಾಗೂ ಅದು ಅಶಿಕ್ಷಿತರ, ಗ್ರಾಮೀಣರ ಮತ್ತು ಕೆಳಜಾತಿಯ ಜನರ ಭಾಷಾಲಕ್ಷಣವೆಂದು ಹೇಳುವುದನ್ನು ಗಮನಿಸಿದ್ದೇವೆ. ಆದರೆ ಜಗತ್ತಿನ ಹಲವು ಭಾಷೆಗಳಲ್ಲಿ ಇದು ಸಾಮಾನ್ಯವಾದ ಬದಲಾವಣೆ. ಬ್ರಿಟನ್ನಿನ ಶಿಷ್ಟ ಉಚ್ಚಾರಣೆಯಲ್ಲಿ ಹೌಸ್, ಹಲೋ ಮುಂತಾದ ಪದಾದಿಯ ಹಕಾರದ ಪದಗಳಲ್ಲಿ ಈಗೀಗ ಹಕಾರವನ್ನು ಲೋಪಿಸುತ್ತಿರುವ ಪ್ರಕ್ರಿಯೆ ವ್ಯಾಪಕವಾಗಿ ನಡೆಯುತ್ತಿರುವುದನ್ನು ಅಭ್ಯಾಸ ಮಾಡುತ್ತಿದ್ದಾರೆ. ಅಂದರೆ ನಾವು ಭಾಷಾಶುದ್ಧತೆಯ ನಿಟ್ಟಿನಲ್ಲಿ ನೋಡುವ ವ್ಯತ್ಯಯಗಳನ್ನು ನಿಜದಲ್ಲಿ ನಮ್ಮ ಭಾಷೆಯಲ್ಲಿ ಸಂಭವಿಸುತ್ತಿರುವ ಬದಲಾವಣೆಗಳನ್ನು, ಮತ್ತು ಹಲವಾರು ಭಾಷೆಗಳಲ್ಲಿ ಇದಕ್ಕೆ ಸಮಾನವಾಗಿ ಆಗುತ್ತಿರುವ ಬದಲಾವಣೆಗಳನ್ನು ಅಭ್ಯಾಸಮಾಡುವುದು ಅವಶ್ಯ. ಇದರಿಂದ ನಾವು ಬದಲಾವಣೆಗಳನ್ನು ವರ್ಣಿಸುವುದಕ್ಕೆ ಸೀಮಿತಗೊಳ್ಳದೆ ಆ ಬದಲಾವಣೆಗಳಿಗೆ ಕಾರಣಗಳನ್ನು ಹೇಳುವುದಕ್ಕೆ ಸಮರ್ಥರಾಗುತ್ತೇವೆ.

# ಭಾಷಾವೈವಿಧ್ಯವನ್ನೇಕೆ ಕಾಯ್ದುಕೊಳ್ಳಬೇಕು?

"ಒಂದು ಜನಾಂಗವನ್ನು ನಾಶಮಾಡಬೇಕೆಂದರೆ ಆ ಜನಾಂಗದ ಭಾಷೆಯನ್ನು ನಾಶಮಾಡಿದರೆ ಸಾಕು" ಎನ್ನುವ ಮಾತನ್ನು ಪ್ರಚುರಗೊಳಿಸಿದವರು ಬೆಲ್ಜಿಯಂನ ಭಾಷಾಶಾಸ್ತ್ರಜ್ಞೆ ತೊವ್ ಸ್ಕೂಟ್‌ನಬ್ ಕಾಂಗಾಸ್. ಟೆರ್ರಲಿಂಗ್ವ ಎಂಬ ಸಂಸ್ಥೆಯೊಡನೆ ಸಂಪರ್ಕವಿರಿಸಿಕೊಂಡಿರುವ ಈಕೆ, ಮಾನವ ಹಕ್ಕುಗಳ ಪಟ್ಟಿಯಲ್ಲಿ 'ಪ್ರತಿ ವ್ಯಕ್ತಿಗೂ ಅವರವರ ಭಾಷೆಯನ್ನು ಉಳಿಸಿಕೊಳ್ಳುವ ಹಕ್ಕು' ಕೂಡ ಸೇರಬೇಕೆಂದು ಹೋರಾಡುತ್ತಿದ್ದಾರೆ. ಅವರ ಈಚೀನ ಒಂದು ಲೇಖನದಿಂದ ಆಯ್ದ ಭಾಗಗಳನ್ನು ಇಲ್ಲಿ ನೀಡಲಾಗಿದೆ.

ಜಾಗತಿಕವಾಗಿ ಈಗ ಜೀವವೈವಿಧ್ಯದ ವಿನಾಶದ ಬಗ್ಗೆ ಒಂದು ಪ್ರಮಾಣದ ಎಚ್ಚರ ಮೂಡಿದೆ. ಅಭಿವೃದ್ಧಿ ಮತ್ತು ಉಪಭೋಗಗಳು ಈ ವೈವಿಧ್ಯದ ಅಳಿವಿಗೆ ಕಾರಣವಾಗುತ್ತಿರುವುದನ್ನು ಗುರುತಿಸಲಾಗಿದೆ. ಜಗತ್ತಿನ ಜೀವವೈವಿಧ್ಯ ವಿಪುಲವಾಗಿರುವ ನಾಡುಗಳು ಆರ್ಥಿಕ ಮತ್ತು ರಾಜಕೀಯ ನೆಲೆಗಳಲ್ಲಿ ದುರ್ಬಲವಾಗಿರುವುದರಿಂದ ತಮ್ಮಲ್ಲಿರುವ ಅಪಾರ ಸಂಪತ್ತು ಕಣ್ಮರೆಯಾಗುತ್ತಿರುವುದನ್ನು ತಡೆಯಲಾರದ ಸ್ಥಿತಿಯಲ್ಲಿವೆ. ಇದೊಂದು ಆತಂಕದ ಸ್ಥಿತಿ ಎಂಬುದೇನೋ ನಿಜ. ಆದರೆ ಇಷ್ಟೇ ಆತಂಕದ ಇನ್ನೊಂದು ಕ್ರಿಯಾವರ್ತ ನಡೆಯುತ್ತಿದೆ ಎಂಬುದು ಹಲವರಿಗೆ ಗೊತ್ತಿಲ್ಲ; ಜಗತ್ತು ತನ್ನ ಭಾಷಾ ವೈವಿಧ್ಯವನ್ನು ಅತಿ ತೀವ್ರಗತಿಯಲ್ಲಿ ಕಳೆದುಕೊಳ್ಳುತ್ತಿದೆ. ಜೀವವೈವಿಧ್ಯವನ್ನು ಕಾಯ್ದುಕೊಳ್ಳಲು ಸಾಧ್ಯ. ಪ್ರಯೋಗಗಳಿಂದ, ನಾಶವಾದ ಸ್ಥಿತಿಯನ್ನು ಮರಳಿ ರಚಿಸುವ ಯತ್ನವನ್ನಾದರೂ ಮಾಡಬಹುದು. ಆದರೆ ನಾಶವಾದ ಭಾಷೆಯ ಪುನರುತ್ಥಾನ ಅಸಾಧ್ಯ. ಅಲ್ಲದೆ ಮಾನವ ಜನಾಂಗದಲ್ಲಿ ಹಿಂದೆಂದೂ ನಡೆಯದಿದ್ದ ಪ್ರಮಾಣದಲ್ಲಿ ಭಾಷಾವಿನಾಶ ಈಗ ನಡೆಯುತ್ತಿದೆ. ಇನ್ನು ನೂರು ವರ್ಷಗಳಲ್ಲಿ ಈಗ ಇರುವ 6000–7000 ಭಾಷೆಗಳಲ್ಲಿ ಅರ್ಧದಷ್ಟು ವಿನಾಶಗೊಳ್ಳಲಿವೆಯೆಂದು ಅಂದಾಜು ಮಾಡಲಾಗಿದೆ.

ಜಗತ್ತಿನ ಈ ಭಾಷೆಗಳನ್ನಾಡುವ ಜನರು ಹಂಚಿಹೋಗಿರುವ ಪ್ರಮಾಣ ಗಮನಾರ್ಹ. ತಲಾ 10 ಲಕ್ಷಕ್ಕೂ ಹೆಚ್ಚಿನ ಭಾಷಿಕರನ್ನು ಹೊಂದಿರುವ ಭಾಷೆಗಳ ಸಂಖ್ಯೆ 200ಕ್ಕೂ ಕಡಿಮೆ. ಅರ್ಧದಷ್ಟು ಸಂಖ್ಯೆಯ ಭಾಷೆಗಳಿಗೆ ತಲಾ 10,000 ಜನ ಭಾಷಿಕರೂ ಇಲ್ಲ. ಕಾಲುಭಾಗದಷ್ಟು ಸಂಖ್ಯೆಯ ಆಡುಭಾಷೆಗಳಿಗೆ ತಲಾ 1,000 ಜನರಿಗಿಂತ ಕಡಿಮೆ ಭಾಷಿಕರಿದ್ದಾರೆ. ಭೌಗೋಳಿಕ ಹಂಚಿಕೆಯನ್ನು ಗಮನಿಸಿದರೆ ಪ್ರತಿಶತ

80ರಷ್ಟು ಭಾಷೆಗಳು (ಸುಮಾರು 5000-5500 ಭಾಷೆಗಳು.) ಯಾವುದೋ ಒಂದು ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಮಿತಗೊಂಡಿವೆ. ಬರಲಿರುವ ದಶಕಗಳಲ್ಲಿ ಈ ಚಿತ್ರ ಬದಲಾಗಲಿದೆ. ಆಶಾವಾದಿ ಚಿಂತಕರು ಮುಂದಿನ ಶತಮಾನದಲ್ಲಿ ಶೇ 50 ರಷ್ಟು ಭಾಷೆಗಳು ನಾಶವಾಗುತ್ತವೆಂದು ಅಂದಾಜು ಮಾಡಿದರೆ, ಹತಾಶೆಯ ನೆಲೆಯಲ್ಲಿ ಯೋಚಿಸುವವರು ಈ ಅವಧಿಯಲ್ಲಿ ಶೇ 90ರಷ್ಟು ಸಂಖ್ಯೆಯ ಭಾಷೆಗಳ ವಿನಾಶದ ಚಿತ್ರವನ್ನು ಮುಂದಿಡುತ್ತಾರೆ.

ಇದಕ್ಕೇಕೆ ಆತಂಕ ಪಡಬೇಕು, ಭಾಷೆಗಳು ಕಡಿಮೆಯಾದರೆ ಜನರು ಸುಖ ಸಂತೋಷಗಳಿಂದ ಜೀವಿಸಲು ಸಾಧ್ಯವೆನ್ನುವವರೂ ಇದ್ದಾರೆ. ಜಾಗತಿಕ ಸಂಪರ್ಕಕ್ಕೆ ಒಂದೇ ಭಾಷೆ ಸಾಕೆನ್ನುವವರೂ ಇದ್ದಾರಷ್ಟೆ. ಆದರೆ ಪರಿಸ್ಥಿತಿ ಅಷ್ಟು ಸರಳವಲ್ಲ. ಈವರೆಗೆ ನಮಗೆ ತಿಳಿಯದಿದ್ದ ಕೆಲವು ಸಂಗತಿಗಳು ನಮಗೀಗ ಗೊತ್ತಾಗುತ್ತಿವೆ. ಜೀವವೈವಿಧ್ಯ ಮತ್ತು ಭಾಷಾವೈವಿಧ್ಯಗಳ ನಡುವೆ ಇರುವ ಸಂಬಂಧವೀಗ ಹೆಚ್ಚು ಸ್ಪಷ್ಟವಾಗತೊಡಗಿದೆ. ಎಲ್ಲಿ ಜೀವವೈವಿಧ್ಯವಿದೆಯೋ ಅಲ್ಲಿಯೇ ಭಾಷಾವೈವಿಧ್ಯವೂ ಇದೆ. ಅವೆರಡರ ನಡುವೆ ಕಾರ್ಯಕಾರಣ ಸಂಬಂಧವಿದೆ.

ವಿನಾಶದ ಅಂಚಿಗೆ ಬಂದು ನಿಂತಿರುವ ಭಾಷೆಗಳಲ್ಲಿ ಅಪಾರವಾದ ಸ್ಥಳೀಯ ತಿಳವಳಿಕೆ ಇದೆ. ಜೀವವೈವಿಧ್ಯದ ಬಗ್ಗೆ. ಅದರ ರಕ್ಷಣೆಯ ಬಗ್ಗೆ, ಪೋಷಣೆಯ ಬಗ್ಗೆ ಈ ಭಾಷೆಗಳಲ್ಲಿ ಅಡಗಿರುವ ಜ್ಞಾನದ ಬಗ್ಗೆ, ವಿಶ್ವಸಂಸ್ಥೆಯ ಪರಿಸರ ಸಂಬಂಧದ ಈಚಿನ ವರದಿ ವಿವರಗಳನ್ನು ನೀಡುತ್ತದೆ. ಭಾಷಿಕರು ಸಾವಿರಾರು ವರ್ಷಗಳಿಂದ ತಮ್ಮ ಪರಿಸರವನ್ನು ಕುರಿತ ಅರಿವನ್ನು ತಮ್ಮ ನುಡಿಯಲ್ಲಿ ಬಿಂಬಿಸಿದ್ದಾರೆ. ಅವರ ಈ ಭಾಷೆಗಳು ನಾಶವಾದರೆ ಈ ಅಪಾರ ತಿಳುವಳಿಕೆಯೂ ನಾಶವಾದಂತೆಯೇ ಸರಿ. ಯಜಮಾನಿಕೆ ಮೆರೆಯುವ ಭಾಷೆಗಳಲ್ಲಿ ಇಂಥ ಅರಿವು ಅಂತಸ್ಥವಾಗಿಲ್ಲ. ಆದ್ದರಿಂದ ಈ ನಷ್ಟ ಇಡೀ ಮಾನವ ಜನಾಂಗಕ್ಕೆ ಆಗುವ ನಷ್ಟವಾಗಿದೆ.

ನಾಗರಿಕ ಜಗತ್ತು ಭಾಷಾವಿನಾಶ ಪ್ರಕ್ರಿಯೆಗೆ ಬಳಸುತ್ತಿರುವ ಎರಡು ಪ್ರಬಲ ಅಸ್ತ್ರಗಳೆಂದರೆ ಸಮೂಹ ಮಾಧ್ಯಮಗಳು ಮತ್ತು ಶಿಕ್ಷಣ ವ್ಯವಸ್ಥೆ. ಇದು ವಿಚಿತ್ರವೆನಿಸಿದರೂ ನಿಜ. ಯಜಮಾನಿಕತೆಯ ಭಾಷೆಯ ಪರವಾಗಿ ಇವೆರಡೂ ವಲಯಗಳು ಕೆಲಸ ಮಾಡುತ್ತವೆ.

ವಲಸೆಗಾರರ ಮಕ್ಕಳನ್ನೇ ನೋಡೋಣ. ವಲಸೆ ಎಂಬುದು ಅತ್ಯಂತ ದೊಡ್ಡ ಜಾಗತಿಕ ಪ್ರಕ್ರಿಯೆ. ವಲಸೆ ಹೋದವರ ಮಕ್ಕಳಿಗೆ ಯುರೋಪಿನ ಹಲವು ದೇಶಗಳಲ್ಲಿ ಆಯಾ ದೇಶ ಭಾಷೆಗಳ ಮಾಧ್ಯಮದಲ್ಲಿ ಶಿಕ್ಷಣ ನೀಡುವ ಕಾರ್ಯಕ್ರಮವಿದೆ. ಇದನ್ನು ಕರಗಿಸುವ (ಇಮ್ಮರ್‌ಶನ್) ಕಾರ್ಯಕ್ರಮವೆನ್ನುತ್ತಾರೆ. ಅಂದರೆ ವಲಸೆಗಾರರ ಮಕ್ಕಳು ವಲಸೆಬಂದಿರುವ ನಾಡಿನ ಭಾಷಾಪರಿಸರದಲ್ಲಿ ಸೇರಿ ಹೋಗಬೇಕೆಂಬುದು ಉದ್ದೇಶ. ಆದರೆ ಈ ಮಕ್ಕಳು ತಮ್ಮ ತಂದೆ ತಾಯಿಗಳಾಡುವ ಭಾಷೆಯನ್ನು ಸಂಪೂರ್ಣವಾಗಿ ಕಳೆದುಕೊಳ್ಳುತ್ತಿದ್ದಾರೆ. ಜಗತ್ತಿನಾದ್ಯಂತ ಹೀಗೆ ಒತ್ತಾಯ ಪೂರ್ವಕವಾಗಿ ಭಾಷಾ

ಮರೆವನ್ನು ಪ್ರೇರೇಪಿಸಲಾಗುತ್ತಿದೆ. ಅಲ್ಪಸಂಖ್ಯಾತ ಭಾಷೆಗಳಲ್ಲಿ ಕಲಿಯುವ ಅವಕಾಶಗಳು ಇಲ್ಲವಾಗುತ್ತಿವೆ. ಇದರ ಪರಿಣಾಮವೇನೆಂಬುದನ್ನು ಯೋಚಿಸಲು ವಲಸೆಗಾರರಿಗೆ ಆಯ್ಕೆಗಳಾದರೂ ಎಲ್ಲಿವೆ?

ಈಗೇನಾಗಬೇಕು? ಭಾಷಾವೈವಿಧ್ಯದ ಬಳಕೆಗೆ ಕಾರ್ಯಕ್ರಮ ಯೋಜಿತವಾಗಬೇಕು. ದ್ವಿಭಾಷಿಕತೆ ಮತ್ತು ಬಹುಭಾಷಿಕತೆಗಳನ್ನು ಉತ್ತೇಜಿಸಬೇಕು. ಅಲ್ಲದೆ ಯಜಮಾನ ಭಾಷೆಯ ಕಲಿಕೆಯಿಂದ ಅಲ್ಪಸಂಖ್ಯಾತ ಭಾಷೆಗಳನ್ನು ಕಳೆದುಕೊಳ್ಳುವ ಸ್ಥಿತಿಯನ್ನು ಬದಲಾಯಿಸಬೇಕು. ಇಲ್ಲದಿದ್ದರೆ ಯಜಮಾನ ಭಾಷೆಗಳು ಕೊಲ್ಲುವ ಭಾಷೆಗಳಾಗುತ್ತವೆ. ಇದು ಆ ಭಾಷೆಗಳಿಗೂ ಆರೋಗ್ಯಕರ ಸ್ಥಿತಿಯಲ್ಲ. ಆದ್ದರಿಂದ ಯಜಮಾನ ಭಾಷೆಗಳು ತಾವು ವ್ಯಾಪಕವಾಗಿ ಬಳಕೆಯಾಗುವಾಗಲೇ ಜನರ ಸ್ವತ್ತಾದ ಇತರ ಭಾಷೆಗಳೂ ಉಳಿದುಕೊಳ್ಳುವಂತೆ ಪ್ರೇರೇಪಿಸಬೇಕು. ಶಿಕ್ಷಣ ಇದರಿಂದ ಕೂಡಿಕೊಳ್ಳುವ ಪ್ರಕ್ರಿಯೆಯಾಗುತ್ತದೆ. ಈಗಿರುವಂತೆ ಕಳೆದುಕೊಳ್ಳುವ ಪ್ರಕ್ರಿಯೆಯಾಗಬಾರದು. ಅಂದರೆ ಜೀವವೈವಿಧ್ಯಕ್ಕೆ ಪರ್ಯಾಯವಾಗಿ ರೂಪುಗೊಳ್ಳುತ್ತಿರುವ ಏಕರೂಪೀ ಜೀವಪರಿಸರಕ್ಕೆ ತಾಳಿಕೆಯ ಗುಣವಿಲ್ಲದಿರುವುದು ಈಗ ನಮ್ಮೆಲ್ಲರ ಅನುಭವವಾಗಿದೆ. ಹಾಗೆಯೇ ಭಾಷಾವೈವಿಧ್ಯಕ್ಕೆ ಪರ್ಯಾಯವಾಗಿ ರೂಪುಗೊಳ್ಳುವ ಏಕಭಾಷಾಪರಿಸರಕ್ಕೂ ಕೂಡ ತಾಳಿಕೆಯ ಗುಣವಿರಲಾರದೆಂಬುದು ನಮಗೆ ಗೊತ್ತಾಗಬೇಕು. ಆದ್ದರಿಂದ ಭಾಷಾ ಸಹಬಾಳ್ವೆಯೊಂದೇ ಇಂದಿನ ನಮ್ಮ ಆಯ್ಕೆಯಾಗಬೇಕಾಗಿದೆ.

# ಭಾಷೆ: ಖಚಿತತೆ ಎಂದರೇನು?

ಭಾಷೆ ಮನುಷ್ಯರ ಅನನ್ಯವಾದ ಸ್ವತ್ತು, ನಿಜ. ಆದರೆ ಇದು ಮನುಷ್ಯರ ಅತ್ಯಂತ ದೊಡ್ಡ ಸಮಸ್ಯೆಯೂ ಹೌದು. ಭಾಷೆಯನ್ನು ಕಲಿಯುವ ಮಗು ಕಲಿಯುವುದು ಅತ್ಯಂತ ಕನಿಷ್ಠವಾದ ಕೆಲವು ನಿಯಮಗಳನ್ನು ಮಾತ್ರ. ಆದರೆ ಜೀವನದ ಉದ್ದಕ್ಕೂ ಅತ್ಯಂತ ಸಂಕೀರ್ಣವಾದ ರಚನೆಗಳನ್ನು ಯಾವ ಬಗೆಯ ಪೂರ್ವ ಸಿದ್ಧತೆಯೂ ಇಲ್ಲದೆ ಬಳಸಲು ಆ ಗಳಿಕೆ ಮಾತ್ರ ಸಾಕು. ಇದು ಹೇಗೆ ಸಾಧ್ಯವಾಗುತ್ತದೆ ಎಂಬುದು ಒಂದು ಸಮಸ್ಯೆ. ಇನ್ನೊಂದು ಕಡೆ ನಾವು ನೂರಾರು ವಾಕ್ಯಗಳನ್ನು ಸಂಕಥನವೊಂದರಲ್ಲಿ ಬಳಸಿದ್ದರೂ ಅವೆಲ್ಲದರ ಸಾರಾರ್ಥ ಕೆಲವು ಸರಳ ವಾಕ್ಯಗಳಲ್ಲಿ ಅಡಕಗೊಳ್ಳುವಂತಿರುತ್ತವೆ. ಅಥವಾ ಇನ್ನೂ ಕೆಲವು ಸಂದರ್ಭಗಳಲ್ಲಿ ನೂರಾರು ವಾಕ್ಯಗಳನ್ನು ನಾವು ಕೇಳಿ/ಓದಿದ್ದರೂ ಗ್ರಹಿಸಿದ್ದೇವೆ ಎಂದುಕೊಂಡಿದ್ದರೂ ನಾವು ನಿಜದಲ್ಲಿ ಏನನ್ನೂ ಅರಿಯಲಾಗಿರುವುದಿಲ್ಲ. ಅಂದರೆ ಭಾಷೆಯ ಬಳಕೆ ಅಂತಲ್ಲಿ ನಿರುಪಯುಕ್ತವಾಗಿರುತ್ತದೆ. ಇದು ಇನ್ನೊಂದು ಸಮಸ್ಯೆ. ಇವೆರಡೂ ಸಮಸ್ಯೆಗಳಿಗೆ ಪ್ರಸಿದ್ಧ ಭಾಷಾಶಾಸ್ತ್ರಜ್ಞ ನೋಮ್ ಚಾಮ್‌ಸ್ಕಿ ಪ್ಲೇಟೊ ಸಮಸ್ಯೆ ಮತ್ತು ಆರ್ವೆಲ್ ಸಮಸ್ಯೆ ಎಂದು ಹೆಸರಿಸುತ್ತಾನೆ. ಏಕೆ ಈ ಹೆಸರುಗಳು ಎಂಬುದು ನಮಗೆ ಸದ್ಯ ಬೇಡ. ಈ ಟಿಪ್ಪಣಿಯ ಮಟ್ಟಿಗೆ ಆರ್ವೆಲ್ ಸಮಸ್ಯೆಯ ಒಂದು ಮುಖವನ್ನು ಮಾತ್ರ ಚರ್ಚಿಸೋಣ.

ನಾವು ಕನ್ನಡವನ್ನು ಬಳಸುವ ವಲಯಗಳು ದಿನೇ ದಿನೇ ಹೆಚ್ಚಾಗುತ್ತ ಹೋದಂತೆ ನಾವು ಆಯಾ ವಲಯಗಳಲ್ಲಿ ಬಳಸುವ ಕನ್ನಡದ ಲಕ್ಷಣಗಳನ್ನು ಕುರಿತು ಹೆಚ್ಚು ಜಾಗರೂಕತೆಯನ್ನು ವಹಿಸುತ್ತಿದ್ದೇವೆ. ಕೆಲವು ಸಾಮಾನ್ಯ ನಿಯಮಗಳನ್ನು ರೂಪಿಸಲು ಯತ್ನಿಸುತ್ತಿದ್ದೇವೆ. ಈ ಸಾಮಾನ್ಯ ನಿಯಮಗಳು ಕಾಲ ದೇಶಾತೀತವಾದವುಗಳಲ್ಲ. ಆದರೂ ಅಂಥ ನಿಯಮಗಳು ಭಾಷೆಯ ಬಳಕೆದಾರರಿಗೆ ಸ್ಥೂಲವಾದ ಮಾರ್ಗದರ್ಶನವನ್ನು ನೀಡಬಲ್ಲವು ಎಂಬುದು ನಮ್ಮ ನಂಬಿಕೆಯಾಗಿದೆ. ಖಚಿತತೆ ಅಂಥ ಸಾಮಾನ್ಯ ನಿಯಮಗಳಲ್ಲಿ ಒಂದು. ನಾವು ಬಳಸುವ ಭಾಷೆಗೆ ಖಚಿತತೆ ಒದಗಬೇಕೆಂದು ವಾದಿಸುತ್ತಿರುತ್ತೇವೆ. ಖಚಿತತೆಯನ್ನು ಗುರುತಿಸುವುದು ಹೇಗೆ? ಎಲ್ಲವನ್ನು ಹೇಳುವುದು ಮತ್ತು ಹೇಳಬೇಕಾದ್ದಷ್ಟನ್ನು ಮಾತ್ರ ಹೇಳುವುದರಿಂದ ಖಚಿತತೆ ಒದಗುತ್ತದೆ. ಹಳೆಯ ಪರಿಭಾಷೆಯಲ್ಲಿ ಹೇಳುವುದಾದರೆ ಅತಿವ್ಯಾಪ್ತಿ ಮತ್ತು ಅವ್ಯಾಪ್ತಿಗಳು ಇರಬಾರದು.

ಅತಿವ್ಯಾಪ್ತಿಯಿಂದ ಅವಶ್ಯವಿಲ್ಲದ್ದನ್ನೂ ಹೇಳಿದಂತಾಗುತ್ತದೆ. ಅವ್ಯಾಪ್ತಿಯಿಂದಾಗಿ ಹೇಳಲೇ ಬೇಕಾದುದನ್ನು ಹೇಳದೇ ಉಳಿಸಿದಂತಾಗುತ್ತದೆ.

ಸಾಮಾನ್ಯ ಸಂಕಥನಗಳಲ್ಲಿ ಈ ಬಗೆಯ ಖಚಿತತೆ ಅಸಾಧ್ಯ ಮಾತ್ರವಲ್ಲ, ಅನಾವಶ್ಯಕ ಕೂಡ. ನಮ್ಮ ದಿನನಿತ್ಯದ ನೂರಾರು ಮಾತುಗಳನ್ನು ಖಚಿತಗೊಳಿಸುತ್ತ ಹೋದರೆ ವ್ಯಾವಹಾರಿಕ ಬಳಕೆಯೇ ಸಾಧ್ಯವಾಗುವುದಿಲ್ಲ. ಎದುರಿಗೆ ಬಂದ ಪರಿಚಿತರನ್ನು 'ಚೆನ್ನಾಗಿದ್ದೀರಾ?' ಎಂದು ಕೇಳಿದರೆ ಆ ವ್ಯಕ್ತಿ ಖಚಿತತೆಯನ್ನು ನಿರೀಕ್ಷಿಸುವವರಾದರೆ 'ಎದುರಿಗೆ ನಿಂತಿಲ್ಲವೇ ಗುಂಡುಕಲ್ಲಿನ ಹಾಗೆ?' ಎನ್ನಬಹುದು. ಈ ಕೋಪಕ್ಕೆ ಭಾಷೇತರವಾದ ಕಾರಣಗಳೇನೇ ಇರಲಿ. ಭಾಷಿಕ ಕಾರಣಗಳೂ ಇವೆ ಎಂಬುದನ್ನು ಮರೆಯುವಂತಿಲ್ಲ. ಚೆನ್ನಾಗಿ ಎದುರು ನಿಂತಿರುವವನ್ನು ಚೆನ್ನಾಗಿದ್ದೀರಾ ಎಂದು ಪ್ರಶ್ನಿಸುವುದು ಆ ಪರಿಚಿತ ವ್ಯಕ್ತಿಯ ಪ್ರಕಾರ ಖಚಿತವಲ್ಲದ ಭಾಷಾ ಪ್ರಯೋಗ.

ಸ್ವಲ್ಪ ಮುಂದುವರೆದರೆ ಖಚಿತತೆಯನ್ನೇ ಮುಖ್ಯ ಮಾನದಂಡವನ್ನಾಗಿರಿಸಿಕೊಂಡರೆ ನಮ್ಮ ಮಾತುಕತೆಗಳಲ್ಲಿ ಬರವಣಿಗೆಯಲ್ಲಿ ಭಾಷೆಯ ನುಡಿಗಟ್ಟುಗಳನ್ನು, ವಾಗ್ರೂಢಿಗಳನ್ನು, ಗಾದೆಮಾತುಗಳನ್ನು ಬಳಸುವುದೇ ಅಸಾಧ್ಯವಾಗುತ್ತದೆ. ಕೇವಲ ವಾಚ್ಯಾರ್ಥಕ್ಕೆ ಜೋತು ಬೀಳಬೇಕಾಗುತ್ತದೆ. ಲಕ್ಷಣಾರ್ಥ ಇರಲಿ, ಸೂಚ್ಯಾರ್ಥ ಗೃಹೀತಾರ್ಥಗಳಿಗೂ ಅವಕಾಶ ವಿಲ್ಲದಂತಾಗುತ್ತದೆ. ನುಡಿಗಟ್ಟುಗಳನ್ನು ಅಲಂಕಾರಿಕ ಎಂದು ತಿಳಿಯುವರುಂಟು. ಹಾಗಾಗಿ ಅವರ ಪ್ರಕಾರ ಶಾಸ್ತ್ರೀಯ ಬರವಣಿಗೆಗಳಲ್ಲಿ ನುಡಿಗಟ್ಟುಗಳಿಗೆ ಅವಕಾಶಗಳಿಲ್ಲ.

ಖಚಿತತೆ ಎನ್ನುವುದು ಅಪೇಕ್ಷೆ ಪಡಬಹುದಾದ ಸ್ಥಿತಿಯಾಗಿರಬಹುದು. ಖಂಡಿತವಾಗಿಯೂ ಸಾಧಿಸಬಹುದಾದ ಸ್ಥಿತಿಯಲ್ಲ. ಇನ್ನೂ ಮುಂದುವರೆದು ಹೇಳಬಹುದಾದರೆ ಸಾಧಿಸಬೇಕಾದ ಸ್ಥಿತಿಯೂ ಅಲ್ಲ. ಸಂಕಥನಗಳು ರೂಪುಗೊಳ್ಳುವುದು ಕೇವಲ ವಾಚ್ಯಾರ್ಥ ಬದ್ಧತೆಯಿಂದಲ್ಲ. ಈ ಅಂಶವನ್ನು ನಾವು ಗಮನಿಸಬೇಕಾಗಿದೆ. ಏಕೆಂದರೆ ಇಂದಿನ ಹಲವಾರು ವಾಗ್ವಾದಗಳಿಗೆ ವಿವಾದಗಳಿಗೆ (ಉದಾ.ಗೆ ಮಹಾಚೈತ್ರ ಕೃತಿ ಕುರಿತ ಚರ್ಚೆ) ಭಾಷಾ ಸಂಕಥನಗಳ ಸಾಧ್ಯತೆಗಳನ್ನು ಪರಿಗಣನೆಗೆ ತೆಗೆದುಕೊಳ್ಳದಿರುವುದು ಒಂದು ಮುಖ್ಯ ಕಾರಣವಾಗಿದೆ.

ಟಿಪ್ಪಣಿಯ ಮೊದಲಲ್ಲಿ ಸೂಚಿಸಿದ ಆರ್ವೆಲ್ ಸಮಸ್ಯೆಗೆ ಬರೋಣ. ಸಂಕಥನಗಳು ಏನನ್ನಾದರೂ ಹೇಳುತ್ತವೆ ಎಂದಾಗಲಿ ಅಥವಾ ಅವು ಏನು ಹೇಳುತ್ತವೆ ಎಂಬುದನ್ನು ಪರ್ಯಾಯ ಮಾತುಗಳಲ್ಲಿ ಹೇಳಲು ಸಾಧ್ಯವಿದೆ ಎಂದು ತಿಳಿಯುವುದಾಗಲೀ ಸರಿಯೇ? ಖಚಿತತೆಯ ಬೆನ್ನು ಹತ್ತಿದರೆ ಈ ಎರಡೂ ಮಾತುಗಳಿಗೆ ಹೌದು ಎಂದು ಉತ್ತರ ಹೇಳಬೇಕಾಗುತ್ತದೆ. ಈ ನೆಲೆಯಲ್ಲಿ ಕನ್ನಡದಲ್ಲಿ ಚರ್ಚೆಗಳು ಬೆಳೆಯಬೇಕಾಗಿವೆ.

# ಭಾಷಾಶಾಸ್ತ್ರದ ಜವಾಬ್ದಾರಿ

ಈಚೆಗೆ ಸಂಭವಿಸಿದ ಸೂರ್ಯಗ್ರಹಣದ ಸಂದರ್ಭದಲ್ಲಿ ಜನತೆಗೆ ಆಕಾಶಕಾಯಗಳ ಚಲನವಲನಗಳ ಬಗೆಗೆ ಹತ್ತಾರು ಮಾಹಿತಿಗಳನ್ನು ನೀಡಲಾಯಿತು. ವೈಜ್ಞಾನಿಕ ಚಿಂತನೆಯನ್ನು ಬೆಳೆಸಿಕೊಳ್ಳಲು ಸೂಚಿಸಲಾಯಿತು. ಸಾಮಾನ್ಯರಿಗೆ ಗ್ರಹಣವನ್ನು ಕುರಿತು ಎಷ್ಟು ವಿಚಾರಗಳು ತಿಳಿದಿರಬೇಕೋ ಅದೆಲ್ಲವನ್ನು ತಿಳಿಸಿಕೊಟ್ಟರೂ ಜಗತ್ತಿನ ಖಗೋಳಶಾಸ್ತ್ರಜ್ಞರು ಈ ಗ್ರಹಣದ ಗಳಿಗೆಯಲ್ಲಿ ನೂರಾರು ಇನ್ನಿತರ ಮಾಹಿತಿಗಳನ್ನು ಸಂಗ್ರಹಿಸಲು ಹಲವಾರು ತಿಂಗಳುಗಳಿಂದ ಸನ್ನದ್ಧರಾಗಿದ್ದರು. ಇನ್ನು ಹಲವು ವರ್ಷಗಳ ಕಾಲ ಈಗ ದೊರೆತ ಮಾಹಿತಿಯನ್ನು ವಿಶ್ಲೇಷಿಸುತ್ತ ಖಗೋಳಶಾಸ್ತ್ರದ ಜ್ಞಾನಸಂಚಯಕ್ಕೆ ಇವರೆಲ್ಲ ನೆರವಾಗುತ್ತಾರೆ. ಇದು ನಮ್ಮ ಅಧ್ಯಯನದ ಒಂದು ಪ್ರಮುಖ ಮಾದರಿಯನ್ನು ಪ್ರತಿನಿಧಿಸುತ್ತದೆ. ಈ ಬಗೆಯ ಅಧ್ಯಯನಗಳು ತಾವು ಯಾವ ಸಂಗತಿಗಳನ್ನು ಕುರಿತು ಅಧ್ಯಯನ ಮಾಡುತ್ತಿರುತ್ತವೋ ಆ ಸಂಗತಿಗಳ ಸ್ವರೂಪದಲ್ಲಿ ಯಾವ ಬದಲಾವಣೆಯನ್ನೂ ಮಾಡಲಾರವು. ಅಂಥ ಆಸಕ್ತಿಗಳು ಈ ಬಗೆಯ ಅಧ್ಯಯನಗಳಿಗೆ ಇಲ್ಲ. ಬೇಕೆಂದಾಗ ಗ್ರಹಣ ಸಂಭವಿಸುವಂತೆ ಮಾಡುವುದು ನಮಗೆ ಸಾಧ್ಯವೆ? ಅಂದರೆ ನಾವು ಪಡೆಯುವ ತಿಳುವಳಿಕೆ ಯಾವ ರೀತಿಯಲ್ಲೂ ಆ ತಿಳುವಳಿಕೆಗೆ ಕಾರಣವಾದ ಸನ್ನಿವೇಶವನ್ನು ಪ್ರಭಾವಿಸಲಾರದು. ಇನ್ನೊಂದು ಬಗೆಯ ಅಧ್ಯಯನದ ಮಾದರಿಯಲ್ಲಿ ಇದಕ್ಕೆ ವಿರುದ್ಧವಾದ ಹಾದಿಯನ್ನು ಹಿಡಿಯಲಾಗುತ್ತದೆ. ಅಲ್ಲಿ ಯಾವ ವಲಯದಿಂದ ಮಾಹಿತಿಯನ್ನು ಪಡೆಯಲಾಗುತ್ತದೋ ಆ ವಲಯವನ್ನು ಪ್ರಭಾವಿಸಲೆಂದು ಆ ಮಾಹಿತಿಯನ್ನು ಬಳಸಲಾಗುತ್ತದೆ. ನಮ್ಮ ದೇಹರಚನೆ, ಕಾರ್ಯವಿಧಾನ, ಏರುಪೇರುಗಳನ್ನು ಕುರಿತು ನಡೆಸುವ ಅಧ್ಯಯನ ಮರಳಿ ಆ ದೇಹರಚನೆಯನ್ನು ಹೇಗಾದರೂ ಪ್ರಭಾವಿಸಲು ಬಳಕೆಯಾಗುತ್ತವೆ.

ಈ ಎರಡು ಮಾದರಿಗಳಲ್ಲಿ ಭಾಷಾಧ್ಯಯನಗಳು ಮೊದಲ ಮಾದರಿಯನ್ನು ಅನುಸರಿಸಲು ಹವಣಿಸುತ್ತವೆ. ಅಥವಾ ಅಂಥ ಮಾದರಿಯನ್ನು ಅನುಸರಿಸುವಂತೆ ಎಲ್ಲ ಭಾಷಾಧ್ಯಯನಕಾರರೂ ಶಪಥ ಮಾಡುವಂತೆ ಪ್ರೇರೇಪಿಸಲಾಗುತ್ತದೆ. ಭಾಷೆಯನ್ನು ಅಧ್ಯಯನ ಮಾಡುವುದೆಂದರೆ ಅದರ ಬಗೆಗೆ ಎಲ್ಲ ಬಗೆಯ ಮಾಹಿತಿಯನ್ನು ಪಡೆಯುವುದು; ಆ ಮಾಹಿತಿಯನ್ನು ಶುದ್ಧಜ್ಞಾನವನ್ನಾಗಿ ಅಭ್ಯಾಸಮಾಡುತ್ತ ಹೋಗುವುದು. ಇದಿಷ್ಟೇ ಭಾಷಾಧ್ಯಯನಕಾರರ ಕೆಲಸವೆಂದು ತಿಳಿಯಲಾಗುತ್ತಿದೆ. ಐವತ್ತರ ಅನಂತರ ಭಾರತಕ್ಕೆ ಆಮದಾಗಿ ಬಂದ ಭಾಷಾಶಾಸ್ತ್ರವೆಂಬ ಜ್ಞಾನಶಾಖೆಯು ನಾಲ್ಕು ದಶಕಗಳು

ಕಳೆದರೂ ನಮ್ಮ ಸಾಮಾಜಿಕ ವಲಯದಲ್ಲಿ ತನ್ನ ಜವಾಬ್ದಾರಿ ಏನೆಂಬುದನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿಲ್ಲ.

ವಿಶ್ವವಿದ್ಯಾಲಯಗಳಲ್ಲಿ ಸಾವಿರಾರು ಸ್ನಾತಕರು ಭಾಷಾಶಾಸ್ತ್ರದಲ್ಲಿ ಉನ್ನತ ವ್ಯಾಸಂಗವನ್ನು ಮಾಡುತ್ತಿದ್ದಾರೆ; ಪದವಿಗಳನ್ನು ಪಡೆಯುತ್ತಿದ್ದಾರೆ. ಭಾಷಾಧ್ಯಯನಗಳಿಗೆ ಮೀಸಲಾದ ಹತ್ತಾರು ಸಂಸ್ಥೆಗಳು ನಾಡಿನಲ್ಲಿ ಕಾರ್ಯನಿರ್ವಹಿಸುತ್ತಿವೆ. ಆದರೂ ಭಾಷಾಶಾಸ್ತ್ರದೊಡನೆ ನಮಗೆ ಬಳಕೆ ಬೆಳೆದಿಲ್ಲ. ಕಾರಣವಿಷ್ಟೆ ಈ ಶಾಸ್ತ್ರ ನಮ್ಮ ಸಾಮಾಜಿಕ ಸಂದರ್ಭಕ್ಕೆ ತನ್ನನ್ನು ತಾನು ಹೊಂದಿಸಿಕೊಂಡಿಲ್ಲ.

ಹಾಗೆ ನೋಡಿದರೆ ಹಳೆಗಾಲದ ಭಾಷಾಧ್ಯಯನಗಳೆಂದರೆ ವ್ಯಾಕರಣ, ನಿಘಂಟುಗಳ ರಚನೆ. ಇವು ಭಾಷೆಯಲ್ಲಿ ಸರಿ ತಪ್ಪುಗಳನ್ನು ಗುರುತಿಸಲು ಹಿಂಜರಿಯುತ್ತಿರಲಿಲ್ಲ. ವೈಯಾಕರಣಿಗಳ ಈ ದೃಷ್ಟಿಕೋನವನ್ನು ನಮ್ಮ ಇಂದಿನ ಭಾಷಾಶಾಸ್ತ್ರ ಒಪ್ಪುವುದಿಲ್ಲ. ಇದಕ್ಕೆ ಆ ಶಾಸ್ತ್ರದ ತಾತ್ವಿಕ ನಿಲುವು ಎಷ್ಟು ಕಾರಣವೋ ಪ್ರಜಾಪ್ರಭುತ್ವದ ಕೆಲವು ಒಪ್ಪಿತ ನೆಲೆಗಳೂ ಕಾರಣ. ಸಮಾನತೆಯು ಪ್ರಜಾಪ್ರಭುತ್ವದ ಅಂಥ ಒಂದು ನೆಲೆ. ಹಾಗಾಗಿ ಭಾಷೆಯ ವಿವಿಧ ಪ್ರಭೇದಗಳಲ್ಲಿ, ಪ್ರಯೋಗಗಳಲ್ಲಿ ಇದು ಸರಿ ಇದು ತಪ್ಪು ಎನ್ನುವುದಾಗಲೀ, ಇದು ಸ್ವೀಕಾರಾರ್ಹ ಇದು ತ್ಯಾಜ್ಯ ಎನ್ನುವುದಾಗಲೀ ಸರಿಯಾಗುವುದಿಲ್ಲ. ಹಾಗಾಗಿ ಭಾಷಾಧ್ಯಯನಕಾರರು ಭಾಷೆಯನ್ನು, ಅದರ ಬೆಳವಣಿಗೆಯನ್ನು ಗಮನಿಸುವುದು, ವರ್ಣಿಸುವುದು ಮತ್ತು ಸಾಧ್ಯವಿರುವೆಡೆಯಲ್ಲಿ ಕಾರಣಗಳನ್ನು ಹುಡುಕುವುದು'–ಇದಿಷ್ಟು ಮಾತ್ರ ತಮ್ಮ ಕೆಲಸವೆಂದು ತಿಳಿದರು. ಉದಾಹರಣೆಗೆ ಕನ್ನಡ ಮತ್ತು ತುಳು ಎರಡನ್ನು ಮಾತನಾಡುವವರ ಕನ್ನಡವನ್ನು ಅಧ್ಯಯನ ಮಾಡುವವರು ಆ ಕನ್ನಡವು ಇತರ ಕನ್ನಡಗಳೊಡನೆ ಹೊಂದಿರುವ ಸಂಬಂಧಾಂತರಗಳನ್ನು ಗುರುತಿಸುವ ಕೆಲಸವನ್ನು ಮಾತ್ರ ವಹಿಸಿಕೊಳ್ಳುತ್ತಾರೆ. ಈ ಸಂಬಂಧಾಂತರಗಳು ಭಾಷೆಯ ಬಳಕೆಯನ್ನು ಪ್ರಭಾವಿಸುವ ಬಗೆ, ಭಾಷಾಕಲಿಕೆಯ ಮೇಲೆ ಈ ಅಂಶಗಳ ಪರಿಣಾಮ ಇತ್ಯಾದಿ ಸಂಗತಿಗಳು ಅವರ ಆಸಕ್ತಿಯ ಆಚೆಗೆ ಉಳಿಯುತ್ತವೆ.

ಭಾಷಾಧ್ಯಯನಗಳು ಸರಿತಪ್ಪುಗಳನ್ನು ಸೂಚಿಸುವ, ಯೋಗ್ಯ ಮಾದರಿಗಳನ್ನು ಸೂಚಿಸುವ ಕೆಲಸದಿಂದ ದೂರ ಉಳಿಯಬೇಕೆಂದು ಹೇಳುವವರಲ್ಲಿ ಎರಡು ವಿಧ: ಭಾಷೆಯು ತನ್ನದೇ ಆದ ನಿಯಮಗಳಿಗನುಗುಣವಾಗಿ ಬೆಳೆಯುತ್ತದೆಯಾಗಿ ಅದರಲ್ಲಿ 'ತಲೆತೂರಿಸಿ' ಸರಿತಪ್ಪುಗಳನ್ನು ಹೇಳುವುದು, ಯೋಗ್ಯ ಪ್ರಯೋಗಗಳನ್ನು ಸೂಚಿಸುವುದು ಅಸಾಧ್ಯವೆನ್ನವುದು ಒಂದು ವಾದ. ಈ ವಾದವನ್ನು ನಂಬುವವರು, ಭಾಷೆಯನ್ನು ತಿದ್ದುವುದು ಎಂದರೆ ಹವಾಮಾನವನ್ನು ಬದಲಾಯಿಸಲು ಹೊರಟಂತೆ ಎನ್ನುತ್ತಾರೆ. ಹವಮಾನವನ್ನು ಅಧ್ಯಯನ ಮಾಡಿ 'ಅರಿತು'ಕೊಳ್ಳಬಹುದೇ ಹೊರತು ಬದಲಾಯಿಸಲು ಸಾಧ್ಯವಿಲ್ಲವಷ್ಟೆ. ಹಾಗೆ ಭಾಷೆಯ ಅಧ್ಯಯನ ಕೂಡ.

ಎರಡನೆಯ ವಾದದಂತೆ ಭಾಷೆಯಲ್ಲಿ ಎಲ್ಲ ಪ್ರಯೋಗಗಳಿಗೂ ಎಲ್ಲ ಬಳಕೆಗಳಿಗೂ ಅದರದೇ ಆದ ನಿಯಮಗಳಿರುವುದರಿಂದ ಎಲ್ಲವೂ ಸಮರ್ಥನೀಯವೇ ಆಗಿರುತ್ತವೆ.

ಆದ್ದರಿಂದ ಅವುಗಳಲ್ಲಿ ಆಯ್ಕೆಯನ್ನು ಮಾಡುವುದು ಅನೈತಿಕವೆಂದು ಈ ವಾದ ಮಂಡಿಸುವವರ ನಿಲುವು. ಹೀಗೆ ಆಯ್ಕೆ ಮಾಡಲು ಹೊರಟಾಗ ಸಾಮಾಜಿಕವಾಗಿ ಇರುವ ಶ್ರೇಣೀಕರಣವನ್ನು ಪರೋಕ್ಷವಾಗಿ ಸಮರ್ಥಿಸಿದಂತಾಗುತ್ತದೆಂದು ಈ ವಾದ ಮಂಡಿಸುವವರು ತಿಳಿಯುತ್ತಾರೆ. ಭಾಷೆಯ ಬೆಳವಣಿಗೆಯಲ್ಲಿ 'ತಲೆ ತೂರಿಸುವುದು' ಅಶಕ್ಯವೆನ್ನುವವರು ಶಾಸ್ತ್ರ ಶುದ್ಧತೆಗೆ ಕಟ್ಟು ಬಿದ್ದವರು. ಇಲ್ಲವೇ ಹೀಗೆ 'ತಲೆ ತೂರಿಸುವುದು' ಅನೈತಿಕವೆನ್ನುವವರು ಪ್ರಜಾಪ್ರಭುತ್ವದ ಸಮಾನತೆಯ ನೆಲೆಗೆ ಕಟ್ಟುಬಿದ್ದವರು. ಈ ವಾದಗಳನ್ನು ನಾವಿಲ್ಲಿ ಸಾರಾಸಗಟಾಗಿ ತಳ್ಳಿಹಾಕುತ್ತಿಲ್ಲ. ಹಾಗಾದರೆ ಭಾಷಾಧ್ಯಯನಗಳಿಗೆ ಸಾಮಾಜಿಕವಾದ ಯಾವ ಹೊಣೆಗಾರಿಕೆಯೂ ಇಲ್ಲವೇ ಎಂಬ ಪ್ರಶ್ನೆಯನ್ನು ಮಾತ್ರ ಕೇಳಬೇಕಾಗಿದೆ.

ಭಾಷಾಧ್ಯಯನಗಳಿಗೆ ಸಾಮಾಜಿಕ ನೆಲೆಗಟ್ಟನ್ನು ಒದಗಿಸಬೇಕೆಂದು ಹವಣಿಸುವವರೂ ಇದ್ದಾರೆ. ಅವರಲ್ಲಿ ಬಹುಪಾಲು ಜನರ ಅಧ್ಯಯನಗಳು ಭಾಷಿಕ ವಿಕಲ್ಪಗಳಿಗೂ ಸಾಮಾಜಿಕ ಪ್ರಕ್ರಿಯೆಗಳಿಗೂ ಸಂಬಂಧಗಳನ್ನು ಹುಡುಕಲು ಯತ್ನಿಸುತ್ತವೆ. ಉದಾಹರಣೆಗೆ ಕನ್ನಡದ ಒಂದು ವಿಕಲ್ಪದಲ್ಲಿ ಮಹಾಪ್ರಾಣಗಳು ಲೋಪಗೊಳ್ಳುವುದು.; ಶ ಷ ಗಳ ಬದಲು ಸ ಕಾರವನ್ನು ಬಳಸುವುದು; ಹಕಾರವನ್ನು ಲೋಪಗೊಳಿಸುವುದು ಕಂಡುಬರುತ್ತದೆಂದುಕೊಳ್ಳೋಣ. ಸಾಮಾಜಿಕ ಭಾಷಾಶಾಸ್ತ್ರಜ್ಞರು ಈ ವಿಕಲ್ಪಕ್ಕೂ ಸಾಮಾಜಿಕ ಸಂದರ್ಭವೊಂದಕ್ಕೂ ನಂಟನ್ನು ಗುರುತಿಸುತ್ತಾರೆ. ಜಾತಿ ವ್ಯತ್ಯಾಸ, ಔಪಚಾರಿಕ ಶಿಕ್ಷಣವಿಲ್ಲದಿರುವುದು ಮುಂತಾದ ಸಂಗತಿಗಳಿಗೂ ಕನ್ನಡದ ಈ ವಿಕಲ್ಪಕ್ಕೂ ಸಂಬಂಧವಿರುವುದನ್ನು ತಮ್ಮ ಅಧ್ಯಯನದ ಫಲಿತಾಂಶವನ್ನಾಗಿ ಹೇಳುತ್ತಾರೆ. ಅಂದರೆ ಈ ವಿಕಲ್ಪವನ್ನು ಕೆಳಜಾತಿಯವರು ಮತ್ತು ಔಪಚಾರಿಕ ಶಿಕ್ಷಣವನ್ನು ಪಡೆಯದವರು ಬಳಸುತ್ತಾರೆಂದು ತೋರಿಸಿಕೊಡುತ್ತಾರೆ.

ಭಾಷಾಧ್ಯಯನಗಳಿಗೆ ಸಾಮಾಜಿಕ ನೆಲೆಗಳನ್ನು ಒದಗಿಸುವ ಈ ಯತ್ನಗಳೂ ಕೂಡ ಅನ್ಯ ಸಾಮಾಜಿಕ ಅಧ್ಯಯನಗಳಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಸಮಾಜ ಶಾಸ್ತ್ರಜ್ಞರು ಬೇರೆ ಬಗೆಯಿಂದ ನಿರೂಪಿಸಿದ ಸಂಗತಿಗಳನ್ನು ಭಾಷೆಯ ಮಾಹಿತಿಯ ಮೂಲಕ ಈ ಭಾಷಾಧ್ಯಯನಕಾರರು ಸಮರ್ಥಿಸುತ್ತಿರುತ್ತಾರೆ. ಅಂದರೆ ಭಾಷಾ ಸಂಚಲನೆಗಳು ಸಾಮಾಜಿಕ ಸೂಚನೆಗಳಿಗೆ ಸೂಚಕಗಳಾಗಿರುತ್ತವೆಂಬ ನಿಲುವಿನ ಅಧ್ಯಯನಗಳಿವು. ಇಲ್ಲಿಯೂ ಭಾಷಾ ವಿಕಲ್ಪಗಳನ್ನು ಸಮರ್ಥಿಸುವ ವಿಧಾನವೇ ಮುಸುಕಿನಲ್ಲಿ ಮುಂದುವರಿಯುತ್ತದೆಂಬುದನ್ನು ಗಮನಿಸಬೇಕು.

**ಹಾಗಿದ್ದರೇನು ಮಾಡಬೇಕು?**

ಭಾಷೆಯಲ್ಲಿ ಯಾವುದು ಸರಿ ಯಾವುದು ತಪ್ಪು, ಯಾವುದು ಯುಕ್ತ ಯಾವುದು ಅಲ್ಲವೆಂಬುದನ್ನು ನಾವು ಹೇಳುವುದಿಲ್ಲವೆಂದು ಭಾಷಾಶಾಸ್ತ್ರಜ್ಞರು ವ್ರತ ಹಿಡಿದು ಕುಳಿತಿರಲಿ. ಆದರೆ ಇಂಥ ಆಯ್ಕೆಗಳು ನಿರ್ದೇಶಗಳು ಭಾಷೆಗೆ ದೊರಕುತ್ತಲೇ ಇರುತ್ತವೆ. ವಿಪರ್ಯಾಸದ ಸಂಗತಿಯೆಂದರೆ ಇಂಥ ನಿರ್ದೇಶಗಳನ್ನು ನೀಡುವವರು ಭಾಷೆಯ

ರಚನೆಯನ್ನು, ಅದರ ಬೆಳವಣಿಗೆಯ ನೆಲೆಗಳನ್ನು ಅರಿತವರಾಗಿರುವುದಿಲ್ಲ. ಈ ಕಾರಣದಿಂದ ಭಾಷಾಶಾಸ್ತ್ರಜ್ಞರ ಹೊಣೆ ಮತ್ತಷ್ಟು ಹೆಚ್ಚಾಗುತ್ತದೆ. ರೋಗನಿಧಾನ, ನಿವಾರಣೆಗಳನ್ನು ಅರಿತಿಲ್ಲದ ಹುಸಿವೈದ್ಯರು ಜನಾರೋಗ್ಯದ ಹೊಣೆಹೊರಲು ಹೊರಟಾಗ ಎಲ್ಲ ಬಲ್ಲ ವೈದ್ಯನ ಹೊಣೆ ಹೆಚ್ಚಾಗುತ್ತದಷ್ಟೆ. ತನ್ನ ತಜ್ಞತೆಯನ್ನು ಶುದ್ಧವಾಗಿರಿಸಿಕೊಳ್ಳಲು ಸಾಮಾಜಿಕ ಹೊಣೆಗಾರಿಕೆಯನ್ನು ಬಿಟ್ಟುಕೊಡುವುದು ಒಂದು ಅಪರಾಧವೇ ಆಗುವುದು. ಭಾಷಾಶಾಸ್ತ್ರಜ್ಞರು ಈ ಅಂಶವನ್ನು ಗಮನಿಸಬೇಕು.

ಅಲ್ಲದೆ ಹಿಂದೆ ಭಾಷೆಯ ಬೆಳವಣಿಗೆಯನ್ನು ನಿರ್ದೇಶಿಸಲು ಹೊರಟವರ ಯತ್ನಗಳ ವೈಫಲ್ಯವನ್ನು ಈಗ ನಿದರ್ಶನವನ್ನಾಗಿ ಕೊಡುವುದು ಸರಿಯಾಗಲಾರದು. ಏಕೆಂದರೆ ಹಿಂದೆ ಆ ಕೆಲಸವನ್ನು ಮಾಡಲು ಹೊರಟವರು ರಾಜಾಶ್ರಯದಲ್ಲಿಯೋ ಮಠಮಾನ್ಯಗಳ ಆಶ್ರಯದಲ್ಲಿಯೋ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಅವರ ತಜ್ಞತೆಯ ಉಪಯೋಗ ಹೀಗಾಗಿ ಕೆಲಮಟ್ಟಿಗೆ ಕುಂಠಿತಗೊಂಡಿರುವುದೂ ಸಾಧ್ಯ. ಆದರೆ ಈಗ ಹಾಗಿಲ್ಲ. ಭಾಷಾಶಾಸ್ತ್ರಜ್ಞರಿಗೆ ಹತ್ತಾರು ಬಗೆಯ ಸಾಮಾಜಿಕ ಸಂಸ್ಥೆಗಳು ಬೆಂಬಲವಾಗಿರುತ್ತವೆ. ತಾವು ಯೋಚಿಸಿದ ಮಾದರಿಗಳನ್ನು ಪರೀಕ್ಷಿಸಿ ನೋಡಲು ಹಲವಾರು ವೇದಿಕೆಗಳು ಅವರಿಗೆ ಉಪಲಬ್ಧವಿವೆ. ತಪ್ಪುಗಳಾಗದಂತೆ ನೋಡಿಕೊಳ್ಳಲು ಇವೆಲ್ಲ ಸೌಲಭ್ಯಗಳಿರುವಾಗ ಭಾಷಾಧ್ಯಯನಕಾರರು ತಮ್ಮ ಹೊಣೆಯನ್ನು ನಿರ್ವಹಿಸಲು ಹಿಂಜರಿಯಬಾರದೆಂದು ತೋರುತ್ತದೆ.

ಜಗತ್ತಿನ ಹಲವುಭಾಷಾ ಸಂದರ್ಭಗಳನ್ನು ಗಮನಿಸಿದರೆ ಅಲ್ಲಿ ಭಾಷಾಧ್ಯಯನಕಾರರು ಇಂಥ ಹೊಣೆಯನ್ನು ಹೊರಲು ಹಿಂಜರಿದಿಲ್ಲವೆಂಬ ಸಂಗತಿ ಗೊತ್ತಾಗುತ್ತದೆ. ಅವರು ಭಾಷಾಶಾಸ್ತ್ರದ ಈ ಶತಮಾನದ ಹಿಂಜರಿಕೆಗಳಿಗೆ ಕಟ್ಟುಬೀಳದೆ ಭಾಷೆಯ ಬೆಳವಣಿಗೆಗೆ ನಿರ್ದೇಶಕ ಸೂತ್ರಗಳನ್ನು ನೀಡಿದ್ದಾರೆ. ಅದರಿಂದ ಆ ಭಾಷೆಗಳು ಹೊಸ ಜವಾಬ್ದಾರಿಗಳಿಗೆ ಸನ್ನದ್ಧವಾಗಿವೆ. ಕನ್ನಡದ ಮಟ್ಟಿಗೆ ಈ ಯತ್ನಗಳು ವ್ಯವಸ್ಥಿತವಾಗಿ ನಡೆದಿಲ್ಲ. ಕನ್ನಡ ಕನ್ನಡ ನಿಘಂಟು ರಚನೆ. ಕನ್ನಡ ವಿಶ್ವಕೋಶ ರಚನೆ ಮುಂತಾದ ಬೃಹತ್ ಪ್ರಮಾಣದ ಸಾಂಸ್ಥಿಕ ಯೋಜನೆಗಳು ಹೇಗೋ ಪ್ರಾರಂಭಗೊಂಡು ಸಾಗಿವೆ. 1896 ರ ಸುಮಾರಿನಲ್ಲಿ ಕನ್ನಡ ಭಾಷೆಯ ಅಭಿವೃದ್ಧಿಯನ್ನು ಕುರಿತು ಯೋಜನೆಗಳನ್ನು ಹಾಕಿಕೊಳ್ಳಲು ಮೈಸೂರಿನಲ್ಲಿ ಸಾಂಸ್ಥಿಕ ಪ್ರಯತ್ನಗಳು ಮೊದಲಾಗಿವೆ. 1911ರಲ್ಲಿ ಬಿ.ಎಂ.ಶ್ರೀಯವರು ಧಾರವಾಡದಲ್ಲಿ ಮಾಡಿದ 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ಭಾಷಣ ಇಂಥ ಚಿಂತನೆಗಳಿಗೊಂದು ಆಕಾರವನ್ನು ನೀಡಿದೆ. ಇವುಗಳ ಹಿಂದೆ ಭಾಷಾಭಿವೃದ್ಧಿಯ ಬಗೆಗೆ ಸಾಮುದಾಯಿಕವಾಗಿ ಬೆಳೆದಿದ್ದ ಕಾಳಜಿಗಳು ಪ್ರಧಾನಪಾತ್ರ ವಹಿಸಿವೆ. ಆದರೆ ಆಧುನಿಕ ಭಾಷಾಶಾಸ್ತ್ರದ ನೆಲೆಗಳಲ್ಲಿ ತರಬೇತು ಪಡೆದವರು ಈ ಬಗೆಯ ತೊಡಗುವಿಕೆಯಿಂದ ದೂರವೇ ಉಳಿದಿದ್ದಾರೆ. ಅಥವಾ ಹೀಗೂ ಹೇಳಬಹುದೇನೋ. ಆಧುನಿಕ ಭಾಷಾಶಾಸ್ತ್ರದಿಂದ ದೊರೆತ ಅರಿವು ಭಾಷಾಭಿವೃದ್ಧಿಯ ವ್ಯವಸ್ಥಿತ ಪ್ರಯತ್ನಗಳಿಗೆ ಪೂರ್ಣಪ್ರಮಾಣದಲ್ಲಿ ದೊರೆತಿಲ್ಲ.

ಕನ್ನಡದಲ್ಲಿ ಬರೆಯುವವರು, ಕನ್ನಡವನ್ನು ಓದುವವರು ದಿನೇದಿನೇ ಹೆಚ್ಚುತ್ತಿದ್ದಾರೆ. ಬರೆಯುವವರು ಮತ್ತು ಓದುವವರು ಇವರ ನಡುವಣ ಸಂಬಂಧ ಕೂಡ ದಿನಕಳೆದಂತೆ ಹೊಸ ನೆಲೆಗಳಿಗೆ ದಾಟುತ್ತಿದೆ. ಕನ್ನಡವನ್ನು ಬಳಸಬೇಕಾದ ವಲಯಗಳೂ ವಿಸ್ತಾರಗೊಳ್ಳುತ್ತಿವೆ. ಕನ್ನಡವನ್ನು ಓದಲು, ಕೇಳಲು ಒದಗಿಸುವ ವಿಧಾನಗಳೂ ಕೂಡ ಬದಲಾಗುತ್ತಿವೆ. ಇವೆಲ್ಲ ಬದಲಾವಣೆಗಳು ದಿನದಿನದ ಕನ್ನಡ ಬಳಕೆಯಲ್ಲಿ ನೂರಾರು ತೊಡಕುಗಳನ್ನು ತಂದಿವೆ; ಗೊಂದಲಗಳನ್ನು ಬೆಳೆಸಿವೆ. ಈ ಸಂದರ್ಭದಲ್ಲಿ ಕನ್ನಡ ಭಾಷಿಕರಿಗೆ ಲಭ್ಯವಿರುವ ಒಂದು ಬಗೆಯ ಅಂತಸ್ಥ ತಿಳುವಳಿಕೆಯನ್ನು ನೆಮ್ಮಿ ಹೇಗೋ ಆಗುವುದೆಲ್ಲ ಒಳ್ಳೆಯದಕ್ಕೆ ತಾನೇ ಎಂದು ಸುಮ್ಮನಿರಬಹುದು. ಅಥವಾ ತಜ್ಞರಲ್ಲದವರು ಭಾಷೆಯ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ಜಾರಿಗೆ ತರುವುದನ್ನು ನೋಡುತ್ತ ಕೂರಬಹುದು. ಇವೆರಡೂ ಆರೋಗ್ಯಕರ ಬೆಳವಣಿಗೆಗಳಿಗೆ ಕಾರಣವಾಗಲಾರವು. ಭಾಷಾಶಾಸ್ತ್ರಜ್ಞರು ಈಗ ತಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ವಹಿಸಲು ಸಿದ್ಧರಾಗಬೇಕು. ಈ ಕಾಲಘಟ್ಟ ಅವರಿಗೆ ಒದಗಿಸಿರುವ ಸವಾಲುಗಳನ್ನು ಎದುರಿಸಿ ಕನ್ನಡವನ್ನು ಯೋಜಿತ ಮಾದರಿಯಲ್ಲಿ ರೂಪಿಸಲು ನೆರವಾಗಬೇಕು. ಈಗ ತಮ್ಮ ಶಾಸ್ತ್ರದ ತಾತ್ವಿಕ ನೆಲೆಗಳಿಗೆ ಜೋತುಬಿದ್ದು ಹಿಂಜರಿದರೆ ಮತ್ತೆ ಹಾದಿಹತ್ತುವ ಅವಕಾಶಗಳು ದೊರಕುವ ಸಂಭವ ಕಡಿಮೆಯೆಂದು ತೋರುತ್ತದೆ.

# ಭಾಷೆ ಮತ್ತು ಸತ್ಯ

**'ಸತ್ಯದ ಸ್ವರೂಪವನ್ನು ನಾನು ತಿಳಿದುಕೊಂಡಂತೆ ಸತ್ಯಾಗ್ರಹಿಯ ಮುಖದಿಂದ ಹೊರಟ ಶಬ್ದಗಳಿಗೆ ಒಂದೇ ಅರ್ಥ ಇರುವ ಅವಶ್ಯಕತೆ ಇಲ್ಲ. ಅವನು ವ್ಯಕ್ತಪಡಿಸುವ ಭಾಷೆಗೆ ಎರಡೇಕೆ, ಅನೇಕ ಅರ್ಥಗಳೂ ಆಗಬಹುದು. ಇಷ್ಟೇ, ಆ ಅರ್ಥಗಳು ಗೌಪ್ಯವಾಗಿರಬಾರದು. ಯಾರಿಗೂ ಮೋಸ ಮಾಡುವಂತಿರಬಾರದು ಮತ್ತು ಆ ಅರ್ಥಗಳು ಅನಿವಾರ್ಯವಾಗಿರಬೇಕು. ಸತ್ಯವನ್ನು ಮರೆಮಾಚಲು ಆ ಭಾಷೆಯ ಪ್ರಯೋಗವಾಗಿರಬಾರದು. ಎರಡರ್ಥದ ಭಾಷೆಯನ್ನು ಪ್ರಕಟವಾಗಿಯೇ ನಾವು ಆಡುತ್ತಿರುವಾಗ ಸತ್ಯವನ್ನು ಬಿಟ್ಟಂತಾಗುವುದಿಲ್ಲ. ಒಮ್ಮೊಮ್ಮೆ ಹೀಗೆಯೂ ಆಗುತ್ತದೆ. ನಮ್ಮ ಮನಸ್ಸಿನಲ್ಲಿ ಒಂದೇ ಅರ್ಥವಿರುತ್ತದೆ. ಆದರೆ ಜನರು ನಮ್ಮ ಶಬ್ದಗಳ ಅನೇಕ ಅರ್ಥಗಳನ್ನು ಮಾಡಿಕೊಳ್ಳುತ್ತಾರೆ. ಇದರಲ್ಲಿಯೂ ಸತ್ಯದ ತ್ಯಾಗವಿಲ್ಲ.....'** (ಗಾಂಧೀ ಸೇವಾ ಸಂಘದ ವಾರ್ಷಿಕ ಅಧಿವೇಶನ ಕರ್ನಾಟಕದ ಹುದಲಿಯಲ್ಲಿ 1937ರಲ್ಲಿ ನಡೆದಾಗ ಆ ಅಧಿವೇಶನದ ಸಮಾರೋಪ ಸಮಾರಂಭದ ಭಾಷಣದಲ್ಲಿ ಮಹಾತ್ಮ ಗಾಂಧಿಯವರು ಆಡಿದ ಮಾತುಗಳಿವು.)

ಭಾಷೆಗೂ ಸತ್ಯಕ್ಕೂ ಇರುವ ನಂಟನ್ನು ಕುರಿತಂತೆ ತತ್ವಶಾಸ್ತ್ರಜ್ಞರು ಬಹುವಾಗಿ ಚರ್ಚಿಸಿದ್ದಾರೆ. ಸುಳ್ಳು ಹೇಳುವುದು ಸಾಧ್ಯವಿರುವುದು ಭಾಷೆಯ ಸ್ವರೂಪದಿಂದಾಗಿಯೇ ಎಂಬುದಂತೂ ಈಗಾಗಲೇ ಒಪ್ಪಿತವಾದ ಸಂಗತಿ. ಒಂದು ವಾಕ್ಯವನ್ನು ಅಥವಾ ವಾಕ್ಯ ಸಮುಚ್ಚಯವನ್ನು ಸುಳ್ಳು ಎಂದು ಯಾವಾಗ ತಿಳಿಯುತ್ತೇವೆ? ಆ ವಾಕ್ಯಗಳಿಗೆ ಲೋಕಸಂವಾದಿತವಿಲ್ಲದಿರುವಾಗ ತಾನೇ. ಸುಳ್ಳುಗಳನ್ನು ವ್ಯಾವಹಾರಿಕ ಜಗತ್ತಿನಲ್ಲಿ ಗುರುತಿಸುವುದು ಸುಲಭ. ಆದರೆ ಎಷ್ಟೋ ವೇಳೆ ಸುಳ್ಳುಗಳನ್ನು ಹಾಗೆ ಬೆರಳಿಟ್ಟು ಗುರುತಿಸಲು ಸಾಧ್ಯವಾಗದಿರುವ ಸಂದರ್ಭಗಳು ಆಧುನಿಕ ಜಗತ್ತಿನ ಭಾಷಾ ಬಳಕೆಗಳಲ್ಲಿ ಅಧಿಕಗೊಳ್ಳುತ್ತಿವೆ. ಮೇಲೆ ಉಲ್ಲೇಖಿಸಿದ ಗಾಂಧಿಯವರ ಮಾತಿನಲ್ಲಿ ಅಡಕವಾಗಿರುವ ಅಭಿಪ್ರಾಯದಂತೆ ನಾವು ಬಳಸುವ ಮಾತಿಗೆ ಒಂದಕ್ಕಿಂತ ಹೆಚ್ಚು ಅರ್ಥಗಳು ಇರುವುದು ತಪ್ಪಲ್ಲ. ಆದರೆ ಆ ಅರ್ಥಗಳಲ್ಲಿ ಒಂದು ಇನ್ನೊಂದನ್ನು ಮುಚ್ಚಿಡುವುದಕ್ಕಾಗಿ ಬಳಕೆಯಾಗಬಾರದು. ಅಥವಾ ನಮ್ಮ ಮಾತಿನಿಂದ ಹೊರಡಬಹುದಾದ ಎಲ್ಲ ಅರ್ಥಗಳೂ ನಮಗೆ ಗೊತ್ತಿರಬೇಕು.

ಜಾರ್ಜ್ ಆರ್ವೆಲ್ ತನ್ನ 1984 ಕಾದಂಬರಿಯಲ್ಲಿ ಡಬಲ್‌ಸ್ಪೀಕ್ ಎಂಬ ರಚನೆಯೊಂದನ್ನು ಬಳಸಿದ್ದಾನೆ. ಅನಂತರದಲ್ಲಿ ಆ ಮಾತು ಬಹಳ ಚರ್ಚೆಗೆ ಒಳಗಾಗಿದೆ. ಆ ಮಾತಿನ ಅರ್ಥವಿಷ್ಟೇ: ನಾವು ಅರ್ಥವನ್ನು ಸಂವಹನಗೊಳಿಸಲು ಭಾಷೆಯನ್ನು

ಬಳಸುತ್ತಿರುವಂತೆ ತೋರಿದರೂ ನಿಜವಾಗಿ ಅರ್ಥವನ್ನು ಮುಚ್ಚಿಡಲು ಯೋಜಿಸಿರುತ್ತೇವೆ. ಕೆಟ್ಟದ್ದೂ ಒಳ್ಳೆಯದಾಗಿ ಕಾಣಿಸುವಂತೆ ಮಾಡುವ, ಇಲ್ಲದಿರುವುದನ್ನು ಇರುವಂತೆ ತೋರಿಸುವ, ಅಸಹ್ಯವಾದುದನ್ನೂ ಸಹ್ಯವಾಗಿಸುವಂತೆ ಭ್ರಮೆ ಹುಟ್ಟಿಸುವ ಸಾಮರ್ಥ್ಯ ಈ ಬಗೆಯ ಭಾಷಾ ಬಳಕೆಗೆ ಇರುತ್ತದೆ. ಮಾತಾಡುತ್ತಿರುವ ಅಥವಾ ಬಳಸುತ್ತಿರುವ ವ್ಯಕ್ತಿಯು ಸಾಮಾಜಿಕ ಜವಾಬ್ದಾರಿಯುನ್ನು ಮುಚ್ಚಿಡಲು ಈ ಭಾಷಾ ಬಳಕೆ ಸಮರ್ಥವಾಗಿರುತ್ತದೆ. "ಲಾಂಗ್ವೇಜ್ ವಿಚ್ ಪ್ರಿಟೆಂಡ್ಸ್ ಟು ಕಮ್ಯುನಿಕೇಟ್, ಬಟ್ ರಿಯಲೀ ಡಸ್ನಾಟ್, ಇಟ್ ಈಸ್ ಲಾಂಗ್ವೇಜ್ ವಿಚ್ ಮೇಕ್ಸ್ ದ ಬ್ಯಾಡ್ ಸೀಮ್ ಗುಡ್, ದ ನೆಗೆಟಿವ್ ಸೀಮ್ ಪಾಸಿಟಿವ್, ದ ಅನ್‌ಪ್ಲೆಸೆಂಟ್ ಅಪಿಯರ್ ಅಟ್ರ್ಯಾಕ್ಟಿವ್ ಆರ್ ಅಟ್ ಲೀಸ್ಟ್ ಟಾಲರೆಬಲ್. ಇಟ್ ಈಸ್ ಲಾಂಗ್ವೇಜ್ ವಿಚ್ ಅವಾಯ್ಡ್ಸ್ ಆರ್ ಶಿಫ್ಟ್ಸ್ ರೆಸ್ಪಾನ್ಸಿಬಲಿಟಿ. ಲಾಂಗ್ವೇಜ್ ವಿಚ್ ಅಟ್ ವೇರಿಯೆನ್ಸ್ ವಿತ್ ಇಟ್ಸ್ ರಿಯಲ್ ಆರ್ ಇಟ್ಸ್ ಪರ್‌ಪೋರ್ಟೆಡ್ ಮೀನಿಂಗ್. ಇಟ್ ಈಸ್ ಲಾಂಗ್ವೇಜ್ ವಿಚ್ ಕನ್ಸೀಲ್ಸ್ ಅಪ್ರಾಪ್ರಿಯೇಟ್ ಥಾಟ್" ಒಟ್ಟಾರೆ ಏನನ್ನು ಹೇಳಬೇಕಾಗಿದೆಯೋ ಆ ಅರ್ಥವನ್ನು ಮರೆಮಾಚಲು ಸಾಧ್ಯವಾಗುವಂತೆ ಭಾಷೆಯನ್ನು ಬಳಸುವುದು; ಅಂದರೆ ಹೇಳುವವರು ಏನನ್ನು ಹೇಳುತ್ತಿದ್ದಾರೆ ಅಥವಾ ಅವರ ಉದ್ದೇಶವೇನೆಂಬುದು ನಮ್ಮ ಗಮನಕ್ಕೆ ಬಾರದಂತೆ ಭಾಷಿಕ ರಚನೆಯನ್ನು ರೂಪಿಸುವುದು ಡಬಲ್‌ಸ್ಪೀಕ್ ಎನಿಸಿಕೊಳ್ಳುತ್ತದೆ. ನಮ್ಮ ವ್ಯವಹಾರದ ಹತ್ತಾರು ಕ್ಷೇತ್ರಗಳು ಅದರಲ್ಲೂ ರಾಜಕಾರಣದ ಭಾಷೆ ಇಂಥಹ ಭಾಷಿಕ ಬಳಕೆಗೆ ಅಗಾಧ ಪ್ರಮಾಣದ ನಿದರ್ಶನವನ್ನು ಒದಗಿಸುತ್ತವೆ ಎಂದು ಆರ್ವೆಲ್ ಹೇಳುತ್ತಾನೆ.

ಆರ್ವೆಲ್‌ನ ಈ ವಿಚಾರಗಳು ಇಂಗ್ಲಿಶ್ ಮಾತಾಡುವ ಜಗತ್ತನ್ನು ಎಷ್ಟು ಪ್ರಭಾವಿಸಿವೆ ಎಂದರೆ ಮಾತಿನಲ್ಲಿ ಈ ಬಗೆಯ ಡಬಲ್‌ಸ್ಪೀಕ್ ಅನ್ನು ಕೈ ಬಿಡಬೇಕೆಂದು ತೀವ್ರ ಚಳುವಳಿಗಳು ನಡೆದಿವೆ. ಉತ್ತರ ಅಮೆರಿಕಾದಲ್ಲಿ 1974ರಿಂದ ಭಾಷೆಯ ಬಳಕೆಯಲ್ಲಿ ಈ ಬಗೆಯ ಡಬಲ್‌ಸ್ಪೀಕ್‌ಗಳನ್ನು ಗುರುತಿಸಿ ಅವುಗಳನ್ನು ಪಟ್ಟಿ ಮಾಡುವ ಪರಂಪರೆಯೊಂದು ಪ್ರಾರಂಭವಾಗಿದೆ. ಹಾಗೆ ಗುರುತಿಸಲಾದ ಕೆಲವು ಮಾದರಿಗಳನ್ನು ಈ ಕೆಳಗೆ ಕೊಡಲಾಗಿದೆ. ಕಾಂಬೊಡಿಯಾದಲ್ಲಿ ಅಮೆರಿಕಾ ಒಂದೇ ಸಮನೆ ಜನರ ಮೇಲೆ ಬಾಂಬು ದಾಳಿಮಾಡುತ್ತಿರುವುದನ್ನು ಪತ್ರಿಕೆಗಳು ವರದಿ ಮಾಡುತ್ತಿದ್ದವು. ಆಗ ವಾಯುಸೇನಾಧಿಕಾರಿಯೊಬ್ಬರ ಪ್ರತಿಕ್ರಿಯೆ ಹೀಗಿತ್ತು. " ಯೂ ಆಲ್ವೇಸ್ ರೈಟ್ ಇಟ್ಸ್ ಬಾಂಬಿಂಗ್, ಬಾಂಬಿಂಗ್, ಬಾಂಬಿಂಗ್. ಇಟ್ ಈಸ್ ನಾಟ್ ಬಾಂಬಿಂಗ್. ಇಟ್ಸ್ ಏರ್ ಸಪೋರ್ಟ್" ಒಂದೇ ಕ್ರಿಯೆಯನ್ನು ಎರಡು ರೀತಿಗಳಲ್ಲಿ ವರ್ಣಿಸುವ ಕ್ರಮವಿದು. 'ಏರ್ ಸಪೋರ್ಟ್' ಎಂದಾಗ 'ಬಾಂಬಿಂಗ್' ಎಂಬ ಪದದಲ್ಲಿರುವ ಅಪರಾಧದ ಅಂಶ ಇಲ್ಲವಾಗುತ್ತದೆ ಅಲ್ಲವೇ? ಹಾಗೆಯೇ ಅಮೆರಿಕಾದ ಸೈನ್ಯ ವ್ಯವಸ್ಥೆಯ ಕೇಂದ್ರಸ್ಥಾನ ಪೆಂಟಗಾನ್, ನ್ಯೂಟ್ರಾನ್ ಬಾಂಬ್‌ಗೆ ನೀಡಿರುವ ವಿವರಣೆ ಹೀಗಿದೆ. ಆ್ಯನ್ ಎಫಿಸಿಯೆಂಟ್ ನ್ಯೂಕ್ಲಿಯರ್ ವೆಪನ್ ದಟ್ ಎಲಿಮಿನೇಟ್ಸ್ ಆ್ಯನ್ ಎನಿಮಿ ವಿತ್ ಎ ಮಿನಿಮಮ್ ಡಿಗ್ರಿ ಆಫ್ ಡ್ಯಾಮೇಜ್ ಆಫ್ ಫ್ರೆಂಡ್ಲಿ ಟೆರಿಟರಿ"

ನೋಂ ಚಾಮ್‌ಸ್ಕಿ ತನ್ನ ಉಪನ್ಯಾಸವೊಂದರಲ್ಲಿ ನೀಡುವ ಇನ್ನೊಂದು ಉದಾಹರಣೆ ಹೀಗಿದೆ. ಎರಡನೆಯ ಮಹಾಯುದ್ಧಕ್ಕೆ ಮೊದಲು ಅಮೆರಿಕಾದ ರಾಜ್ಯವ್ಯವಸ್ಥೆಯಲ್ಲಿ ಯಾವ ಸರಕಾರಿ ಇಲಾಖೆಯನ್ನು **'ವಾರ್ ಡಿಪಾರ್ಟ್‌ಮೆಂಟ್'** ಎಂದು ಕರೆಯಲಾಗುತ್ತಿತ್ತೋ ಅದನ್ನೇ ಯುದ್ಧಾನಂತರದಲ್ಲಿ **'ಡಿಫೆನ್ಸ್ ಡಿಪಾರ್ಟ್‌ಮೆಂಟ್'** ಎಂದು ಕರೆಯಲಾಗುತ್ತಿದೆ. ಇಲಾಖೆಯ ಕರ್ತವ್ಯದ ಸ್ವರೂಪದಲ್ಲಿ ಗುಣಾತ್ಮಕ ಬದಲಾವಣೆ ಇಲ್ಲದಿದ್ದರೂ ಹೆಸರಿನಲ್ಲಿ ಆಗಿರುವ ವ್ಯತ್ಯಾಸದಿಂದ ಇಲಾಖೆಗೆ ಒಂದು ಬಗೆಯ ನೈತಿಕತೆಯನ್ನು ತಂದಕೊಡಲು ಯತ್ನಿಸಿರುವುದು ಸ್ಪಷ್ಟವಾಗಿದೆ. ಹಾಗೆ ನೋಡಿದರೆ ಡಿಫೆನ್ಸ್ ಡಿಪಾರ್ಟ್‌ಮೆಂಟ್ ಎಂದು ಹೆಸರು ಪಡೆದ ಅನಂತರದ ಐವತ್ತು ವರ್ಷಗಳಲ್ಲಿಯೇ ಅಮೆರಿಕಾ ಎಂದಿಗಿಂತ ಹೆಚ್ಚು ಯುದ್ಧಗಳಲ್ಲಿ ಪರೋಕ್ಷವಾಗಿ ತೊಡಗಿದೆ ಎಂದು ಚಾಮ್‌ಸ್ಕಿ ಕಟಕಿಯಾಡುತ್ತಾರೆ.

ಗಾಂಧೀಯವರು ಮೇಲೆ ಉಲ್ಲೇಖಿಸಿದ ಮಾತಿನಲ್ಲಿ ಎತ್ತಿರುವ ಸಮಸ್ಯೆಗೂ ಡಬಲ್‌ಸ್ಪೀಕ್‌ನ ಸಮಸ್ಯೆಗೂ ಸಂಬಂಧವಿದೆ. ಗಾಂಧಿಯವರು ಹಲವು ಅರ್ಥಗಳಿರುವ ಸಾಧ್ಯತೆಗಳನ್ನು ಅಲ್ಲಗಳೆಯುತ್ತಿಲ್ಲ. ಆ ಹಲವು ಅರ್ಥಗಳು ಅನಿವಾರ್ಯವೆಂಬಂತೆ ಇರಬೇಕು ಮತ್ತು ಹಾಗೆ ಹಲವಾರು ಅರ್ಥಗಳಿವೆ ಎಂಬುದು ಆ ಮಾತನ್ನು ಆಡುತ್ತಿರುವ ವ್ಯಕ್ತಿಗೆ ಗೊತ್ತಿರಬೇಕು ಎಂದು ಎರಡು ಶರತ್ತುಗಳನ್ನು ಹಾಕುತ್ತಾರೆ. ಡಬಲ್‌ಸ್ಪೀಕ್‌ನಲ್ಲಿ ಎಚ್ಚರದಿಂದಲೇ ಹಲವು ಅರ್ಥ ಸಾಧ್ಯತೆಗಳನ್ನು ರೂಪಿಸಲಾಗಿರುತ್ತದೆ. ಅಲ್ಲದೆ ಹಾಗೆ ಭಿನ್ನ ಅರ್ಥಗಳಿರುವುದನ್ನು ಭಾಷೆಯನ್ನು ಬಳಸುತ್ತಿರುವ ವ್ಯಕ್ತಿ ಕೂಡ ಬಲ್ಲವರಾಗಿರುತ್ತಾರೆ. ಆದರೆ ಗಾಂಧಿಯವರು ಹಾಕುವ ಮೂರನೆಯ ಶರತ್ತು ಮಾತ್ರ ಇಲ್ಲಿ ಪಾಲಿತವಾಗುವುದಿಲ್ಲ. ಸತ್ಯವನ್ನು ಮರೆಮಾಚಲು ಈ ತಂತ್ರವನ್ನು ರೂಪಿಸಬಾರದೆಂದು ಅವರು ಹೇಳುತ್ತಾರೆ. ಆದರೆ ಡಬಲ್‌ಸ್ಪೀಕ್‌ನ ಮುಖ್ಯ ಉದ್ದೇಶವೇ ಸತ್ಯವನ್ನು ಮರೆಮಾಚುವುದು.

ಲೋಕ ಸಂವಾದಿತ್ವವಿಲ್ಲದ ವಾಕ್ಯಗಳನ್ನು ಬಳಸಲು ಭಾಷೆಯ ಆಂತರಿಕ ಸಾಧ್ಯತೆಗಳು ಅವಕಾಶ ಮಾಡಿಕೊಡುತ್ತವೆಂಬುದು ನಿಜ. ಉದಾಹರಣೆಗೆ **'ಮೊಲಕ್ಕೆ ಮೂರು ಕಿವಿಗಳಿರುತ್ತವೆ'** ಎಂಬ ಸುಳ್ಳು ವಾಕ್ಯವನ್ನು ಹೇಳುವುದು ಸುಲಭ. ಆದರೆ ಸತ್ಯವನ್ನು ಮರೆಮಾಚಲು ಸತ್ಯದ ಸೋಗನ್ನು ಹಾಕಿದ ಭಾಷಾರೂಪಗಳನ್ನು ಕೇಳಿ ಅಥವಾ ಓದಿ ಅವುಗಳಲ್ಲಿರುವ ಅಸತ್ಯವನ್ನು ಗುರುತಿಸುವುದು ಕಷ್ಟ. ಅಥವಾ ಅಸಾಧ್ಯ. ವಾಣಿಜ್ಯ ಜಗತ್ತಿನಲ್ಲಿ ಜಾಹೀರಾತುಗಳ ಭಾಷೆ ಇದಕ್ಕೊಂದು ಒಳ್ಳೆಯ ಮಾದರಿ. ಹಾಗೆಯೇ ರಾಜಕಾರಣದಲ್ಲಿ ಬಳಕೆಯಾಗುವ ಭಾಷೆಯೂ ಕೂಡ. ಹಿತಾಸಕ್ತಿಗಳಿಗೆ ಅನುಗುಣವಾಗಿ ವಿಭಜಿತವಾಗಿರುವ ರಾಜಕಾರಣದ ಸಂದರ್ಭದಲ್ಲಿ ಒಂದು ಗುಂಪು ಬಳಸುವ ಮಾತಿಗೆ ಇರುವ ಅರ್ಥ ಇನ್ನೊಂದು ಗುಂಪಿಗೆ ಬೇರೆಯಾಗಿಯೇ ತೋರಬಹುದು. ರಾಷ್ಟ್ರೀಯ ವಿಮೋಚನಾ ಚಳುವಳಿಯ ಸಂದರ್ಭದಲ್ಲಿ ಹೋರಾಟದಲ್ಲಿ ತೊಡಗಿದವರಿಗೆ ಯಾವುದು **'ವಿಮೋಚನಾ ಹೋರಾಟ'**ವೆನಿಸುತ್ತದೋ ಅದು ಆಡಳಿತದಲ್ಲಿರುವವರಿಗೆ **'ಭಯೋತ್ಪಾದಕತೆ'** ಎನಿಸುತ್ತದೆ. **'ರಾಷ್ಟ್ರೀಯ ಹಿತಾಸಕ್ತಿ'** ಎಂಬ ಮಾತಿಗೆ **'ವರ್ಗ ಹಿತಾಸಕ್ತಿ'** ಎಂಬ ಅರ್ಥ ಬರುತ್ತದೆ. ಇಂಥ ನಿದರ್ಶನಗಳು ಒಂದೇ ಮಾತು ಭಿನ್ನ ಸಂದರ್ಭಗಳಲ್ಲಿ ವಿವಿಧ

ಅರ್ಥ ಪ್ರತೀತಿಯನ್ನು ಉಂಟುಮಾಡಲು ಸಾಧ್ಯವೆಂಬುದನ್ನು ಸೂಚಿಸುತ್ತವೆ. ಆದ್ದರಿಂದ 'ಸತ್ಯ'ದ ಸಾಪೇಕ್ಷ ಸ್ಥಿತಿಯ ಅರಿವು ನಮಗಾಗುತ್ತದೆ.

ಆದರೆ ಇನ್ನೊಂದು ನೆಲೆಯಲ್ಲಿ ಒಂದು ಅರ್ಥವನ್ನು ಸೂಚಿಸಲು ಒಂದು ಭಾಷಿಕ ರೂಪವಿರುವಾಗ ಅದಕ್ಕೆ ಬದಲಾಗಿ ಇನ್ನೊಂದು ಭಾಷಿಕ ರೂಪವನ್ನು ಬಳಸುವ ಸನ್ನಿವೇಶಗಳನ್ನು ಕುರಿತು ಆರ್ವೆಲ್ ಚರ್ಚಿಸಿದಂತಿದೆ. **'ಬಾಂಬ್ ದಾಳಿ'** ಎಂದು ಹೇಳುವ ಬದಲು **'ವಾಯುಕ್ಷೇತ್ರ ರಕ್ಷಣೆ'** ಎಂಬ ರಚನೆಯನ್ನು ಬಳಸಿದಾಗ ಕ್ರಿಯೆಗೆ ಇರುವ ಹೊಣೆಗಾರಿಕೆಯ ಸ್ವರೂಪವನ್ನು ಬದಲಾಯಿಸಿದಂತಾಯಿತು. ಇದು ಗಾಂಧಿಯವರು ಹೇಳುವ ಸತ್ಯವನ್ನು ಮರೆಮಾಚುವ ಪ್ರಯತ್ನವಾಗುತ್ತದೆ. ಇಂಥ ಯತ್ನದಲ್ಲಿ ನಮ್ಮ ರಾಜಕಾರಣದ ಭಾಷೆ ಅತ್ಯಂತ ತೀವ್ರವಾಗಿ ತೊಡಗಿರುವುದನ್ನು ಯಾರಾದರೂ ಗಮನಿಸಬಹುದು. ಇಂಥ ಸಂದರ್ಭದಲ್ಲಿ ಸತ್ಯದ ಸ್ವರೂಪವನ್ನು ಗುರುತಿಸುವುದು ಅತ್ಯಂತ ಕಷ್ಟ ಸಾಧ್ಯ. ಭಾಷೆಯ ಅಪಬಳಕೆಗೆ ಇದಕ್ಕಿಂತ ಉತ್ತಮ ಉದಾಹರಣೆ ಬೇರೊಂದು ಇರಲಾರದು.

# ಭಾಷೆಯಲ್ಲಿ ಹೇಗೆ ಮತ್ತು ಏಕೆ

ಮತ್ತೆ ಶಾಲಾವ್ಯಾಕರಣಗಳನ್ನು ಚರ್ಚೆಗೆ ತರುವುದು ಅವಶ್ಯವಾಗಿದೆ. ಪ್ರಾಥಮಿಕ ತರಗತಿಗಳಿಂದ ಮೊದಲಾಗಿ ಪದವಿಪೂರ್ವ ಹಂತದವರೆಗೂ ಬಗೆ ಬಗೆಯಲ್ಲಿ ವ್ಯಾಕರಣವನ್ನು ಮಕ್ಕಳಿಗೆ ಹೇಳಿಕೊಡುತ್ತಿದ್ದಾರೆ. ಈ ವ್ಯಾಕರಣಗಳು ಕನ್ನಡದ ಎಲ್ಲ ಲಕ್ಷಣಗಳನ್ನು ಸರಿಯಾಗಿ ಹೇಳುತ್ತಿವೆಯೇ ಎಂಬುದು ಒಂದು ಪ್ರಶ್ನೆಯಾದರೆ ಇವನ್ನು ಸರಿಯಾಗಿ ಬೋಧಿಸುತ್ತಿದ್ದಾರೆಯೇ, ಬೋಧನೆಗೆ ಅನುಕೂಲವಾದ ವಿಧಾನಗಳು ರೂಪುಗೊಂಡಿವೆಯೇ ಎಂಬುದು ಇನ್ನೊಂದು ಪ್ರಶ್ನೆ. ಇವೆರಡೂ ಪ್ರಶ್ನೆಗಳು ಪ್ರತ್ಯೇಕ ಚರ್ಚೆಗೆ ಯೋಗ್ಯವಾಗಿವೆ. ಆದರೆ ಇಲ್ಲಿ ಇನ್ನೊಂದು ಬೇರೆಯೇ ಪ್ರಶ್ನೆಯನ್ನು ಎತ್ತುವುದು ಅವಶ್ಯವೆನಿಸಿದೆ.

ನಮ್ಮ ಬಹುಪಾಲು ವ್ಯಾಕರಣಗಳ ರಚನೆಯ ಹಿಂದಿನ ತಾತ್ತ್ವಿಕತೆಯನ್ನು ನಾವಿನ್ನೂ ತಿಳಿಯಲು ಮನಸ್ಸು ಮಾಡಿಲ್ಲ. ಒಂದು ಮುಖ್ಯ ಸಂಗತಿಯನ್ನು ಬೇರೊಂದು ಪ್ರಸಂಗದಲ್ಲಿ ಡಾ.ಡಿ.ಎನ್. ಶಂಕರಭಟ್ ಅವರು ಚರ್ಚಿಸಿದ್ದಾರೆ. ಕನ್ನಡದ ವೈಯಾಕರಣರು ಕನ್ನಡವನ್ನು ವಿವರಿಸುವಾಗ ಸಂಸ್ಕೃತದ ರಚನೆಯನ್ನು ಎದುರಿಗೆ ಇರಿಸಿಕೊಂಡಿದ್ದರಿಂದ 1. ಕನ್ನಡದ ವೈಶಿಷ್ಟ್ಯಗಳು ಅವರಿಗೆ ಗೊತ್ತಾಗಲಿಲ್ಲ. 2. ಎಲ್ಲೆಲ್ಲಿ ಕನ್ನಡದ ಮಾಹಿತಿ ಸಂಸ್ಕೃತದ ರಚನೆ/ನಿಯಮಗಳಿಗೆ ಅನುಗುಣವಾಗಿ ಇಲ್ಲದಿರುವಾಗ ಮಾಹಿತಿಯನ್ನೇ 'ಹೊಂದಿಸುವ' ಕೆಲಸಕ್ಕೆ ತೊಡಗಿದರು. ಇದಕ್ಕೆ ನಿದರ್ಶನಗಳು ಹಲವಾರಿವೆ (ಕನ್ನಡ ವ್ಯಾಕರಣ ಪರಂಪರೆ 1994) ಇದು ನಮ್ಮ ಶಾಲಾ ವ್ಯಾಕರಣಗಳಿಗೂ ಇಳಿದು ಬಂದಿದೆ. ತೀರಾ ಅವಶ್ಯವೆನಿಸಿದ ಕೆಲವು ವಿವರಗಳಿಗೆ ಶಾಲಾ ವ್ಯಾಕರಣಗಳು ಮಿತಿಯನ್ನು ವಿಧಿಸಿಕೊಳ್ಳುವುದರಿಂದ 'ಸಂಸ್ಕೃತದ ಭೂತ' ಅವುಗಳಲ್ಲಿ ಅಷ್ಟೊಂದು ಕಾಣಸಿಗುವುದಿಲ್ಲ. ಆದರೂ ಅಲ್ಲಲ್ಲಿ ಅದರ ಚಹರೆಗಳು ಕಾಣಸಿಗುತ್ತವೆ.

ಇದಲ್ಲದೆ ನಮ್ಮ ವ್ಯಾಕರಣಗಳಿಗೆ ಇನ್ನೂ ಒಂದು ತಾತ್ತ್ವಿಕ ಕೊರತೆ ಇದೆ. ಈ ವ್ಯಾಕರಣಗಳು ಭಾಷೆಯನ್ನು ವಿವರಿಸುವಾಗ 'ಭಾಷೆಯ ರಚನೆ ಹೇಗಿದೆ?' ಎಂಬ ಪ್ರಶ್ನೆಗೆ ಉತ್ತರ ಕಾಣಲು ಗಮನವಿಟ್ಟಿರುವಂತೆ 'ಆ ರಚನೆ ಹಾಗೆ ಏಕಿದೆ?' ಎಂಬ ಪ್ರಶ್ನೆಗೆ ಉತ್ತರ ಪಡೆಯಲು ಯತ್ನಿಸುವುದಿಲ್ಲ. ಈ ಸಮಸ್ಯೆಯನ್ನು ಮುಂದೆ ವಿವರಿಸಲಾಗಿದೆ: ಒಂದು ಸರಳ ನಿದರ್ಶನ: ಮರ ಮತ್ತು ತಲೆ ಎಂಬ ಪದಗಳಿಗೆ 'ಅನ್ನು' ಎಂಬ ಪ್ರತ್ಯಯ (ದ್ವಿತೀಯಾ ವಿಭಕ್ತಿ)ವನ್ನು ಸೇರಿಸಿದರೆ 'ಮರವನ್ನು' ಮತ್ತು 'ತಲೆಯನ್ನು'

ಎಂಬ ರೂಪಗಳು ಸಿದ್ಧವಾಗುತ್ತವೆ. ನಮ್ಮ ವ್ಯಾಕರಣಗಳು ಇವೆರಡೂ ರೂಪಗಳ ಸಿದ್ಧಿಯಲ್ಲಿ 'ಆಗಮ ಸಂಧಿ' ನಡೆದಿದೆ ಎಂದು ವಿವರಿಸುತ್ತವೆ. ಮುಂದುವರೆದು ಮೊದಲನೆಯದು 'ವಕಾರಾಗಮ' ಎರಡನೆಯದು 'ಯಕಾರಾಗಮ'ಎಂದು ಹೇಳುತ್ತವೆ. ಈ ವಿವರಣೆ ಸರಿ. ಆದರೆ ಅಲ್ಲಿ 'ಅನ್ಯ' ಧ್ವನಿಯೊಂದು ಅಲ್ಲಿ ಬಂದು ಸೇರಲು ಕಾರಣವೇನು? ಆ ಧ್ವನಿಗಳೇ ಏಕೆ ಬಂದು ಸೇರಬೇಕು? ಬೇರೆ ಧ್ವನಿಗಳೇಕೆ ಬರಬಾರದು? ಇವೆಲ್ಲ ಪ್ರಶ್ನೆಗಳು ವೈಯಾಕರಣರನ್ನು ಕಾಡಿಸುವುದಿಲ್ಲ.

ಇದೇ ರೀತಿ ಪದರಚನೆಯ ವಲಯದಲ್ಲೂ ವಿವರಣೆಗೆ ಮೊದಲ ಮಣೆ. ಇದರಲ್ಲಿ ವಿವಿಧ ಗುಂಪುಗಳಲ್ಲಿ ಅಳವಡಿಸುವ ಸಾಮಾನ್ಯ ವಿಧಾನಕ್ಕೆ ಕಟ್ಟು ಬೀಳುವುದೇ ಹೆಚ್ಚು. ಸಮಾಸಗಳನ್ನೇ ನೋಡಿ: ಬಗೆಬಗೆಯ ಸಮಾಸಗಳ ಗುಂಪುಗಳನ್ನು ಹೇಳುತ್ತಾರೆ. ಕರ್ಮಧಾರಯಾ, ಬಹುವ್ರೀಹಿ, ದ್ವಿಗು, ಅಂಶಿ, ತತ್ಪುರುಷ, ಗಮಕ, ಕ್ರಿಯಾ ಹೀಗೆ. ಒಂದೊಂದಕ್ಕೂ ಉದಾಹರಣೆಗಳನ್ನು ನೀಡುವುದು; ವಿಗ್ರಹವಾಕ್ಯಗಳನ್ನು ಬರೆಯುವುದು. ಹೊಸ ಅಪರಿಚಿತ-ರಚನೆಗಳನ್ನು 'ಅಭ್ಯಾಸ'ಕ್ಕಾಗಿ ಒದಗಿಸಿ ಸಮಾಸಗಳನ್ನು ಗುರುತಿಸಲು ಹೇಳುವುದು ಇವು ಮುಖ್ಯವಾಗುತ್ತವೆ.

ಉಪ್ಪುನೀರು, ಕಣ್ಣೀರು, ಮನೆಗೆಲಸ, ಲಗ್ಗೆಚೆಂಡು, ತೋಳುಬಂದಿ, ತೋಳ್ಬಲ ಮುಂತಾದ ರಚನೆಗಳಲ್ಲಿ ಇರುವ ನಿಯಮ ಒಂದೇ. ಎರಡು ನಾಮಪದಗಳನ್ನು ಅಕ್ಕಪಕ್ಕದಲ್ಲಿ ಇರಿಸುವುದು. ಆದರೆ ಇವುಗಳಲ್ಲಿ ಮೊದಲ ಪದ ಮತ್ತು ಎರಡನೆಯ ಪದಗಳ ನಡುವೆ 'ಅರ್ಥ ಸಂಬಂಧ' ಒಂದೇ ರೀತಿಯಾಗಿಲ್ಲ. ಕೇವಲ ಸಮಾಸದ ಹೆಸರು ಹೇಳಿದರೆ ಈ ವ್ಯತ್ಯಾಸ ಗೊತ್ತಾಗುವುದಿಲ್ಲ. ಆದರೆ ವ್ಯಾಕರಣಗಳು ಅಲ್ಲಿಗೇ ನಿಲ್ಲುತ್ತವೆ.

ನಮ್ಮ ವ್ಯಾಕರಣಗಳು ಸೂತ್ರ-ಉದಾಹರಣೆ ಅಥವಾ ಲಕ್ಷಣ-ಲಕ್ಷ್ಯದ ಮಾದರಿಗೆ ಸಿಲುಕಿವೆ. ವ್ಯವಸ್ಥೆಯೊಂದನ್ನು ವಿವರಿಸುವಾಗ ಸಾಮಾನ್ಯ ನಿಯಮಗಳನ್ನು ಗುರುತಿಸಲು ಸೂತ್ರೀಕರಿಸುವ, ಲಕ್ಷಣ ಸಮನ್ವಯ ಮಾಡುವ ವಿಧಾನಕ್ಕೆ ಒಂದು ಸ್ಥಾನವಿದೆ. ಆದರೆ ಅದಕ್ಕೆ ಮಿತಿಗಳೂ ಇವೆ. ಈ ವೈಧಾನಿಕತೆಯೇ 'ಹೇಗೆ?' ಎಂಬ ಪ್ರಶ್ನೆಗೆ ತನ್ನನ್ನು ತಾನು ಕಟ್ಟಿಹಾಕಿಕೊಳ್ಳುತ್ತದೆ 'ಏಕೆ?' ಎಂಬ ಪ್ರಶ್ನೆಯನ್ನು ಎದುರಿಸದು.

ಈ ಸಮಸ್ಯೆಯನ್ನು ಗಮನಿಸಿದವರು ವಾದವೊಂದನ್ನು ಮುಂದೊಡ್ಡಬಹುದು. ಶಾಲಾ ವ್ಯಾಕರಣಗಳು ಭಾಷೆಯ ರಚನೆಯನ್ನು ತಿಳಿಸುವ ಉದ್ದೇಶವನ್ನು ಹೊಂದಿವೆ. ಆ ರಚನೆಯ ಕಾರಣಮೀಮಾಂಸೆಯಂಥ 'ಅನುಪಯುಕ್ತ' ನೆಲೆಗಳಿಗೆ ಹೋಗುವುದು ಅವಶ್ಯವಲ್ಲ. ಇದು ನಮ್ಮ ಪಠ್ಯಕ್ರಮದ ತಾತ್ತ್ವಿಕತೆಯೇ ಆಗಿದೆ. ವಿಜ್ಞಾನ ಸಮಾಜಪಾಠ ಹೀಗೆ ಯಾವ ವಿಷಯ ತೆಗೆದುಕೊಂಡರೂ 'ವರ್ಣನೆ'ಯ ಕಡೆಗೆ ಓಲುವೆ ಕಾಣಿಸುತ್ತದೆ. ಕಾರಣ ಶೋಧನೆಯ ಕಡೆಗಲ್ಲ. ವ್ಯಾಕರಣದ ಮಟ್ಟಿಗೂ ಅದೇ ನೆಲೆ ಮುಂದುವರೆದಿದೆ.

ಶಾಲೆಯಲ್ಲಿ ಮಕ್ಕಳಿಗೆ ಭಾಷೆಯ ರಚನೆಯನ್ನು ಹೇಳಿಕೊಡುವುದು ಕೇವಲ ಸೂತ್ರ ಲಕ್ಷಣಗಳ ಕಲಿಕೆಗೆ ಎನ್ನುವುದಾದರೆ ಇಂಥ ಕಲಿಕೆಯ ಉಪಯುಕ್ತತೆ ಏನು?

ಭಾಷಾ ಕೌಶಲ್ಯಗಳ ಬೆಳವಣಿಗೆಗೆ ಇದರಿಂದ ಉಪಯೋಗವಾಗುವುದೇನು? ಈ ನಿಯಮಗಳು– (ಸೂತ್ರ/ಲಕ್ಷಣಗಳು) ವಯಸ್ಕ ಕಲಿಕೆಯಲ್ಲಿ ನೆರವಿಗೆ ಬರುವುದು ಸಾಧ್ಯ. ವಿವಿಧ ಬಗೆಯ ಇತರ ಕಲಿಕೆಗಳಲ್ಲಿ ನಿಯಮಗಳನ್ನು ಅಂತರ್ಗತಗೊಳಿಸಿ ಕೊಳ್ಳುವುದು ಹಾಗಾಗಿ ಮುಖ್ಯ. ಆದರೆ ಭಾಷೆಯ ಬಳಕೆಯನ್ನು ಮಕ್ಕಳು ಶಾಲೆಯಲ್ಲಿ ಕಲಿಯುತ್ತಿರುವುದಿಲ್ಲ. ಅವರಿಗೆ ಅದು ಆಗಲೇ ತಿಳಿದಿರುತ್ತದೆ. ಅಂತರ್ಗತ ನಿಯಮಗಳನ್ನು ತಮಗೆ ಅರಿವಿಲ್ಲದಂತೆ ಬಳಸಿ ವಾಕ್ಯಗಳನ್ನು ನಿರಂತರವಾಗಿ ಉತ್ಪಾದಿಸುತ್ತಿರುತ್ತಾರೆ. ಹಾಗಾಗಿ ಅವರಿಗೆ ಆ ನಿಯಮಗಳ ಕಲಿಕೆ ಕೇವಲ ಮಾಹಿತಿಯಾಗುತ್ತದೆಯೇ ಹೊರತು ಅನ್ವಯಿಕ ಉಪಯೋಗವಿರದು. ಆದ್ದರಿಂದ ಈ ತಾತ್ತ್ವಿಕ ನೆಲೆಯ ವ್ಯಾಕರಣ ರಚನೆಯನ್ನೇ ಕೊನೆಯಪಕ್ಷ ಶಾಲಾ ವ್ಯಾಕರಣಗಳ ಮಟ್ಟಿಗಾದರೂ ಕೈ ಬಿಡುವುದು ಸೂಕ್ತವೆಂದು ತೋರುತ್ತದೆ.

# ಭಾಷಾಕ್ರಿಯೆಗಳು

1. ದಲಿತರ ಮೇಲೆ ನಡೆದಿರುವ ದೌರ್ಜನ್ಯವನ್ನು ಶ್ರೀಯುತರು ಬಲವಾಗಿ **ಖಂಡಿಸಿದರು**.

2. ಸರಕಾರದ ಈವರೆಗಿನ ಸಾಧನೆಗಳನ್ನು ಸಚಿವರು **ಸಮರ್ಥಿಸಿದರು**.
3. ಈ ಎಲ್ಲ ಸಂಗತಿಗಳಿಗೂ ಕಾರಣನಾದ ನನ್ನನ್ನು **ಕ್ಷಮಿಸಿ**.

ಈ ವಾಕ್ಯಗಳನ್ನು ಗಮನಿಸಿ. ಕ್ರಮವಾಗಿ ಆಯಾ ವಾಕ್ಯಗಳಲ್ಲಿರುವ 'ಖಂಡನೆ', 'ಸಮರ್ಥನೆ' ಮತ್ತು 'ಕ್ಷಮಾಯಾಚನೆ' ಎಂಬ ಕ್ರಿಯೆಗಳು ಕುತೂಹಲಕಾರಿಯಾಗಿವೆ. ಏಕೆಂದರೆ ಈ ಕ್ರಿಯೆಗಳು ವಾಸ್ತವವಾಗಿ ಸಂಭವಿಸಿರುವುದು ಮಾತಿನಲ್ಲಿ. ಅಂದರೆ ಈ ವಾಕ್ಯಗಳಲ್ಲಿ ಕೇವಲ ಮಾಹಿತಿ ಮಾತ್ರ ಇದೆಯೆಂದು ತಿಳಿಯುವಂತಿಲ್ಲ. ಜತೆಗೆ ಪ್ರತಿಯೊಂದು ಕ್ರಿಯೆಯೂ ವಾಕ್ಯದೊಡನೇ ಸಂಭವಿಸುತ್ತಿದೆ. ತಿನ್ನು, ಕೊಲ್ಲು, ಬರೆ, ತೆಗೆ, ಮುಚ್ಚು, ಹೋಗು ಮುಂತಾದ ಇತರ ಕ್ರಿಯಾಪದಗಳನ್ನು ಬಳಸಿದಾಗ ವಾಸ್ತವವಾಗಿ ಒಂದು ಪ್ರತ್ಯೇಕ ಲೋಕ ಘಟನೆ ಸಂಭವಿಸಿರುತ್ತದೆ. ಅಥವಾ ಸಂಭವಿಸುವ ಸಾಧ್ಯತೆ ಇರುತ್ತದೆ. 'ಹುಡುಗರು ಹಣ್ಣನ್ನು ತಿಂದರು', 'ಜನರು ಸರಕಾರಕ್ಕೆ ಅಹವಾಲು ಬರೆದುಕೊಂಡರು', 'ಬಸ್ಸು ಹೋಗುತ್ತಿದೆ' ಮುಂತಾದ ವಾಕ್ಯಗಳನ್ನು ನಿದರ್ಶನಗಳನ್ನಾಗಿ ನೋಡಬಹುದು. ಎಂದರೆ ಈ ಕ್ರಿಯಾಪದಗಳು ಪ್ರತ್ಯೇಕ ಸಂಭಾವ್ಯ ಕ್ರಿಯೆಯೊಂದನ್ನು ಸೂಚಿಸುತ್ತಿವೆ. ಆದರೆ ಮೊದಲು ಹೇಳಿದ ಕ್ರಿಯಾಪದಗಳು ಹೀಗೆ ಪ್ರತ್ಯೇಕ ಕ್ರಿಯೆಗಳನ್ನು ಆಧರಿಸಿಲ್ಲ. ಜೆ.ಎಲ್. ಅಸ್ಟಿನ್ (1911–1960) ಎಂಬ ಬ್ರಿಟನ್ ತತ್ತ್ವಶಾಸ್ತ್ರಜ್ಞ ಇಂಥ ಕ್ರಿಯಾಪದಗಳ ಬಳಕೆಯನ್ನು ಗುರುತಿಸಿ ಅವನ್ನು 'ಭಾಷಾಕ್ರಿಯೆಗಳು' ಎಂದು ಹೆಸರಿಸಿದನು. ಲೋಕ ಸಂವಾದಿ ಘಟನೆಯೊಂದು ಇದ್ದು ಅದನ್ನು ಪ್ರತ್ಯೇಕವಾಗಿ ಸೂಚಿಸುವ ಕ್ರಿಯಾಪದಗಳು ಒಂದು ವಾಕ್ಯದಲ್ಲಿ ಬಳಕೆಯಾಗಿವೆ ಎಂದಿಟ್ಟುಕೊಳ್ಳಿ. ಆ ವಾಕ್ಯಗಳಲ್ಲಿ ಮಂಡಿತವಾಗಿರುವ ಸಂಗತಿ ನಿಜವೋ ಆಗಿರಬಹುದು ಇಲ್ಲವೇ ಸುಳ್ಳೋ ಎಂದು ನಿರ್ಧರಿಸಲು ಲೋಕ ಘಟನೆಯನ್ನು ಆಧರಿಸುವುದರಿಂದ ಸಾಧ್ಯ. 'ಬಾಗಿಲು ತೆಗೆದಿದ್ದೇನೆ' ಎಂಬ ವಾಕ್ಯವನ್ನು ಬಾಗಿಲು ತೆರೆದಿದೆಯೋ ಅಥವಾ ಇಲ್ಲವೋ ಎಂಬುದನ್ನು ಗಮನಿಸಿ ನಿಜವೋ ಸುಳ್ಳೋ ಎಂದು ತಿಳಿಯಬಹುದು. ಆದರೆ ಭಾಷಾಕ್ರಿಯೆಗಳಲ್ಲಿ ಈ ಅವಕಾಶವಿಲ್ಲ. 'ನಾನು ನಿನ್ನನ್ನು ಕ್ಷಮಿಸಿದ್ದೇನೆ' ಎಂಬ ವಾಕ್ಯ ಸತ್ಯಾಸತ್ಯತೆಯ ಪರೀಕ್ಷೆ ಸಾಧ್ಯವಿಲ್ಲ.

ಭಾಷೆಯಲ್ಲಿರುವ ಈ ಬಗೆಯ 'ಭಾಷಾಕ್ರಿಯೆಗಳನ್ನು ಅರಿಯಲು ಭಾಷಾ ವಿಜ್ಞಾನಿಗಳು ಯತ್ನಿಸುತ್ತಿದ್ದಾರೆ. ಈ ದಿಕ್ಕಿನಲ್ಲಿ ಕೆಲವು ವಿಶ್ಲೇಷಣ ತಂತ್ರಗಳನ್ನು ರೂಪಿಸಿದ್ದಾರೆ. ಮಾತಾಡುವ ವ್ಯಕ್ತಿ ಮತ್ತು ಕೇಳುವ ವ್ಯಕ್ತಿ ಅವರನ್ನು ಗಮನಿಸಿ ವಾಕ್ಯದ ಉದ್ದೇಶ ಮತ್ತು ಪರಿಣಾಮಗಳನ್ನು ಗುರುತಿಸುವುದು ವಾಕ್ಯದಲ್ಲಿ ಅಂತರ್ಗತವಾದ ಕ್ರಿಯೆಯ ಸ್ವರೂಪವನ್ನು ತಿಳಿಯುವುದು ವಿಶ್ಲೇಷಣೆಗೆ ಅವಶ್ಯ. ಭಾಷಾ ಕ್ರಿಯೆಗಳಲ್ಲಿ ಸಾಮಾನ್ಯವಾಗಿ ಒಂದು ವಿಷಯವನ್ನು ತಿಳಿಸಲು ಯತ್ನಿಸುತ್ತಿರುವುದು ನಿಜವಷ್ಟೆ. ಇದನ್ನು 'ಉದ್ದೇಶ' ಎನ್ನೋಣ. ಹೇಳುವ ವ್ಯಕ್ತಿ ಹೇಳಿದ್ದರಿಂದ ಯಾವ ಕ್ರಿಯೆ ಸಂಭವಿಸಿತೋ ಅದನ್ನು 'ಘಟನೆ' ಎನ್ನೋಣ. ಭಾಷಾಕ್ರಿಯೆಗಳಲ್ಲಿ ವಾಕ್ಯಗಳನ್ನು ಹೇಳಿದಾಗಲೇ ಕ್ರಿಯೆಗಳೂ ಸಂಭವಿಸಿದವೆಂದು ತಿಳಿಯಬೇಕು. ಅನಂತರ ಹೀಗೆ ಹೇಳಿದ ವಾಕ್ಯ ಕೇಳುಗರಲ್ಲಿ ಯಾವ ಪರಿಣಾಮವನ್ನು ಉಂಟುಮಾಡುವುದೋ ಅದನ್ನು 'ಪರಿಣಾಮ' ಎನ್ನೋಣ. 'ಉದ್ದೇಶ' ಮತ್ತು 'ಪರಿಣಾಮ'ಗಳು ಯಾವಾಗಲೂ ಒಂದೇ ಆಗಬೇಕಿಲ್ಲ. ಎಚ್ಚರ ನೀಡುವ ಉದ್ದೇಶದ ವಾಕ್ಯ ಭಯ ಅಥವಾ ವಿಧೇಯತೆಗಳನ್ನು ಪರಿಣಾಮವನ್ನಾಗಿ ನಿರೀಕ್ಷಿಸಿದರೂ ವಾಸ್ತವದಲ್ಲಿ ಅಂಥ ಪರಿಣಾಮಗಳಿಗೆ ಕಾರಣವಾಗದೆಯೂ ಇರುವುದು ಸಾಧ್ಯ. ಎಚ್ಚರಿಕೆಯ ಮಾತು ಕೇಳಿದ ವ್ಯಕ್ತಿ ನಗಲು ತೊಡಗುವ ಪ್ರಸಂಗಗಳನ್ನು ಗಮನಿಸಿ. ಹೀಗೆ ಭಾಷಾಕ್ರಿಯೆಗಳ ಉದ್ದೇಶ, ಘಟನೆ ಮತ್ತು ಪರಿಣಾಮಗಳನ್ನು ಗುರುತಿಸುವುದು ಅತ್ಯವಶ್ಯ.

ಪ್ರತಿ ಭಾಷೆಯಲ್ಲೂ ಇರುವ ಮೂಲ ಕ್ರಿಯಾಪದಗಳ ಸಂಖ್ಯೆ ಸೀಮಿತ. ಆದರೆ ಸಾಧಿತ ರೂಪಗಳನ್ನೂ ಲೆಕ್ಕಕ್ಕೆ ತೆಗೆದುಕೊಂಡರೆ ಕ್ರಿಯಾಪದಗಳ ಸಂಖ್ಯೆ ಹೆಚ್ಚಾಗುತ್ತದೆ. ಪ್ರತಿ ಕ್ರಿಯಾಪದದ ಬಳಕೆಯಲ್ಲೂ ಉದ್ದೇಶಗಳು ಎಲ್ಲ ಸಂದರ್ಭಗಳಲ್ಲೂ ಒಂದೇ ಆಗಿರುವುದಿಲ್ಲ. ಆದ್ದರಿಂದ ಕ್ರಿಯಾಪದಗಳ ಬಳಕೆಯ ಉದ್ದೇಶಗಳು ಅಸಂಖ್ಯ. ಈ ಕ್ರಿಯಾಪದಗಳನ್ನು ಅವುಗಳ ಉದ್ದೇಶಗಳನ್ನು ಗಮನಿಸಿ ವರ್ಗೀಕರಿಸಲು ಪ್ರಯತ್ನಿಸಿದ್ದಾರೆ. ಇದೊಂದು ಕಷ್ಟಸಾಧ್ಯವಾದ ಕೆಲಸ. ಏಕೆಂದರೆ ಕ್ರಿಯಾಪದಗಳ ಉದ್ದೇಶಗಳಾಗಲೀ ಅವನ್ನು ಬಳಸುತ್ತಿರುವ ವ್ಯಕ್ತಿಯ ಉದ್ದೇಶವಾಗಲೀ ಯಾವಾಗಲೂ ಸ್ಪಷ್ಟವಾಗಿರುವುದಿಲ್ಲ. 'ಬೆಂಕಿಯನ್ನು ಕಂಡು ಓಡಿದ' ಎಂಬ ವಾಕ್ಯದಲ್ಲಿ 'ಓಡು' ಕ್ರಿಯಾಪದ ಒಂದು ದೈಹಿಕ ಕ್ರಿಯೆಯನ್ನು ಸೂಚಿಸುತ್ತದೆ. ಆದರೆ ಈ ವಾಕ್ಯದಲ್ಲಿ ಯಾರೋ ಒಬ್ಬಾತ ಓಡಿದ್ದೇಕೆ? ಹೆದರಿಕೆಯಿಂದಲೋ? ಅಥವಾ ಬೆಂಕಿಯನ್ನು ಆರಿಸಲು ಬೇಕಾದ ಸಾಮಗ್ರಿ ತರಲೆಂದೋ? ಅಥವಾ ವ್ಯಕ್ತಿಯೇ ಬೆಂಕಿ ಹಚ್ಚಿದವನಾಗಿದ್ದು ಇತರರ ಕಣ್ಣಿಗೆ ಬೀಳಬಾರದೆಂದೋ? ಇದೆಲ್ಲವೂ ಊಹೆಯ ಪ್ರಶ್ನೆಗಳಲ್ಲ; ಸಾಧ್ಯತೆಗಳು. ಹೀಗಿದ್ದರೂ ಕ್ರಿಯಾಪದಗಳನ್ನು ಉದ್ದೇಶಗಳನ್ನು ಆಧರಿಸಿ ವರ್ಗೀಕರಿಸುವ ಪ್ರಯತ್ನಗಳು ನಡೆದೇ ಇವೆ. ಜೆ.ಆರ್. ಸಿಯರ್ಲ್ ಎಂಬುವವರು ಮಾಡಿರುವ ವಿಭಜನೆ ಹೀಗಿದೆ.

1. ಒಪ್ಪಿತಗಳು 2. ಸೂಚಕಗಳು, 3. ಆಣೆಗಳು, 4. ಭಾವವಾಚಿಗಳು ಮತ್ತು 5. ಘೋಷಣೆಗಳು–ಎಂಬ ಐದು ವರ್ಗಗಳನ್ನು ಗುರುತಿಸಿದ್ದಾರೆ. ಮಾತಾಡುವ ವ್ಯಕ್ತಿ

ಕ್ರಿಯಾಪದ ಸೂಚಿಸುವ ಸಂಗತಿಗಳನ್ನು ಒಪ್ಪುವಂತಿದ್ದರೆ ಆ ಬಗೆಯ ಕ್ರಿಯಾಪದಗಳು **ಒಪ್ಪಿತ**ಗಳು. ಉದಾಹರಣೆಗೆ ನಂಬು, ನಿರಾಕರಿಸು, ವರದಿಮಾಡು, ಸಮರ್ಥಿಸು, **ಸೂಚಕ**ಗಳೆಂದರೆ ಯಾವುದಾದರೊಂದು ಕ್ರಿಯೆಯನ್ನು ಮಾಡಲು ಕೇಳುವ ವ್ಯಕ್ತಿಯನ್ನು ಪ್ರೇರೇಪಿಸುವ ಕ್ರಿಯಾಪದಗಳು. ಉದಾ: ಆಜ್ಞಾಪಿಸು, ಕೇಳು, ಒತ್ತಾಯಿಸು, ಬೇಡು. **ಆಣೆ**ಗಳಂತೂ ಹೇಳುವ ವ್ಯಕ್ತಿಯೇ ತಾನೊಂದು ಕ್ರಿಯೆಯನ್ನು ಮಾಡುವುದಾಗಿ ಒಪ್ಪುವ ಬದ್ಧವಾಗುವ ಕ್ರಿಯಾಪದಗಳಾಗಿರುತ್ತವೆ. ಉದಾಹರಣೆಗೆ ಶಪಥಮಾಡು, ಒಪ್ಪು. ಯಾವುದಾದರೊಂದು ಘಟನೆಯ ಬಗ್ಗೆ ಹೇಳುವ ವ್ಯಕ್ತಿಯ ದೃಷ್ಟಿಕೋನವನ್ನು ಸೂಚಿಸುವ ಕ್ರಿಯಾಪದಗಳೇ **ಭಾವವಾಚಿ**ಗಳು. ಉದಾ: ಕ್ಷಮೆಕೋರು, ಖಂಡಿಸು, ಅಭಿನಂದಿಸು, ವಂದಿಸು, ಸ್ವಾಗತಿಸು ಇತ್ಯಾದಿ. ಹೇಳುವ ವ್ಯಕ್ತಿ ಕೆಲವು ಕ್ರಿಯಾಪದಗಳನ್ನು ಬಳಸುವ ಮೂಲಕವೇ ವಸ್ತುಜಗತ್ತಿನಲ್ಲಿ ಕೆಲವು ಪರಿವರ್ತನೆಗಳನ್ನು ತರುವುದು ಸಾಧ್ಯವಿದ್ದರೆ ಆಗ ಅಂಥ ಕ್ರಿಯಾಪದಗಳನ್ನು **ಘೋಷಣೆ**ಗಳು ಎನ್ನುತ್ತೇವೆ. ಉದಾಹರಣೆಗೆ ರಾಜೀನಾಮೆ ನೀಡು, ಘೋಷಿಸು, ಹೆಸರಿಸು.

ಭಾಷಾಕ್ರಿಯೆಗಳು ಕೇಳುಗರಿಂದ ನಿರ್ದಿಷ್ಟ ಪರಿಣಾಮಗಳನ್ನು ನಿರೀಕ್ಷಿಸುತ್ತವಷ್ಟೆ. ಇಂಥ ಪರಿಣಾಮಗಳನ್ನು ಸಾಧಿಸಲು ಭಾಷಾಕ್ರಿಯೆಗಳು ನೇರಹಾದಿಯನ್ನು ಹಿಡಿಯುವುದು ಸಾಧ್ಯ. ಆದರೆ ಎಷ್ಟೋ ವೇಳೆ ಸಾಮಾಜಿಕ ಸಂದರ್ಭಗಳು ಹೇಗಿರುತ್ತವೆಂದರೆ ನೇರಹಾದಿಯಲ್ಲಿ ಇಂಥ ಪರಿಣಾಮ ನಿರೀಕ್ಷೆಯ ಕ್ರಿಯಾಪದಗಳನ್ನು ಬಳಸುವುದು ಸಾಧ್ಯವಾಗುವುದಿಲ್ಲ. ಆಗ ಪರೋಕ್ಷವಾಗಿರುವ ಹಾದಿಯನ್ನು ಹುಡುಕಬೇಕಾಗುತ್ತದೆ. 'ಹೋಗಿ ಬಾಗಿಲನ್ನು ಮುಚ್ಚಲು ಆಜ್ಞಾಪಿಸುತ್ತೇನೆ' ಎನ್ನುವುದು ನೇರ ಹಾದಿ. ಬದಲಿಗೆ 'ತುಂಬಾ ಗಾಳಿ ಅಲ್ಲವೆ?' ಎನ್ನುವುದು ಪರೋಕ್ಷ ಮಾರ್ಗ ಆಗ ಆ ಮಾತು ಕೇಳಿದವರು ಬಾಗಿಲು ಮುಚ್ಚಲಿ ಎಂಬ ಅಪೇಕ್ಷೆ ಇರುತ್ತದೆ. ಪರೋಕ್ಷ ಮಾರ್ಗ ಯಾವಾಗಲೂ ಉದ್ದೇಶಿತ ಪರಿಣಾಮವನ್ನು ಉಂಟುಮಾಡುವುದೆಂದು ಖಚಿತವಾಗಿ ಹೇಳುವಂತಿಲ್ಲ.

ಭಾಷಾಕ್ರಿಯೆಗಳು ನಡೆಯಲು ಕೆಲವು ಶರತ್ತುಗಳಿರುತ್ತವೆ. ಅವು ಪೂರೈಸಿದರೆ ಮಾತ್ರ ಭಾಷಾಕ್ರಿಯೆಗಳು ಸಾಧ್ಯ. ಇವುಗಳಲ್ಲಿ ಮೊದಲನೆಯದು 'ಅರ್ಹತೆ'. ಹೇಳುವ ವ್ಯಕ್ತಿಗೆ ತಕ್ಕ ಅರ್ಹತೆಗಳು, ಸಿದ್ಧತೆಗಳು ಇಲ್ಲದಿದ್ದಲ್ಲಿ ಭಾಷಾಕ್ರಿಯೆಗಳಿಗೆ ಅರ್ಥವೇ ಇರುವುದಿಲ್ಲ. ಕೆಲವು ಬಗೆಯ ಕ್ರಿಯಾಪದಗಳಿಗಂತೂ (ಉದಾ:ಘೋಷಣೆಗಳು)ಈ ಮಾತು ನಿಜ. ಎರಡನೆಯದು ಕ್ರಮ. ಭಾಷಾಕ್ರಿಯೆಗಳಲ್ಲಿ ತೊಡಗಿದ ವ್ಯಕ್ತಿ ನಿರ್ದಿಷ್ಟ ಕ್ರಮವನ್ನು ಅನುಸರಿಸದಿದ್ದರೆ ಆಗಲೂ ಆ ಕ್ರಿಯೆ ಸಂಭವಿಸದು. 'ನಿಮ್ಮನ್ನು ಹಾರ್ದಿಕವಾಗಿ ಸ್ವಾಗತಿಸುತ್ತೇನೆ' ಎಂದು ಹೇಳುವಾತ ಮುಖವನ್ನು ಗಂಟಿಕ್ಕಿಕೊಂಡಿರಬಾರದಷ್ಟೆ. ಮೂರನೆಯ ಶರತ್ತು; 'ಪ್ರಾಮಾಣಿಕತೆ' ಯಾವ ಭಾಷಾಕ್ರಿಯೆಯಲ್ಲಿ ವ್ಯಕ್ತಿ ತೊಡಗುವುದಿದೆಯೋ ಅದರಲ್ಲಿ ಆ ವ್ಯಕ್ತಿಗೇ ನಂಬಿಕೆ ಇರಬೇಕು. ಕ್ಷಮೆ ಕೋರುತ್ತೇನೆ

ಎನ್ನುವ ವ್ಯಕ್ತಿ ತನ್ನ ಕ್ರಿಯೆಯಲ್ಲಿ ಪ್ರಾಮಾಣಿಕತೆಯನ್ನು ಹೊಂದಿಲ್ಲದೇ ಇದ್ದರೆ ಭಾಷಕ್ರಿಯೆ ಮುರಿದು ಬೀಳುತ್ತದೆ.

ನಿಜ ಜೀವನದ ನಮ್ಮ ನೂರಾರು ಭಾಷಾ ವ್ಯವಹಾರಗಳಲ್ಲಿ ಭಾಷಾಕ್ರಿಯೆಗಳು ಸಹಜವೆಂಬಂತೆ ನಡೆದು ಹೋಗುತ್ತವೆ. ಭಾಗಿಗಳಾದವರು ಆ ಭಾಷಾ ಸಂದರ್ಭಕ್ಕೆ ಅವಶ್ಯವಾದ ಎಲ್ಲ ಅಂಶಗಳನ್ನು ತಿಳಿದವರಾಗಿರುತ್ತಾರೆ. ಅಥವಾ ಕೆಲವು ಸಂಗತಿಗಳನ್ನು ಅವರು ಒಪ್ಪಿರುತ್ತಾರೆ. ಹೇಳುವವರು ಮತ್ತು ಕೇಳುವರ ನಡುವೆ ಇರುವ ಸಮ್ಮತಿಯಿಂದಾಗಿ ಭಾಷಾಕ್ರಿಯೆಗಳು ಸುಲಲಿತವಾಗಿ ನಡೆದುಹೋಗುತ್ತವೆ. ಈ ಶರತ್ತುಗಳ ಪೂರೈಕೆ ಇಲ್ಲದಿದ್ದಲ್ಲಿ ಭಾಷಾಕ್ರಿಯೆಗಳು ಮುರಿದುಬೀಳುತ್ತವೆ ಇಲ್ಲವೆ ಆಭಾಸಗಳನ್ನುಂಟು ಮಾಡುತ್ತವೆ. ಹಾಸ್ಯ ವಿಷಾದಗಳಿಗೆ ಅವಕಾಶ ಕಲ್ಪಿಸುತ್ತವೆ.

# ಭಾಷೆಯ ಮಾಂತ್ರಿಕತೆ

ಜಗತ್ತಿನಾದ್ಯಂತ ಎಲ್ಲ ದೇಶಗಳ ಐತಿಹ್ಯಗಳಲ್ಲಿ ಜನಪದ ಸಾಹಿತ್ಯದಲ್ಲಿ ಭಾಷೆಯ ಮಾಂತ್ರಿಕತೆಯ ಉಲ್ಲೇಖಗಳು ದೊರಕುತ್ತವೆ. ಮಾತಿಗೆ ಒಂದು ವಿಶಿಷ್ಟ ಅಲೌಕಿಕ ಶಕ್ತಿಯಿರುವುದನ್ನು ಎಲ್ಲ ಕಾಲದೇಶಗಳ ಜನರು ನಂಬಿ ಬಂದಿದ್ದಾರೆ. ಮಾತು ಬರೆಹವಾದಾಗ ಆ ಅಕ್ಷರ ರೂಪಕ್ಕೆ ಮತ್ತಷ್ಟು ಹೆಚ್ಚಿನ ಮಾಂತ್ರಿಕತೆ ಲಭಿಸುವುದೆಂಬ ನಂಬಿಕೆಗಳಿವೆ. ಬರೆಹಗಳನ್ನು ಓದಬಲ್ಲವರು, ಅರಿಯಬಲ್ಲವರು ಮಾತ್ರ ಆ ಮಂತ್ರಶಕ್ತಿಯನ್ನು ಬಳಸಬಲ್ಲರು ಹಾಗೂ ಹಿಡಿತದಲ್ಲಿಟ್ಟುಕೊಳ್ಳಬಲ್ಲರೆಂದು ತಿಳಿಯಲಾಗಿದೆ. ಭಾಷೆಗೆ ಈ ಶಕ್ತಿ ಒದಗಲು ಕಾರಣವೆಂದರೆ ಅದು ಮನುಷ್ಯರಿಗೆ ದೈವವಿತ್ತ ಕೊಡುಗೆಯಾಗಿರುವುದು. ಈ ನಂಬಿಕೆಯಿಂದಾಗಿ ಹಲವಾರು ಧಾರ್ಮಿಕ ಚಟುವಟಿಕೆಗಳು ಆಚರಣೆಗಳು ರೂಪುಗೊಂಡಿವೆ. ಮಾಂತ್ರಿಕತೆಯುಳ್ಳ ಮಾತು ಬರೆಹಗಳ ಸುತ್ತಮುತ್ತ ಸಮುದಾಯಗಳ ಜೀವನಕ್ರಮ ಬೆಳೆಯುತ್ತ ಬಂದಿದೆ.

ಮಂತ್ರ, ಸ್ತೋತ್ರ, ನಾಮಾವಳಿ ಮುಂತಾದ ಭಾಷಾರೂಪಗಳಿಗೆ ವಿಶೇಷ ಶಕ್ತಿಯಿದೆಯೆಂದು ತಿಳಿದು ಆ ಶಕ್ತಿಯನ್ನು ಪಡೆಯಲು, ಆ ಮೂಲಕ ಲೋಕದಲ್ಲಿ ಬಲಶಾಲಿಯಾಗಲು ಆ ಭಾಷಾರೂಪಗಳನ್ನು ಉಚ್ಚರಿಸಲಾಗುತ್ತದೆ. ಹಾಗೆ ಉಚ್ಚರಿಸುವುದರಿಂದ ವಸ್ತುಗಳ ಮೇಲೆ ಜೀವಿಗಳ ಮೇಲೆ ಹಿಡಿತ ಸಾಧಿಸಲು ಸಾಧ್ಯವೆಂದು ಜನರು ಭಾವಿಸುತ್ತಾರೆ. ರೋಗಗಳನ್ನು ವಾಸಿಮಾಡಲು, ಅನಿಷ್ಟಗಳನ್ನು ಮೀರಿಸಲು, ಒಳಿತನ್ನು ಕೋರಲು ಇಂಥ ಭಾಷಾರೂಪಗಳನ್ನು ಬಳಸುವುದುಂಟು. ವರ ಮತ್ತು ಶಾಪಗಳೂ ಇಂಥ ವಿಶಿಷ್ಟ ಶಕ್ತಿಯುಳ್ಳ ಭಾಷಾರೂಪಗಳಷ್ಟೆ. ಕಲ್ಲಾಗಿ ಹೋಗು ಎಂದು ಶಪಿಸಿದಾಗ, ಹಾಗೆ ಉಚ್ಚರಿಸಿದಾಗ ವ್ಯಕ್ತಿ ಕಲ್ಲಾಗಿ ಹೋಗುವ ಪ್ರಸಂಗಗಳನ್ನು ಗಮನಿಸಿದರೆ ಶಾಪದ ಸ್ವರೂಪ ತಿಳಿಯುತ್ತದೆ. ಮಯೂರನೆಂಬಾತ ಸೂರ್ಯಶತಕವೆಂಬ ಸ್ತುತಿಯನ್ನು ಪಠಿಸಿದಾಗ ಅವನಿಗೆ ಬಂದಿದ್ದ ರೋಗ ವಾಸಿಯಾಯಿತಂತೆ. ಕೆಟ್ಟ ಕನಸುಗಳು ಬೀಳಬಾರದೆಂದು ಮಲಗುವಾಗ ಮಕ್ಕಳಿಗೆ ನಿರ್ದಿಷ್ಟ ಸ್ತೋತ್ರವೊಂದನ್ನು ಹೇಳಿಕೊಳ್ಳಲು ಕೆಲವರು ಕಲಿಸುವುದುಂಟು. ಮಾಂತ್ರಿಕ ಶಕ್ತಿಯುಳ್ಳ ಭಾಷಾರೂಪಗಳ ಪಾವಿತ್ರ್ಯವನ್ನು ಕಾಪಾಡಬೇಕೆಂದು ತಿಳಿಯುತ್ತದೆ. ಅವುಗಳನ್ನು ಖಚಿತವಾಗಿ ಉಚ್ಚರಿಸದಿದ್ದರೆ ಅಪಾಯಗಳು ಸಂಭವಿಸುತ್ತವೆಂಬ ನಂಬಿಕೆಗಳಿವೆ. ಖಚಿತ ಉಚ್ಚಾರಣೆ, ಪುನರಾವರ್ತನೆಗಳಿಂದ ಮಂತ್ರಶಕ್ತಿ ಹೆಚ್ಚಾಗುವುದೆಂದು ತಿಳಿವಳಿಕೆಯಿದೆ. ಇಂಥ ಶಕ್ತಿಯುಳ್ಳ ಭಾಷಾರೂಪಗಳಿಗೆ ನಿರ್ದಿಷ್ಟವಾದ ಅರ್ಥವಿರಲೇಬೇಕೆಂದಿಲ್ಲ. ಅವುಗಳನ್ನು ಬಳಸದ

ಜನರಿಗಂತೂ ಅವು ನಿರರ್ಥಕ ಶಬ್ದಸರಣಿಯಂತೆ ತೋರುತ್ತವೆ. ಆದರೆ ಸರಿಯಾಗಿ ಬಳಸುವುದರಿಂದ ಪರಿಣಾಮಕಾರಿಯಾಗುತ್ತವೆಂದು ತಿಳಿಯುತ್ತಾರೆ.

ಬರವಣಿಗೆ, ಅಕ್ಷರವನ್ನು ಮೊದಲ ಬಾರಿಗೆ ಕಂಡ ಆದಿವಾಸಿಗಳು, ಅದರ ಬಗ್ಗೆ, ಅದರ ಸಾಮರ್ಥ್ಯದ ಬಗ್ಗೆ ಭಯಗ್ರಸ್ತವಾದ ನಿದರ್ಶನಗಳಿವೆ. ಅಕ್ಷರದಲ್ಲಿ ಶಕ್ತಿ ಸುಪ್ತವಾಗಿದ್ದು ಅದನ್ನು ಓದಿದವನಿಗೆ ವರವಾಗಲೂಬಹುದು ಇಲ್ಲವೇ ಶಾಪವಾಗಲೂಬಹುದೆಂದು ತಿಳಿಯುತ್ತಾರೆ. ಶಿಲಾಶಾಸನಗಳನ್ನು ಓದಿದವರು ರಕ್ತ ಕಾರಿ ಸಾಯುತ್ತಾರೆಂಬ ನಂಬಿಕೆ ಇರುವಂತೆ ಬಹುಪಾಲು ಅಂಥ ಶಾಸನಗಳು ಹುದುಗಿಟ್ಟ 'ನಿಧಿ'ಯ ರಹಸ್ಯವನ್ನು ಸೂಚಿಸುತ್ತವೆಂದೂ ನಂಬುತ್ತಾರೆ.

ಆಧುನಿಕ ಕಾಲದಲ್ಲೂ ಭಾಷೆಯ ಮಾಂತ್ರಿಕ ಶಕ್ತಿಯ ಬಗ್ಗೆ ನಂಬುಗೆಗಳಿವೆ. ಜಾಹೀರಾತುಗಳು ಇದಕ್ಕೊಂದು ನಿದರ್ಶನ. 'ಮಾತಿನ ಮೋಡಿ' ಎನ್ನುವ ಉಕ್ತಿಯಲ್ಲೇ ಮಾತಿಗಿರುವ ವಶೀಕರಣ ಶಕ್ತಿಯನ್ನು ನಾವು ಸೂಚಿಸುತ್ತೇವೆ. ನೆಪೋಲಿಯನ್‌ನಂಥ ವಿಸ್ತರಣಾಕಾಂಕ್ಷಿಗಳು ಭಾಷೆಯ ಈ ಸಾಮರ್ಥ್ಯವನ್ನು ತಿಳಿದವರಾಗಿದ್ದರು. ಯುದ್ಧಪಡೆಗಳಿಗಿಂತ ವಾರ್ತಾಪತ್ರಿಕೆಗಳು ಶಕ್ತಿಶಾಲಿಯೆಂದು ಅವನು ತಿಳಿದಿದ್ದನು. ಹಾಗೆಯೇ ಒಂದು ರಾಷ್ಟ್ರದ ಪ್ರಭಾವದ ಏರಿಳಿತ ಅದರ ಬರವಣಿಗೆಯ ವ್ಯಾಪಕತೆಯನ್ನು ಅವಲಂಬಿಸಿರುವುದು ಗೋಚರಿಸುತ್ತದೆ. ಆದ್ದರಿಂದಲೇ ಅಧೀನ ರಾಷ್ಟ್ರವೊಂದರ ಅಧೀನತೆಯನ್ನು ಗಟ್ಟಿಗೊಳಿಸಲು ಆ ರಾಷ್ಟ್ರದ ಗ್ರಂಥ ಭಂಡಾರವನ್ನು ಸುಟ್ಟುಬೂದಿ ಮಾಡುತ್ತಿದ್ದರು.

**ಮಾತಿನಲ್ಲಿ ನಿಷೇಧಗಳು**

ಎಲ್ಲ ಸಮುದಾಯಗಳು ಕೆಲವು ವ್ಯವಹಾರಗಳನ್ನು, ಆಚರಣೆಗಳನ್ನು, ಸಂಬಂಧಗಳನ್ನು ಒಪ್ಪುವುದಿಲ್ಲ. ಅಥವಾ ಮುಚ್ಚಿಡಲು ಬಯಸುತ್ತವೆ. ಈ ಎಲ್ಲ ವ್ಯವಹಾರ, ಆಚರಣೆಗಳಿಗೆ ಆಯಾ ಭಾಷೆಗಳಲ್ಲಿ ಪ್ರತ್ಯೇಕ ಪದಗಳಿದ್ದರೂ ಆ ಪದಗಳ ಬಳಕೆಯ ಬಗ್ಗೆ ಕೆಲವು ನಿಷೇಧಗಳಿರುತ್ತವೆ. ಈ ನಿಷೇಧವನ್ನು ಉಲ್ಲಂಘಿಸಿ ಆ ಪದಗಳನ್ನು ಬಳಸುವ ಮೂಲಕ ಆ ಸಾಮಾಜಿಕ ಒಪ್ಪಂದವನ್ನು ಕೆಲವರು ಮುರಿಯಬಹುದು. ಆದರೆ ಸಮುದಾಯ ಇಂಥ ಉಲ್ಲಂಘನೆಯನ್ನು ಅಪರಾಧವೆಂದು ತಿಳಿಯುತ್ತದೆ. ಭಾಷೆಯಲ್ಲಿರುವ ನಿಷೇಧಿತ ಪದಗಳು ಸಾಮಾನ್ಯವಾಗಿ ದೇಹದ ಕೆಲವು ಅಂಗಗಳಿಗೆ, ದೇಹಸಂಬಂಧಕ್ಕೆ, ಕೆಲವು ಅತೀತ ಶಕ್ತಿಗಳಿಗೆ, ದೇಹದಿಂದ ತ್ಯಾಜ್ಯವಾದ ವಸ್ತುಗಳಿಗೆ, ಸಾವು ಮೊದಲಾದ ಅಶುಭ ಸಂಗತಿಗಳಿಗೆ ಸಂಬಂಧಿಸಿರುತ್ತವೆ. ಕೆಲವು ಸಂಸ್ಕೃತಿಗಳಲ್ಲಿ ಈ ಮೇಲಿನ ಸಂದರ್ಭಗಳಲ್ಲದೆ ಇನ್ನೂ ಕೆಲವು ಬಗೆಯ ಪದಗಳ ಬಳಕೆಯನ್ನು ನಿಷೇಧಿಸಿರುವುದುಂಟು.

ನಿಷೇಧಿತ ಪದಗಳ ಬಳಕೆ ಸರ್ವತ್ರವಾಗಿರುವಂತೆ ಕೆಲವೊಮ್ಮೆ ನಿರ್ದಿಷ್ಟ ಸಂದರ್ಭಗಳಿಗೆ ಸೀಮಿತವೂ ಆಗಿರುವುದುಂಟು. 'ಉಪ್ಪು' ಪದವನ್ನು ಕನ್ನಡಿಗರು ಬಳಸುತ್ತಿದ್ದರೂ ಕೆಲವು ಪ್ರದೇಶಗಳಲ್ಲಿ ಊಟ ಮಾಡುವಾಗ 'ಉಪ್ಪು' ಎನ್ನುವುದಿಲ್ಲ.

'ಸಕ್ಕರೆ' ಎಂದಾರು. ಎಣಿಸುವಾಗ, ಅದರಲ್ಲೂ ಅಳತೆ ಮಾಡುವಾಗ 'ಒಂದು' 'ಏಳು' ಮತ್ತು 'ಹನ್ನೊಂದು' ಎಂಬ ಸಂಖ್ಯೆಗಳನ್ನು ಉಚ್ಚರಿಸುವುದಕ್ಕೆ ನಿಷೇಧವಿದೆ. ಬದಲಾಗಿ 'ಲಾಭ' ಅಥವಾ ಹಿಂದಿನ ಸಂಖ್ಯೆ ನಂತರ 'ಮತ್ತೊಂದು' ಎಂದೋ ಹೇಳುವುದುಂಟು. (ಐದು, ಆರು, ಮತ್ತೊಂದು, ಎಂಟು, ಒಂಬತ್ತು, ಹತ್ತು, ಮತ್ತೊಂದು, ಹನ್ನೆರಡು....) 'ಹಾವು' ಎನ್ನಬಾರದು. ಹುಲಿಯೆನ್ನಬಾರದು ಅದನ್ನು 'ನರಿ' ಎನ್ನಬೇಕು. ಬೇರೆಬೇರೆ ಸಂಸ್ಕೃತಿಗಳಲ್ಲಿ ಇಂಥ ನಿಷೇಧಗಳ ನಿದರ್ಶನಗಳು ಹಲವಾರಿವೆ. ನವ ಮೆಕ್ಸಿಕೋದ ಜುನೀ ಪಂಗಡದ ಜನರು ಆಚರಣೆಗಳ ಸಂದರ್ಭದಲ್ಲಿ ಕಪ್ಪೆಯನ್ನು ಹೆಸರಿಸುವುದಿಲ್ಲ. ದಕ್ಷಿಣ ಅಮೆರಿಕಾದ ಜನರು ಔಪಚಾರಿಕ ಮಾತುಕತೆಗಳಲ್ಲಿ ಗೂಳಿಯನ್ನು ಸೂಚಿಸುವ ಪದವನ್ನು ಬಳಸದೆ ಬದಲಾಗಿ ಗಂಡು ಹಸು, ಗಂಡು ಪ್ರಾಣಿ ಎಂದೆಲ್ಲ ಸುತ್ತುಬಳಸಿ ಮಾತಾಡುವುದುಂಟು.

ಪದಗಳ ಬಳಕೆಗೆ ನಿಷೇಧವಿದ್ದರೂ ಕೆಲವು ಬಾಯಿ ತಪ್ಪಿಯೋ, ಮರೆವಿನಿಂದಲೇ ಅಥವಾ ಉದ್ದೇಶಪೂರ್ವಕವಾಗಿ ನಿಷೇಧಿತ ಸಂದರ್ಭದಲ್ಲಿ ಆ ಪದಗಳನ್ನು ಬಳಸುವುದುಂಟು. ಹೀಗೆ ಬಳಕೆಯಾದ ಕೂಡಲೇ ಕೆಲವು ಭಾಷಿಕ ಪ್ರತಿಕ್ರಿಯೆಗಳು ಮತ್ತೆ ಕೆಲವು ಭಾಷೇತರ ಪ್ರತಿಕ್ರಿಯೆಗಳು ಉಂಟಾಗುತ್ತವೆ. ಇವು ಬೇರೆ ಬೇರೆಯಾಗಿರುವಂತೆ, ಒಟ್ಟಾಗಿಯೂ ಇರುವುದುಂಟು. ಅಶುಭ ಸೂಚಕ ನಿಷೇಧಿತ ಪದಗಳನ್ನು ಬಳಸಿದ ಕೂಡಲೇ ಕನ್ನಡಿಗರಲ್ಲಿ ಕೆಲವರು 'ಬಿಡ್ತು' ಅನ್ನುವುದುಂಟು. ಅಲ್ಲದೇ ಆ ಪದಗಳನ್ನು ಹೇಳಿದ ವ್ಯಕ್ತಿಯಿಂದಲೂ 'ಬಿಡ್ತು' ಎಂದು ಹೇಳಿಸುತ್ತಾರೆ. ಮುಸ್ಲಿಮರು ಇಂಥದೇ ಸಂದರ್ಭಗಳಲ್ಲಿ 'ತೋಬಾ' ಎನ್ನುತ್ತ ಕೆನ್ನೆಗಳೆರಡನ್ನೂ ಬೆರಳುಗಳಿಂದ ಮುಟ್ಟಿಕೊಳ್ಳುತ್ತಾರೆ. ಕ್ರಿಶ್ಚಿಯನ್ನರು ಕೇವಲ ಭಾಷೇತರ ಪ್ರತಿಕ್ರಿಯೆ ಸೂಚಿಸುತ್ತಾರೆ. ದೇಹದ ಮುಂಬದಿಯಲ್ಲಿ ಶಿಲುಬೆಯ ಆಕಾರವನ್ನು 'ಬರೆದು'ಕೊಳ್ಳುವುದೇ ಆ ಪ್ರತಿಕ್ರಿಯೆ.

ನಿಷೇಧಗಳ ಉಲ್ಲಂಘನೆ ಕೆಲವೊಮ್ಮೆ ಜಗಳ, ಬಡಿದಾಟಗಳಿಗೆ ಕಾರಣವಾಗುತ್ತದೆ. ಅಶ್ಲೀಲವೆಂದು ಪರಿಗಣಿಸಲಾದ ಪದಗಳನ್ನು ಬಳಸಿದರೆ ಇಂಥ ಜಗಳಗಳು ಮಾತ್ರವಲ್ಲದೇ ಕಾನೂನಿನ ಕ್ರಮಗಳನ್ನು ಜರುಗಿಸಲೂಬಹುದು. ನಿಷೇಧಿತ ಪದಗಳ ಉಚ್ಚಾರ ಮತ್ತು ಬರೆವಣಿಗೆಗಳೆರಡು ಸಾಮಾಜಿಕವಾಗಿ ಅಪರಾಧ. ಚಲನಚಿತ್ರಗಳಲ್ಲಿ ಇಂಥ ಪದಗಳನ್ನು ಬಳಸಿದರೆ ಅಂಥದನ್ನು 'ಅಳಿಸಿ' ಹಾಕುವ ಸೆನ್ಸಾರ್ ಮಂಡಲಿಯಿದೆ. ಶಾಸನ ಸಭೆಗಳಲ್ಲಿ 'ಅನ್ ಪಾರ್ಲಿಮೆಂಟರಿ'ಯೆಂದು ಸೂಚಿಸಲಾದ ಪದಗಳನ್ನು ಬಳಸಿದರೆ ಅಂಥ ಉಲ್ಲೇಖಗಳನ್ನು ಅಧಿಕೃತ ದಾಖಲೆಗಳಿಂದ 'ತೆಗೆದು' ಹಾಕಲಾಗುತ್ತದೆ.

ಬೇರೆ ಬೇರೆ ಭಾಷೆಗಳ ಸಂಪರ್ಕ ಸಂದರ್ಭಗಳಲ್ಲಿ ಪದನಿಷೇಧಗಳು ವಿಚಿತ್ರ ಸನ್ನಿವೇಶಗಳನ್ನುಂಟು ಮಾಡುತ್ತವೆ. ತುಮಕೂರು ಜಿಲ್ಲೆಯ ಒಂದು ಊರು ಮಧುಗಿರಿ. ಹಳೆಯ ಹೆಸರು ಶ್ರೀಮದ್ಗಿರಿ. ಜನ ಬಳಸುತ್ತಿರುವಾಗ ಶ್ರೀ ಬಿಟ್ಟು ಹೋಗಿ ಮದ್ದಗಿರಿಯಾಯಿತು. ಇಂಗ್ಲಿಷ್ ದಾಖಲೆಗಳಲ್ಲಿ Maddagiri ಎಂದಾಯಿತು. ಆ ಪ್ರದೇಶದಲ್ಲಿ ತೆಲುಗು-ಕನ್ನಡ ದ್ವಿಭಾಷಿಕತೆಯಿದೆ. Madda ಎಂಬುದನ್ನು 'ಡ'

ಕಾರಯುಕ್ತವಾಗಿ ಓದಿದಾಗ ತೆಲುಗಿನಲ್ಲಿ ನಿಷೇಧವಿರುವ ಪದವನ್ನು ಹೋಲುತ್ತದೆ. ಹೀಗಾಗಿ ಊರಿನ ಹೆಸರನ್ನೇ ಮಧುಗಿರಿಯೆಂದು ಬದಲಾಯಿಸಲಾಗಿದೆ. ಗ್ರೀಕ್ ಇಂಡಿಯನ್ನರು ತಮ್ಮ ಭಾಷೆಯ ಜತೆಗೆ ಇಂಗ್ಲಿಶ್‌ನ್ನು ಬಲ್ಲರು. ಇಂಗ್ಲಿಶ್ ಅಲ್ಲಿ ಪ್ರಭಾವಶಾಲಿ ಭಾಷೆ. ಗ್ರೀಕರು 'ಭೂಮಿ' (Fakki) ಮತ್ತು 'ಮಾಂಸ' (apiswa) ಎಂಬ ಅರ್ಥವನ್ನು ಹೇಳುವ ತಮ್ಮ ಭಾಷೆಯ ಪದಗಳನ್ನು (ಕಂಸದಲ್ಲಿ ಬರೆದಿದೆ) ಉಚ್ಚರಿಸಲು ಹಿಂಜರಿಯುತ್ತಾರೆ. ಏಕೆಂದರೆ ಆ ಪದಗಳಲ್ಲಿ ಇಂಗ್ಲಿಷ್‌ನ ನಿಷೇಧಿತ ರೂಪಗಳ ಹೋಲಿಕೆಯಿದೆ. 'ಲೀ' ಎಂಬುದು ಚೀನಾದ ಜನಪ್ರಿಯ ವಂಶನಾಮ. ಆದರೆ ಮೈನ್ಮಾರ್‌ನಲ್ಲಿ ಆ ಪದವನ್ನು ಬಳಸಲು ಹಿಂಜರಿಯುತ್ತಾರೆ. ಏಕೆಂದರೆ ಅಲ್ಲಿನ ಭಾಷೆಯಲ್ಲಿ ಗಂಡಸಿನ ಜನನಾಂಗವನ್ನು ಸೂಚಿಸುವ ಪದದೊಡನೆ ಆ ಪದಕ್ಕೆ ಹೋಲಿಕೆಯಿದೆ. ಹಾಗೆ ನಿಷೇಧಿತ ಪದಗಳು ಆಯಾ ಭಾಷೆಯ ಸಂದರ್ಭದಲ್ಲಿ ಮಾತ್ರವಲ್ಲದೆ ಭಿನ್ನಭಾಷೆಗಳ ಸಂಪರ್ಕಗಳಲ್ಲಿ ಅನಿರೀಕ್ಷಿತ ಕಾರಣಗಳಿಂದ ಸೃಷ್ಟಿಯಾಗಬಹುದು.

ಈಗಾಗಲೇ ಸೂಚಿಸಿದಂತೆ ನಿಷೇಧಿತ ಪದಗಳನ್ನು ಸಂಕಥನದಲ್ಲಿ ನಿವಾರಿಸಲು ಪರ್ಯಾಯ ಪದಗಳನ್ನು, ಬಳಸುಮಾತುಗಳನ್ನು ಭಾಷೆಯಲ್ಲಿ ರೂಪಿಸಿಕೊಳ್ಳಲಾಗುತ್ತದೆ. 'ಸಾಯು' ಎಂಬುದನ್ನು ಹೇಳುವ ಬದಲು ಕನ್ನಡದಲ್ಲಿರುವ ಪರ್ಯಾಯೋಕ್ತಿಗಳನ್ನು ಗಮನಿಸಿ: ಮೃತಿಹೊಂದು, ಮರಣ ಹೊಂದು, ಶಿವೈಕ್ಯವಾಗು, ಲಿಂಗೈಕ್ಯವಾಗು, ಸ್ವರ್ಗವಾಸಿಯಾಗು, ಕೈಲಾಸವಾಸಿಯಾಗು, ವೈಕುಂಠವಾಸಿಯಾಗು, ಪಂಚಭೂತಗಳಲ್ಲಿ ಲೀನವಾಗು, ದೇಹ ತ್ಯಾಗಮಾಡು, ದೇಹ ಮುಡುಪಿಡು, ಪರಂಧಾಮವನ್ನೈದು, ಮುಕ್ತಿಹೊಂದು, ಭವವಿಮೋಚನೆ ಪಡೆ, ಹೀಗೆ ಇನ್ನೂ ಹಲವು ಔಪಚಾರಿಕ ಉಕ್ತಿಗಳಿವೆ. ಅನೌಪಚಾರಿಕವಾಗಿ ನೆಗೆದುಬೀಳು, ಗೊಟಕ್ ಅನ್ನು, ಹಳೆರಾಗಿ ತರಲು ಹೋಗು, ಕಂತೆ ಒಗಿ, ಲೆಕ್ಕಮುಗಿಸು, ಅಂಗಡಿ ಮುಚ್ಚು ಮುಂತಾದ ಮಾತುಗಳಿವೆ.

**ಹೆಸರುಗಳು**

ಜಗತ್ತಿನಾದ್ಯಾಂತ ಈಗ ತಿಳಿದಿರುವಂತೆ ಎಲ್ಲ ಸಮುದಾಯಗಳಲ್ಲೂ ಪ್ರತಿ ವ್ಯಕ್ತಿಗೂ ಒಂದು ಹೆಸರು ಇರುತ್ತದೆ. ಹೆಸರಿಡುವುದು ಒಂದು ಮುಖ್ಯ ಜಾತಕರ್ಮ. ವ್ಯಕ್ತಿಗೂ ಹೆಸರಿಗೂ ಸಂಬಂಧ ನಿಕಟವಾಗಿರುತ್ತದೆ. ಆದರೆ ಹೆಸರಿಗೆ ವ್ಯಕ್ತಿಯನ್ನು ಹೊರತು ಪಡಿಸಿಯೂ ಪ್ರತ್ಯೇಕ ಅಸ್ತಿತ್ವ ಕೆಲವೊಮ್ಮೆ ಲಭಿಸುವುದುಂಟು. ಅಪರಿಚಿತರು, ಕಾಲದೇಶಗಳಲ್ಲಿ ಭಿನ್ನವಾಗಿರುವವರು ವ್ಯಕ್ತಿಯ ಹೆಸರಿಗೆ ಪರಿಚಿತರಾಗಿರುವುದು ಸಾಧ್ಯ. ಎಷ್ಟೋ ಸಂದರ್ಭದಲ್ಲಿ ನಮಗೆ ಹೆಸರಷ್ಟೇ ನಿಜವಾಗಿರುತ್ತದೆ. ವ್ಯಕ್ತಿ ಸಂಪೂರ್ಣ ಗೌಣವಾಗುವುದುಂಟು.

ಹೆಸರಿಗೆ ಇರುವ ಈ ಶಕ್ತಿ ಸಾಮರ್ಥ್ಯವನ್ನು ಜನರು ಬಲ್ಲರು. ತಮ್ಮ ಶಕ್ತಿಯೆಲ್ಲವೂ ತಮ್ಮ ಹೆಸರಿನಲ್ಲೇ ಅಡಕವಾಗಿದೆಯೆಂದು ತಿಳಿಯುವ ಜನಾಂಗಗಳಿವೆ. ಅವರು ವ್ಯಕ್ತಿಯ ನಿಜನಾಮವನ್ನು ಶತ್ರುಗಳಿಂದ ಬಚ್ಚಿಟ್ಟಿರುತ್ತಾರೆ. ನ್ಯೂಜಿಲೆಂಡಿನ ಒಂದು ಬುಡಕಟ್ಟಿನ

ಜನರು ತಮ್ಮ ಪ್ರತಿ ವ್ಯಕ್ತಿಗೂ ಒಂದು ಗುಪ್ತನಾಮವನ್ನು ಇರಿಸಿರುತ್ತಾರೆ. ಆ ಹೆಸರು ಅತ್ಯಂತ ಆಪ್ತರಿಗೆ ಮಾತ್ರ ತಿಳಿದಿರುತ್ತದೆ. ಉಳಿದವರು ಆ ವ್ಯಕ್ತಿಗೆ ಇರುವ ಇನ್ನೊಂದು ಹೆಸರನ್ನು ಬಳಸುತ್ತಿರುತ್ತಾರೆ. ಈ ಗುಪ್ತನಾಮ ಶತ್ರುವಿಗೆ ತಿಳಿಯಿತೆಂದರೆ ಈ ವ್ಯಕ್ತಿಯ ಮೇಲೆ ಶತ್ರು ಸಂಪೂರ್ಣ ಹಿಡಿತ ಸಾಧಿಸಿದಂತೆ.

ಹೆಸರುಗಳನ್ನು ಹೇಳುವ ಕ್ರಮದಲ್ಲೂ ಕೆಲವು ವಿಶೇಷಗಳಿವೆ. ಹೆಂಗಸರು ತಮ್ಮ ಗಂಡನ ಹೆಸರನ್ನು ಹೇಳುವುದಿಲ್ಲ. ತೋಡರು ತಮ್ಮ ಹೆಸರನ್ನು ಹೇಳಲು ಇಚ್ಛಿಸುವುದಿಲ್ಲ. ಹೇಳಲೇಬೇಕಾಗಿ ಬಂದರೆ ಪರಿಚಿತರು ಆ ಹೆಸರನ್ನು ಹೇಳುವಂತೆ ಮಾಡುತ್ತಾರೆ. ಅಪರಿಚಿತರಿಗೆ ತಮ್ಮ ತಮ್ಮ ಹೆಸರುಗಳನ್ನು ತಿಳಿಯಬಾರದೆಂಬ ಉದ್ದೇಶದಿಂದ ಕೆಲವು ಜನಾಂಗಗಳ ಜನರು ತಾವು ಮಾತನಾಡಿಕೊಳ್ಳುವಾಗ ಪರಸ್ಪರರನ್ನು ಹೆಸರು ಹಿಡಿದು ಕರೆಯುವುದಿಲ್ಲ. ಜನಪದ ಕತೆಗಳಲ್ಲಿ ದುಷ್ಟರಾದವರನ್ನು ಸದೆ ಬಡಿಯಲು ಅವರ ಹೆಸರನ್ನು ಪತ್ತೆ ಮಾಡುವುದು ಒಂದು ತಂತ್ರವಾಗಿ ಕಂಡುಬರುತ್ತದೆ.

ಹೆಸರುಗಳನ್ನು ಬದಲಿಸುವ ಪ್ರಕ್ರಿಯೆಯೊಂದಿದೆ. ತಮಗೆ ಬೇಕಾದ ಹೆಸರನ್ನು ಇಡುವ ಮೂಲಕ ಆ ವ್ಯಕ್ತಿ, ವಸ್ತು, ಪ್ರದೇಶಗಳ ಮೇಲೆ ಹಿಡಿತ ಸಾಧಿಸಬಹುದೆಂಬ ನಂಬಿಕೆ ಇಂಥ ಬದಲಾವಣೆಗಳ ಹಿಂದೆ ಇರುತ್ತದೆ. ಭೂತಕಾಲದೊಡನೆ ಸಂಬಂಧ ಕಳಚಲು ಹೆಸರನ್ನು ಬದಲಾಯಿಸುವ ತಂತ್ರವನ್ನು ಬಳಸಲಾಗುತ್ತದೆ. ಸನ್ಯಾಸದೀಕ್ಷೆ ಪಡೆದಾಗ ಮೊದಲ ಹೆಸರಿನ ಬದಲು ಇನ್ನೊಂದು ಹೊಸ ಹೆಸರಿಡುವುದು. ಹೀಗೆ ಭೂತಕಾಲದ ಬಿಡುಗಡೆ ಪಡೆಯುವ ಕಾರಣದಿಂದ.

ವ್ಯಕ್ತಿ ಸತ್ತಾಗ ಆ ವ್ಯಕ್ತಿಯ ಹೆಸರು ಮಾತ್ರ ಉಳಿಯುವುದಷ್ಟೆ. ಕೆಲವು ಸಂಸ್ಕೃತಿಗಳು ಸತ್ತವರ ಹೆಸರನ್ನು ಮರೆಯಲು ಯತ್ನಿಸುತ್ತವೆ. ಪಾಲಿನೇಶಿಯನ್ ಜನಾಂಗಗಳಲ್ಲಿ ವ್ಯಕ್ತಿಯೊಬ್ಬರು ಸತ್ತ ಕೂಡಲೇ ಆ ಹೆಸರುಳ್ಳವರೆಲ್ಲರ ಹೆಸರನ್ನು ಬದಲಾಯಿಸುತ್ತಾರೆ. ಇದರಿಂದಾಗಿ ಸತ್ತವರ ಹೆಸರನ್ನು ಉಚ್ಚರಿಸುವುದನ್ನು ತಪ್ಪಿಸುತ್ತಾರೆ. ಮತ್ತೆ ಕೆಲವು ಜನಾಂಗಗಳಲ್ಲಿ ಇದಕ್ಕೆ ವಿರುದ್ಧವಾದ ನಡವಳಿಕೆಯಿದೆ. ಸತ್ತವರ ಹೆಸರನ್ನು ಬೇರೆ ಯಾರಿಗಾದರೂ ಇಡದಿದ್ದಲ್ಲಿ ಆ ವ್ಯಕ್ತಿಯ ಆತ್ಮ ಹಿಂಸೆ ಪಡುವುದೆಂದು ಅವರು ತಿಳಿಯುತ್ತಾರೆ. ಹೀಗಾಗಿ ಸತ್ತವರ ಹೆಸರನ್ನು ಕುಟುಂಬದ ನವಜಾತ ಶಿಶುವಿಗೆ ಇರಿಸುತ್ತಾರೆ. ಕನ್ನಡ ಭಾಷಿಕರಲ್ಲೂ ಇಂಥ ಪದ್ಧತಿಗಳಿವೆ. ಒಂದು ತಲೆಮಾರಿನ ಹೆಸರನ್ನು ಮೂರನೆ ತಲೆಮಾರಿಗೆ ದಾಟಿಸುತ್ತಾರೆ. ಅಜ್ಜ ಅಜ್ಜಿಯರ ಹೆಸರನ್ನು ಮೊಮ್ಮಗ ಮೊಮ್ಮಗಳಿಗೆ ಇಡುವ ಪದ್ಧತಿಯಿದೆ. ಸಾವನ್ನು ದೂರವಿಡಲು ಹೆಸರನ್ನು ಬಳಸುವುದುಂಟು. ಮಗು ಸಾಯದಿರಲೆಂದು ಅದಕ್ಕೆ ಕ್ಷುಲ್ಲಕವಾದ ಹೆಸರನ್ನು ಇಡುತ್ತಾರೆ. ಆ ಹೆಸರು ಗಹನವಲ್ಲವಾದ್ದರಿಂದ ಆ ಹೆಸರು ಹೊತ್ತ ಮಗುವೂ ಕ್ಷುದ್ರವೆಂದು ಸಾವು ತಿಳಿದು ಆಗ ಆ ಮಗುವನ್ನು ಬದುಕಲು ಬಿಡುವುದೆಂದು ತಿಳಿಯುತ್ತಾರೆ. ಮತ್ತೆ ಕೆಲವರಲ್ಲಿ ಸಾವನ್ನು ದೂರವಿಡಲು 'ಸಾವಿಲ್ಲದ' ಹೆಸರನ್ನು ಇಡುತ್ತಾರೆ. ಗುಂಡ, ತಿಪ್ಪೆ ಮುಂತಾದವು ಇಂಥ ಹೆಸರುಗಳು. ಅಚಲವಾದ ಕಲ್ಲು ಮತ್ತು ಎಂದೂ ಬರಿದಾಗದ ತಿಪ್ಪೆ ಸಾವನ್ನು ದೂರವಿಡುವ ಹೆಸರೆಂದು ಜನ ಭಾವಿಸುತ್ತಾರೆ.

ಇಂಥ ನಂಬಿಕೆ ನಡವಳಿಕೆಗಳು ಆದಿವಾಸಿಗಳಿಗೆ ಮಾತ್ರ ಸೀಮಿತವೆಂದು ತಿಳಿಯಬಾರದು. ಪೌರಸಮಾಜಗಳಲ್ಲೂ ಇಂಥ ನಂಬಿಕೆಗಳು ಒಂದಿಲ್ಲೊಂದು ರೀತಿಯಲ್ಲಿ ಕಂಡುಬರುತ್ತವೆ. ಶಕುನಿ, ದುರ್ಯೋಧನ, ದುಶ್ಯಾಸನ ಎಂಬ ಹೆಸರುಗಳನ್ನು ದೂರವಿರಿಸುತ್ತಾರೆ. ಅಶುಭ ಸೂಚಕವೆನಿಸಿದ್ದನ್ನು ನಿವಾರಿಸಿಕೊಳ್ಳುತ್ತಾರೆ. ಹೆಸರುಗಳಿಗೆ ಇರುವ ಇಂಥ ಸಾಮರ್ಥ್ಯದ ಬಗ್ಗೆ ಈಗ ಜನ ಎಷ್ಟೇ ಗೇಲಿ ಮಾಡಿದರೂ ಮೂಲದಲ್ಲಿ ಅಳುಕು ನಂಬಿಕೆ ಹೇಗೋ ಉಳಿಯುತ್ತದೆ. ಕಳೆದ ಶತಮಾನದ ಭೀಕರ ಸಾಗರ ದುರ್ಘಟನೆಗೆ ತುತ್ತಾದ ಹಡಗೊಂದರ ಹೆಸರು ಟೈಟಾನಿಕ್. ಮತ್ತೆ ಯಾರಾದರೂ ಆ ಹೆಸರನ್ನು ಹಡಗೊಂದಕ್ಕೆ ಇಡಬಹುದೆ?

**ಪದಗಳ ಮಂತ್ರ ಶಕ್ತಿ**

ಕೆಲವೊಮ್ಮೆ ಊರಿನ ಹೆಸರುಗಳಿಗೂ ವಿಶಿಷ್ಟ ಸಾಮರ್ಥ್ಯ ಆರೋಪಿತವಾಗುತ್ತದೆ. ಚರಿತ್ರೆಯ ನೆನಪನ್ನು ಅಳಿಸಿಹಾಕುವ ಉದ್ದೇಶದಿಂದ ಸ್ಥಳಗಳ ಹೆಸರನ್ನು ಬದಲಾಯಿಸುವುದುಂಟು. ರೋಡಿಶಿಯಾ ಎಂಬ ವಸಾಹತು ಜಿಂಬಾಬ್ವೆ ಎಂದು ಹೆಸರು ಪಡೆಯಿತು. ಅದರ ರಾಜಧಾನಿ ಸ್ಯಾಲಿಸ್‌ಬರಿಗೆ ಹರಾರೆ ಎಂದು ಹೆಸರಿಟ್ಟಿದ್ದಾರೆ. ಬಾಂಬೆಯನ್ನು (ಬೊಂಬಾಯಿ) ಮುಂಬೈಯೆಂದೂ ಪೂನಾವನ್ನು ಪುಣೆಯೆಂದು ಕರೆಯಲುಪಕ್ರಮಿಸಿರುವುದು ನೆರೆಯ ಉದಾಹರಣೆಗಳು. ಮೈಸೂರು ರಾಜ್ಯವನ್ನು ಕರ್ನಾಟಕವೆಂದು ಹೆಸರಿಸಲು ಒತ್ತಾಯಿಸುವ ಚಳುವಳಿಯಲ್ಲಿ ಕರ್ನಾಟಕವೆಂದರೆ ಬರಿಯ ಹೆಸರಲ್ಲ, ಅದೊಂದು ಮಂತ್ರವೆಂಬ ಮಾತೂ ಕೇಳಿ ಬಂದಿತ್ತು.

# ಭಾಷೆಯ ಬಳಕೆಯಲ್ಲಿ ತಪ್ಪುಗಳು

ಗೆಳೆಯರೊಬ್ಬರು ಜಾಹಿರಾತೊಂದರಲ್ಲಿ ಕಂಡುಬಂದ ವಾಕ್ಯವೊಂದನ್ನು ನನ್ನ ಗಮನಕ್ಕೆ ತಂದರು. 'ಇದನ್ನು ಕೀಳಿದರೆ ನೀವು ಶಿಕ್ಷೆಗೆ ಗುರಿಯಾಗುತ್ತೀರಿ' ಎಂಬುದು ಆ ವಾಕ್ಯ. ಸಹಜವಾಗಿಯೇ ಈ ವಾಕ್ಯದಲ್ಲಿ ಬಳಸಲಾದ 'ಕೀಳಿದರೆ' ಎನ್ನುವ ರೂಪ ಸರಿಯೆನಿಸುವುದಿಲ್ಲ. 'ಕಿತ್ತರೆ' ಎನ್ನುವ ರೂಪವನ್ನು ಬಳಸಬೇಕಿತ್ತು. ಹೀಗೆ ತಪ್ಪು ರೂಪ ಬಳಸಿದವರಿಗೆ ಕನ್ನಡ ಸರಿಯಾಗಿ ಗೊತ್ತಿಲ್ಲವೆಂಬ ತೀರ್ಮಾನಕ್ಕೆ ಬರುತ್ತೇವೆ. ಕನ್ನಡ ಕಲಿಯುತ್ತಿರುವ ಮಕ್ಕಳಲ್ಲಿ ಹಲವರು ತಮ್ಮ ಕಲಿಕೆಯ ಯಾವುದೋ ಒಂದು ಹಂತದಲ್ಲಿ 'ನಾನು ಗಿಡ ನೆಡಿದೆ' ಎಂಬ ರೀತಿಯ ವಾಕ್ಯಗಳನ್ನು ಬಳಸುವುದನ್ನು ಗುರುತಿಸಬಹುದು. ಹಾಗೆಯೇ ಕನ್ನಡ ಕಲಿಯುತ್ತಿರುವ ವಯಸ್ಕರಲ್ಲಿ 'ಅವನು ಜೋಕು ಕೇಳಿ ನಗಿದ' ಎಂಬ ಮಾದರಿಯ ವಾಕ್ಯಗಳನ್ನು ಕೇಳಿಸಿಕೊಳ್ಳುತ್ತೇವೆ. ಎಚ್ಚರಿಕೆಯಿಂದ ಗಮನಿಸಿದರೆ ಈ ಎಲ್ಲ ವಾಕ್ಯಗಳಲ್ಲಿ ಇರುವ ತಪ್ಪುಗಳು ಒಂದೇ ರೀತಿಯವು ಎನ್ನುವುದು ಗೊತ್ತಾಗುತ್ತದೆ. ಈ ಕುರಿತು ಕೊಂಚ ಪರಿಶೀಲಿಸೋಣ.

**ವರ್ತಮಾನ**

ಕನ್ನಡದ ಕೆಲವು ಕ್ರಿಯಾರೂಪಗಳಿಗೆ ಎರಡೆರಡು ರೂಪಗಳಿರುತ್ತವೆ. ಅವುಗಳಲ್ಲಿ ಒಂದನ್ನು ಭೂತಕಾಲದಲ್ಲಿಯೂ ಇನ್ನೊಂದನ್ನು ಅಭೂತ ಕಾಲದಲ್ಲಿಯೂ (ಇದರಲ್ಲಿ ವರ್ತಮಾನ ಮತ್ತು ಭವಿಷ್ಯತ್ ಕಾಲಗಳೆರಡೂ ಸೇರಿಕೊಳ್ಳುತ್ತವೆ) ಬಳಸುವುದು ವಾಡಿಕೆ. ನೆಡು (ನೆಟ್), ಇಡು (ಇಟ್), ಕೊಡು (ಕೊಟ್), ಬಿಡು (ಬಿಟ್), ತೊಡು (ತೊಟ್), ಕೀಳು (ಕಿತ್), ಬೀಳು (ಬಿದ್), ತೆರು (ತೆತ್), ಹೊರು (ಹೊತ್) ಹೀಗೆ ಇನ್ನೂ ಹಲವನ್ನು ಪಟ್ಟಿಮಾಡಬಹುದು. ಇವುಗಳಲ್ಲಿ ಕಂಸಗಳ ಒಳಗಿರುವ ರೂಪವನ್ನು ಭೂತಕಾಲದಲ್ಲೂ ಇನ್ನೊಂದನ್ನು ಅಭೂತಕಾಲದಲ್ಲೂ ಬಳಸುತ್ತೇವೆ. ಕನ್ನಡ ಕಲಿಯುವವರಿಗೆ ಈ ಜೋಡಿರೂಪಗಳಿವೆಯೆನ್ನುವುದು ಗೊತ್ತಿದೆಯೇ? ಅಥವಾ ಈ ಅಂಶವನ್ನು ಅವರು ಯಾವಾಗ ಮತ್ತು ಹೇಗೆ ಕಲಿಯುತ್ತಾರೆ? ಇವೆಲ್ಲ ಕುತೂಹಲಕರ ಪ್ರಶ್ನೆಗಳೇ ಸರಿ. ಇತರ ಹಲವು ಕ್ರಿಯಾಪದಗಳಿಗೆ ಹೀಗೆ ಭೂತಕಾಲಕ್ಕೊಂದು ಅಭೂತ ಕಾಲಕ್ಕೊಂದು ಎಂಬ ಎರಡು ರೂಪಗಳಿಲ್ಲದಿರುವಾಗ ಈ ಗೊಂದಲ ಕೆಲವು ಕ್ರಿಯಾಪದಗಳಲ್ಲಿ ಏಕೆ ಉಂಟಾಯಿತೆಂಬುದು ಇದಕ್ಕಿಂತ ಮುಖ್ಯವಾದ ಸಂಗತಿ. ಕನ್ನಡ ಭಾಷೆಯ ಚರಿತ್ರೆಯನ್ನು ಬಲ್ಲವರು ಹೀಗೆ ಎರಡು ರೂಪಗಳು ಉಂಟಾದುದಕ್ಕೆ

ಕಾರಣಗಳನ್ನು ಹೇಳಬಲ್ಲರು. ಅದಕ್ಕೆ ಆಧಾರವಾಗಿ ಕನ್ನಡ ಬರಹದ ದಾಖಲೆಗಳ ಪುರಾವೆಗಳನ್ನು ಒದಗಿಸುವುದು ಕಷ್ಟವಲ್ಲ. ಆದರೆ ಬೇರೆ ಬೇರೆ ಕಾಲದಲ್ಲಿ ಕನ್ನಡವನ್ನು ಮಾತನಾಡುತ್ತಿದ್ದವರು ತಮ್ಮ ಉಚ್ಚಾರಣೆಯಲ್ಲಿ ಈ ಜೋಡಿರೂಪಗಳನ್ನು ಹೇಗೆ ನಿರ್ವಹಿಸುತ್ತಿದ್ದರೆಂಬುದನ್ನು ತಿಳಿದುಕೊಳ್ಳುವುದು ಅಷ್ಟು ಸುಲಭವಲ್ಲ. ಅದಕ್ಕೆ ದಾಖಲೆಗಳಿಲ್ಲ. ಆದರೆ ಈಗ ಜನರು ಬೇರೆ ಬೇರೆ ಕಡೆ ಮಾತನಾಡುವ ರೂಪಗಳನ್ನು ಗಮನಿಸಿದರೆ ಕೆಲವು ಸುಳಿವುಗಳು ಸಿಗುತ್ತವೆ. ಉದಾಹರಣೆಗೆ 'ಬರು' ಎನ್ನುವ ಕ್ರಿಯಾರೂಪವನ್ನು ನೋಡೋಣ. ಈ ಕ್ರಿಯಾಪದವನ್ನು ಭೂತಕಾಲದಲ್ಲಿ ಬಳಸಿದಾಗ 'ಬರು' ಬದಲು 'ಬನ್' (ಬಂದನು, ಬಂದಳು, ಬಂತು ಇತ್ಯಾದಿ ರೂಪಗಳನ್ನು ಗಮನಿಸಿ) ಎಂಬ ರೂಪ ಕಾಣಿಸಿಕೊಳ್ಳುತ್ತದೆ. ಮಕ್ಕಳು ಮನೆಯ ಮಾತಾಗಿ ಕನ್ನಡವನ್ನು ಕಲಿಯುವಾಗ ವಾಕ್ಯಗಳ ರಚನೆಯ ನಿಯಮಗಳನ್ನು ಬಳಸಲು ತೊಡಗುವುದನ್ನು ಗಮನಿಸದರೆ ಕೆಲವು ಸಂಗತಿಗಳು ತಿಳಿಯುತ್ತವೆ. ಅವರು ವಾಕ್ಯದ ನಾಮಪದ ಗುಚ್ಛ ಇಲ್ಲವೇ ಕ್ರಿಯಾಪದಗುಚ್ಛ ಎರಡನ್ನೂ ಒಮ್ಮೆಗೆ ಬಳಸಲು ತೊಡಗುವುದಿಲ್ಲ. ಉದಾಹರಣೆಗೆ ಮಗು 'ಚಂಡು' ಎಂದಾಗ 'ಚಂಡು ಅಲ್ಲಿದೆ', 'ಚಂಡು ಬೇಕು', 'ಚಂಡು ನನ್ನದು' ಹೀಗೆ ಏನಾದರೂ ಅರ್ಥವಾಗಬಹುದು. ಸಂದರ್ಭಕ್ಕೆ ಅನುಗುಣವಾಗಿ ನಾವು ಮಗುವಿನ ಅಭಿಪ್ರಾಯವನ್ನು ಅರಿತುಕೊಳ್ಳುತ್ತೇವೆ. ಹಾಗೆಯೇ ವಾಕ್ಯದಲ್ಲಿ ಕ್ರಿಯಾಪದಗಳನ್ನು ಬಳಸಲು ತೊಡಗಿದಾಗ ಕೇವಲ ಕ್ರಿಯಾದಾತುಗಳನ್ನು ಮಾತ್ರ ಬಳಸುತ್ತಾರೆ. ಅದರೊಡನೆ ಕಾಲಸೂಚಕ ಪ್ರತ್ಯಯವನ್ನಾಗಲೀ, ಆಖ್ಯಾತ ಪ್ರತ್ಯಯವನ್ನಾಗಲೀ ಮೊದಮೊದಲು ಸೇರಿಸುವುದಿಲ್ಲ. 'ಕುಡಿ' ಎಂದು ಮಗು ಹೇಳಿದರೆ 'ಕುಡಿಯುತ್ತೇನೆ', 'ಕುಡಿದರು', 'ಕುಡಿಯುವುದಿಲ್ಲ', 'ಕುಡಿದೆ' ಹೀಗೆ ಏನಾದರೂ ಅರ್ಥವಾಗಬಹುದು. ಈ ವಿವರ ನಮಗೆ ಕುತೂಹಲಕಾರಿ. ಏಕೆಂದರೆ ಹೀಗೆ ಮಕ್ಕಳು ಮೊದಲು ಕ್ರಿಯಾಧಾತುಗಳನ್ನು ಬಳಸಲು ತೊಡಗಿದಾಗ ನಾವು ಮೇಲೆ ಗುರುತಿಸಿದ ಜೋಡಿಪದಗಳಲ್ಲಿ ಯಾವುದನ್ನು ಬಳಸುತ್ತಾರೆನ್ನುವುದನ್ನು ಗುರುತಿಸುವುದು ಅಗತ್ಯ. ಉದಾ.ಗೆ ಮಗು 'ಬರು' ಮತ್ತು 'ಬನ್' ಎಂಬ ರೂಪಗಳಲ್ಲಿ ಯಾವುದನ್ನು ಮೊದಲು ಬಳಸತೊಡಗುತ್ತದೆ? 'ಬರು' ಎಂಬುದನ್ನೇ ಮೊದಲು ಬಳಸುತ್ತದೆ. ಅದರ ಇನ್ನೊಂದು ರೂಪವನ್ನು ಅಭೂತಕಾಲದಲ್ಲಿ ಬಳಸಬೇಕೆಂಬ ನಿಯಮವನ್ನು ತಿಳಿದುಕೊಳ್ಳಲು ಮತ್ತಷ್ಟು ಸಮಯ ಬೇಕಾಗುತ್ತದೆ. ಇದರಿಂದಾಗಿ ಬಹುಮಟ್ಟಿಗೆ ಅಭೂತ ಕ್ರಿಯಾರೂಪಗಳೇ ಮೂಲ ರೂಪಗಳೆಂದು ನಾವು ತಾತ್ಪೂರ್ತಿಕವಾಗಿ ತೀರ್ಮಾನಿಸಬಹುದು.

ಈಗ ನಮ್ಮ ಮೊದಲ ವಾಕ್ಯಕ್ಕೆ ಹಿಂದಿರುಗೋಣ. 'ಕೀಳಿದರೆ' ಎಂಬ ರೂಪವನ್ನು 'ಕಿತ್ತರೆ' ಎಂಬುದಕ್ಕೆ ಬದಲಾಗಿ ಆ ವಾಕ್ಯ ಬರೆದ ವ್ಯಕ್ತಿ ಬಳಸಲು ಏನು ಕಾರಣವಿದ್ದೀತು? ಅವರು ಭೂತಕಾಲದ ರೂಪಕ್ಕೆ ಸಂಬಂಧಿಸಿದ ನಿಯಮವನ್ನು ಕಲಿತಿಲ್ಲವೆಂದು ತಿಳಿಯಬೇಕಾಗುತ್ತದೆ. ಇಂಗ್ಲಿಶ್ ಭಾಷೆಯನ್ನು ಮನೆಯ ಮಾತಾಗಿ ಪಡೆದುಕೊಳ್ಳುವ ಮಕ್ಕಳಲ್ಲಿ ಕಂಡುಬರುವ ಇಂತಹುದೇ ಒಂದು ನಿದರ್ಶನವನ್ನು ನೋಡೋಣ. ಅವರು ಗೋ, ಸ್ಪೀಕ್, ಟೇಕ್ ಮುಂತಾದ ಕ್ರಿಯಾರೂಪಗಳನ್ನು ಬಳಸಲು ಹೊರಟಾಗ ಆಯಾ

ಕ್ರಿಯಾರೂಪಗಳ ಭೂತಕಾಲ ರೂಪಗಳನ್ನಾಗಿ ಗೋಡ್, ಸ್ಪೀಕ್ಡ್, ಟೇಕ್ಡ್ ಎಂಬುವುಗಳನ್ನು ಬಳಸುವುದನ್ನು ಅಧ್ಯಯನಗಳು ತೋರಿಸಿಕೊಟ್ಟವೆ. ಅಂದರೆ ಇಂಗ್ಲಿಶಿನ ಈ ಕ್ರಿಯಾರೂಪಗಳಿಗೆ ಭೂತಕಾಲದಲ್ಲಿ ಬೇರೆಯೇ ರೂಪಗಳನ್ನು ಬಳಸಬೇಕೆಂಬ ನಿಯಮವನ್ನು ಆ ಮಕ್ಕಳು ಇನ್ನೂ ಕಲಿತಿರುವುದಿಲ್ಲ. ಅದರಿಂದಾಗಿ ಎಲ್ಲ ಕ್ರಿಯಾರೂಪಗಳಿಗೆ ಅನ್ವಯಿಸುವ ನಿಯಮಗಳನ್ನೇ ಇಲ್ಲಿಯೂ ಅನ್ವಯಿಸಿ ಬಳಸಿರುತ್ತಾರೆ.

ಭಾಷೆಯಲ್ಲಿ ನಡೆಯುತ್ತಿರುವ ಕೆಲವು ಬದಲಾವಣೆಗಳಿಂದಾಗಿ ಕೆಲವೊಮ್ಮೆ ನಾವು ಗುರುತಿಸಿದ ಎರಡನೆಯ ಹಂತದ ನಿಯಮಗಳು ಅಗತ್ಯವಾಗದೆಯೂ ಹೋಗಬಹುದು. ಕನ್ನಡದ ಮಟ್ಟಿಗೆ ಹೇಳುವುದಾದರೆ ನಾವು ಮೇಲೆ ಪಟ್ಟಿ ಮಾಡಿದ ಕ್ರಿಯಾಪದಗಳಲ್ಲಿ ಕಂಸದೊಳಗೆ ಇರಿಸಿದ ರೂಪಗಳನ್ನು ಮತ್ತು ಅವುಗಳ ಬಳಕೆಗೆ ಸಂಬಂಧಿಸಿದ ನಿಯಮಗಳನ್ನು ಕನ್ನಡ ಭಾಷಿಕರು ಕಲಿಯಬೇಕಿಲ್ಲದ ಸಂದರ್ಭವೊಂದು ಕಾಲಾನುಕ್ರಮದಲ್ಲಿ ಬರುವುದನ್ನು ಅಲ್ಲಗಳೆಯಲಾಗುವುದಿಲ್ಲ. ಇಂತಹ ಬದಲಾವಣೆಗಳು ನಡೆಯುತ್ತಿರುವ ಸೂಚನೆಯೆಂಬಂತೆ ನಾವು ಗುರುತಿಸಿದ ತಪ್ಪು ರೂಪಗಳ ಬಳಕೆ ಹೆಚ್ಚು ಹೆಚ್ಚು ಕಾಣುತ್ತಾ ಹೋಗುತ್ತದೆ. ಈ ವಿವರಣೆಯನ್ನು ಕೇವಲ ಊಹೆ ಎಂದು ತಿಳಿಯಬೇಕಿಲ್ಲ. ಇನ್ನೊಂದು ನಿದರ್ಶನವನ್ನು ಇದಕ್ಕೆ ಪೂರಕವಾಗಿರುವಂತೆ ಈಗ ಗಮನಿಸೋಣ.

ಹಳಗನ್ನಡದಲ್ಲಿ ಒಂದು ಕ್ರಿಯಾಪದದ ಸಂಭಾವನಾ ರೂಪವನ್ನು (ಕೊಟ್ಟರೆ, ನೋಡಿದರೆ, ತಿಂದರೆ, ನಕ್ಕರೆ, ಇದ್ದರೆ ಎಂಬಂತಹ ರೂಪಗಳು) ಸಿದ್ಧಪಡಿಸುವಾಗ ಭೂತ ಮತ್ತು ಅಭೂತ ಕಾಲದ ಪ್ರತ್ಯಯಗಳೆರಡನ್ನೂ ಬಳಸಿ ಬೇರೆ ಬೇರೆ ಎರಡು ರೂಪಗಳನ್ನು ಪಡೆಯುವ ಅವಕಾಶವಿತ್ತು. ಉದಾಹರಣೆಗೆ "ಪೇಳ್ವೊಡೆ" (ಅಭೂತಕಾಲ), "ಪೇಳ್ದೊಡೆ"(ಭೂತಕಾಲ) ಎಂಬ ಎರಡೂ ರೂಪಗಳು ಹಳಗನ್ನಡದಲ್ಲಿ ಸಾಧ್ಯವಿದ್ದವು. ಹೊಸಗನ್ನಡದಲ್ಲಿ ಸಂಭಾವನಾ ರೂಪವನ್ನು ಹೇಳುವ "ಒಡೆ" ಎಂಬ ಪ್ರತ್ಯಯಕ್ಕೆ ಬದಲಾಗಿ "ಅರೆ" ಎಂಬ ಪ್ರತ್ಯಯ ಬಳಕೆಯಲ್ಲಿದೆ. ಕಾಲದ ಈ ಬದಲಾವಣೆ ಏಕಾಯ್ತು ಎಂಬುದು ಸದ್ಯ ಬದಿಗಿರಲಿ. ಆದರೆ ಹಳಗನ್ನಡದಲ್ಲಿ ಸಾಧ್ಯವಿದ್ದ ಎರಡೂ ರೂಪಗಳನ್ನು ಹೊಸಗನ್ನಡದಲ್ಲಿ "ಹೇಳಿದರೆ" ಎಂದೇ ಸೂಚಿಸಲಾಗುತ್ತದೆ. ಅಂದರೆ ಭೂತಕಾಲ ಪ್ರತ್ಯಯದೊಡನೆ ಮಾತ್ರ ನಾವು ಈ ರೂಪವನ್ನು ಬಳಸುತ್ತಿದ್ದೇವೆ. ಅಭೂತಕಾಲಕ್ಕಾಗಿ "ಹೇಳುವುದಾದರೆ" ಎಂಬ ಬೇರೆಯದೇ ಒಂದು ರೂಪವನ್ನು ನಾವು ರೂಪಿಸಿಕೊಂಡಿದ್ದೇವೆ. ಆದ್ದರಿಂದ ಹಳಗನ್ನಡ ಮಾತಾಡಲು ಕಲಿಯುತ್ತಿದ್ದವರು ಅರಿಯಬೇಕಾಗಿದ್ದ ಒಂದು ನಿಯಮ ಈಗ ಹೊಸಗನ್ನಡ ಕಲಿಯುವವರಿಗೆ ಬೇಕಾಗಿಲ್ಲ. ಭಾಷೆಯಲ್ಲಿ ಸಂಭವಿಸಿದ ಯಾವುದೋ ಒಂದು ಬದಲಾವಣೆಯಿಂದಾಗಿ ಈ ಪಲ್ಲಟ ಉಂಟಾಗಿದೆ. (ದಕ್ಷಿಣ ಕನ್ನಡದ ಒಂದು ಉಪಭಾಷೆಯಲ್ಲಿ ಈಗಲೂ "ಹೇಳಿದರೆ" ಮತ್ತು "ಹೇಳುವರೆ" ಎಂಬ ಎರಡು ರೂಪಗಳಿವೆ. ಮಂಜೇಶ್ವರದ ಗೋವಿಂದ ಪೈಗಳ ಬರವಣಿಗೆಯಲ್ಲಿ ಈ ಬಗೆಯ ಎರಡೂ ರೂಪಗಳ ಬಳಕೆಯನ್ನು ಕಾಣಬಹುದು. ಆ ಉಪಭಾಷೆಯಲ್ಲಿ ನಾವು ಮೇಲೆ ಗಮನಿಸಿ ವಿವರಿಸಿದ ಬದಲಾವಣೆ ನಡೆಯದೇ

ಇರುವುದೇ ಇದಕ್ಕೆ ಕಾರಣ. ಕನ್ನಡ ಭಾಷೆಯಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸಲು ಈಗ ನಮ್ಮ ಸುತ್ತ ಇರುವ ಕನ್ನಡದ ಪ್ರಭೇದಗಳಿಂದ ಮಾಹಿತಿ ದೊರಕುತ್ತದೆ ಎನ್ನುವುದಕ್ಕೆ ಇದೊಂದು ಒಳ್ಳೆಯ ಉದಾಹರಣೆ)

ಈ ವಿವರಣೆಯಿಂದ ಸ್ಪಷ್ಟವಾಗುವುದಿಷ್ಟು, ಭಾಷೆಯ ಬಳಕೆಯಲ್ಲಿ ಸಂಭವಿಸುವ ತಪ್ಪುಗಳನ್ನೆಲ್ಲ ಸಾರಾಸಗಟಾಗಿ ನಿರಾಕರಿಸಲು ಆಗುವುದಿಲ್ಲ. ಕೆಲವರು ಮಾತ್ರ ಅಂತಹ ತಪ್ಪುಗಳನ್ನು ಯಾವಾಗಲೋ ಒಮ್ಮೆ ಮಾಡಿದ್ದರೆ ಆಗ ಅವು ಗಣನೆಗೆ ತಕ್ಕುವಾಗುವುದಿಲ್ಲ. ಆದರೆ ಒಂದೇ ಮಾದರಿಯ ತಪ್ಪುಗಳನ್ನು ಹಲವರು ಮತ್ತೆಮತ್ತೆ ಮಾಡುತ್ತಿದ್ದರೆ ಆಗ ಆ ತಪ್ಪುಗಳನ್ನು ಎಚ್ಚರದಿಂದ ಗಮನಿಸಬೇಕಾಗುತ್ತದೆ. ಏಕೆಂದರೆ ಆ ತಪ್ಪುಗಳು ಭಾಷೆಯಲ್ಲಿ ನಡೆಯುತ್ತಿರುವ ಯಾವುದೋ ಒಂದು ಮುಖ್ಯ ಬದಲಾವಣೆಯನ್ನು ಸೂಚಿಸುತ್ತಿರುವ ಸಾಧ್ಯತೆ ಇರುತ್ತದೆ.

# ಭಾಷೆಯಲ್ಲಿ ಕಟ್ಟುಗಳು ಮತ್ತು ಓಲುವೆಗಳು

ಭಾಷೆ ಯಾವುದೇ ಇರಲಿ, ಅದಕ್ಕೊಂದು ಚೌಕಟ್ಟು ಇರಲೇಬೇಕು. ಈ ಚೌಕಟ್ಟನ್ನು ವ್ಯಾಕರಣ ಇಲ್ಲವೆ ಸೊಲ್ಲರಿಮೆ ಎಂದು ಕರೆಯುವುದು ವಾಡಿಕೆ. ಸೊಲ್ಲರಿಮೆಗಳಲ್ಲಿ ಎರಡು ಬಗೆಗಳಿವೆ. ಒಂದು ಬಗೆಯ ಸೊಲ್ಲರಿಮೆಗಳು ಭಾಷೆಯ ಚೌಕಟ್ಟು ಬದಲಾಗಬಾರದೆಂದು ತಿಳಿಯುತ್ತವೆ. ಹಾಗಾಗಿ ಅವು ಬಳಕೆಗಳಲ್ಲಿ ಯಾವುದು ಈವರೆಗೆ ಕಟ್ಟುಗಳಾಗಿ ಇರುವುವೋ, ಅವನ್ನು ಬಳಕೆಯಿಂದ ಕೈಬಿಡಬಾರದೆಂದು ಹೇಳುತ್ತವೆ. ಇನ್ನೊಂದು ಬಗೆಯ ಸೊಲ್ಲರಿಮೆಗಳು ಎಲ್ಲ ಬಳಕೆಗಳನ್ನೂ ಒಪ್ಪುತ್ತವೆ. ಆ ಬಳಕೆಗಳು ಕಟ್ಟುಗಳನ್ನು ಮೀರಿದರೂ, ಅವು ಹಾಗೆ ಮೀರುವುದೇಕೆ ಎಂಬುದನ್ನೂ ಗುರುತಿಸುತ್ತವೆ. ಕಟ್ಟುಗಳನ್ನು ಮೀರುವುದು ಎನ್ನುವುದನ್ನು ಸರಿಯಾಗಿ ಅರಿತುಕೊಳ್ಳಬೇಕು. ಹೀಗೆ ಮೀರುವುದು ಮಾತನಾಡುವವರ ಆಯ್ಕೆಯಾಗಿರುವುದಿಲ್ಲ. ಒಂದು ಸಾವಿರ ವರುಷಗಳ ಹಿಂದೆ ಕನ್ನಡವನ್ನು ಮಾತಾಡುತ್ತಿದ್ದವರು ಪದದ ಮೊದಲಿಗೆ ಬರುವ ಪಕಾರವನ್ನು ಹಕಾರವೆಂದು ನುಡಿಯಲು ತೊಡಗಿ ಕಟ್ಟುಗಳನ್ನು ಮೀರಿದರು. ಆದರೆ ಹೀಗೆ ಮಾಡಿದ್ದು ಯಾರೋ ಕೆಲವರ ಬಯಕೆಯಾಗಿರಲಿಲ್ಲ ಮತ್ತು ತಟಕ್ಕನೆ ಬೆಳಗಾಗುವುದರೊಳಗೆ ಈ ಬದಲಾವಣೆ ಆಗಲಿಲ್ಲ. ನೂರಾರು ವರುಷಗಳ ಕಾಲ ಹೆಚ್ಚು ಕಡಿಮೆ ಕನ್ನಡ ಮಾತಾಡುತ್ತಿದ್ದ ಜಾಗಗಳಲ್ಲಿ ಇದ್ದವರು ಈ ಬದಲಾವಣೆಯನ್ನು ತಮ್ಮ ನುಡಿಯುವಿಕೆಯಲ್ಲಿ ತಂದುಕೊಂಡರು. ಕಟ್ಟುಗಳಲ್ಲಿ ಬದಲಾವಣೆ ಆಗುತ್ತಿರುವಾಗ ಕೆಲವರಿಗೆ ತಮ್ಮ ನುಡಿಯಲ್ಲಿ ಏನೋ ತಪ್ಪಾಗುತ್ತಿದೆ ಎಂದು ಅನಿಸುವುದು ಸರಿ. ಏಕೆ ಪದದ ಮೊದಲಿನ ಪಕಾರವನ್ನು ಹಕಾರವನ್ನಾಗಿ ಮಾಡಿ ನುಡಿಯುತ್ತಿದ್ದಾರೆ? ಇದು ತಪ್ಪಲ್ಲವೇ ಎಂದು ಹೇಳಿದ್ದಿರಲೂ ಬಹುದು. ಆಗ ಈ ಬದಲಾವಣೆಗಳು ನುಡಿಯುವವರ ಓಲುವೆಯಾಗಿ ತೋರುತ್ತದೆ. ಬದಲಾವಣೆ ಆಗುತ್ತಿರುವಾಗ ಓಲುವೆಯನ್ನು ಎಲ್ಲರೂ ಪಾಲಿಸಲೇಬೇಕೆಂಬ ಶರತ್ತಿರುವುದಿಲ್ಲ . ಹಾಗೆಯೇ ಬದಲಾವಣೆ ಆಗಿ ಹೋದ ಮೇಲೆ ಓಲುವೆ ಹೊಸ ಕಟ್ಟಾಗಿ ಬಿಟ್ಟಿರುತ್ತದೆ. ಅದನ್ನು ಎಲ್ಲರೂ ಪಾಲಿಸಲೇಬೇಕಾಗುತ್ತದೆ. ಈಗ ಕನ್ನಡ ಮಾತಾಡುವವರು ಪೂವು, ಪಾಲು, ಪಾವು, ಪತ್ತು ಎಂದೆಲ್ಲ ಹೇಳಿದರೆ ಏನಾಗುತ್ತದೆ ಎಂದು ಯೋಚಿಸಿ. ನಗೆಗೀಡಾಗುತ್ತಾರೆ. ಆದರೆ ಒಂದು ಕಾಲದಲ್ಲಿ ಈ ಪದಗಳನ್ನು ಹೀಗೆಯೇ ನುಡಿಯಬೇಕಿತ್ತಲ್ಲವೇ?

ನುಡಿಯುವಿಕೆಯಲ್ಲಿ ಮಾತ್ರವಲ್ಲದೆ ನುಡಿಯ ಬೇರೆ ಬೇರೆ ನೆಲೆಗಳಲ್ಲೂ ಹೀಗೆ ಬದಲಾವಣೆಗಳಾಗುತ್ತಿರುತ್ತವೆ. ಹೀಗೆಯೇ ಸಾವಿರ ವರುಷಗಳ ಹಿಂದೆ ' ನಾನು ಬಿಟ್ಟ

ಬಾಣ' ಎನ್ನಲಾಗುತ್ತಿರಲಿಲ್ಲ; 'ನನ್ನ ಬಿಟ್ಟ ಬಾಣ' ಎಂದೇ ಹೇಳಬೇಕಿತ್ತು . ಆದರೆ ಈಗ ಮೊದಲನೆಯ ನುಡಿ ಸರಿಯಾಗಿಯೇ ಇದೆಯೆಂದು ಅನಿಸುತ್ತದೆ. ಆದರೆ ನಾನು ಸಾಕಿದ ನಾಯಿ ಎಂಬ ಮಾತನ್ನು ಗಮನಿಸಿ. ಮೊದಲು ಇದನ್ನು ನನ್ನ ಸಾಕಿದ ನಾಯಿ ಎಂದೇ ಹೇಳಬೇಕಿತ್ತು. ಈಗ ನಾನು ಸಾಕಿದ ನಾಯಿ ಎಂದು ಹೇಳಿದರೂ ನಡೆಯುತ್ತದೆ. ಆದರೆ ಈ ಮಾತಿಗೆ ಎರಡು ತಿರುಳುಗಳಿವೆ. 'ನಾಯಿಯು ನಾನು ಸಾಕಿದ್ದು' ಎಂದು ಒಂದು ತಿರುಳಾದರೆ, 'ನಾನು (ಯಾರೋ) ಸಾಕಿದ ನಾಯಿಯಂತೆ ಇದ್ದೇನೆ ' ಎಂಬ ತಿರುಳೂ ಇರಬಹುದು.

ಈಗ ನಾವು ಕನ್ನಡ ಎಂದು ಕರೆಯುವ ನುಡಿಯನ್ನೇ ನೋಡಿ. ಇದಕ್ಕೆ ಕಟ್ಟುಗಳು ಇರುವಂತೆ ಓಲುವೆಗಳೂ ಇವೆ. ತುಂಗಭದ್ರೆಯ ತೆಂಕಣದವರು ಮನೆ,ತಲೆ,ಎಲೆ,ಬಲೆ,ಕಡೆ ಎಂದೆಲ್ಲ ಹೇಳಿದರೆ, ಅಲ್ಲಿಂದ ಬಡಗಿನವರು ಮನಿ,ತಲಿ,ಬಲಿ,ಕಡಿ ಎನ್ನುತ್ತಾರೆ. ಇದು ಆಯಾ ಕಡೆಯ ಬಳಕೆ. ಕನ್ನಡದ ಮಟ್ಟಿಗೆ ಓಲುವೆಗಳು. ಮೈಸೂರಿನವರು **ತಲಿ** ಎನ್ನಬಾರದು, ಧಾರವಾಡದವರು **ಎಲೆ** ಎನ್ನಬಾರದೆಂಬ ಒತ್ತಾಯವಿಲ್ಲ. ಹೀಗೆ ನುಡಿದರೆ ಅದು ಕಟ್ಟುಗಳನ್ನು ಮೀರಿದಂತಾಗುವುದಿಲ್ಲ.

ಓಲುವೆಗಳು ಎರ್ರಾಬಿರ್ರಿಯಾಗಿರುವುದಿಲ್ಲ. ಒಂದು ದನಿ ಇನ್ನೊಂದು ದನಿಯಾಗಿ ಬದಲಾಗುತ್ತಿರುವ ಓಲುವೆ ಒಂದು ನುಡಿಯಲ್ಲಿ ನಡೆಯುತ್ತಿದೆ ಎಂದುಕೊಳ್ಳಿ. ಈ ಬದಲಾವಣೆ ಲೋಕದ ಒಂದಲ್ಲ ಒಂದು ನುಡಿಯಲ್ಲಿ ಇರುವಂತಹ ದನಿಯ ಕಟ್ಟು ಆಗಿರಬೇಕು. ಒಂದು ನುಡಿಯಲ್ಲಿ ರಕಾರವಿದ್ದುದು ಕಕಾರವಾಗಿ ಬದಲಾಯಿತು ಎಂದು ಯಾರಾದರೂ ಹೇಳಿದರೆ ಅದೊಂದು ಹಸಿ ಸುಳ್ಳಾಗಿರುತ್ತದೆ. ಏಕೆಂದರೆ ಆ ಬಗೆಯ ಬದಲಾವಣೆಗಳು ಲೋಕದ ಯಾವ ನುಡಿಯಲ್ಲೂ ನಡೆಯುವುದು ಆಗದ ಮಾತು. ಅಂದರೆ ಓಲುವೆಗಳು ಒಂದಲ್ಲ ಒಂದು ಬಗೆಯ ಕಟ್ಟುಗಳೇ ಆಗಿರುತ್ತವೆಂದಾಯ್ತು.

# ಭಾಷೆಯ ಭೂಗೋಳ

ಭಾಷೆಗೂ ರಾಷ್ಟ್ರ ಕಲ್ಪನೆಗೂ ನಂಟು ಬೆಳೆದದ್ದು ಯುರೋಪಿನ ದೇಶಗಳ ಸಂದರ್ಭದಲ್ಲಿ. ರಾಷ್ಟ್ರದ ವ್ಯಾಖ್ಯೆಯಲ್ಲಿಯೇ ಭಾಷೆ ಒಂದು ಗುರುತಾಗಬೇಕೆಂಬ ಹಠ ಅಲ್ಲಿ ಎದ್ದು ಕಾಣುತ್ತದೆ. ಏಕಭಾಷಿಕ ಪ್ರದೇಶಗಳಾಗಿದ್ದು ಇನ್ನೊಂದು ಭಾಷೆ ಮತ್ತು ಭಾಷಿಕರ ಬಗೆಗೆ ತೀವ್ರ ಅಸಹನೆಯನ್ನು ಬೆಳೆಸಿಕೊಂಡ ದೇಶಗಳಲ್ಲಿ ಈ ಮಾತು ಮುಖ್ಯವಾಗುತ್ತದೆ. ಆದರೆ ಇಂಡಿಯಾದ ಸಂದರ್ಭಕ್ಕೆ ಅದು ಎಂದೂ ಒಪ್ಪುವ ಮಾತಾಗಿಲ್ಲ. ಪರಂಪರೆಯ ಪುನಾರಚನೆಯಲ್ಲಿ ಸಂಸ್ಕೃತಕ್ಕೆ ಆ ಸ್ಥಾನವನ್ನು ನೀಡಲು ಭಾರತಶಾಸ್ತ್ರಜ್ಞರು ಯೋಜಿಸುತ್ತಿರುವ ಹೊತ್ತಿನಲ್ಲೇ, ಭಾರತದ ಹಲವು ಭಾಷಾವಂಶಗಳನ್ನು ಪಾಶ್ಚಾತ್ಯ ಮಿಶನರಿಗಳು ಹುಡುಕಿಕೊಡುತ್ತಿದ್ದರು. ಬಹುಭಾಷಿಕತೆ ಇಲ್ಲಿನ ಲಕ್ಷಣ ಎಂದು ಹೇಳುವಾಗಲೂ, ನಮ್ಮ ವಿವರಣೆಯನ್ನು ಮತ್ತಷ್ಟು ಖಚಿತಪಡಿಸಿಕೊಳ್ಳಬೇಕಾದ ಅಗತ್ಯವಿದೆ. ಒಂದು ಪ್ರದೇಶದ ಲಕ್ಷಣವನ್ನು ಹೇಳುವಾಗ ಅಲ್ಲಿನ ಭಾಷೆಯನ್ನು ಉಲ್ಲೇಖಿಸುವ ಕ್ರಮ ಹಿಂದಿನಿಂದಲೂ ಇದ್ದಿತಷ್ಟೆ. ರಾಜಶೇಖರ ತನ್ನ ಕಾವ್ಯಮೀಮಾಂಸಾ ಕೃತಿಯಲ್ಲಿ ಬೇರೆ ಬೇರೆ ದೇಶಭಾಗಗಳ ಭಾಷಾಪ್ರಯೋಗ ವ್ಯತ್ಯಾಸಗಳನ್ನು ಪಾಠ್ಯ ಭಿನ್ನತೆಗಳನ್ನು ಗುರುತಿಸುತ್ತಾನೆ.

ಆದರೆ ಲಕ್ಷಣಗಳಿಗೂ ಚಹರೆಗಳಿಗೂ ವ್ಯತ್ಯಾಸಗಳಿವೆ. ಭಾಷೆ ಒಂದು ಲಕ್ಷಣವಾಗಬಹುದೇ ಹೊರತು ಚಹರೆಯಾಗಲಾರದು. ಕನ್ನಡವನ್ನು ಕರ್ನಾಟಕದ ಚಹರೆಯನ್ನಾಗಿ ಮಾಡ ಹೊರಟಕೂಡಲೇ ಹಲವಾರು ವೈರುಧ್ಯಗಳು ಎದುರಾಗುತ್ತವೆ. ಮುಖ್ಯವಾಗಿ ಕನ್ನಡ ಮತ್ತು ಕನ್ನಡಿಗ ಸಮೀಕರಣ ಸಾಧ್ಯವಾಗುವುದಿಲ್ಲ. ಕನ್ನಡ ಬಳಸುವವರು ಕನ್ನಡಿಗರೋ? ಅಥವಾ ಕರ್ನಾಟಕದಲ್ಲಿ ಬದುಕುತ್ತಿರುವವರು ಕನ್ನಡಿಗರೋ? ಇವೆರಡೂ ಬೇರೆ ಬೇರೆಯಾಗುವುದರಿಂದ ಕನ್ನಡ ಮತ್ತು ಕರ್ನಾಟಕ ಎಂಬ ಸಮೀಕರಣ ಮಾಡಿದ ಕೂಡಲೇ ಜನವಿರೋಧಿಯಾದ ನಿಲುವುಗಳನ್ನು ತಾಳುವುದು ಅನಿವಾರ್ಯವಾಗುತ್ತದೆ.

ನಾವೆಷ್ಟೇ ವಾದಿಸಿದರೂ ಭಾಷಾವಾರು ರಾಜ್ಯಗಳ ರಚನೆ ಒಂದು ರಾಜಕೀಯ ನಿರ್ಧಾರವಾಗಿತ್ತೆಂಬುದನ್ನು ಅಲ್ಲಗಳೆಯಲು ಬರುವುದಿಲ್ಲ. ಅನಂತರದ ರಾಜ್ಯ ಮರುವಿಂಗಡಣೆಗಳಲ್ಲಿ ಬಳಕೆಯಾದ ಮಾನದಂಡಗಳೇ ಬೇರೆಯಾಗಿವೆ. ರಾಜ್ಯಾಂಗದ ಮನ್ನಣೆ ಪಡೆದ ಎಷ್ಟೋ ಭಾಷೆಗಳಿಗೆ ರಾಜ್ಯಗಳೇ ಇಲ್ಲ. (ಉದಾ: ಸಂತಾಲಿ, ಮೈಥಿಲಿ

ಬೋಡೋ, ಡೋಗ್ರಿ, ಉರ್ದು, ಸಿಂಧಿ). ಹಾಗೆಯೇ ಎಷ್ಟೋ ರಾಜ್ಯಗಳಿಗೆ ಅವುಗಳದ್ದೇ ಆದ ಭಾಷೆಯೂ ಇಲ್ಲ. ಈಶಾನ್ಯ ರಾಜ್ಯಗಳಿರಲಿ, ಹೊಸದಾಗಿ ನಿರ್ಮಾಣಗೊಂಡ ಚತ್ತೀಸ್‌ಗಢ ಮತ್ತು ಜಾರ್ಖಂಡ್‌ಗಳಿಗೂ ಇದು ಅನ್ವಯವಾಗುವ ಮಾತು. ಇಂಡಿಯಾ ಎಂಬ ರಾಷ್ಟ್ರದೊಳಗೆ ಕರ್ನಾಟಕವೆಂಬ ಉಪರಾಷ್ಟ್ರವನ್ನು ಕಲ್ಪಿಸಿಕೊಳ್ಳುವುದೂ ಉಂಟಷ್ಟೆ. ಇದು ನಿಜವಾದರೆ ರಾಷ್ಟ್ರ–ಉಪರಾಷ್ಟ್ರಗಳ ಸಂಬಂಧದ ವ್ಯಾಖ್ಯೆ ಏನು? ಸಂಯೋಗವೇ ಅಥವಾ ಸಮುದಾಯವೇ?. ಈಗಂತೂ ಈ ವಿದ್ಯುನ್ಮಾನ ಆಡಳಿತ ವ್ಯವಸ್ಥೆಗೆ, ರಾಷ್ಟ್ರ ಆಡಳಿತ ವ್ಯವಸ್ಥೆಯಲ್ಲಿ ಅಧೀನತೆಯ ಸಂಬಂಧ ಮಾತ್ರ ಇದೆ. ಇದು ಭಾಷೆಯ ನೆಲೆಯಲ್ಲೂ ನಿಜಗೊಂಡಿರುವ ಮಾತು. ಕನ್ನಡದ ಸಾರ್ವಭೌಮತ್ವವು ಇಂಗ್ಲಿಶ್ ಮತ್ತು ಹಿಂದಿ ಭಾಷೆಗಳ ಚೌಕಟ್ಟಿನಲ್ಲಿ ಮಾತ್ರ ವ್ಯಾಖ್ಯಾನಗೊಳ್ಳಬೇಕಾದ ಸಂಗತಿಯಾಗಿದೆ.

ಭಾಷಿಕ ಸಮುದಾಯಗಳ ಸಂಸ್ಕೃತಿಗೂ ಅವುಗಳ ಭಾಷೆಗೂ ನಿಕಟವಾದ ಸಂಬಂಧವಿದೆಯೆಂಬ ವಾದವನ್ನು ಈಗ ಮರುಪರಿಶೀಲಿಸಬೇಕಾದ ಸಂದರ್ಭ ಒದಗಿಬಂದಿದೆ. ಸಮುದಾಯಗಳ ಮಟ್ಟಿಗೆ ನಿಜವೆನ್ನಿಸುತ್ತಿದ್ದ ಮಾತೀಗ ಪೌರಸಮಾಜಗಳಿಗೆ ಎಷ್ಟು ಅನ್ವಯಿಸಬಲ್ಲುದೆಂಬುದನ್ನು ಚರ್ಚಿಸಬೇಕಾಗಿದೆ. ಸಾಮಾಜಿಕ ಅಸಮಾನತೆಗಳನ್ನು ಗುರುತಿಸಲು ಮತ್ತು ಕೆಲವೊಮ್ಮೆ ಕಾಯ್ದುಕೊಳ್ಳಲು ಕೂಡಾ ಭಾಷೆ ಬಳಕೆಯಾಗುತ್ತಿರುವ ಸಾಧ್ಯತೆಗಳು ಕಾಣತೊಡಗಿವೆ. ಈ ಎಲ್ಲ ಕಾರಣಗಳಿಂದ ನಮ್ಮ ಚರ್ಚೆಗಳನ್ನು ಹೊಸ ಪರಿಭಾಷೆಯಲ್ಲಿ ನಡೆಸುವ ಅಗತ್ಯ ಈಗ ಹೆಚ್ಚಾಗಿದೆ.

# ಭಾರತದ ಭಾಷೆಗಳ ಗಣತಿ

ಕರ್ನಾಟಕದಲ್ಲಿ ಜನರು ಆಡುವ ಭಾಷೆಗಳೆಷ್ಟು? 1981ರ ಅಂಕಿಸಂಖ್ಯೆಗಳ ಪ್ರಕಾರ 176 ಭಾಷೆಗಳನ್ನಾಡುವ ಜನರು ಈ ರಾಜ್ಯದಲ್ಲಿದ್ದಾರೆ. ನಂಬುವುದು ಕಷ್ಟ; ಆದರೂ ನಿಜ. ಈ ಭಾಷೆಗಳಲ್ಲಿ ಕೆಲವನ್ನು ಆಡುವವರ ಸಂಖ್ಯೆ ನೂರನ್ನೂ ದಾಟುವುದಿಲ್ಲ. ಕೆಲವು ಭಾಷಿಕರು ನೆಲೆ ಇಲ್ಲದೆ ಅಲೆಮಾರಿಗಳಾಗಿ ಸುತ್ತುತ್ತಿರುತ್ತಾರೆ. ಇಡೀ ಭಾರತದಲ್ಲಿ ಎಷ್ಟು ಭಾಷೆಗಳಿರಬಹುದು?. ಸರಿಸುಮಾರು 1652 ಎಂದು ಅಂದಾಜು ಮಾಡಲಾಗಿದೆ. ಇದು ಕಳೆದ ಶತಮಾನದ ಕೊನೆಯ ದಶಕದ ಲೆಕ್ಕ. ಪ್ರತಿ ಭಾಷೆಯನ್ನು ಆಡುವವರ ಸಂಖ್ಯೆ 10,000ಕ್ಕಿಂತಲೂ ಹೆಚ್ಚು ಇರುವ ಲೆಕ್ಕವನ್ನು ಹಿಡಿದರೂ ಅಂತಹ ಭಾಷೆಗಳ ಸಂಖ್ಯೆಯೇ 114 ಇವೆ. ಒಂದೇ ಭಾಷೆಗೆ ಬೇರೆಬೇರೆ ಕಡೆಗಳಲ್ಲಿ ಬೇರೆ ಬೇರೆ ಹೆಸರುಗಳಿರುವುದುಂಟು. ಕೆಲವು ಭಾಷೆಗಳನ್ನಾಡುವವರು ಗೊತ್ತಾದ ಒಂದು ಪ್ರದೇಶದಲ್ಲಿ ಮಾತ್ರ ವಾಸಿಸುತ್ತಿದ್ದರೆ, ಕೆಲವು ಭಾಷೆಗಳನ್ನಾಡುವವರು ಹಲವು ರಾಜ್ಯಗಳಲ್ಲಿ ಹರಡಿರುತ್ತಾರೆ. ಭಾರತದಲ್ಲಿರುವ 199 ಭಾಷೆಗಳು ಕೇವಲ ಒಂದೊಂದು ರಾಜ್ಯದಲ್ಲಿ ಮಾತ್ರ ಬಳಕೆಯಲ್ಲಿದ್ದರೆ, 3 ಭಾಷೆಗಳು (ಉರ್ದು,ಹಿಂದಿ ಮತ್ತು ಮಾರ್ವಾಡಿ) ಭಾಷೆಗಳು ಒಂದೊಂದೂ 22 ರಾಜ್ಯಗಳಲ್ಲಿ ಬಳಕೆಯಲ್ಲಿವೆ. ಇಂತಹ ಮಾಹಿತಿಗಳೆಲ್ಲ ನಮಗೆ ತಿಳಿಯುವ ಬಗೆ ಹೇಗೆ?. ಇದಕ್ಕೆ ಭಾಷೆಗಳ ಗಣತಿ ಅಗತ್ಯ.

ಭಾಷೆಗಳ ಗಣತಿ ಎಂದರೇನು? ಜನಗಣತಿ ನಮಗೆ ಗೊತ್ತು. ಜನಗಣತಿ ಎಂದರೆ ಕೇವಲ ಜನರ ಸಂಖ್ಯೆಯನ್ನು ಲೆಕ್ಕ ಹಾಕುವುದಷ್ಟೇ ಅಲ್ಲ. ಜನರಿಗೆ ಸಂಬಂಧಿಸಿದ ಹತ್ತಾರು ಮಾಹಿತಿಯನ್ನು ಜನಗಣತಿಯಲ್ಲಿ ಕಲೆಹಾಕಲಾಗುವುದು. ಭಾಷಾ ಗಣತಿಯೂ ಜನಗಣತಿಯ ಭಾಗವೇ ಅಲ್ಲವೇ ಎಂಬ ಪ್ರಶ್ನೆ ಸಾಧ್ಯ. ನಿಜ, ಆದರೆ ಜನಗಣತಿಯಲ್ಲಿ ಭಾಷೆಗಳಿಗೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನು ಕೂಡಿಹಾಕಲು ಸಾಧ್ಯವಾಗುವುದಿಲ್ಲ. ಅಲ್ಲದೆ ಕಳೆದ ಮೂರು ಜನಗಣತಿಗಳಲ್ಲಿ ಭಾಷೆಗಳ ಮಾಹಿತಿಯನ್ನು ಕಲೆಹಾಕುವುದನ್ನು ಹೆಚ್ಚೂ ಕಡಿಮೆ ನಿಲ್ಲಿಸಲಾಗಿದೆ. ಹಾಗೆ ದೊರೆತ ಮಾಹಿತಿ ಕೂಡ ಸುಲಭವಾಗಿ ಲಭಿಸುವಂತಿಲ್ಲ. 2001ರ ಜನಗಣತಿಯಲ್ಲಿ ಲಭಿಸಿದ ಭಾಷಾಮಾಹಿತಿ ಈಗಲೂ ಇಡಿಯಾಗಿ ದೊರಕುತ್ತಿಲ್ಲ. ಆದ್ದರಿಂದ ಭಾಷೆಗಳ ಗಣತಿಯೊಂದು ಬೇರೆಯಾಗಿ ನಡೆಯಬೇಕಿದೆ. ಹಾಗೆ ನೋಡಿದರೆ ಇಂತಹ ಗಣತಿಯನ್ನು ಕುರಿತ ಯೋಚನೆ ಹೊಸದೇನೂ ಅಲ್ಲ.

ಐರ್ಲೆಂಡ್‌ನಿಂದ ಭಾರತಕ್ಕೆ ಬಂದಿದ್ದ ಬಹುಭಾಷಾವಿದ ಜಾರ್ಜ್ ಅಬ್ರಾಹಮ್ ಗಿಯರ್‌ಸನ್(1851-1941) ಭಾರತದ ಭಾಷೆಗಳ ಗಣತಿಯನ್ನು ಕೈಗೆತ್ತಿಕೊಂಡನು.

ಅಂತಹ ಮೊದಲ ಯೋಜನೆಯ ನೇತಾರನಾಗಿದ್ದನು. 1881ಲ್ಲಿ ಭಾರತದಲ್ಲಿ ಜನಗಣತಿ ಮೊದಲಾಯಿತಷ್ಟೆ. ಆಗ ವ್ಯಕ್ತಿಗಳ ಭಾಷೆಯ ಬಗೆಗೆ ಮಾಹಿತಿಯನ್ನು ಕೂಡಿಹಾಕಲು ಮೊದಲು ಮಾಡಲಾಗಿತ್ತು. ಹೆಚ್ಚು ವಿವರಗಳುಳ್ಳ ಭಾಷಾಗಣತಿಯನ್ನು 1898ರಲ್ಲಿ ಗ್ರಿಯರ್‌ಸನ್ ಮೊದಲು ಮಾಡಿದನು. ಆತನ ಗಣತಿಯಲ್ಲಿ ಕಂಡುಕೊಂಡ ಮಾಹಿತಿಯನ್ನೆಲ್ಲ ಕಲೆಹಾಕಿದ್ದ ಕೊನೆಯ ಸಂಪುಟ ಪ್ರಕಟವಾಗಿದ್ದು 1927ರಲ್ಲಿ. ಅಂದರೆ 29 ವರ್ಷಗಳ ಬಳಿಕ. ಇಷ್ಟೂ ವರ್ಷ ಗ್ರಿಯರ್‌ಸನ್ ಯೋಜನೆಯ ಮುಂಚೂಣಿಯಲ್ಲಿದ್ದನು.

ಗ್ರಿಯರ್‌ಸನ್ ನಡೆಸಿದ ಭಾಷಾಗಣತಿ ಆ ಕಾಲಕ್ಕೆ ಸಾಕಷ್ಟು ವ್ಯಾಪಕವಾಗಿಯೇ ಇದ್ದಿತೆಂದು ಹೇಳಬೇಕು. ಸರ್ಕಾರಿ ಇಲಾಖೆಗಳಿಂದ ಮಾಹಿತಿ ಪಡೆಯುವ ಜತೆಗೆ ಆಯಾ ಭಾಷೆಯ ಮಾದರಿಗಳನ್ನು ಕಥನ ರೂಪದಲ್ಲಿ ಸಂಗ್ರಹಿಸಲಾಗಿದೆ. ಆ ಭಾಷೆಗೆ ಲಿಪಿ ಇದ್ದರೆ ಆ ಲಿಪಿಯಲ್ಲಿ ಕಥನವನ್ನು ನೀಡಿ, ಲಿಪಿ ಇಲ್ಲದ ಭಾಷೆಗಳ ಕಥನ ಮಾದರಿಗಳನ್ನು ರೋಮನ್ ಲಿಪಿಯಲ್ಲಿ ಒದಗಿಸಲಾಗಿದೆ. ಗ್ರಿಯರ್‌ಸನ್‌ಗೆ ಬ್ರಿಟಿಶರ ನೇರ ಆಡಳಿತ ಪ್ರದೇಶದಲ್ಲಿ ಸಿಕ್ಕಿದಷ್ಟು ಒತ್ತಾಸೆ ಬೇರೆ ಕಡೆಗಳಲ್ಲಿ ಸಿಗಲಿಲ್ಲ. ಉದಾಹರಣೆಗೆ ಕನ್ನಡದ ಮಾಹಿತಿ ಪೂರ್ತಿಯಾಗಿ ದೊರಕುವುದಿಲ್ಲ. ಮೈಸೂರು ಸಂಸ್ಥಾನದ ವ್ಯಾಪ್ತಿಯ ಪ್ರದೇಶದಲ್ಲಿ ಆತ ಮಾಹಿತಿಯನ್ನು ಕಲೆಹಾಕಲು ಆಗಲೇ ಇಲ್ಲ. ನಿಜಾಮರ ಆಳ್ವಿಕೆಯ ಪ್ರದೇಶದ ಮಾಹಿತಿಯೂ ಅವನಿಗೆ ದೊರಕಲಿಲ್ಲ. ಇಷ್ಟೆಲ್ಲ ಇದ್ದರೂ ಈಗಲೂ ಭಾರತೀಯ ಭಾಷೆಗಳ ಬಗೆಗೆ ಅತಿ ಹೆಚ್ಚಿನ ಮಾಹಿತಿಯುಳ್ಳ ಆಕರವೆಂದರೆ ಈ ಗಣತಿಯ ವರದಿಯೇ ಆಗಿದೆ ಎಂಬುದನ್ನು ಮರೆಯುವಂತಿಲ್ಲ.

ಕಳೆದ ಅರವತ್ತು ವರ್ಷಗಳಲ್ಲಿ ಭಾರತೀಯ ಭಾಷೆಗಳ ಗಣತಿಯನ್ನು ಮಾಡುವ ಪ್ರಸ್ತಾವಗಳು ಸಲ್ಲಿಕೆಯಾಗಿವೆ. ಕೆಲವು ವೈಯಕ್ತಿಕ ಮತ್ತು ಸಾಂಸ್ಥಿಕ ಪ್ರಯತ್ನಗಳೂ ನಡೆದಿವೆ. ಆಂತ್ರೋಪಲಾಜಿಕಲ್ ಸರ್ವೇ ಆಫ್ ಇಂಡಿಯಾದವರು ನಡೆಸಿದ ಜನಸಮುದಾಯಗಳನ್ನು ಕುರಿತ ಸರ್ವೇಕ್ಷಣೆಯ ಭಾಗವಾಗಿ ಭಾಷೆಯ ಮಾಹಿತಿ ಕೂಡ ಕಳೆದ ದಶಕದಲ್ಲಿ ಕೊಂಚ ಮಟ್ಟಿಗೆ ಲಭಿಸಿದೆ. ಈಗ ಗ್ರಿಯರ್‌ಸನ್ ಗಣತಿ ನಡೆದ ನೂರು ವರ್ಷಗಳ ಬಳಿಕ ಇಂದಿನ ಅಗತ್ಯಗಳಿಗೆ ತಕ್ಕ ಮತ್ತು ಜಾಗತಿಕವಾಗಿ ಮನ್ನಣೆ ಪಡೆಯಬಲ್ಲ ಭಾಷಾಗಣತಿಯೊಂದನ್ನು ನಡೆಸುವ ಯೋಜನೆಯನ್ನು ಕೇಂದ್ರ ಸರ್ಕಾರದ ಮಾನವ ಸಂಪನ್ಮೂಲ ಇಲಾಖೆ ಕೈಗೆತ್ತಿಕೊಂಡಿದೆ. ಹನ್ನೊಂದನೆಯ ಯೋಜನೆಯಲ್ಲಿ ಇದು ಆರಂಭಗೊಂಡು ಮುಂದಿನ ಹತ್ತು ವರ್ಷ ಕಾಲ ಬಿಡದೆ ಮುಂದುವರೆಯಬೇಕಿದೆ.

ಭಾಷಾಗಣತಿ ನಾವು ತಿಳಿದಷ್ಟು ಸುಲಭವಲ್ಲ. ಇತರ ಗಣತಿಗಳಲ್ಲಿ ಮಾಹಿತಿಯನ್ನು ಕೂಡಿಹಾಕುವುದಕ್ಕೂ ಈ ಗಣತಿಯಲ್ಲಿ ಬೇಕಾದ ಮಾಹಿತಿಯನ್ನು ರೂಪಿಸಿ ಪಡೆದುಕೊಳ್ಳುವುದಕ್ಕೂ ವ್ಯತ್ಯಾಸವಿದೆ. ತರಬೇತು ಪಡೆದ ಕ್ಷೇತ್ರ ಕಾರ್ಯಕರ್ತರು ಇದಕ್ಕೆ ಅಗತ್ಯ. ಇವರ ಸಂಖ್ಯೆ ಹಲವಾರು ಸಾವಿರವನ್ನು ದಾಟುತ್ತದೆ. ಎಷ್ಟೋ

ಮಾಹಿತಿ ತಂತಾನೇ ಇರುವುದಿಲ್ಲ. ಗೊತ್ತಾದ ಕ್ರಮದಲ್ಲಿ ಆ ಮಾಹಿತಿಯು ಆಕಾರ ತಳೆಯುವಂತೆ ಮಾಡಬೇಕಾಗುತ್ತದೆ. ಉದಾಹರಣೆಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಮಾತನಾಡುವ ಸಮುದಾಯಗಳಲ್ಲಿ ಭಾಷಾಮಾಹಿತಿಯನ್ನು ಪಡೆದುಕೊಳ್ಳುವಾಗ ನಮ್ಮ ತಿಳುವಳಿಕೆಯನ್ನು ಬಳಸಿ ವಿವರಗಳನ್ನು ಸಂಗ್ರಹಿಸಲು ಆಗುವುದಿಲ್ಲ. ಭಾಷಾ ಬಳಕೆಯ ಸಂದರ್ಭಗಳನ್ನು ರೂಪಿಸಿ ಅಲ್ಲಿ ಹೇಗೆ ಭಾಷೆಗಳು ಬಳಕೆಯಾಗುತ್ತವೆ, ಯಾವ ಭಾಷೆಯನ್ನು ಎಲ್ಲಿ ಬಳಸುತ್ತಾರೆ, ಯಾವ ಭಾಷೆಯ ಬಗೆಗೆ ಏನು ನಿಲುವು ಹೊಂದಿದ್ದಾರೆ ಎಂಬ ವಿವರಗಳನ್ನು ಕಲೆಹಾಕಬೇಕಾಗುತ್ತದೆ. ಇದು ವಿಚಕ್ಷಣತೆಯನ್ನು ಬಯಸುವ ಕೆಲಸ. ಅಲ್ಲದೆ ದೊರೆತ ಮಾಹಿತಿಯನ್ನು ಇತರರ ಬಳಕೆಗೆ ಅನುಕೂಲವಾಗುವಂತೆ ಸಂಯೋಜಿಸಿ ಅದು ಎಲ್ಲರಿಗೂ ದೊರಕುವಂತೆ ಮಾಡುವುದು ಇನ್ನಷ್ಟು ಜವಾಬ್ದಾರಿಯ ಕೆಲಸ.

ಭಾರತದ ಭಾಷಾಸನ್ನಿವೇಶ ತುಂಬಾ ಸಂಕೀರ್ಣವಾಗಿದೆ. ಭಾಷೆಗಳ ಸಹಬಾಳ್ವೆ, ಅವುಗಳ ನಡುವಣ ಒಳ ಸಂಬಂಧಗಳು, ಭಾಷಿಕರು ಹರಡಿಕೊಂಡಿರುವ ಬಗೆ, ಭಾಷೆಗಳನ್ನು ವಿವಿಧ ಉದ್ದೇಶಗಳಿಗೆ ಮತ್ತು ವಿವಿಧ ಸಂದರ್ಭಗಳಲ್ಲಿ ಬಳಸುವ ಬಗೆ, ಬರವಣಿಗೆಯ ಬಗೆಗಳು, ಆಯಾ ಭಾಷೆಯಲ್ಲಿರುವ ಲಿಖಿತ ಮತ್ತು ಮೌಖಿಕ ಸಾಹಿತ್ಯ ಇವೇ ಹಲವು ಹತ್ತು ಸಂಗತಿಗಳು ಈ ಗಣತಿಯಲ್ಲಿ ಸಂಗ್ರಹಗೊಳ್ಳಬೇಕಾಗಿದೆ. ಹೀಗೆ ಸಂಗ್ರಹಗೊಂಡ ಮಾಹಿತಿಯನ್ನು ಹೇಗೆ ಕ್ರೋಢೀಕರಿಸಬೇಕೆಂಬುದು ಮುಂದಿನ ಸಮಸ್ಯೆ. ಈಗ ರೂಪಿಸಲಾಗುತ್ತಿರುವ ಗಣತಿಯೋಜನೆಯಲ್ಲಿ ಇದಕ್ಕಾಗಿ ವ್ಯವಸ್ಥಿತವಾದ ಜಾಲವನ್ನು ಕಟ್ಟಲಾಗುತ್ತದೆ. ಈಗ ಮಾಹಿತಿ ಕಲೆಹಾಕಿ ಅದು ಎಂದೋ ಬಳಕೆಗೆ ಬರುವಂತಾದರೆ ಅದರಿಂದ ಏನು ಪ್ರಯೋಜನ? ಹಾಗಾಗದಂತೆ ಮಾಹಿತಿಯ ಬದಲು ಬೇಗನೆ ಸಂಯೋಜಿಸಬೇಕಾದ ರೂಪದಲ್ಲಿ ಬಳಸಲು ಅನುಕೂಲ ಮಾಡಿಕೊಡಲು ಆಧುನಿಕ ತಂತ್ರಜ್ಞಾನವನ್ನು ಬಳಸಲಾಗುತ್ತದೆ.

ಭಾಷಾಗಣತಿಯ ಮಾಹಿತಿ ಎಲ್ಲೆಲ್ಲಿ ಉಪಯೋಗಕ್ಕೆ ಬರುತ್ತದೆಂದು ಪಟ್ಟಿ ಮಾಡುವುದು ಸುಲಭವಲ್ಲ. ಕೆಲವು ಮುಖ್ಯ ನೆಲೆಗಳನ್ನು ಗಮನಿಸೋಣ. ಶಿಕ್ಷಣ ವಲಯದಲ್ಲಿ ಇದರ ಉಪಯೋಗ ಹೆಚ್ಚಾಗಿ ಆಗಲಿದೆ. ಭಾರತದಲ್ಲಿ 1652 'ಮಾತೃಭಾಷೆ'ಗಳಿದ್ದರೂ, ಅವುಗಳಲ್ಲಿ ಸುಮಾರು 69 ಭಾಷೆಗಳನ್ನು ಶಾಲೆಗಳಲ್ಲಿ ಕಲಿಸಲಾಗುತ್ತಿದೆ. ಕಲಿಕೆಯ ಮಾಧ್ಯಮವಾಗಿ ಬಳಕೆಯಾಗುತ್ತಿರುವ ಭಾಷೆಗಳ ಸಂಖ್ಯೆ 42ರ ಆಸುಪಾಸಿನಲ್ಲಿದೆ. ಗಣತಿಯಿಂದ ಭಾಷೆಗಳ ಬಗೆಗೆ ದೊರಕುವ ಮಾಹಿತಿಯಿಂದ ಇನ್ನೂ ಹಲವು ಭಾಷೆಗಳನ್ನು ಶಿಕ್ಷಣದ ವ್ಯಾಪ್ತಿಗೆ ತರಲು ಅವಕಾಶ ದೊರಕುತ್ತದೆ. ಪಠ್ಯ ಸಾಮಗ್ರಿ ನಿರ್ಮಾಣ, ಕಲಿಸುವ ಬಗೆ ಇವೆಲ್ಲವನ್ನೂ ರೂಪಿಸಲು ನೆರವು ದೊರಕುತ್ತದೆ. ಭಾರತದಲ್ಲಿ ಹನ್ನೊಂದು ಲಿಪಿ ವ್ಯವಸ್ಥೆಗಳು ಬಳಕೆಯಲ್ಲಿವೆ. ಒಂದೇ ಲಿಪಿ ವ್ಯವಸ್ಥೆಯನ್ನು ಹಲವು ಭಾಷೆಗಳಿಗೆ ಬಳಸುವುದುಂಟು(ಉದಾ. ದೇವನಾಗರಿ). ಹಾಗೆಯೇ ಒಂದೇ ಭಾಷೆಯನ್ನು ಒಂದಕ್ಕಿಂತ ಹೆಚ್ಚು ಲಿಪಿಗಳಲ್ಲಿ ಬರೆಯುವುದೂ ಇದೆ. ಕೊಂಕಣಿ ಭಾಷೆಯನ್ನು ಆರು ಬೇರೆಬೇರೆ ಲಿಪಿಗಳಲ್ಲಿ ಬರೆಯಲಾಗುತ್ತಿದೆ. ಈ

ಗಣತಿಯ ಮಾಹಿತಿಯನ್ನು ಬಳಸಿ ಭಾಷಿಕರ ಪ್ರಾದೇಶಿಕ ವ್ಯಾಪ್ತಿಯನ್ನು ಪರಿಗಣಿಸಿ ತಕ್ಕ ಲಿಪಿ ವ್ಯವಸ್ಥೆಯನ್ನು ರೂಪಿಸಲು ನೆರವು ದೊರಕುತ್ತದೆ.

ಸಮೂಹ ಮಾಧ್ಯಮಗಳಲ್ಲಿ ನಾವೀಗ ಈ ಭಾಷೆಗಳನ್ನು ವ್ಯಾಪಕವಾಗಿ ಬಳಸಬೇಕಾಗಿದೆ. ಈಗ 102 ಭಾಷೆಗಳಲ್ಲಿ ಪತ್ರಿಕೆಗಳು ಪ್ರಕಟವಾಗುತ್ತಿವೆ. 146 ಭಾಷಾ ಪ್ರಭೇದಗಳು ರೇಡಿಯೋ ವಾಹಿನಿಗಳಲ್ಲಿ ಬಳಕೆಯಾಗುತ್ತಿವೆ. ಸಂಪರ್ಕ ಮಾಧ್ಯಮಗಳಲ್ಲಿ ಈಗ ನಡೆದಿರುವ ಬದಲಾವಣೆಗಳಿಂದಾಗಿ ಇನ್ನೂ ಹೆಚ್ಚಿನ ಭಾಷೆಗಳನ್ನು ತಂತ್ರಜ್ಞಾನ ಸ್ನೇಹಿಗಳನ್ನಾಗಿ ಬದಲಿಸಬೇಕಿದೆ. ಉದಾಹರಣೆಗೆ ಸೆಲ್‌ಫೋನ್‌ಗಳಲ್ಲಿ ಕೇವಲ ಮಾತನಾಡಲು ಮಾತ್ರವಲ್ಲದೆ ಮಾಹಿತಿಯ ವ್ಯಾಪಕ ಪ್ರಸರಣಕ್ಕೆ ಹಲವು ಭಾಷೆಗಳು ತಹತಹಿಸುತ್ತಿವೆ. ಈ ಪಟ್ಟಿಯಲ್ಲಿ ಕನ್ನಡವೂ ಇದೆಯೆಂಬುದನ್ನು ಮರೆಯುವಂತಿಲ್ಲ. ಭಾಷಾಗಣತಿಯ ಮಾಹಿತಿಯನ್ನು ಈ ನಿಟ್ಟಿನಲ್ಲಿ ಬಳಸಿಕೊಳ್ಳಬೇಕಾಗಿದೆ.

ಈ ದೇಶದಲ್ಲಿ ಭಾಷಾಸಮುದಾಯಗಳು ಒಂದರೊಡನೊಂದು ಬದುಕುತ್ತಿರುವುದರಿಂದ ಇಲ್ಲಿ ಒಂದೇ ಭಾಷೆಯ ಕೌಶಲದೊಡನೆ ವ್ಯವಹರಿಸುತ್ತಿರುವವರ ಸಂಖ್ಯೆ ಕಡಿಮೆ. ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ವ್ಯವಹರಿಸುವುದು ಅಗತ್ಯ; ಅಲ್ಲದೆ ಅನಿವಾರ್ಯ. ಇದರಿಂದ ಕಳೆದ ಅರವತ್ತು ವರ್ಷಗಳಲ್ಲಿ ಏನೆಲ್ಲ ಬದಲಾವಣೆಗಳಾಗಿವೆ ಎನ್ನುವುದು ನಮಗೆ ಖಚಿತವಾಗಿ ತಿಳಿದಿಲ್ಲ. ರಾಜಕೀಯ ಕಾರಣಗಳಿಂದ ಭಾಷಾವಾರು ರಾಜ್ಯಗಳನ್ನು ರಚಿಸಿದರೂ ಅವುಗಳು ಏಕಭಾಷಿಕ ರಾಜ್ಯಗಳಾಗಿ ಉಳಿದಿಲ್ಲ. ಇದರಿಂದಾಗಿ ಆ ರಾಜ್ಯಗಳಲ್ಲಿ ಎರಡನೆಯ (ಕೆಲವು ಕಡೆ ಮೂರನೆಯ) ಆಡಳಿತ ಭಾಷೆಗಳಿಗೆ ಮನ್ನಣೆ ನೀಡಬೇಕೆಂಬ ಒತ್ತಡಗಳು ಉಂಟಾಗಿವೆ. ರಾಜ್ಯಾಂಗದ ಎಂಟನೆಯ ಅನುಚ್ಛೇದದಲ್ಲಿ ಹೆಚ್ಚಿನ ಭಾಷೆಗಳನ್ನು ಸೇರಿಸಲಾಗುತ್ತಿದೆ. ತೀರಾ ಈಚೆಗೆ ಡೋಗ್ರಿ, ಸಂತಾಲಿ, ಮೈಥಿಲಿ ಮತ್ತು ಬೋಡೋಗಳನ್ನು ಸೇರಿಸಲಾಯಿತು. ಈ ಕೆಲವು ಭಾಷೆಗಳನ್ನು ಬಳಸುವವರ ಸಂಖ್ಯೆಗಿಂತ ಹೆಚ್ಚು ಜನರನ್ನು ಭಾಷಿಕರನ್ನಾಗಿ ಹೊಂದಿರುವ ತುಳು, ಗೊಂಡಿ, ಭಿಲಿಯಂತಹ ಭಾಷೆಗಳಿವೆ. ಇವುಗಳಲ್ಲಿ ಕೆಲವು ಹೆಚ್ಚಿನ ಮನ್ನಣೆಗಾಗಿ ಹೋರಾಟವನ್ನು ನಡೆಸುತ್ತಿವೆ. ಚತ್ತಿಸ್‌ಗಡ, ಜಾರ್‌ಖಂಡ್‌ದಂತಹ ರಾಜ್ಯಗಳಿಗೆ ಯಾವುದು ರಾಜ್ಯಭಾಷೆಯಾಗಬೇಕು ಎಂಬ ಪ್ರಶ್ನೆಯೂ ಇದೆ. ಇದಲ್ಲದೆ ಮೊದಲ ಸಹಸ್ರಮಾನದಿಂದಲೂ ಲಿಖಿತ ಮತ್ತು ಮೌಖಿಕ ನೆಲೆಯಲ್ಲಿ ಬಳಕೆಯಲ್ಲಿದ್ದೂ ಈಗಲೂ ಜನಭಾಷೆಯಾಗಿ ಉಳಿದುಕೊಂಡಿರುವ ತಮಿಳು, ಕನ್ನಡದಂತಹ ಭಾಷೆಗಳು ಹೆಚ್ಚಿನ ಸ್ಥಾನಮಾನಗಳನ್ನು ಬಯಸುತ್ತಿವೆ. 10,000 ಜನರಿಗಿಂತಲೂ ಕಡಿಮೆ ಭಾಷಿಕರನ್ನು ಹೊಂದಿರುವ ಸುಮಾರು ಒಂದೂವರೆ ಸಾವಿರ ಭಾಷೆಗಳ ಗತಿ ಮುಂದೇನಾಗಬೇಕು? ಅವುಗಳು ಅಳಿದು ಹೋಗುವುದನ್ನು ನೋಡುತ್ತ ಕೂರಬೇಕೆ? ಈ ಎಲ್ಲ ಭಾಷಿಕ ರಾಜಕಾರಣದ ಪ್ರಶ್ನೆಗಳಿಗೆ ಒಂದು ನೆಲೆ ದೊರಕಲು ನಮ್ಮ ಎಲ್ಲ ಭಾಷೆಗಳ ಬಗೆಗೆ ನಮ್ಮ ತಿಳಿವು ಹೆಚ್ಚಬೇಕು. ಅದಕ್ಕಾಗಿ ಈ ಭಾಷಾಗಣತಿ ಅಗತ್ಯವಾಗಿದೆ.

ಪಾಶ್ಚಾತ್ಯರಲ್ಲಿ ಭಾರತವು ಒಂದು ಪ್ರಧಾನ ಸಂಸ್ಕೃತಿಯುಳ್ಳ ಏಕಾಕೃತಿಯ ನಾಡೆಂಬ ಭಾವನೆ ಸಾಕಷ್ಟು ಬಲವಾಗಿ ಬೇರೂರಿದೆ. ಆದರೆ ಈ ನಾಡಿನಲ್ಲಿರುವ ವೈವಿಧ್ಯವನ್ನು

ಹೊರತರಬೇಕೆಂಬುದು ಭಾಷಾಗಣತಿಯನ್ನು ಬಯಸಿದವರ ಬಯಕೆಯಾಗಿತ್ತು. ಹಲವು ಭಾಷಾಸಮುದಾಯಗಳ ನೇಯ್ಗೆಯ ಮೂಲಕವೇ ಈ ನಾಡಿನ ಪರಂಪರೆ ಮತ್ತು ಸಮಕಾಲೀನ ಬದುಕು ರೂಪುಗೊಂಡಿರುವ ವಿಧಾನವನ್ನು ಜಗತ್ತಿಗೆ ತೆರೆದು ತೋರುವುದು ಇಂತಹ ಗಣತಿಯ ಮೂಲೋದ್ದೇಶ. ಭಾಷೆಗಳನ್ನು ಅಧ್ಯಯನ ಮಾಡುವವರಿಗೆ ಭಾರತದಂತಹ ಸಂಕೀರ್ಣ ಮಾದರಿ ದೊರಕುವುದು ಕಷ್ಟ. ಈ ಕಾರಣಗಳನ್ನು ಮುಂದುಮಾಡಿಯೂ ಭಾಷಾಗಣತಿಯ ಅಗತ್ಯವನ್ನು ಮಂಡಿಸಲಾಗುತ್ತಿದೆ. ವೈವಿಧ್ಯಗಳು ಇವೆಯೆಂದು ಹೇಳುವುದು ಒಂದು ನೆಲೆಯಾದರೆ, ಆ ವೈವಿಧ್ಯಗಳ ನಡುವಣ ಒಳಸಂಬಂಧಗಳನ್ನು ನಿರ್ವಹಿಸುವುದು ಇನ್ನೊಂದು ನೆಲೆ. ಭಾಷಾಗಣತಿಯು ಹೊರಹಾಕಲಿರುವ ವೈವಿಧ್ಯದ ನೆಲೆಗಳು ಎಷ್ಟು ಸಂಕೀರ್ಣವಾಗಿರಬಹುದೆಂದು ಈಗಲೇ ಕಲ್ಪಿಸಿಕೊಳ್ಳುವುದು ಕಷ್ಟ. ಆದರೆ ಆ ವೈವಿಧ್ಯವು ಎಸೆಯಲಿರುವ ಸವಾಲುಗಳನ್ನು ಎದುರಿಸುವುದಂತೂ ಕಷ್ಟದ ಕೆಲಸ. ಜಾತಿವಾರು ಗಣತಿಗೆ ವಿರೋಧ ವ್ಯಕ್ತವಾಗುತ್ತಿರುವಂತೆಯೇ, ಇದೇ ನೆಲೆಯಲ್ಲಿ ಭಾಷೆಯ ಗಣತಿಗೂ ವಿರೋಧ ವ್ಯಕ್ತವಾಗುತ್ತಿದೆ. ಆದರೆ ಇದು ಸಮಸ್ಯೆಯ ಗಹನತೆಗೆ ಹೆದರಿ, ಸಮಸ್ಯೆಯೇ ಇಲ್ಲವೆಂದು ನಂಬಿ ಕೂರುವ ಬಗೆಯಾಗಬಹುದಷ್ಟೆ. ಭಾಷಾಯೋಜನೆಯ ಗೈರುಹಾಜರಿಯಿಂದ ಈ ನಾಡು ಎದುರಿಸಿದ ಸಂಕಷ್ಟಗಳು ನೂರಾರು. ಇನ್ನಾದರೂ ಈ ಗಣತಿ ನಡೆದು ಅದರಿಂದ ದೊರಕುವ ಮಾಹಿತಿಯಿಂದ ಮುಂಗಾಣ್ಕೆಯ ಭಾಷಾನೀತಿ ಮತ್ತು ಭಾಷಾಯೋಜನೆಗಳು ರೂಪುಗೊಳ್ಳಲಿ ಎಂದು ನಾವೆಲ್ಲರೂ ಹಾರೈಸಬೇಕಿದೆ.

# ಭಾಷೆಗಳು ಅಳಿಯುತ್ತವೆಯೇ?

ಜನಸಮುದಾಯಗಳಿಗೆ ಒಂದು ಭಾಷೆ ಇರಲೇಬೇಕು. ಹಾಗೆಯೇ ಭಾಷೆಯೊಂದಕ್ಕೆ ಅದನ್ನು ಬಳಸುವ ಸಮುದಾಯವೊಂದು ಇರಲೇಬೇಕು. ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಸಮುದಾಯವೊಂದು ಬಳಸುತ್ತಿರಬಹುದು; ಹಾಗೆಯೇ ಒಂದೇ ಭಾಷೆಯನ್ನು ಒಂದಕ್ಕಿಂತ ಹೆಚ್ಚು ಸಮುದಾಯಗಳು ಬಳಸುತ್ತಲೂ ಇರಬಹುದು. ಈ ಬಗೆಬಗೆಯ ಪರಿಸ್ಥಿತಿ ಲೋಕದಲ್ಲೆಲ್ಲಾ ನಮಗೆ ಕಾಣಸಿಗುತ್ತದೆ. ಹೀಗಿರುವಾಗ ಒಂದು ಭಾಷೆ ಅಳಿದು ಹೋಗುವುದು ಎಂದರೇನು? ಈ ಪ್ರಶ್ನೆಗೆ ಎರಡು ಬಗೆಯ ಉತ್ತರಗಳಿರಬಹುದು. ಹಾಗೆ ಅಳಿದು ಹೋದ ಭಾಷೆಯನ್ನು ಆಡುತ್ತಿದ್ದ ಸಮುದಾಯವೇ ಇಡಿಯಾಗಿ, ಒಬ್ಬರೂ ಉಳಿಯದಂತೆ ನಾಶವಾಗಿ ಹೋಗಿರಬೇಕು. ಇಲ್ಲವೇ ಆ ಭಾಷೆಯನ್ನು ಆಡುತ್ತಿದ್ದ ಸಮುದಾಯದ ಪ್ರತಿಯೊಬ್ಬರೂ ಬೇರೆ ಯಾವುದೋ ಒಂದು ಭಾಷೆಯನ್ನು ಆಡಲು ಮೊದಲು ಮಾಡಿರಬೇಕು. ಇವೆರಡೂ ಬಗೆಗಳಿಗೆ ಉದಾಹರಣೆಗಳು ಲೋಕದಲ್ಲಿವೆ. ನಿಸರ್ಗದ ಯಾವುದೋ ಪ್ರಕೋಪಕ್ಕೆ ಸಿಲುಕಿದ ಸಮುದಾಯವೊಂದು ಇದ್ದಕ್ಕಿದ್ದಂತೆ ಇಡಿಯಾಗಿ ನಾಶವಾಗಿರುವುದುಂಟು. ಈಚೆಗೆ ಸುನಾಮಿ ಬಂದಾಗ ಅಂಡಮಾನ್ ನಿಕೊಬಾರ್ ನಡುಗಡ್ಡೆಗಳಲ್ಲಿದ್ದ ಕೆಲವು ಸಮುದಾಯಗಳು ಹೀಗೆ ಅಳಿದು ಹೋಗಿರಬಹುದು ಎಂಬ ಶಂಕೆಯನ್ನು ವ್ಯಕ್ತಪಡಿಸಿರುವುದುಂಟು. ಅಂತಹ ಸಮುದಾಯಗಳ ಭಾಷೆಯನ್ನು ಅಧ್ಯಯನ ಮಾಡಲು ಹೋದ ಮೈಸೂರಿನ ಭಾರತೀಯ ಭಾಷಾಸಂಸ್ಥಾನದ ಅಧ್ಯಯನಕಾರರು ತಮ್ಮ ಅಧ್ಯಯನಕ್ಕೆ ಅಗತ್ಯವಾದ ಭಾಷಾಸಾಮಗ್ರಿಯನ್ನು ದಾಖಲಿಸಿಕೊಂಡು ಬಂದ ಕೆಲವೇ ದಿನಗಳಲ್ಲಿ ಈ ಪ್ರಕೋಪ ನಡೆದಿರುವುದರಿಂದ ಆ ಭಾಷೆಗಳ ಮಾದರಿಗಳು ಈಗ ದಾಖಲೆಗಳಲ್ಲಿ ಮಾತ್ರ ಉಳಿದಿರುವ ಸಾಧ್ಯತೆ ಇದೆ (ಇದನ್ನು ಊಹೆಯ ಮಾತನ್ನಾಗಿ ಮಾತ್ರ ಹೇಳುತ್ತಿದ್ದೇನೆ; ಏಕೆಂದರೆ ಆ ಸಮುದಾಯದ ಪ್ರತಿಯೊಬ್ಬರೂ ಅಳಿದಿದ್ದಾರೆಂದು ಖಚಿತವಾಗಿ ಹೇಳುವುದಕ್ಕೆ ಪುರಾವೆಗಳಿಲ್ಲ. ಯಾರೋ ಕೆಲವರು ಎಲ್ಲೋ ಬದುಕುಳಿದಿರಲೂ ಬಹುದು). ಸುನಾಮಿಯಂತಹ ನಿಸರ್ಗದ ಸಂಭವಗಳಲ್ಲದೆ ರೋಗಗಳು, ಯುದ್ಧಗಳು ಮತ್ತಿತರ ಕಾರಣಗಳಿಂದಲೂ ಲಾಗಾಯ್ತಿನಿಂದಲೂ ಸಮುದಾಯಗಳು ಹೀಗೆ ನಾಶವಾಗುತ್ತಿವೆ. ಹಾಗಾಗಿ ಅವರಾಡುತ್ತಿದ್ದ ಭಾಷೆಗಳೂ ಇಲ್ಲವಾಗುತ್ತಿವೆ.

ಎರಡನೆಯ ಸಂದರ್ಭವನ್ನು ನೋಡೋಣ. ಸಮುದಾಯವೊಂದು ತಾನು ಬಳಸುತ್ತಿದ್ದ ಭಾಷೆಯನ್ನು ಇಡಿಯಾಗಿ ಮರೆತು ಬೇರೊಂದು ಭಾಷೆಯನ್ನು ಬಳಸಲು

ಮೊದಲು ಮಾಡುವುದು ಈ ಸಂದರ್ಭದ ಲಕ್ಷಣ. ಇದರಲ್ಲಿ ಎರಡು ಬಗೆಗಳಿರುತ್ತವೆ. ಈವರೆಗೆ ಆಡುತ್ತಿದ್ದ ಭಾಷೆಗೆ ಬದಲಾಗಿ ಬೇರೆಯದೇ ಆದ ಭಾಷೆಯನ್ನು ಬಳಸಲು ಮೊದಲು ಮಾಡುವುದು ಒಂದು ಬಗೆ.

ಎರಡನೆಯ ಬಗೆಯಲ್ಲಿ ಈವರೆಗೆ ಆಡುತ್ತಿದ್ದ ಭಾಷೆ ಎಷ್ಟು ಬದಲಾಗಿ ಹೋಗುತ್ತದೆಯೆಂದರೆ ಎಂದೋ ಆ ಭಾಷೆಯನ್ನು ಕೇಳಿದವರಿಗೆ ಅದು ತಾವು ಕೇಳಿದ್ದ ಭಾಷೆ ಎನಿಸದೇ ಬೇರೆ ಯಾವುದೋ ಭಾಷೆ ಎನಿಸತೊಡಗುತ್ತದೆ. ಹೀಗೆ ಒಂದು ಭಾಷೆ ಗುರುತು ಸಿಗದಷ್ಟು ಬದಲಾಗಿ ಹೋಗುವುದಕ್ಕೆ ಬೇರೆ ಭಾಷೆಗಳ ಪ್ರಭಾವಕ್ಕೆ ಒಳಗಾಗುವುದು ಒಂದು ಮುಖ್ಯ ಕಾರಣ. ಹೀಗೆ ಒಂದು ಸಮುದಾಯ ತಾನು ಈವರೆಗೆ ಬಳಸುತ್ತಿದ್ದ ಭಾಷೆಯನ್ನು ಬಿಟ್ಟು ಇನ್ನೊಂದು ಭಾಷೆಯನ್ನು ಬಳಸತೊಡಗುವುದು ಮತ್ತು/ಅಥವಾ ತಾನು ಈವರೆಗೆ ಬಳಸುತ್ತಿದ್ದ ಭಾಷೆಯನ್ನು ಇನ್ನೊಂದು ಭಾಷೆಯ ಪ್ರಭಾವದಿಂದಾಗಿ ಗುರುತು ಸಿಗದಂತೆ ಬದಲಿಸಿಕೊಳ್ಳುವುದು ಇದ್ದಕ್ಕಿದ್ದಂತೆ ನಡೆಯುವ, ಬೆಳಗಾಗುವಷ್ಟರಲ್ಲಿ ಆಗಿಬಿಡುವ ಬದಲಾವಣೆಗಳಲ್ಲ. ಇದಕ್ಕೆ ಹಲವಾರು ಶತಮಾನಗಳೇ ಹಿಡಿಯಬಹುದು. ಈ ಬದಲಾವಣೆಗಳು ಜರುಗುತ್ತಿರುವುದಾಗಲೀ, ಅದರಿಂದ ಉಂಟಾಗುತ್ತಿರುವ ಪರಿಣಾಮಗಳಾಗಲೀ ಸಾಮಾನ್ಯವಾಗಿ ಆ ಭಾಷೆಯನ್ನಾಡುವ ಇಲ್ಲವೇ ಅದನ್ನು ಕೇಳಿಸಿಕೊಳ್ಳುತ್ತಿರುವವರಿಗೆ ಗೊತ್ತಾಗುವುದಿಲ್ಲ.

ಹಾಗಿದ್ದಲ್ಲಿ ಈ ಬೇರೆ ಬೇರೆ ಸಂದರ್ಭಗಳಲ್ಲಿ ಯಾವುದನ್ನು ಭಾಷೆಯ ಅಳಿವು ಎನ್ನಬೇಕು? ಮೊದಲನೆಯದಂತೂ ಭಾಷೆಯ ಅಳಿವಿನ ಸಂದರ್ಭವೇ ಸರಿ. ಏಕೆಂದರೆ ಭಾಷೆಯನ್ನು ಆಡುವವರೆಲ್ಲರೂ ಅಳಿದುಹೋದರೆಂದರೆ ಆ ಭಾಷೆಯೂ ಅಳಿಯಿತೆಂದೇ ಆಯಿತಲ್ಲ. ಇನ್ನು ಒಂದು ಭಾಷೆಯನ್ನಾಡುತ್ತಿರುವ ಜನಸಮುದಾಯವೆಲ್ಲ ತನ್ನ ಭಾಷೆಯನ್ನು ಬಿಟ್ಟುಕೊಟ್ಟು ಇನ್ನೊಂದು ಭಾಷೆಯನ್ನು ಬಳಸಲು ಮೊದಲು ಮಾಡುವುದು ಅಪರೂಪ. ಏಕೆಂದರೆ ಯಾವುದೇ ಜನಸಮುದಾಯ ಹೀಗೆ ಮಾಡಿದ ಉದಾಹರಣೆಗಳು ನಮಗೆ ಸಿಗುವುದಿಲ್ಲ. ಅಲ್ಲದೆ ಇಡೀ ಸಮುದಾಯದ ಜನರನ್ನು ಈ ಬಗೆಯ ಬದಲಾವಣೆಗೆ ಸಿದ್ಧಪಡಿಸುವುದು ಆಗದ ಮಾತು. ನಾವು ಗಮನಿಸಿದ ಮೂರನೆಯ ಬಗೆಯಲ್ಲಿ ಒಂದು ಭಾಷೆಯನ್ನಾಡುತ್ತಿರುವ ಜನರು ಇನ್ನೊಂದು ಭಾಷೆಯ ಪ್ರಭಾವಕ್ಕೆ ಒಳಗಾಗುವ ಮೂಲಕ ತಮ್ಮ ಭಾಷೆಯು ವಿವಿಧ ಸ್ತರಗಳಲ್ಲಿ ಬದಲಾವಣೆಗೆ ಕಾರಣರಾಗುತ್ತಾರೆ. ಈ ಬದಲಾವಣೆಗಳು ಕಾಲ ಕಳೆದಂತೆ ಎಷ್ಟು ಪರಿಣಾಮವನ್ನುಂಟು ಮಾಡಿರುತ್ತವೆಂದರೆ, ಆ ಭಾಷೆಯ ಮೊದಲಿನ ಸ್ವರೂಪವನ್ನು ಗುರುತಿಸುವುದಕ್ಕೂ ಆಗದೇ ಹೋಗಬಹುದು. ಆದರೆ ಆ ಭಾಷೆಯ ಹೊಸ ಅವತಾರದ ಅಡಿಪಾಯದಲ್ಲಿ ಆ ಭಾಷೆಯ ಚಹರೆಗಳು ಇದ್ದೇ ಇರುತ್ತವೆ. ಹಾಗಾಗಿ ಮೂಲಭಾಷೆ ಬದಲಾಗಿದೆ ಎನ್ನಬೇಕೇ ಹೊರತು ಅದು ಅಳಿದು ಹೋಗಿದೆ ಎನ್ನುವಂತಿಲ್ಲ.

# ಭಾಷೆ ಸಾಯುವುದು ಎಂದರೇನು?

"ಸಾಯುತಿದೆ ನಿಮ್ಮ ನುಡಿ" ಎಂದು ಬಹು ಹಿಂದೆಯೇ ಕುವೆಂಪು ತಮ್ಮ ಕವನವೊಂದರಲ್ಲಿ ಕನ್ನಡಿಗರಿಗೆ ಸೂಚನೆ ನೀಡಿದ್ದರು. ಆದರೆ ಅವರ ಕವನದಲ್ಲಿ ಸೂಚಿತವಾದ 'ಸಾವು' ಆಲಂಕಾರಿಕವಾಗಿತ್ತು. ಜೀವ ಹೀರಲು ಬರುವ ಪೂತನಿಯ ರೂಪಕವೊಂದರ ಮೂಲಕವೂ ಇದೇ ಚಿತ್ರವೊಂದನ್ನು ಅವರು ತಮ್ಮ ಕವನದಲ್ಲಿ ಹೇಳಿದ್ದುಂಟು. ಆದರೆ ಈಗ ಮತ್ತೆ ಕನ್ನಡದ ಅಳಿವಿನ ಬಗೆಗೆ ಮಾತು ಕೇಳಿ ಬರುತ್ತಿದೆ. ಕೆಲವರು ಈ ಸಾವಿನ ಕ್ಷಣಗಣನೆಯನ್ನು ಮಾಡಲಾಗಿದೆ ಎಂದು ಹೇಳುತ್ತಿದ್ದಾರೆ. ಅಳಿವಿನ ಅಂಚಿನಲ್ಲಿರುವ ಭಾಷೆಗಳ ಪಟ್ಟಿಯಲ್ಲಿ ಕನ್ನಡಕ್ಕೆ ಇಪ್ಪತ್ತೆಂಟನೆಯ ಸ್ಥಾನವಿದೆಯೆಂದು ಅಧಿಕೃತವಾಗಿ ಯು ಎನ್ ಒ ವರದಿಯನ್ನು ಉಲ್ಲೇಖಿಸಿ ಹೇಳಿದ್ದುಂಟು. ಈ ಚರ್ಚೆಯ ದಿಕ್ಕನ್ನು ನಾವು ಈಗ ಸದ್ಯ ಬದಿಗಿಡೋಣ. ಈಗ ನಮ್ಮ ಪ್ರಶ್ನೆ ಇಷ್ಟೆ. ಭಾಷೆಗಳು ಅಳಿಯುತ್ತವೆಯೇ? ಹಾಗೆ ಅಳಿಯುವುದಾದರೆ ಅದು ಯಾವಾಗ? ಅವುಗಳನ್ನು ಹೀಗೆ ಅಳಿವಿನ ಅಂಚಿನಿಂದ ಹೊರತಂದು ಉಳಿಸಿಕೊಳ್ಳಬಹುದೇ?

ಭಾಷೆಗಳ ಸಾವು ಮತ್ತು ಭಾಷೆಗಳ ಸಂಗೋಪನೆ ಎಂಬುದು ಕಳೆದ ಮೂರುನಾಲ್ಕು ದಶಕಗಳಿಂದ ಚಾಲ್ತಿಯಲ್ಲಿರುವ ಮಾತುಗಳು. ಈಚಿನ ವರ್ಷಗಳಲ್ಲಿ ಭಾಷಾಹನನ ಎಂಬ ಮಾತೂ ಬಳಕೆಗೆ ಬಂದಿದೆ. ಭಾಷೆಯೊಂದನ್ನು ಅನ್ಯಶಕ್ತಿಮೂಲಗಳು ಯೋಜಿತವಾಗಿ ವಿನಾಶಗೊಳಿಸುವುದನ್ನು ಹೀಗೆ ಭಾಷಾಹನನ (ಲಿಂಗ್ವಿಸೈಡ್) ಎನ್ನಲಾಗುತ್ತದೆ. ಇದಕ್ಕೂ ಮೊದಲಿನ ದಶಕಗಳಲ್ಲಿ ಅಂದರೆ ಬಹುಮಟ್ಟಿಗೆ ಹತ್ತೊಂಬತ್ತನೆಯ ಶತಮಾನ ಮತ್ತು ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಭಾಷೆಗಳು ಹೆಚ್ಚುತ್ತಾ ಬಂದಿರುವ ಬಗೆಗೆ ಒಂದು ಚರ್ಚೆ ನಡೆಯುತ್ತಿತ್ತು. ಮೊದಲಿಗೆ ಒಂದು ಮೂಲಭಾಷೆ ಇದ್ದದ್ದು ಅನಂತರ ಹಲವಾರು ಜ್ಞಾತಿಭಾಷೆಗಳಾಗಿ ಮೈತಳೆದದ್ದನ್ನು ಗುರುತಿಸುವ ಶಾಸ್ತ್ರವೇ ಬೆಳೆದು ಬಂದಿದೆ. ಹಾಗಿದ್ದಲ್ಲಿ ಮೂಲದಲ್ಲಿ ಇದ್ದ ಭಾಷೆಯೊಂದು ಅಳಿದು ಹೋಯಿತು ಎನ್ನುತ್ತೇವೆಯೋ ಅಥವಾ ಅದು ತನ್ನಿಂದ ರೂಪುಗೊಂಡ ಭಾಷೆಗಳಲ್ಲಿ ಅಡಗಿಹೋಗಿದೆ ಎನ್ನುತ್ತೇವೆಯೋ? ಉದಾಹರಣೆಗೆ ಕನ್ನಡ, ತಮಿಳು, ತೆಲುಗು, ತುಳು, ಮಲೆಯಾಳಂ ಮೊದಲಾದ ಭಾಷೆಗಳಿಗೆಲ್ಲ ಮೂಲದಲ್ಲಿ ಒಂದೇ ಭಾಷೆ ಇದ್ದಿತೆನ್ನುತ್ತೇವೆ. ಅದನ್ನು ಮೂಲದ್ರಾವಿಡ ಅಥವಾ ಪೂರ್ವದ್ರಾವಿಡ ಎನ್ನುತ್ತೇವೆ. ಆದರೆ ಈಗ ಆ ಭಾಷೆ ಇಲ್ಲ. ಅದರ ಬದಲಿಗೆ ಇಪ್ಪತ್ತಕ್ಕೂ ಮಿಕ್ಕಿ ದ್ರಾವಿಡ ಭಾಷೆಗಳಿವೆ.

ಅಂದರೆ ಮೂಲದ್ರಾವಿಡಭಾಷೆ ಅಳಿದಿದೆಯೋ ಅಥವಾ ಉಳಿದಿದೆಯೋ? ಈ ಪ್ರಶ್ನೆ ಕೇವಲ ತರ್ಕಕ್ಕಾಗಿ ಕೇಳಿದ್ದಲ್ಲ.

ಒಂದು ಭಾಷೆಯನ್ನು ಆಡುವ ಭಾಷಾಸಮುದಾಯವೊಂದು ಇರುತ್ತದೆ. ಭಾಷೆ ಅಳಿಯಿತೆಂದರೆ ಆ ಭಾಷಾಸಮುದಾಯ ತನ್ನದೇ ಆದ ಬೇರೊಂದು ಭಾಷೆಯೊಂದನ್ನು ಹೊಂದಿರುವುದು ಅಗತ್ಯ. ಏಕೆಂದರೆ ಹಾಗೆ ಯಾವುದೇ ಭಾಷೆ ಇಲ್ಲದೆ ಸಮುದಾಯ ಇರಲು ಸಾಧ್ಯವಿಲ್ಲ. ಕನ್ನಡ ಅಳಿಯುತ್ತದೆ ಎನ್ನುವವರು ಕನ್ನಡಿಗರು ಕನ್ನಡ ಮಾತಾಡುವುದನ್ನು ಬಿಟ್ಟು ಬೇರೊಂದು ಭಾಷೆಯನ್ನು ತಮ್ಮ ಭಾಷೆ ಎಂದು ಬಳಸತೊಡಗುತ್ತಾರೆ ಎಂದು ತಿಳಿಯುತ್ತಾರೆ. ಅಥವಾ ಕನ್ನಡ ಭಾಷಾ ಸಮುದಾಯ ಹಲವಾರು ಅನ್ಯಭಾಷಾಸಮುದಾಯಗಳಲ್ಲಿ ಹಂಚಿ ಹೋಗುತ್ತದೆ ಎಂದು ಭಾವಿಸಬೇಕಾಗುತ್ತದೆ. ಇದು ಊಹೆಯ ಮಾತು. ಅಂದರೆ ಹೀಗೆ ತಮ್ಮ ಭಾಷೆಯೊಂದನ್ನು ಬಿಟ್ಟು ಬೇರೊಂದು ಭಾಷೆಯನ್ನು ಆಶ್ರಯಿಸುವುದು ಅಸಂಭವವೇನಲ್ಲ. ಆದರೆ ಇಡೀ ಕನ್ನಡ ಭಾಷಾಸಮುದಾಯವೇ ಹೀಗೆ ಮಾಯವಾಗುತ್ತದೆ ಎಂದು ತಿಳಿಯಲು ಕಾರಣಗಳಿಲ್ಲ. ಅದಕ್ಕೆ ಈಗಿರುವ ರಾಜಕೀಯ, ಆರ್ಥಿಕ, ಸಾಮಾಜಿಕ ಸಂದರ್ಭಗಳು ಅವಕಾಶ ನೀಡುವುದಿಲ್ಲ. ಹಾಗಿದ್ದಲ್ಲಿ ಏನು ಬದಲಾವಣೆ ಆಗಬಹುದು?

ಈಗ ಬಹು ಜನರು ಆತಂಕಪಡಲು ಇರುವ ಕಾರಣಗಳಲ್ಲಿ ಭಾಷಾಸಂಕರವೂ ಒಂದು. ಅಂದರೆ ಕನ್ನಡ ಮಾತನಾಡುವವರು ಶುದ್ಧ ಕನ್ನಡವನ್ನು ಮಾತನಾಡುತ್ತಿಲ್ಲ ಎನ್ನುತ್ತಾರೆ. ಹೀಗೆ ಕನ್ನಡದಲ್ಲಿ ಇಂಗ್ಲಿಶನ್ನು (ಇತರ ಭಾಷೆಗಳನ್ನು ಬೆರೆಸಿ ಮಾತನಾಡುವ ಬಗ್ಗೆ ಅಷ್ಟೊಂದು ಆತಂಕಗಳಿದ್ದಂತಿಲ್ಲ) ಬೆರೆಸಿ ಮಾತಾಡುವುದನ್ನು ಕಂಗ್ಲಿಶ್ ಎಂದೂ ಕೆಲವರು ಗೇಲಿ ಮಾಡುತ್ತಾರೆ. ಆದರೆ ಈ ಕಂಗ್ಲಿಶನ್ನು ಯಾರೂ ಇಂಗ್ಲಿಶಿನ ಭ್ರಷ್ಟ ರೂಪ ಎಂದು ತಿಳಿಯುವುದಿಲ್ಲ. ಬದಲಿಗೆ ಅದು ಕನ್ನಡದ ಭ್ರಷ್ಟರೂಪವೆಂದೇ ತಿಳಿಯುತ್ತಾರೆ. ಈ ಕನ್ನಡದ ಭ್ರಷ್ಟರೂಪವೇ ದಶಕಗಳು ಕಳೆದಂತೆ ಒಂದು ಪ್ರಭೇದವಾಗಿ ರೂಪುಗೊಳ್ಳುತ್ತದೆ. ಅಲ್ಲದೆ ಅದೇ ಬಹುಜನ 'ಕನ್ನಡಿಗರ' ಭಾಷೆಯಾಗುತ್ತದೆ. ಈ ಬದಲಾವಣೆಯನ್ನು ತಡೆಯುವುದು ಯಾರಿಂದಲೂ ಸಾಧ್ಯವಿಲ್ಲ. ಭಾಷೆಗಳು ಆಕಾರ ಬದಲಿಸುತ್ತಾ ಬಂದಿರುವುದೇ ಹೀಗೆ. ತಮ್ಮ ಮೊದಲ ಚಹರೆಯನ್ನು ಕಳೆದುಕೊಂಡು ಬೇರೊಂದು ಭಾಷೆಯೋ ಎಂಬಂತೆ ಆಕಾರ ತಳೆಯುತ್ತಾ ಬಂದಿರುವ ನೂರಾರು ಉದಾಹರಣೆಗಳನ್ನು ನಾವು ನೋಡುತ್ತೇವೆ. ಹಾಗಾಗಿ ಕನ್ನಡ ಅಳಿಯುತ್ತದೆ ಎನ್ನುವುದು ಅಷ್ಟು ಸರಿಯಾದ ವಿವರಣೆಯಲ್ಲ. ಅದು ತನ್ನ ಚಹರೆಯನ್ನು ಬದಲಿಸಿಕೊಳ್ಳುತ್ತದೆ ಎನ್ನುವುದು ಸತ್ಯಕ್ಕೆ ಹೆಚ್ಚು ಹತ್ತಿರವಾದ ವಿವರಣೆ.

ಈ ವಿವರಣೆಯನ್ನು ಬಹಳ ಜನ ಒಪ್ಪುವುದಿಲ್ಲ. ಅದಕ್ಕೆ ಎರಡು ಕಾರಣಗಳಿವೆ. ಹೀಗೆ ಬದಲಾಗುವ ಭಾಷೆಯ ಬಗೆಗೆ ಅವರಿಗೆ ಸಮ್ಮತಿ ಇಲ್ಲದಿರುವುದು ಒಂದು ಕಾರಣ. ಕನ್ನಡವಾಗಲಿ ಇನ್ನೊಂದು ಭಾಷೆಯಾಗಲಿ ಹೀಗೆ ತನ್ನ ಚಹರೆಯನ್ನು ಬದಲಿಸಿಕೊಂಡು 'ಉಳಿದುಕೊಳ್ಳು'ತ್ತದೆ ಎನ್ನುವ ಪ್ರಕ್ರಿಯೆಯನ್ನು ಒಪ್ಪದಿರುವುದು ಇನ್ನೊಂದು ಕಾರಣ. ಆದರೆ ಈ ತಗಾದೆಗಳ ಮಾತು ಹಾಗಿರಲಿ. ಜಗತ್ತಿನಾದ್ಯಂತ ಇದು ತ್ವರಿತಗತಿಯಲ್ಲಿ ಆಗುತ್ತಿರುವ ಬದಲಾವಣೆ. ಈ ಬದಲಾದ ರೂಪದಲ್ಲಿ 'ಮೂಲ'

ಕನ್ನಡದ ಚಹರೆಗಳು ಎಷ್ಟಿರಬಹುದು ಎಂಬ ಬಗ್ಗೆ ಮಾತ್ರ ನಾವೀಗ ಯೋಚಿಸುತ್ತಾ ಇರಬಹುದು ಅಷ್ಟೆ. ಈ ಬಗೆಯ ಬದಲಾವಣೆ ಕನ್ನಡಕ್ಕೆ ಹೊಸದೇನೂ ಅಲ್ಲ. ಮೂಲ ದ್ರಾವಿಡದಿಂದ ಕನ್ನಡ ರೂಪುಗೊಳ್ಳುವಾಗ ಸಂಸ್ಕೃತ, ಅದಕ್ಕಿಂತಲೂ ಹೆಚ್ಚಾಗಿ ಪ್ರಾಕೃತಗಳು ಎಷ್ಟು ಪ್ರಭಾವ ಬೀರಿವೆ ಎನ್ನುವುದನ್ನು ನಾವು ಗಮನಿಸಬೇಕು. ನಾವು ಕನ್ನಡವೆಂದು ಗುರುತಿಸುವ ಭಾಷೆಯೇ ಕಳೆದ ಒಂದೂವರೆ ಸಾವಿರ ವರ್ಷದಲ್ಲಿ ಸಾಕಷ್ಟು ಬದಲಾಗಿದೆ. ಈ ಬದಲಾವಣೆಯ ಸ್ವರೂಪ ಮತ್ತು ವೇಗಗಳು ಬರಲಿರುವ ದಶಕಗಳಲ್ಲಿ ತೀವ್ರಗೊಳ್ಳಲಿದೆ. ಇದು ಎಲ್ಲ ವಲಯಗಳಲ್ಲೂ ಆಗುತ್ತಿರುವ ಬದಲಾವಣೆ. ಭಾಷೆಯೊಂದು ಇದರಿಂದ ಹೊರಗುಳಿಯುವುದು ಹೇಗೆ?

ನಮ್ಮ ನಿಜವಾದ ಪ್ರಶ್ನೆ ಇರುವುದು ಕನ್ನಡ ಉಳಿಯುತ್ತದೋ ಇಲ್ಲವೋ ಎಂಬುದಲ್ಲ. ಹಾಗೆ ಉಳಿದುಕೊಳ್ಳುವ ಕನ್ನಡ, ಮುಂದೆ ಎಷ್ಟು ವಲಯಗಳಲ್ಲಿ ಬಳಕೆಯಾಗುತ್ತದೆ ಎಂಬುದು ಹೆಚ್ಚು ಪ್ರಸ್ತುತವಾದ ಪ್ರಶ್ನೆ. ಹೀಗೆ ಕನ್ನಡ ಹೆಚ್ಚು ವಲಯಗಳಲ್ಲಿ ಬಳಕೆಯಾಗಬೇಕು ಎಂಬುದು ನಮ್ಮ ನಿಜವಾದ ಕಾಳಜಿಯಾದರೆ ಅದರ ಬದಲಾಗುತ್ತಿರುವ ರೂಪಕ್ಕೆ ನಮ್ಮನ್ನು ತೆರೆದ ಮನಸ್ಸಿನಿಂದ ಒಪ್ಪಿಸಿಕೊಳ್ಳುವುದು ಅಗತ್ಯ. ನಮ್ಮ ಶುದ್ಧರೂಪದ ಕನ್ನಡ ನಮಗೇ ಗೊತ್ತಿಲ್ಲದಂತೆ ಅತಿ ಸಂಸ್ಕೃತಮಯವಾಗಿರುವುದರಿಂದ ಅದನ್ನು ಎಲ್ಲ ವಲಯಗಳಲ್ಲೂ ನಿರಾಳವಾಗಿ ಬಳಸುವುದು ಸಾಧ್ಯವಾಗುವುದಿಲ್ಲ. ಭಾರತದ ಇತರ ಭಾಷೆಗಳು ಈಗ ಎದುರಿಸುತ್ತಿರುವ ಸಮಸ್ಯೆಗಳು ಮತ್ತು ಕಂಡುಕೊಂಡಿರುವ ಪರಿಹಾರಗಳ ಹಿನ್ನೆಲೆಯಲ್ಲಿ ಕನ್ನಡವೂ ಹೊಸ ಕನ್ನಡ ರೂಪಕ್ಕೆ ಸಿದ್ಧವಾಗಬೇಕು. ತಂತ್ರಜ್ಞಾನದ ಅಗತ್ಯಗಳನ್ನು ಮನಗಂಡು ನಾವು ನಮ್ಮ ಇಂದಿನ ಕನ್ನಡದ ಬರೆವಣಿಗೆಯಲ್ಲೂ ಹಲವಾರು ಬದಲಾವಣೆಗಳನ್ನು ಅಗತ್ಯವಾಗಿ ಮಾಡಿಕೊಳ್ಳಬೇಕಾಗುತ್ತದೆ. ಅಲ್ಲದೆ ಕನ್ನಡಿಗರು ತಮ್ಮ ಕನ್ನಡದಲ್ಲಿ ತಾವೇ ಮಾಡಿಕೊಳ್ಳುತ್ತಿರುವ ಸಮೂಹ ಬದಲಾವಣೆಗಳಿಗೆ ಒಪ್ಪಿಗೆಯನ್ನು ನೀಡಬೇಕಾಗುತ್ತದೆ. ಇಲ್ಲಿ ಸಮೂಹ ಬದಲಾವಣೆ ಎಂಬ ಮಾತನ್ನು ಎಚ್ಚರಿಕೆಯಿಂದ ಬಳಸಲಾಗಿದೆ. ಭಾಷೆಯಲ್ಲಿ 'ದೋಷಗಳು' ಒಬ್ಬ ವ್ಯಕ್ತಿಗೆ ಸೀಮಿತವಾಗಿರುವುದಕ್ಕೂ ಏಕಕಾಲಕ್ಕೆ ಹಲವಾರು ಜನರ ಬಳಕೆಯಲ್ಲಿ ಸಂಭವಿಸುವುದಕ್ಕೂ ಇರುವ ವ್ಯತ್ಯಾಸವನ್ನು ನಾವು ಗ್ರಹಿಸಬೇಕು. ಮೊದಲನೆಯದು ಆಕಸ್ಮಿಕವಾಗಿದ್ದು ತಿದ್ದುವಿಕೆಗೆ ಬಗ್ಗಬಹುದು. ಆದರೆ ಎರಡನೆಯದು ಭಾಷೆಯಲ್ಲೇ ಆಗುತ್ತಿರುವ ಯಾವುದೋ ಒಂದು ಬದಲಾವಣೆಯ ಸೂಚಕವಾಗಿರುತ್ತದೆ. ಹಾಗಾಗಿ ಸಮೂಹ ಬದಲಾವಣೆಗಳು ನಮಗೆ ಮುಖ್ಯ.

ಕೊನೆಗೊಂದು ಮಾತು: ಈಚೆಗೆ ಪತ್ರಿಕೆಯೊಂದರಲ್ಲಿ ಬಂದ ವರದಿಯಲ್ಲಿ ಹಿಂದಿಯ 'ಪೇಜ್ ತ್ರೀ' ಎಂಬ ಸಿನಿಮಾದಲ್ಲಿ 'ಸಮಾಜವಾದಿಗಳ ಮಿತಿಯನ್ನು ಚಿತ್ರಿಸಲಾಗಿದೆ' ಎಂದು ಹೇಳಲಾಗಿತ್ತು. ಈ ಚಿತ್ರಕ್ಕೂ ಸಮಾಜವಾದಿಗಳಿಗೂ ಏನು ಸಂಬಂಧ ಎಂದು ತಲೆಕೆಡಿಸಿಕೊಳ್ಳುವ ಪರಿಸ್ಥಿತಿ ಉಂಟಾಗಿತ್ತು. ಕೊನೆಗೆ ಆ ವರದಿಯಲ್ಲಿ ಅಡಗಿದ್ದ ನಿಜ ಸಂದೇಶವನ್ನು ಹೊರತೆಗೆಯುವುದು ಅಗತ್ಯವಾಯಿತು. ವಾಸ್ತವವಾಗಿ ಈ ವರದಿಯನ್ನು ಬರೆದ ಅಥವಾ ಅನುವಾದಿಸಿದ್ದ ವರದಿಗಾರರು ಇಂಗ್ಲಿಶಿನ 'ಸೋಸಿಯಲೈಟ್' ಮತ್ತು 'ಸೋಸಿಯಲಿಸ್ಟ್' ಪದಗಳಿಗೆ ಇರುವ ಅರ್ಥವ್ಯತ್ಯಾಸವನ್ನು ಗಮನಿಸಿರಲಿಲ್ಲ. ಸೋಸಿಯಲಿಸ್ಟ್'

ಎಂಬುದು ಬಹು ಪರಿಚಿತ ಪದ. ಕನ್ನಡದಲ್ಲಿ ಸಮಾಜವಾದಿಗಳು ಎಂದು ಅವರನ್ನು ಗುರುತಿಸುತ್ತೇವೆ. ಸೋಸಿಯಲೈಟ್ ಎಂದರೆ ತಮ್ಮ ವರ್ಗದ ಜನರೊಡನೆ ಸುಖಸಂಕಥಾ ವಿನೋದಗಳಿಗಾಗಿ ಸದಾ ಬೆರೆಯುವವರು ಎಂದರ್ಥ. ತಮ್ಮ ವರ್ಗಸಂಪರ್ಕಗಳನ್ನು ಈ ಬಗೆಯ ಪಾರ್ಟಿಗಳಲ್ಲಿ ನಿಯೋಜಿಸುವವರನ್ನು ಸೋಸಿಯಲೈಟ್ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಇದಕ್ಕೊಂದು ಪದವನ್ನು ನಾವಿನ್ನೂ ಬಳಸುತ್ತಿಲ್ಲ. ಆದರೆ ವರದಿಗಾರರು ಸಮಾಜವಾದಿಗಳಿಗೆ ಹೊಸ ವ್ಯಾಖ್ಯಾನವನ್ನೇ ನೀಡಿಬಿಟ್ಟಿದ್ದಾರಲ್ಲ.

# ವಿನಾಶದ ಅಂಚಿನಲ್ಲಿರುವ ಭಾಷೆಗಳು

ಪ್ರತಿ ವರ್ಷ ಕೊನೆಯ ಪಕ್ಷ ಹತ್ತು ಭಾಷೆಗಳು ಕಣ್ಮರೆಯಾಗುತ್ತವೆ. ಈಗ ಬಳಕೆಯಲ್ಲಿರುವ ಸರಿಸುಮಾರು ೬೦೦೦ ಭಾಷೆಗಳಲ್ಲಿ ಅರ್ಧದಷ್ಟು ನಾಶಗೊಳ್ಳುವ ಹಂತದಲ್ಲಿವೆ. ಒಂದು ಸಮೀಕ್ಷೆಯ ಪ್ರಕಾರ ೩೦೦೦ದಷ್ಟು ಭಾಷೆಗಳಿಗೆ ಸಂಬಂಧಿಸಿದಂತೆ ತಿಳಿದುಬಂದ ವಿಷಯವೆಂದರೆ ಅವುಗಳಲ್ಲಿ ಪ್ರತಿಯೊಂದರ ಸ್ವಭಾಷಿಕರ ಸಂಖ್ಯೆ ೧೦,೦೦೦ವನ್ನು ದಾಟುವುದಿಲ್ಲ. ಭಾಷಾಶಾಸ್ತ್ರಜ್ಞರ ಪ್ರಕಾರ ಯಾವುದೇ ಭಾಷೆಯನ್ನು ಆಡುವವರ ಸಂಖ್ಯೆ ೧೦೦,೦೦೦ಕ್ಕಿಂತ ಕಡಿಮೆ ಇದ್ದರೆ ಆ ಭಾಷೆಗೆ ಒಂದಲ್ಲ ಒಂದು ಬಗೆಯ ಕುತ್ತು ಬಂದೊದಗಲಿದೆಯೆಂದೇ ಅರ್ಥ.

ಭಾಷೆಗಳು ಕಣ್ಮರೆಯಾಗುವುದು ಹೊಸ ವಿಷಯವಲ್ಲ. ಎಂದಿನಿಂದಲೂ ಭಾಷೆಗಳು ನಾಶವಾಗುತ್ತಲೇ ಇವೆ. ಸುಮಾರು ೩೦,೦೦೦ ಭಾಷೆಗಳು ಈವರೆಗೆ ಪ್ರಪಂಚದಿಂದ ಕಣ್ಮರೆಯಾಗಿವೆ. ಎಲ್ಲೋ ಕೆಲವು ಭಾಷೆಗಳು ಮಾತ್ರ ೨೦೦೦ ವರ್ಷಗಳಿಗೂ ಅಧಿಕ ಕಾಲದಿಂದಲೂ ಬಳಕೆಯಾಗುತ್ತಲೇ ಬಂದಿವೆ. ಆದರೆ ಈಗ ಭಾಷೆಗಳು ಕಳೆದುಹೋಗುತ್ತಿರುವ ವೇಗ ಗಾಬರಿಯನ್ನುಂಟುಮಾಡುತ್ತದೆ. ಇದಕ್ಕೆ ಹಲವು ಕಾರಣಗಳಿವೆ. ವಸಾಹತುಶಾಹಿಯ ವಿಜಯಗಳಿಂದಾಗಿ ಮತ್ತು ಅವುಗಳ ಆಡಳಿತಗಳಿಂದಾಗಿ ಆ ಅವಧಿಯಲ್ಲಿ ಬಳಕೆಯ ಭಾಷೆಗಳಲ್ಲಿ ಪ್ರತಿಶತ ೧೫ರಷ್ಟು ಕಣ್ಮರೆಯಾದವು. ೧೬ನೆಯ ಶತಮಾನದಿಂದ ಈಚೆಗೆ ರಾಷ್ಟ್ರಗಳು ರಚನೆಯಾಗುತ್ತಾ ಬಂದಂದಿನಿಂದ ಅವುಗಳು ಒಂದು ಪ್ರಧಾನ ಭಾಷೆಯನ್ನು ತನ್ನ ಚಹರೆಯ ಭಾಗವನ್ನಾಗಿ ಮಾಡಿಕೊಂಡು ತನ್ನ ಭೌಗೋಳಿಕ ವಲಯದಲ್ಲಿದ್ದ ಇತರ ಭಾಷೆಗಳನ್ನು ಅಂಚಿನ ಅಸ್ತಿತ್ವಕ್ಕೆ ತಳ್ಳಿವೆ.

ಈಚಿನ ದಿನಮಾನಗಳಲ್ಲಿ ಮಾರುಕಟ್ಟೆಯು ಅಂತಾರಾಷ್ಟ್ರೀಯ ಮಟ್ಟದಲ್ಲಿ ವ್ಯಾಪ್ತಿಯನ್ನು ಪಡೆದುಕೊಳ್ಳುತ್ತಿದೆ. ವಿದ್ಯುನ್ಮಾನ ಸಂಪರ್ಕ ಮಾಧ್ಯಮಗಳು ವಿಪುಲವಾಗಿ ವ್ಯಾಪಿಸುತ್ತಿವೆ. ಇದರಿಂದಲೂ ಭಾಷೆಗಳು ನಾಶವಾಗುವ ವೇಗ ಕೂಡ ಹೆಚ್ಚಾಗುತ್ತಿದೆ. ಉದಾಹರಣೆಗೆ ಜಗತ್ತಿನಲ್ಲಿ ಇಂಗ್ಲಿಶ್ ಭಾಷೆಯನ್ನು ಬಳಸುವ ಜನರ ಸಂಖ್ಯೆ ಪ್ರತಿಶತ ೨೦. ಆದರೆ ಅಂತರ್ಜಾಲದ ಪ್ರತಿಶತ ೬೮ ಜಾಲತಾಣಗಳು ಇಂಗ್ಲಿಶ್‌ನಲ್ಲಿವೆ. ನಾವೀಗ ಸುಮ್ಮನೆ ಏನೂ ಕ್ರಮಗೊಳ್ಳದಿದ್ದರೆ ಮುಂದಿನ ಒಂದು ಶತಮಾನದಲ್ಲಿ ಈಗ ಬಳಕೆಯಲ್ಲಿರುವ ಅರ್ಧದಷ್ಟು ಭಾಷೆಗಳು ಇಲ್ಲವಾಗುತ್ತವೆ. ಇದು ಅತ್ಯಂತ ಗಂಭೀರವಾದ

ಸನ್ನಿವೇಶ. ಒಂದು ಭಾಷೆಯನ್ನಾಡುವವರಲ್ಲಿ ಕೊನೆಯ ವ್ಯಕ್ತಿ ಮೃತನಾದರೆ ಆ ಭಾಷೆಯನ್ನು ಮರಳಿ ಪುನರುಜ್ಜೀವಿಸುವುದು ಅಸಾಧ್ಯ. ೧೯೮೦ರ ಸುಮಾರಿನಲ್ಲಿ ಜಪಾನಿನ ಹೊಕ್ಕೈಡೊ ದ್ವೀಪದಲ್ಲಿ ಐನು ಎಂಬ ಭಾಷೆಯನ್ನು ಆಡುವವರ ಸಂಖ್ಯೆ ಕೇವಲ ಎಂಟು ಮಾತ್ರ ಇದ್ದಿತು. ಆದರೆ ಆ ದೇಶ ನಡೆಸಿದ ವಿಶೇಷ ಯತ್ನದಿಂದಾಗಿ ಈಗ ಆ ಭಾಷೆ ಉಳಿದುಕೊಂಡಿದೆ.

ಯುನೆಸ್ಕೋ ಸಾಂಸ್ಕೃತಿಕ ವೈವಿಧ್ಯವನ್ನು ಕುರಿತಂತೆ ಮಾಡಿರುವ ಘೋಷಣೆಯಲ್ಲಿ ಭಾಷೆಗಳಿಗೆ ಹೆಚ್ಚಿನ ಮಹತ್ವವನ್ನು ನೀಡಲಾಗಿದೆ. ಜಗತ್ತಿನ ಹಲವು ಭಾಷೆಗಳನ್ನು ಈ ತಿಳುವಳಿಕೆಯಲ್ಲಿ ಉಳಿಸಿಕೊಳ್ಳುವ ವಿಶೇಷ ಯತ್ನಗಳು ಈಗ ಮೊದಲಾಗಿದೆ.

ಈ ಘೋಷಣೆಯಲ್ಲಿರುವ ಮೂರು ಮುಖ್ಯ ಅಂಶಗಳು ಹೀಗಿವೆ

೧. ಶಿಕ್ಷಣದ ಗುಣಮಟ್ಟವನ್ನು ಹೆಚ್ಚಿಸಲು ತಾಯ್ನುಡಿಯ ಮೂಲಕ ಕಲಿಯುವ ಅವಕಾಶವನ್ನು ಕಲ್ಪಿಸುವುದು.

೨. ಭಾಷಿಕ ಬಹುತ್ವವನ್ನುಳ್ಳ ಸಮುದಾಯಗಳ ಒಳಿತಿಗಾಗಿ ಮತ್ತು ಸಾಮಾಜಿಕ ಲಿಂಗ ಸಂಬಂಧೀ ಸಮಾನತೆಯನ್ನು ಸಾಧ್ಯವಾಗಿಸಲು ದ್ವಿಭಾಷಿಕ ಬಹುಭಾಷಿಕ ಶಿಕ್ಷಣವನ್ನು ಜಾರಿಗೆ ತರುವುದು.

೩. ಸಮುದಾಯ ಶಿಕ್ಷಣದಲ್ಲಿ ಭಾಷೆಗೆ ಈವರೆಗೆ ಸಿಗದಿರುವ ಮಹತ್ವವನ್ನು ದೊರಕಿಕೊಡುವುದು.

ಡ್ರಾಯಿಂಗ್ ಬರಬೇಕು

ನಮ್ಮೊಡನೆ ನಮ್ಮ ನುಡಿಯಲ್ಲಿದೆ

# ತಾಯ್ನುಡಿಯ ಅಳಿವು ಉಳಿವು

ತಾಯ್ನುಡಿ ಎಂಬ ಮಾತನ್ನು ಬಳಸಲು ಹಲವು ಬಗೆಯ ಸಂಕೋಚಗಳಿವೆ. ಪೊಲಿಟಿಕಲಿ ಕರೆಕ್ಟ್ ಆಗಬೇಕೆನ್ನುವವರು ತಾಯ್ನುಡಿ ಎಂಬುದು ಅಂಧಾಭಿಮಾನದ ಮಾತು ಎಂದು ತಿಳಿಯುತ್ತಾರೆ. ಅಥವಾ ಅದರ ಅರ್ಥವನ್ನು ಕೆಲವು ನೆಲೆಗಳಲ್ಲಿ ಸೀಮಿತಗೊಳಿಸಬೇಕೆನ್ನುತ್ತಾರೆ. ತಾಯ್ನುಡಿ ಎಂದರೆ ಮನೆಮಾತು ಎಂದು, ಪ್ರಾದೇಶಿಕ ಭಾಷೆ ಎಂದು, ಆಡಳಿತ ಭಾಷೆ ಎಂದು, ಅಧಿಕಾರದ ಭಾಷೆ ಎಂದು ವ್ಯಾಖ್ಯಾನಿಸುವುದುಂಟು. ನಮ್ಮ ಮೂಗಿನ ನೇರಕ್ಕೆ ಮಾತುಗಳನ್ನು ಬಳಸುವುದರಿಂದ ಹೀಗೆಲ್ಲ ಗೊಂದಲಗಳು ಸೃಷ್ಟಿಯಾಗುತ್ತಿವೆ. ಜಗತ್ತಿನಾದ್ಯಂತ ಏನಾಗುತ್ತಿದೆ? ಜೀವ ವೈವಿಧ್ಯಕ್ಕೆ ಧಕ್ಕೆ ಒದಗುತ್ತಿರುವ ಗಳಿಗೆಯಲ್ಲಿ ಭಾಷಾವೈವಿಧ್ಯಕ್ಕೂ ಆಘಾತ ಉಂಟಾಗುತ್ತಿದೆ. ಕೆಲವೇ ಭಾಷೆಗಳ ಒತ್ತಾಯಕ್ಕೆ ಮಣಿದು ನೂರಾರು ಭಾಷೆಗಳು ಬಳಕೆಯ ನೆಲೆಯಿಂದ ಸರಿದು ನಿರ್ನಾಮವಾಗುತ್ತಿವೆ. ಈ ಭಾಷಾನಿರ್ನಾಮವನ್ನು ನಾಗರಿಕತೆಯ ಅನಿವಾರ್ಯ ಸಂಗತಿ ಎಂದು ತಿಳಿಯುವವರೂ ಇದ್ದಾರೆ. ಒಂದು ಭಾಷೆಯನ್ನು ಆಡುವ ಜನರು ಅವರ ಭಾಷೆಯನ್ನು ಕಳೆದುಕೊಂಡರೆ ಏನಂತೆ ಇನ್ನೊಂದು ಭಾಷೆಯನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಾರಷ್ಟೆ, ಇದರಿಂದ ಅವರಿಗೆ ಆಗುವ ತೊಂದರೆ ಏನು ಎಂಬ ಪ್ರಶ್ನೆಯನ್ನು ನಮ್ಮ ಮುಂದೆ ಇಡುತ್ತಾರೆ. ಭಾಷೆ ಮತ್ತು ಸಮುದಾಯಗಳ ನಡುವೆ ಇರುವ ಸಂಬಂಧದ ಸೂಕ್ಷ್ಮಗಳನ್ನು ಅರಿಯದವರು ಮಾತ್ರ ಇಂತಹ ತರ್ಕಗಳನ್ನು ಮುಂದಿಡಲು ಸಾಧ್ಯ.

ಭಾಷೆಯನ್ನು ಕಳೆದುಕೊಳ್ಳುವ ಸಂದರ್ಭಗಳು ಎಲ್ಲಿ ರೂಪುಗೊಳ್ಳುತ್ತವೆ ಎನ್ನುವುದನ್ನು ಗಮನಿಸೋಣ. 1. ಶಿಕ್ಷಣ: ಶಾಲೆಗಳಲ್ಲಿ ಮಕ್ಕಳು ಪಡೆಯುವ ಶಿಕ್ಷಣದಿಂದ ಜಗತ್ತಿನ ನೂರಾರು ಭಾಷೆಗಳು ಕಳೆದುಹೋಗುವ, ನಾಶವಾಗುವ ಹಂತಕ್ಕೆ ಬಂದಿವೆ ಎನ್ನುವುದು ವಿಪರ್ಯಾಸದ ಸಂಗತಿ. ರಾಷ್ಟ್ರಗಳು ಹಲವಾರು ಭಾಷಾಸಮುದಾಯಗಳನ್ನು ಒಳಗೊಂಡಿರುತ್ತವೆ. ಆದರೆ ರಾಷ್ಟ್ರ ಯಾವುದಾದರೊಂದು ಅಥವಾ ಎರಡು ಭಾಷೆಗಳನ್ನು ಮಾತ್ರ ಶಿಕ್ಷಣವಲಯದಲ್ಲಿ ಮುಖ್ಯವೆಂದು ಪರಿಗಣಿಸುತ್ತದೆ. ಇದರ ಪರಿಣಾಮವಾಗಿ ಉಳಿದ ಹಲವಾರು ಭಾಷೆಗಳು ತಮ್ಮ ಮಹತ್ವವನ್ನು ಕಳೆದುಕೊಳ್ಳುತ್ತಿವೆ. ರಾಷ್ಟ್ರಗಳು ಉದಯವಾಗಿ ನೆಲೆಗೊಂಡ ಮೇಲೆ ಈ ಸಮಸ್ಯೆ ಇನ್ನಷ್ಟು ಉಲ್ಬಣಗೊಂಡಿದೆ. ಏಕೆಂದರೆ ರಾಷ್ಟ್ರಗಳ ವ್ಯಾಖ್ಯೆಯಲ್ಲಿ ಅವುಗಳ ಚಹರೆಯನ್ನು ಹೇಳುವ ಒಂದು ಭಾಷೆ ಇರಬೇಕೆಂದಿದೆ. ಒಂದಕ್ಕಿಂತ ಹೆಚ್ಚು ಭಾಷೆಗಳಿದ್ದರೆ ಅವುಗಳಲ್ಲಿ ಪ್ರಧಾನ ಮತ್ತು ಅಪ್ರಧಾನವೆಂಬ

ವಿಭಜನೆ ಅಗತ್ಯವಾಗುತ್ತದೆ. ಇದರಿಂದಾಗಿಯೂ ಜಗತ್ತಿನ ಹಲವಾರು ಭಾಷೆಗಳು ಮುಂಚೂಣಿಯಿಂದ ಹಿಂದೆ ಸರಿಯುವುದು ಅನಿವಾರ್ಯವಾಗುತ್ತಿದೆ.

ಜಗತ್ತಿನ ಭಾಷೆಗಳ ಪ್ರಸಾರ ಮತ್ತು ಹಂಚಿಕೆಯನ್ನು ಕುರಿತು ಕೆಲವು ಮಾಹಿತಿಗಳು ಈ ಕೆಳಕಂಡಂತೆ ಇವೆ. ಈಗ ಭಾಷೆಗಳ ಸಂಖ್ಯೆಯ ಬಗೆಗೆ ಅಧಿಕೃತ ಮಾಹಿತಿಯನ್ನು ಸಂಗ್ರಹಿಸುತ್ತಿರುವ ಎತ್ನೋಲಾಗ್ ಎಂಬ ಸಂಸ್ಥೆಯು ನೀಡುತ್ತಿರುವ ಮಾಹಿತಿಯ ಪ್ರಕಾರ ಈಗ ಜಗತ್ತಿನಲ್ಲಿ 6,703 ಭಾಷೆಗಳಿವೆ. ಇವುಗಳಲ್ಲಿ ಶೇ. 32 ಭಾಷೆಗಳನ್ನಾಡುವವರು ಏಷಿಯಾದಲ್ಲಿದ್ದಾರೆ. ಶೇ. 30 ಭಾಷೆಗಳನ್ನಾಡುವವರು ಆಫ್ರಿಕಾ ಖಂಡದಲ್ಲಿದ್ದಾರೆ. ಪೆಸಿಫಿಕ್ ದ್ವೀಪ ಪ್ರದೇಶಗಳಲ್ಲಿ ಶೇ. 15 ಭಾಷೆಗಳನ್ನಾಡುವವರಿದ್ದಾರೆ ಆದರೆ ಯುರೋಪಿನಲ್ಲಿ ಈ ಭಾಷೆಗಳಲ್ಲಿ ಶೇ.3 ಭಾಷೆಗಳನ್ನಾಡುವವರು ಮಾತ್ರ ಇದ್ದಾರೆ. ಜನಸಂಖ್ಯೆಯ ಪ್ರಮಾಣಕ್ಕನುಗುಣವಾಗಿ ಈ ಭಾಷೆಗಳ ಪ್ರಸಾರವನ್ನು ಕೊಂಚ ಗಮನಿಸೋಣ. ಇವುಗಳಲ್ಲಿ 50ರಷ್ಟು ಭಾಷೆಗಳನ್ನು ಬಳಸುವವರ ಸಂಖ್ಯೆ ಪ್ರತಿಭಾಷೆಗೂ 10,000ವನ್ನು ಮಿಕ್ಕುವುದಿಲ್ಲ. ಇವುಗಳಲ್ಲೂ ಅರ್ಧದಷ್ಟು ಭಾಷೆಗಳನ್ನಾಡುವವರ ಸಂಖ್ಯೆ ಪ್ರತಿಭಾಷೆಗೂ 1,000ವನ್ನು ದಾಟುವುದಿಲ್ಲ. ಆದರೆ ಇಷ್ಟೂ ಭಾಷೆಗಳನ್ನು ಬಳಸುವವರ ಒಟ್ಟು ಸಂಖ್ಯೆ ಪ್ರಪಂಚದ ಜನಸಂಖ್ಯೆಯಲ್ಲಿ ಶೇ. 1 ಕೂಡ ಇಲ್ಲ. ಅಂದರೆ ಸುಮಾರು 80ಲಕ್ಷ ಜನರು ಇಷ್ಟೆಲ್ಲ ಭಾಷೆಗಳನ್ನು ಬಳಸುತ್ತಿದ್ದಾರೆ.

ಇನ್ನೊಂದು ಕಡೆ ಜಗತ್ತಿನ ಉಳಿದ ಅರ್ಧದಷ್ಟು ಭಾಷೆಗಳಲ್ಲಿ ಕೇವಲ 300ಕ್ಕೂ ಕಡಿಮೆ ಭಾಷೆಗಳನ್ನಾಡುವವರ ಸಂಖ್ಯೆ ಪ್ರತಿಭಾಷೆಗೂ 1,000,000 ದಷ್ಟಿದೆ. ಅಂದರೆ ಸುಮಾರು ಒಟ್ಟು ಜನಸಂಖ್ಯೆಯ 95 ಜನ ಈ ಭಾಷೆಗಳನ್ನಾಡುತ್ತಿದ್ದಾರೆ. ಅದರಲ್ಲೂ ಕೇವಲ ಹತ್ತು ಭಾಷೆಗಳನ್ನಾಡುವವರ ಸಂಖ್ಯೆ ಪ್ರತಿಶತ 50ರಷ್ಟಿದೆ.

ದಶಕಗಳು ಕಳೆದಂತೆ ಈ ಪರಿಸ್ಥಿತಿ ಇನ್ನೂ ಬಿಗಡಾಯಿಸುತ್ತಿದೆ. ಮುಖ್ಯಧಾರೆಗೆ ಸೇರುವ ಒತ್ತಾಯ ಬಹುಸಂಖ್ಯೆಯ ಭಾಷೆಗಳನ್ನಾಡುತ್ತಿರುವ ಆದರೆ ರಾಜಕೀಯವಾಗಿ ಅಲ್ಪಸಂಖ್ಯಾತರಾಗಿರುವ ಜನರ ಮೇಲೆ ಎಷ್ಟಿದೆಯೆಂದರೆ ಕಳೆದ ಐದುನೂರು ವರ್ಷಗಳಲ್ಲಿ ಜಗತ್ತಿನ ಹಲವಾರು ಭಾಷಿಕ ಸಮುದಾಯಗಳು ತಮ್ಮ ಭಾಷೆಯನ್ನು ಕಳೆದುಕೊಂಡು ಪ್ರಭಾವಶಾಲಿ ಭಾಷೆಗಳನ್ನಾಡುವ ಸಮುದಾಯಗಳಾಗಿ ಪರಿವರ್ತನೆಗೊಂಡಿವೆ. ಹೀಗೆ ಈ ಅವಧಿಯಲ್ಲಿ ಕಳೆದು ಹೋದ ಭಾಷೆಗಳ ಸಂಖ್ಯೆ ಸುಮಾರು ಶೇ. 15 ಎಂದು ಊಹಿಸಲಾಗಿದೆ. ಅಮೆರಿಕಾ ಸಂಯುಕ್ತ ಸಂಸ್ಥಾನಗಳು ಮತ್ತು ಆಸ್ಟ್ರೇಲಿಯಾದಲ್ಲೂ ಬಹುಪಾಲು ಭಾಷೆಗಳು ಕಳೆದುಹೋಗಿದ್ದು ಈಗಲೂ ಈ ಎರಡು ರಾಷ್ಟ್ರಗಳು ಭಾಷೆಗಳನ್ನು ಅಳಿಸುವ ಕೆಲಸದಲ್ಲಿ ಮುಂಚೂಣಿಯಲ್ಲಿವೆ.

ಕೆಲವರು ಈ ಭಾಷಾವಿನಾಶವನ್ನು ನಾಗರಿಕತೆಯ ಒಂದು ಅನಿವಾರ್ಯವಾದ ಸಂಭವ ಎಂದು ವಾದಿಸುವುದುಂಟು. ಜಗತ್ತಿನಲ್ಲಿ ಸ್ಥಿರತೆ ಮತ್ತು ಸಂವಹನ ಸುಭಗತೆಗಳು ಸಾಧ್ಯವಾಗಲು ಮಾನವ ಸಮುದಾಯಗಳು ಈ ಬೆಲೆಯನ್ನು ಅನಿವಾರ್ಯವಾಗಿ ತೆರಲೇಬೇಕು ಎಂದು ಹೇಳುವುದುಂಟು. ಅಂಚಿನ ಸಮುದಾಯಗಳು ಜಾಗತಿಕವಾಗಿ

ತಮ್ಮ ಚಹರೆಗಳನ್ನು ಉಳಿಸಿಕೊಂಡು ಸಂಪರ್ಕ ಸಾಧಿಸಲು ಹೀಗೆ ಜಾಗತಿಕ ವ್ಯಾಪಕತೆಯನ್ನು ಹೊಂದಿರುವ ಭಾಷೆಗಳ ಬಳಕೆದಾರರಾಗಿ ಬದಲಾಗುವುದು ಒಂದು ಸಹಜ ಪ್ರಕ್ರಿಯೆ ಎಂದು ತಿಳಿಯಲಾಗುತ್ತಿದೆ. ಜಾಗತೀಕರಣದಲ್ಲಿ ಈ ದಿನಮಾನಗಳಲ್ಲಿ ಈ ಬಗೆಯ ಚಿಂತನೆಗೆ ಹೆಚ್ಚು ಚಲಾವಣೆ ಸಿಗುವುದು ಸಹಜ. ಆದರೆ ಕೆಲವು ವಿಶಿಷ್ಟ ಸಂಗತಿಗಳನ್ನು ಗಮನಿಸಿದರೆ ಇದಕ್ಕಿಂತ ಭಿನ್ನವಾಗಿ ಆಲೋಚಿಸುವುದು ಅಗತ್ಯವೆಂದು ತೋರುತ್ತದೆ. ಜಗತ್ತಿನಲ್ಲಿ 'ಮಹಾನ್ ವೈವಿಧ್ಯ'ವುಳ್ಳ ಹನ್ನೆರಡು ರಾಷ್ಟ್ರಗಳನ್ನು ಗುರುತಿಸಲಾಗಿದೆ. ಈ ವೈವಿಧ್ಯವು ಜೀವರಾಶಿಯ ಅಗಣಿತ ಮಾದರಿಗಳು ಈ ದೇಶಗಳಲ್ಲಿ ವ್ಯಾಪಿಸಿವೆ ಎಂಬ ವಸ್ತುಸ್ಥಿತಿಯನ್ನು ಅವಲಂಬಿಸಿದೆ. ಈ ಹನ್ನೆರಡು ಭೂಪ್ರದೇಶಗಳಲ್ಲಿ ಹತ್ತು ಭೂ ಪ್ರದೇಶಗಳು ಮಾನವ ಭಾಷೆಗಳ ಅಗಣಿತ ವೈವಿಧ್ಯವನ್ನು ಕಾಯ್ದುಕೊಂಡಿದೆ. ಅಂದರೆ ಜಗತ್ತಿನ ಬಹುಪಾಲು ಭಾಷೆಗಳು ಈ ಹತ್ತು ದೇಶಗಳಲ್ಲೇ ಇವೆ. ಆಸ್ಟ್ರೇಲಿಯಾ, ಬ್ರೆಜಿಲ್, ಚೀನಾ, ಕೊಲಂಬಿಯಾ, ಇಂಡಿಯಾ, ಮೆಕ್ಸಿಕೋ, ಜೈರೆ, ಪೆರು, ಮಲೇಶಿಯಾ, ಇಂಡೋನೇಶಿಯಾ ಇವೇ ಆ ಹತ್ತು ದೇಶಗಳು. ಸುಮಾರು ಪ್ರತಿಶತ 83ರಷ್ಟು ಭಾಷೆಗಳು ಈ ನಾಡುಗಳಲ್ಲಿವೆ. ಈ ಎಷ್ಟೋ ಭಾಷೆಗಳು ಈ ನಾಡುಗಳ ಗಡಿಯನ್ನು ದಾಟಿ ಬೇರೆಲ್ಲೂ ಕೇಳಿಬರುವುದಿಲ್ಲ. ಅವುಗಳನ್ನು ಬಳಸುವವರು ಈ ಭೂಪ್ರದೇಶಗಳ ಯಾವುದೋ ಮೂಲೆ ಮುಡುಕುಗಳಲ್ಲಿ ಜೀವಿಸುತ್ತಿದ್ದಾರೆ. ಅಂದರೆ ಜೀವ ವೈವಿಧ್ಯಕ್ಕೂ ಭಾಷಾವಿಪುಲತೆಗೂ ಇರುವ ಸಂಬಂಧ ಕೇವಲ ಆಕಸ್ಮಿಕವಾದುದಲ್ಲ ಎಂದಾಯ್ತು. ಇನ್ನೂ ಹೆಚ್ಚಿನ ಹಲವು ಮಾಹಿತಿಗಳು ಈಗ ನಮಗೆ ಲಭ್ಯವಿದೆ. ಈ ಭೂಪರಿಸರ ವೈವಿಧ್ಯ ಅಧಿಕವಾಗುಳ್ಳ ನಾಡುಗಳಲ್ಲಿರುವ ಬಹುಸಮುದಾಯಗಳು ಭಾಷಿಕ ವೈವಿಧ್ಯವನ್ನು ಕಾಯ್ದುಕೊಳ್ಳಲು ಅನುಕೂಲವಾಗುವ ರೀತಿಯಲ್ಲಿ ಪ್ರಾಕೃತಿಕ ಸನ್ನಿವೇಶಗಳು ನಿರ್ಮಾಣವಾಗಿವೆ. ನದಿಗಳು, ಬೆಟ್ಟಗಳು, ದ್ವೀಪಗಳು, ಕಣಿವೆಗಳು, ಭಿನ್ನ ಸ್ತರದ ನೆಲೆಗಳು ಜನ ಸಮುದಾಯಗಳು ತಂತಮ್ಮ ಸೀಮಿತ ಆದರೆ ಸ್ವಯಂಪೂರ್ಣ ಪರಿಸರಗಳಲ್ಲಿ ತಮ್ಮ ಜೀವನ ಕೇಂದ್ರಗಳನ್ನು ರೂಪಿಸಿಕೊಳ್ಳುವ ಒತ್ತಾಯಗಳನ್ನು ರೂಪಿಸಿವೆ. ಅವರ ಭಾಷೆಗಳು ಈ ಸ್ವಯಂಪೂರ್ಣತೆ ಮತ್ತು ಪರಿಸರ ಬದ್ಧತೆಗಳನ್ನು ಬಿಂಬಿಸುವ ರೀತಿಯಲ್ಲಿ ಬೆಳೆದಿವೆ. ಹೀಗಾಗಿ ಜೀವವೈವಿಧ್ಯಕ್ಕೂ ಭಾಷಾವೈವಿಧ್ಯಕ್ಕೂ ನಿಕಟವಾದ ಬಿಡಿಸಲಾಗದ ನಂಟು ರೂಪುಗೊಂಡಿದೆ ಎಂಬುದು ಕೇವಲ ರೋಮಾಂಚನದ ಮಾತಲ್ಲ. ಮಾನವ ಜೀವನದ ಒಂದು ಕಟು ವಾಸ್ತವವಾಗಿದೆ ಇದು. ಹೀಗಿರುವಾಗ ಜೀವವೈವಿಧ್ಯಗಳ ವಿನಾಶ ಮತ್ತು ಭಾಷಾವೈವಿಧ್ಯಗಳ ವಿನಾಶಗಳ ನಡುವೆ ಸಂಬಂಧವಿದೆ ಅಥವಾ ಈ ಎರಡೂ ಪ್ರಕ್ರಿಯೆಗಳನ್ನು ಪರಸ್ಪರ ಸಂಬಂಧವಿಲ್ಲದ ಸಂಗತಿಗಳು ಎಂದು ತಿಳಿಯಬೇಕೇ?

# ಭಾಷೆ ಯಾರ ಸ್ವತ್ತು?

ಈಚೆಗೆ ಹಿರಿಯರೊಬ್ಬರು ಕೇಳಿದ ಪ್ರಶ್ನೆಯಿದು: 'ಭಾಷೆ ಯಾರ ಸ್ವತ್ತು?' ಇದೊಂದು ಕಾಡಿಸುವ ಪ್ರಶ್ನೆಯೆಂದು ಮೇಲು ನೋಟಕ್ಕೆ ಅನ್ನಿಸುವುದಿಲ್ಲ. ಕನ್ನಡ ಯಾರಿಗೆ ಸೇರಿದ್ದು ಎಂದು ಕೇಳಿದರೆ, ಅದು ಆ ಭಾಷೆಯನ್ನು ಬಳಸುವ ಎಲ್ಲರಿಗೂ ಸೇರಿದ್ದು ಎಂದು ಉತ್ತರ ಕೊಡುತ್ತೇವೆ. ಆದರೆ ಈ ಭಾಷೆಯನ್ನು ಈ ಹಿಂದೆಯೂ ಆಡಿದವರಿದ್ದರೆ, ಮುಂದೆ ಆಡುವವರೂ ಇದ್ದಾರೆ. ಅಂದರೆ ಕನ್ನಡ ಅವರೆಲ್ಲರಿಗೂ ಸೇರಿದ್ದು ಎಂದು ಹೇಳಬೇಕಾಗುತ್ತದೆ. ಯಾವುದೇ ಸ್ವತ್ತನ್ನು ನನಗೆ ಸೇರಿದ್ದು, ಕೆಲವರಿಗೆ ಸೇರಿದ್ದು ಇಲ್ಲವೇ ಎಲ್ಲರಿಗೂ ಸೇರಿದ್ದು ಎಂದು ಬಗೆಬಗೆಯಾಗಿ ನೋಡುತ್ತೇವೆ. ಸ್ವತ್ತು ಯಾರಿಗೆ ಸೇರಿದ್ದು ಎನ್ನುವುದನ್ನು ಅವಲಂಬಿಸಿ ಅದನ್ನು ಯಾರು ಹೇಗೆ ಬಳಸಬೇಕು ಮತ್ತು ಅದರ ಫಲವನ್ನು ಉಣ್ಣಬೇಕು ಎಂಬುದನ್ನು ನಿರ್ಧರಿಸುತ್ತೇವೆ. ಅದನ್ನು ಬಹುಮಟ್ಟಿಗೆ ಒಪ್ಪಿ ಆಚರಿಸುತ್ತೇವೆ. ಈ ಒಪ್ಪಂದವನ್ನು ಮೀರಿದ ಪ್ರಸಂಗಗಳು ತಿಕ್ಕಾಟಗಳಿಗೆ, ಕಾನೂನು ಸಮರಗಳಿಗೆ ಕಾರಣವಾಗುತ್ತವೆ. ಹಾಗಿದ್ದಲ್ಲಿ ಭಾಷೆ ಎನ್ನುವ ಎಲ್ಲರಿಗೆ ಸೇರಿದ ಸ್ವತ್ತಿನ ನಿರ್ವಹಣೆ ಹೇಗೆ ಆಗುತ್ತಿದೆ?

ಎಲ್ಲರಿಗೆ ಸೇರಿದ ಸ್ವತ್ತನ್ನು ಎಲ್ಲರೂ ಬಳಸದೇ ಇರಬಹುದು. ಬಳಸುವವರೂ ಕೂಡ ಬಳಸುವ ಪ್ರಮಾಣದಲ್ಲಿ ಏರುಪೇರುಗಳಿರುತ್ತವೆ. ಊರೊಟ್ಟಿನ ಮೈದಾನವೊಂದನ್ನು ಕೆಲವರು ಆಟ ಆಡಲು ಬಳಸಿಯಾರು. ಮತ್ತೆ ಕೆಲವರು ಹಾದು ಹೋಗುವ ದಾರಿ ಅದರ ನಡುವೆ ಇದ್ದೀತು. ಕೆಲವರು ತಿರುಗಾಡಿ ಬಂದಾರು. ಮತ್ತೆ ಕೆಲವರು ಎಂದೂ ಅದರೆಡೆಗೆ ತಲೆಹಾಕದೆಯೂ ಇದ್ದುಬಿಡುತ್ತಾರೆ. ಆದರೆ ಇದರಿಂದ ಆ ಮೈದಾನ ಊರೊಟ್ಟಿನದು ಎಂಬುದಕ್ಕೆ ಧಕ್ಕೆಯೇನೂ ಇಲ್ಲ. ಅದನ್ನು ಕೆಲವರು ತಮ್ಮದನ್ನಾಗಿ ಮಾಡಿಕೊಂಡು ಬೇರೆಯವರ ಬಳಕೆಗೆ ಸಿಗದಂತೆ ಮಾಡಿದಾಗ ತಕರಾರುಗಳು ಹುಟ್ಟಿಕೊಳ್ಳುತ್ತವೆ. ಇಲ್ಲವೇ ಆ ಮೈದಾನವನ್ನು ಯಾವಾಗ ಯಾರು ಮತ್ತು ಏಕೆ ಬಳಸಬೇಕು ಎಂಬುದನ್ನು ಕುರಿತು ಒಮ್ಮುಖದ ನಿರ್ಧಾರಗಳನ್ನು ತೆಗೆದುಕೊಂಡಾಗಲೂ ಗೊಂದಲಗಳು ಉಂಟಾಗುತ್ತವೆ.

ಭಾಷೆ ಎಲ್ಲರಿಗೆ ಸೇರಿದ ಸ್ವತ್ತು ಎಂದರೂ ಅದು ಇತರ ಸ್ವತ್ತುಗಳ ಹಾಗೆ ಇರುವಂತೆ ತೋರುತ್ತಿಲ್ಲ. ಏಕೆಂದರೆ ಅದಕ್ಕೆ ಎಲ್ಲರೂ ನೋಡಬಹುದಾದ ಗ್ರಹಿಸಬಹುದಾದ

ಹೊರ ನೆಲೆಯೊಂದು ಇಲ್ಲ. ನಾವು ಆಡುವ ಇಲ್ಲವೇ ಕೇಳುವ ಮಾತುಗಳೆಲ್ಲ ಆ ಸ್ವತ್ತಿನ ಫಲಿತಗಳೇ ಹೊರತು ಆ ಮಾತುಗಳೇ ಸ್ವತ್ತುಗಳಲ್ಲ. ಹಾಗಾಗಿ ಎಲ್ಲರಿಗೂ ಸೇರಿದ ಭಾಷೆಯೆಂಬ ಸ್ವತ್ತಿನ ದುರುಪಯೋಗ, ಅತಿಕ್ರಮಣಗಳು ನಡೆಯುತ್ತಿವೆಯೇ ಎನ್ನುವುದನ್ನು ಸುಲಭವಾಗಿ ಗುರುತಿಸಲು ಆಗುವುದಿಲ್ಲ. ನಮಗೆ ಗೊತ್ತಿಲ್ಲದಂತೆ ಎಲ್ಲರಿಗೂ ಸೇರಿದ ಸ್ವತ್ತಿನ ಮೇಲಿನ ಹಿಡಿತ ಕೆಲವರ ಕೈಸೇರಿರಲೂ ಬಹುದು. ಅದು ಹಾಗಾಗಿದೆ ಎನ್ನುವುದು ನಮಗೆ ಗೊತ್ತಾಗದೆಯೂ ಇರಬಹುದು.

ಎಲ್ಲರಿಗೂ ಸೇರಿದ ಸ್ವತ್ತುಗಳಾದ ನೆಲ ಮತ್ತು ನೀರು ಈಗ ಎಲ್ಲರಿಗೂ ಸೇರಿದ ಸ್ವತ್ತುಗಳಾಗಿ ಉಳಿದಿಲ್ಲ. ನೆಲ ಮತ್ತು ನೆಲಕ್ಕೆ ಸೇರಿದ ಪ್ರತಿಯೊಂದೂ ಈಗ ಕೆಲವರ ಕೈಸೇರಿದೆ. ಇಲ್ಲವೇ ಕೆಲವರು ಅದರ ಬಳಕೆ ಹೇಗಾಗಬೇಕೆಂದು ತೀರ್ಮಾನಿಸುತ್ತಿದ್ದಾರೆ. ನೀರಿನ ಮಟ್ಟಿಗೂ ಇದೇ ಮಾದರಿ ಹೊಂದುವಂತೆ ತೋರುತ್ತಿದೆ. ಭಾಷೆಯ ನೆಲೆಯಲ್ಲಿಯೂ ಈ ಮಾತು ನಿಜವೇ ಎನ್ನುವುದನ್ನು ಈಗ ನಾವು ಗಮನಿಸಬೇಕಾಗಿದೆ. ಸ್ವತ್ತಿನ ಹಕ್ಕಿನ ಉಲ್ಲಂಘನೆ ಸುಲಭವಾಗಿ ಗುರುತಿಸುವಂತಿರುವ ಕೆಲವು ಪ್ರಸಂಗಗಳನ್ನು ಮೊದಲು ನೋಡೋಣ.

ಜಗತ್ತಿನಲ್ಲೆಲ್ಲಾ ಜನ ಸಮುದಾಯಗಳು ತಾವು ಹುಟ್ಟಿದ ನೆಲೆಗಳನ್ನು ತೊರೆದು ಬೇರೆಬೇರೆ ಕಡೆಗಳಿಗೆ ಹೋಗಿ ಬದುಕಿನ ದಾರಿಗಳನ್ನು ಹುಡುಕಿಕೊಳ್ಳುತ್ತಿದ್ದಾರೆ. ನೆಲದ ಮೇಲಿನ ಹಕ್ಕು ಯಾರಿಗೆ ಸೇರಿದ್ದು ಎಂಬ ಬಗೆಗೆ ಈಗಾಗಲೇ ಒಪ್ಪಿಕೊಂಡಿರುವ ವಿಭಜನೆಯ ನೆಲೆಯಲ್ಲಿ ಹೀಗೆ ಒಂದೆಡೆಯಿಂದ ಇನ್ನೊಂದೆಡೆಗೆ ಹೋಗುವುದನ್ನು ವಲಸೆಗಳೆಂದು ಕರೆಯುವುದು ರೂಢಿಯಲ್ಲಿದೆ. ಹೀಗೆ ವಲಸೆ ಹೋದವರಿಗೆ ಮೂಲ ನಿವಾಸಿಗಳಿಗೆ ಒದಗುವ ಎಲ್ಲ ಹಕ್ಕುಗಳೂ ದೊರಕುವುದಿಲ್ಲ. ಇದು ಭಾಷೆಯ ಮಟ್ಟಿಗೂ ನಿಜ. ವಲಸೆ ಬಂದವರು ತಮ್ಮ ಸ್ವತ್ತಾದ ಭಾಷೆಯನ್ನು ಹೇಗೆ ಬಳಸಬೇಕು ಇಲ್ಲವೇ ಅದನ್ನು ಬಳಸಬೇಕೇ ಬೇಡವೇ ಎಂಬುದನ್ನು ನಿರ್ಧರಿಸುವವರು ಸ್ವತಃ ಅವರಲ್ಲ. ಅವರು ವಲಸೆ ನಿಂತ ನಾಡಿನ ಕೆಲವರು. ಹೀಗೆ ಮಾಡುವಾಗ ವಲಸೆ ಸಮುದಾಯಗಳು ತಮ್ಮ ಭಾಷೆಯ ಮೇಲಿನ ಹಕ್ಕನ್ನು ನಿಧಾನವಾಗಿ ಕಳೆದುಕೊಳ್ಳುತ್ತಾರೆ. ಬೇರೊಂದು ಭಾಷೆಯನ್ನು ಬಳಸುವವರಾಗಬೇಕಾಗುತ್ತದೆ. ಆ ಭಾಷೆಯನ್ನು ಅವರು ಬಳಸುತ್ತಿದ್ದರೂ, ಅದರ ಹಕ್ಕುದಾರಿಕೆಯಲ್ಲಿ ಅವರಿಗೆ ಪಾಲಿರುವುದಿಲ್ಲ. ಟರ್ಕಿ,ಇರಾಕ್ ಮತ್ತು ಇರಾನ್ ನಾಡುಗಳ ನಡುವೆ ಇರುವ ಗುಡ್ಡಗಾಡು ಪ್ರದೇಶದಲ್ಲಿ ಕುರ್ದ್ ಎಂಬ ಸಮುದಾಯವಿದೆ. ಇವರು ಆಡುವ ಕುರ್ದಿಶ್ ಭಾಷೆಯು ಅವರ ಸ್ವತ್ತಾಗಿ ಇರಬೇಕೋ ಇಲ್ಲವೇ ಅವರು ಅದನ್ನು ಬಿಟ್ಟುಕೊಟ್ಟು ಟರ್ಕಿಶ್, ಪರ್ಶಿಯನ್ ಇಲ್ಲವೇ ಇರಾಕಿಗಳಿಗೆ ಒಗ್ಗಿಕೊಳ್ಳಬೇಕೋ ಎಂಬುದು ಹಲವು ದಶಕಗಳ ಹೋರಾಟದ ಸಂಗತಿಯಾಗಿದೆ. ಹೀಗೆಯೇ ನೂರಾರು ಕಡೆಗಳಲ್ಲಿ ವಲಸೆ ಸಮುದಾಯಗಳು ತಮ್ಮ ಭಾಷೆಯೆಂಬ ಸ್ವತ್ತಿನ ಮೇಲಿನ ಹಕ್ಕನ್ನು ಕಳೆದುಕೊಳ್ಳುತ್ತಿವೆ. ಅಮೇರಿಕಾ ದೇಶದಲ್ಲಿ ರೆಡ್ ಇಂಡಿಯನ್ ಸಮುದಾಯಗಳು ತಮ್ಮ ಭಾಷೆಗಳನ್ನು ಕಳೆದುಕೊಂಡದ್ದು ಒಂದು ಕತೆಯಾದರೆ. ಈಗ ಆ ನಾಡಿನಲ್ಲಿ ಇರುವ ದೊಡ್ಡ ವಲಸೆ ಸಮುದಾಯ ಸ್ಪಾನಿಶ್ ಮಾತಾಡುವವರದಾಗಿದ್ದು ಅವರು

ತಮ್ಮ ನುಡಿಯನ್ನು ಕಾಯ್ದುಕೊಳ್ಳಲು ಎಚ್ಚರದ ಹೆಜ್ಜೆಗಳನ್ನು ಇರಿಸಬೇಕಾಗಿದೆ. ಈ ಎಲ್ಲ ಅಂಶಗಳನ್ನೂ ಮನಗಂಡು ಮಾನವ ಹಕ್ಕುಗಳ ಪಟ್ಟಿಯಲ್ಲಿ ಭಾಷೆಯೆಂಬ ಸ್ವತ್ತಿನ ಹಕ್ಕನ್ನೂ ಕೂಡ ಈಗ ಸೇರಿಸಲಾಗಿದೆಯಾದರೂ, ಅದನ್ನು ಉಳಿಸಿಕೊಳ್ಳಲು ದೊಡ್ಡದೊಡ್ಡ ಹೋರಾಟಗಳು ನಡೆಯುವುದು ಅನಿವಾರ್ಯವಾಗುತ್ತಿದೆ.

ಇದು ಒಂದು ನೆಲೆ. ಇನ್ನೊಂದು ನೆಲೆ ಬೇರೆಯದೇ ಬಗೆಯದ್ದು. ಇಲ್ಲಿ ಒಂದೇ ಭಾಷೆಯನ್ನಾಡುವ ಜನಸಮುದಾಯದಲ್ಲಿ, ಆ ಭಾಷೆ ಯಾರ ಸ್ವತ್ತು ಎಂಬುದನ್ನು ಗೊತ್ತು ಮಾಡುವುದು ಕಷ್ಟವಾಗುವಂತಹ ಸನ್ನಿವೇಶಗಳು ನಿರ್ಮಾಣವಾಗುತ್ತವೆ. ಭಾಷೆಯ ಸಂಪನ್ಮೂಲಗಳ ಸ್ವರೂಪವನ್ನು ನಿರ್ಧರಿಸುವಲ್ಲಿ, ಅದರ ಬಳಕೆಯ ಮಾದರಿಗಳ ಚೌಕಟ್ಟುಗಳನ್ನು ರೂಪಿಸುವಲ್ಲಿ ಕೆಲವರು ಮಾತ್ರ ನಿರ್ಣಯಗಳನ್ನು ಮಾಡುವವರಾಗಿದ್ದು, ಉಳಿದೆಲ್ಲ ಜನರೂ ಆ ನಿರ್ದೇಶನಗಳನ್ನು ಮತ್ತು ಮಾದರಿಗಳನ್ನು ಅನುಸರಿಸುವ ಇಕ್ಕಟ್ಟು ರೂಪುಗೊಳ್ಳುತ್ತದೆ. ಈ ನಿರ್ದೇಶನಗಳನ್ನು ಮೀರಿದ ಭಾಷಾಬಳಕೆಗೆ ಅಧಿಕೃತ ಮನ್ನಣೆ ದೊರೆಯುವುದಿಲ್ಲ; ಅದನ್ನು ಅಂಚಿನ ಬಳಕೆಯೆಂದೂ, ಅದಕ್ಕೆ ಮಾನ್ಯತೆ ನೀಡುವ ಅಗತ್ಯವಿಲ್ಲವೆಂದೂ ತೀರ್ಮಾನಿಸಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಭಾಷೆ ಎಲ್ಲರ ಸ್ವತ್ತು ಎನ್ನುವ ತಿಳುವಳಿಕೆಗೆ ಯಾವ ಬೆಲೆಯೂ ಇಲ್ಲವಾಗುತ್ತದೆ.

ಈ ಬಗೆಯ ನಿರ್ದೇಶನಗಳನ್ನು ಕೊಡುವವರು ತಮ್ಮ ಕ್ರಮವನ್ನು ಸರಿಯೆಂದು ಒಪ್ಪಿಸಲು ತಕ್ಕ ಕಾರಣಗಳನ್ನು ಮುಂದೊಡ್ಡುತ್ತಾರೆ. ಭಾಷೆ ಎಲ್ಲರ ಸ್ವತ್ತಾಗಿರುವುದರಿಂದ ಅದರ ಬಳಕೆಯೂ ಕೂಡ ಎಲ್ಲರಿಗೂ 'ಅನುಕೂಲ'ವಾಗುವಂತೆ ಇರಬೇಕು ಎನ್ನುವುದು ಒಂದು ಕಾರಣ. ಎಲ್ಲರಿಗೂ ಸಮಾನವಾದ ರೂಪವೊಂದನ್ನು ಮುಂದಿಡುವ ಮೂಲಕ ಮತ್ತು ಅದನ್ನು ಬಳಸಲು ಕಲಿಸಿಕೊಡುವ ಮೂಲಕ ಭಾಷೆಯನ್ನು ಆಡುವವರ ನಡುವೆ ಇರುವ 'ಅಸಮಾನತೆ'ಗಳನ್ನು ನಿವಾರಿಸುವ ದಾರಿಯಲ್ಲಿ ದಿಟ್ಟ ಹೆಜ್ಜೆಯನ್ನು ಇಟ್ಟಂತಾಯಿತು ಎನ್ನುವುದು ಇನ್ನೊಂದು ಕಾರಣ. ಆದರೆ ಈ ಕಾರಣಗಳ ಹಿಂದೆ ಇರುವ ತರ್ಕವನ್ನು ಎಚ್ಚರಿಕೆಯಿಂದ ಗಮನಿಸಬೇಕು. ಬಳಕೆಗೆ ಎಲ್ಲರಿಗೂ ಅನುಕೂಲವಾಗಿಸುವುದು ಮತ್ತು ಅಸಮಾನತೆಯನ್ನು ತೆಗೆದು ಹಾಕುವುದು ಎಂಬುದು ಎಲ್ಲರ ಪರವಾದ ಊಟವನ್ನು ತಯಾರಿಸಿದಂತಲ್ಲ. ಎಲ್ಲರೂ ಒಟ್ಟಿಗೆ ಕುಳಿತು ಊಟಮಾಡುವಾಗ ತಯಾರಿಸುವ ಅಡುಗೆಯಂತಲ್ಲ. ಭಾಷೆಯು ಎಲ್ಲರಿಗೂ ಸೇರಿದ ಸ್ವತ್ತಾಗಿರುವುದರಿಂದ ಅದರ ಬಳಕೆಯೂ ಅವರವರ ಅಗತ್ಯಕ್ಕೆ ತಕ್ಕಂತೆ ಬೇರೆಬೇರೆಯಾಗಿರುವುದೇ ಹೆಚ್ಚು ಸಹಜವಾದುದು. ಇದು ಎಲ್ಲರಿಗೂ ತಿಳಿಯಲಾರದೆಂಬ ಕಾರಣವನ್ನು ಮುಂದೊಡ್ಡಿ ಎಲ್ಲರಿಗೂ ತಿಳಿಯುವ ಮಾದರಿಯೊಂದಿದೆ ಎನ್ನುವ ಭ್ರಮೆಯೊಂದನ್ನು ಹುಟ್ಟು ಹಾಕಲಾಗುತ್ತದೆ. ಭಿನ್ನತೆಯಲ್ಲಿ ಅಡ್ಡಿಗಳಿಲ್ಲ. ಆದರೆ ಆ ಭಿನ್ನತೆಗಳು ತರತಮದ ನೆಲೆಗಳಾಗಿ ಬದಲಾದಾಗ ಮಾತ್ರ ಅಡ್ಡಿಗಳು ಹುಟ್ಟಿಕೊಳ್ಳುತ್ತವೆ.

ಅಂದರೆ ಬಹುತ್ವವೆನ್ನುವುದರಲ್ಲಿ ತೊಂದರೆಯಿಲ್ಲ. ಬಹುತ್ವದ ನಿರ್ವಹಣೆಯ ತಂತ್ರಗಳನ್ನು ಸಮುದಾಯಕ್ಕೆ ಒದಗಿಸಿಕೊಡಬೇಕಾಗುತ್ತದೆ.

ಇದಲ್ಲದೆ ಇದೇ ಸಮುದಾಯ ಒಂದಕ್ಕಿಂತ ಹೆಚ್ಚಿನ ಭಾಷೆಗಳನ್ನು ತನ್ನ ಸ್ವತ್ತುಗಳನ್ನಾಗಿ ಪಡೆದಾಗ ಸಮಸ್ಯೆ ಇನ್ನಷ್ಟು ಜಟಿಲವಾಗುತ್ತದೆ. ಇಲ್ಲಿಯೂ ಆಯಾ ಭಾಷೆಗಳನ್ನು ಆಡುವ ಕೆಲವರ ನಿರ್ಧಾರಗಳು ಮೇಲುಗೈ ಪಡೆದು ಸ್ವತ್ತಿನ ಜಂಟಿ ನಿರ್ವಹಣೆಗೆ ಹೊರಗಿನಿಂದ ನಿರ್ದೇಶನಗಳನ್ನು ನೀಡುವ ಪ್ರಸಂಗಗಳು ಹುಟ್ಟಿಕೊಳ್ಳುತ್ತವೆ. ಇದು ಇನ್ನೂ ಹೆಚ್ಚಿನ ಗೊಂದಲಕ್ಕೆ ಕಾರಣವಾಗುತ್ತದೆ. ಒಟ್ಟಾರೆಯಾಗಿ ಭಾಷೆಯು ಇತರ ನೈಸರ್ಗಿಕ ಮತ್ತು ನಿಸರ್ಗ ನೀಡಿದ ಸಾಮುದಾಯಿಕ ಹಕ್ಕಿನ ಸ್ವತ್ತು ಎನ್ನುವುದಾದರೆ, ಅದರ ಮೇಲಿನ ಸ್ವಾಮ್ಯ ಎಲ್ಲರಿಗೂ ಇರಬೇಕೆಂಬ ನಿಟ್ಟಿನಲ್ಲಿ ನಾವೀಗ ಭಾಷಾನೀತಿ ಮತ್ತು ಭಾಷಾಯೋಜನೆಗಳನ್ನು ರೂಪಿಸಬೇಕಾದ ದಿನಗಳು ಬಂದಿವೆ.

# ಭಾಷೆಯ ಹರಡುವಿಕೆ

ಜಗತ್ತಿನಲ್ಲಿ ಸಾವಿರಾರು ಭಾಷೆಗಳಿವೆ. ಒಂದೊಂದು ಭಾಷೆಗೂ ಅದನ್ನು ನುಡಿಯುವ ಸಮುದಾಯವಿದೆ. ಈ ಲೋಕವು ಎಲ್ಲ ಇಕ್ಕಟ್ಟುಗಳಿಂದ ಪಾರಾಗಿ ಎಲ್ಲೆಲ್ಲೂ ಹರುಷ ತುಂಬಿರಬೇಕೆಂದು ಬಯಸುವವರಲ್ಲಿ ಹಲವರು ಎಲ್ಲ ಮಾನವರಿಗೂ ಒಂದೇ ಭಾಷೆ ಇರಬೇಕಿತ್ತೆಂದು ವಾದಿಸುತ್ತಾರೆ. ಅಂತಹ ಲೋಕದ ಕನಸನ್ನು ಕಂಡಿದ್ದಾರೆ. ಎಲ್ಲರಿಗೂ ಒಂದೇ ಆಗಿರುವ ಭಾಷೆಯೊಂದನ್ನು ಕಟ್ಟಲು ಯತ್ನಿಸಿದ್ದಾರೆ. ಎಸ್ಪರಾಂತೋ ಎಂಬುದು ಅಂತಹುದೊಂದು ಭಾಷೆ. ಆದರೆ ಎಸ್ಪರಾಂತೋ ಜಗತ್ತಿನಲ್ಲಿ ಯಾರಿಗೂ ಮೊದಲ ನುಡಿಯಲ್ಲ. ಯಾವುದೋ ಒಂದು ನುಡಿಯನ್ನು ಈಗಾಗಲೇ ಕಲಿತು ಬಳಸುತ್ತಿರುವವರೇ ಈ ಎಸ್ಪರಾಂತೋ ವನ್ನೂ ಕಲಿಯುತ್ತಾರೆ. ಮತ್ತೆ ಕೆಲವರು ಇನ್ನೊಂದು ಬಗೆಯ ಕನಸನ್ನು ಕಂಡಿದ್ದಾರೆ. ಜೈನ ಧರ್ಮದ ತಿಳುವಳಿಕೆಯಂತೆ ಸಮವಸರಣದಲ್ಲಿ ತೀರ್ಥಂಕರರು ನುಡಿಯುತ್ತಿದ್ದರೆ ಅಲ್ಲಿ ನೆರೆದು ಕೇಳಿಸಿಕೊಳುತ್ತಿರುವವರಿಗೆ ಆ ನುಡಿ ತಂತಮ್ಮ ನುಡಿಯಂತೆ ಕೇಳಿಸುತ್ತದೆ. ತೀರ್ಥಂಕರರು ತಮ್ಮ ನುಡಿಯನ್ನೇ ಆಡುತ್ತಿದ್ದಾರೆಂದು ಜನರು ತಿಳಿಯುತ್ತಾರೆ. ಆದರೆ ಹೀಗೆ ನೆರೆದ ಜನರು ತಂತಮ್ಮಲ್ಲಿ ಮಾತಾಡಿಕೊಳ್ಳುವಾಗ ಹೀಗಾಗುವುದಿಲ್ಲ. ಒಬ್ಬರು ನುಡಿಯುತ್ತಿದ್ದರೆ ಅದು ನಮಗೆ ತಿಳಿಯುವುದು ಹೇಗೆ? ಅವರು ಆಡುವ ಭಾಷೆಯನ್ನು ನಾವೂ ಕಲಿತಿರಬೇಕು. ಹಾಗಾದಾಗಲೂ ಹೇಳುತ್ತಿರುವವರು ಏನು ಭಾವಿಸಿದ್ದಾರೋ ಅದನ್ನೇ ನಾವೂ ಅರಿತುಕೊಳ್ಳುತ್ತೇವೆ ಎಂದು ಹೇಳಲಿಕ್ಕಾಗದು. ಉಪನಿಷತ್‌ನಲ್ಲಿ ದೈವವಾಣಿಯು 'ದ' ಎಂದಾಗ ದೇವತೆಗಳು, ಮಾನವರು ಮತ್ತು ದೈತ್ಯರು ಅನುಕ್ರಮವಾಗಿ ದಯ, ದಾನ ಮತ್ತು ದಮ್ಯತೆಗಳೆಂದು ತಿಳಿದರಂತೆ. ಅಂದರೆ ಅವರೆಲ್ಲರೂ ಒಂದೇ ನುಡಿಯನ್ನಾಡುತ್ತಿದ್ದರೂ ಒಬ್ಬರು ನುಡಿದದ್ದು ಇನ್ನೊಬ್ಬರಿಗೆ ತಿಳಿದದ್ದು ಬೇರೆಬೇರೆ ಬಗೆಯಲ್ಲಿಯೇ. ಅಂದರೆ ಲೋಕವಿಡೀ ಈ ನುಡಿಗೊಂದಲದಲ್ಲಿ ತುಂಬಿಹೋಗಿದೆ ಎಂದುಕೊಳ್ಳೋಣವೇ? ಆದರೆ ಒಂದಕ್ಕಿಂತ ಹೆಚ್ಚು ನುಡಿಗಳನ್ನು ಬಲ್ಲವರನ್ನು ಕಂಡರೆ ನಮಗೆ ಹೆಚ್ಚು ಗೌರವ. ಅವರು ಬುದ್ಧಿವಂತರೆಂದು ತಿಳಿಯುತ್ತೇವೆ. ಆದರೆ ಸಮುದಾಯಗಳೇ ಒಂದಕ್ಕಿಂತ ಹೆಚ್ಚು ನುಡಿಗಳೊಡನೆ ಬದುಕಬೇಕಾಗಿ ಬಂದರೆ ಅದರಿಂದ ಎಲ್ಲವೂ ಗೋಜಲಾಗುತ್ತದೆಂದುಕೊಳ್ಳುತ್ತೇವೆ. ಆದರೆ ಕಳೆದ ಶತಮಾನದಲ್ಲಿ ಗೊತ್ತಾದ ಸಂಗತಿಯೆಂದರೆ ಇಡೀ ಲೋಕದಲ್ಲಿ ಒಂದೇ ಭಾಷೆ ನಮಗೆ ಸಾಕೆಂದು ತಿಳಿದು ಬದುಕುವ ಸಮುದಾಯಗಳ, ಸಮಾಜಗಳ ಸಂಖ್ಯೆ ಇಳಿಮುಖವಾಗುತ್ತಿದೆಯೆಂಬುದು.

ಸಮುದಾಯಗಳು ಒಂದಕ್ಕಿಂತ ಹೆಚ್ಚು ನುಡಿಗಳನ್ನು ಕಲಿತು ಬಾಳಬೇಕಾಗಿ ಬರಲು ಹಲವು ಕಾರಣಗಳಿವೆ. ಆ ನುಡಿಗಳನ್ನಾಡುವ ಜನಸಮುದಾಯಗಳು ಒಂದರೊಡನೊಂದು ಬದುಕಬೇಕಾಗಿ ಬರುವುದು ಅಂತಹ ಒಂದು ಕಾರಣ. ಹಲವು ಕಾಲ ಹೀಗೆ ಒಡನಾಟದಲ್ಲಿರುವ ಸಮುದಾಯಗಳಲ್ಲಿ ಒಂದು ಇನ್ನೊಂದರ ನುಡಿಯನ್ನು ಕಲಿಯಬೇಕಾಗಿ ಬರುತ್ತದೆ. ಜನಸಮುದಾಯಗಳು ಜೊತೆಜೊತೆಯಾಗಿ ಬದುಕದಿರುವಾಗಲೂ ಒಂದು ಸಮುದಾಯ ತನ್ನದಲ್ಲದ ಇನ್ನೊಂದು ನುಡಿಯನ್ನು ಕಲಿತು ದ್ವಿಭಾಷಿಕವಾಗುವ ಸಂದರ್ಭವೂ ಒದಗಿಬರುತ್ತದೆ. ಆದರೆ ಇಂತಹ ಕಡೆಗಳಲ್ಲಿ ಇಡೀ ಸಮುದಾಯವೇ ದ್ವಿಭಾಷಿಕವಾಗುವ ಒತ್ತಾಯ ಕಡಿಮೆ; ಆಯ್ಕೆಗಳಿಗೆ ಅವಕಾಶವಿರುತ್ತದೆ. ಕನ್ನಡ–ಸಂಸ್ಕೃತ ದ್ವಿಭಾಷಿಕತೆ ಇದಕ್ಕೊಂದು ನಿದರ್ಶನ. ಸಂಸ್ಕೃತ ಮಾತನಾಡುವ ಜನಸಮುದಾಯದೊಡನೆ ಬದುಕಬೇಕಾಗಿ ಬಂದುದರಿಂದ ಕನ್ನಡಿಗರು ಸಂಸ್ಕೃತವನ್ನು ಕಲಿಯಲಿಲ್ಲ. ರಾಜಕೀಯ ಕಾರಣಗಳಿಂದಾಗಿ ಕನ್ನಡ ಬಲ್ಲವರು ಸಂಸ್ಕೃತವನ್ನು ಎರಡನೆಯ ಭಾಷೆಯಾಗಿ ಕಲಿಯುವ ಅವಕಾಶಗಳು ಒದಗಿದವು. ಈಗ ಇಂಗ್ಲಿಶ್ ಮತ್ತು ಕನ್ನಡಗಳ ನಡುವೆ ಅಂತಹುದೇ ಒಂದು ಸನ್ನಿವೇಶವಿದೆ.

ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಒಂದೇ ಬಾರಿಗೆ ಕಲಿಯತೊಡಗಿದಾಗ ಹಾಗೆ ಕಲಿಯುವವರು ಕಷ್ಟಪಡುತ್ತಾರೆಂದು ಸಾಮಾನ್ಯವಾಗಿ ತಿಳಿಯಲಾಗುತ್ತದೆ. ಆದರೆ ಯಾವ ವಯಸ್ಸಿನಲ್ಲಿ ಹೀಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿಯುತ್ತಿರುತ್ತಾರೆ ಎಂಬುದನ್ನು ಗಮನಿಸಬೇಕು. ಕೌಮಾರ್ಯದ ಹಂತಕ್ಕಿಂತ ಚಿಕ್ಕವರಾಗಿರುವ ಮಕ್ಕಳು ಹೆಚ್ಚು ಭಾಷೆಗಳನ್ನು ಒಮ್ಮೆಗೇ ಕಲಿಯಲು ಅಷ್ಟು ಗೊಂದಲವನ್ನು ಅನುಭವಿಸುವುದಿಲ್ಲ. ಒಂದು ಭಾಷೆಯ ಕಲಿಕೆ ಇನ್ನೊಂದರ ಕಲಿಕೆಯ ಮೇಲೆ ಬೀರುವ ಪರಿಣಾಮ ತುಂಬಾ ಕಡಿಮೆ. ಆದರೆ ದೊಡ್ಡವರಾದ ಮೇಲೆ ಇನ್ನೊಂದು ಭಾಷೆಯನ್ನು ಕಲಿಯಲು ಹೊರಟರೆ ಹಾಗೆ ಕಲಿಯಲು ತುಂಬ ಶ್ರಮವಹಿಸಬೇಕು. ಅಲ್ಲದೆ ಮೊದಲು ಕಲಿತ ಭಾಷೆಯ ಪರಿಣಾಮ ಹೊಸ ಭಾಷೆಯ ಕಲಿಕೆಯ ಮೇಲೆ ಇದ್ದೇ ಇರುತ್ತದೆ.

ಎರಡು ಅಥವಾ ಹೆಚ್ಚು ಭಾಷೆಗಳನ್ನಾಡುವ ಜನರಲ್ಲಿ ಆ ಭಾಷೆಗಳ ಸಾಮರ್ಥ್ಯಗಳು ಹೇಗೆ ನಿರ್ವಹಣೆಯಾಗುತ್ತವೆಂಬುದು ಕುತೂಹಲದ ವಿಷಯ. ಮೊದಲನೆಯದಾಗಿ ಇಂತಹವರು ಯಾವ ಭಾಷೆಯನ್ನು ಯಾರೊಡನೆ ಮತ್ತು ಎಲ್ಲಿ ಬಳಸಬೇಕು ಎಂಬುದನ್ನು ಕುರಿತು ಸ್ಪಷ್ಟವಾದ ತಿಳುವಳಿಕೆಯನ್ನು ಪಡೆದಿರುತ್ತಾರೆ. ಮನೆಯ ಹೊರಗೆ ಯಾವ ಭಾಷೆ, ಮನೆಯೊಳಗೆ ಯಾವುದು; ಬರೆಯುವಾಗ ಯಾವ ಭಾಷೆ ಬಳಸಬೇಕು, ಹರಟೆಯ ಭಾಷೆ ಯಾವುದು ಎಂಬಿವೇ ಪ್ರಶ್ನೆಗಳಿಗೆ ಗೊಂದಲವಿಲ್ಲದ ಉತ್ತರಗಳು ಅವರಲ್ಲಿ ಇರುತ್ತವೆ. ನಿಯಮಗಳಂತೆ ಇವುಗಳನ್ನು ಅವರು ಪಾಲಿಸುತ್ತಿರುತ್ತಾರೆ. ಈ ನಿಯಮಗಳನ್ನೂ ಮೀರುವುದು ಕೂಡ ಗೊತ್ತಾದ ಪರಿಣಾಮಕ್ಕಾಗಿಯೇ ಆಗಿರುತ್ತದೆ. ಉದಾಹರಣೆಗೆ ನಗೆಯನ್ನು ಉಕ್ಕಿಸುವುದು ಇಂತಹ ಉದ್ದೇಶಗಳಲ್ಲಿ ಒಂದು.

ಕೆಲವೊಮ್ಮೆ ಬೇರೆ ಭಾಷೆಯ ಪದಗಳನ್ನು ಪದಗುಚ್ಛಗಳನ್ನು ಕೆಲವೊಮ್ಮೆ ದೀರ್ಘವಾದ ವಾಕ್ಯಗಳನ್ನು ತಮ್ಮ ನುಡಿಯೊಳಗೆ ಬೆರಸಿ ಮಾತನಾಡುವವರನ್ನು

ನಾವು ಎದುರಾಗುತ್ತೇವೆ. ಭಾಷಣ, ಪ್ರವಚನಗಳನ್ನು ಮಾಡುವಾಗ ಸಂಸ್ಕೃತ ಶ್ಲೋಕಗಳನ್ನು ಒಂದೇ ಸಮನೆ ಹೇಳುವವರನ್ನು ಗಮನಿಸಿ. ಇಂತಹವರು ದ್ವಿಭಾಷಿಕರಾಗಿರಬೇಕಿಲ್ಲ. ತಾವು ಕಲಿತ ಪದ, ವಾಕ್ಯಗಳನ್ನು ಹೀಗೆ ಬೇಕಾದಾಗ ಹೇಳುವವರು ಇನ್ನೊಂದು ಭಾಷೆಯನ್ನು ಸ್ವತಂತ್ರವಾಗಿ ಬಳಸಲಾರರು. ಅಂದರೆ ಆ ಭಾಷೆಯಲ್ಲಿ ಸ್ವಂತ ವಾಕ್ಯಗಳನ್ನು ತಾವೇ ರಚಿಸಲಾರರು. ಅಷ್ಟೇಕೆ, ಅದುವರೆಗೂ ತಾವು ಕೇಳಿರದ ವಾಕ್ಯವೊಂದನ್ನು ಎರಡನೆಯ ಭಾಷೆಯಲ್ಲಿ ಯಾರಾದರೂ ರಚಿಸಿ ಹೇಳಿದರೆ ಅದನ್ನು ಅರ್ಥ ಮಾಡಿಕೊಳ್ಳಲಾರರು. ಹೀಗಾಗಿ ದ್ವಿಭಾಷಿಕರೆಂದು ನಾವು ಗುರುತಿಸುವವರು ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ಸ್ವತಂತ್ರ ಸಾಮರ್ಥ್ಯವನ್ನು ಪಡೆದಿರುತ್ತಾರೆ, ಆಂದರೆ ಎರಡೂ ಭಾಷೆಗಳಲ್ಲಿ ಸಮಾನ ಸಾಮರ್ಥ್ಯವನ್ನು ಪಡೆದಿರುತ್ತಾರೆಂದು ಹೇಳುವಂತಿಲ್ಲ. ಅದನ್ನು ನಿರೀಕ್ಷಿಸಲು ಸಾಧ್ಯವಿಲ್ಲ. ಕೆಲವೊಮ್ಮೆ ಎರಡನೆಯ ಭಾಷೆಯ ಸಾಮರ್ಥ್ಯಗಳು ಕುಂಠಿತರೂಪದಲ್ಲೂ ಇರುತ್ತವೆ. ಎರಡನೆಯ ಭಾಷೆಯನ್ನು ಕೇಳಿ/ಓದಿ ತಿಳಿದುಕೊಳ್ಳಲು ಸಾಧ್ಯವಿದ್ದರೂ ತಾವೇ ಮಾತಾಡುವ, ಬರೆಯುವ ಸಾಮರ್ಥ್ಯವನ್ನು ಪಡೆದಿಲ್ಲದೇ ಇರಬಹುದು. ಹಿಂದಿಯನ್ನು ಕೇಳಿ ತಿಳಿದುಕೊಳ್ಳುವ ಹಲವು ಕನ್ನಡಿಗರು ತಾವೇ ಸ್ವತಃ ಹಿಂದಿಯನ್ನು ಮಾತಾಡದೆಯೂ ಇರಬಹುದಲ್ಲವೇ? ಇವರೂ ಒಂದು ಬಗೆಯಲ್ಲಿ ದ್ವಿಭಾಷಿಕರೇ ಸರಿ.

ಜಗತ್ತಿನಲ್ಲೆಲ್ಲ ಹೀಗೆ ಒಂದಕ್ಕಿಂತ ಹೆಚ್ಚು ಭಾಷೆಯನ್ನು ಬೇರೆ ಬೇರೆ ಕಾರಣಗಳಿಂದ ಕಲಿತು ಬಳಸಬೇಕಾಗಿ ಬರುತ್ತಿರುವವರ ಸಂಖ್ಯೆ ಹೆಚ್ಚುತ್ತಲೇ ಇದೆ. ಇದರಿಂದಾಗಿ ಭಾಷಿಕ ಸಮುದಾಯಗಳಲ್ಲಿ ಸಾಮಾಜಿಕ, ಆರ್ಥಿಕ ಪ್ರಗತಿಗಳು ಕುಂಠಿತವಾಗುತ್ತವೆ ಎನ್ನುವ ವಾದವನ್ನು ಪಶ್ಚಿಮದ ಚಿಂತಕರು ಒಮ್ಮೆ ಮಂಡಿಸಿದ್ದು ಉಂಟು. ಇದನ್ನು ನಂಬಿದ ಹಲವು ರಾಷ್ಟ್ರಗಳು ತಮ್ಮ ದೇಶಗಳನ್ನು ಏಕಭಾಷಿಕವನ್ನಾಗಿ ಬದಲಿಸಲು ಯತ್ನಿಸಿದವು. ಆದರೆ ಈಗ ಈ ವಾದವನ್ನು ಯಾರೂ ಒಪ್ಪುವುದಿಲ್ಲ. ದೇಶದ ಪ್ರಗತಿಗೂ ಆ ದೇಶದ ಜನಸಮುದಾಯಗಳು ಎಷ್ಟು ಭಾಷೆಗಳನ್ನು ಬಳಸುತ್ತಾರೆಂಬುದಕ್ಕೂ ಯಾವ ಸಂಬಂಧವೂ ಇಲ್ಲ. ಆದರೆ ಸಮುದಾಯಗಳು ಬಹುಭಾಷಿಕ ನೆಲೆಗಳಿಗೆ ದಾಟುವುದು ಹೆಚ್ಚಾಗಿರುವುದರಿಂದ ಹೊಸ ಸಮಸ್ಯೆಗಳು ಉಂಟಾಗುತ್ತಿವೆ. ಅಥವಾ ಸಮಸ್ಯೆಗಳನ್ನು ನೋಡುವ ದೃಷ್ಟಿಕೋನ ಬದಲಾಗಬೇಕಿದೆ ಎನ್ನಬಹುದು. ಉದಾಹರಣೆಗೆ ಶಿಕ್ಷಣವನ್ನೇ ಗಮನಿಸೋಣ. ಶಾಲೆಗೆ ಬರುವ ಮಕ್ಕಳು ಅಲ್ಲಿಗೆ ಬರುವ ಹೊತ್ತಿಗೆ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತವರಾಗಿದ್ದರೆ, ಆಗ ನಮ್ಮ ಶಿಕ್ಷಣ ಕ್ರಮದಲ್ಲಿ ಅಗತ್ಯವಾದ ಬದಲಾವಣೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ವಲಸೆಗಾರರು ಈಗ ಹೆಚ್ಚಾಗುತ್ತಿದ್ದಾರೆ. ಅಂದರೆ ಅಂತರ್ಗತ ದ್ವಿಭಾಷಿಕ ಸಮುದಾಯಗಳು ಹೆಚ್ಚುತ್ತಿವೆ. ಈ ಸಮುದಾಯಗಳು ಮುಖ್ಯ ಸಮುದಾಯದ ಭಾಷೆಗಾಗಿ ತಮ್ಮ ಭಾಷೆಗಳನ್ನು ಕಳೆದುಕೊಂಡು ಏಕಭಾಷಿಕವಾಗಬೇಕೆನ್ನುವ ಒತ್ತಾಯಗಳು ಒಂದೆಡೆ ಹೆಚ್ಚುತ್ತಿದ್ದರೆ, ಮತ್ತೊಂದೆಡೆ ಈ ಅಂತರ್ಗತ ಸಮುದಾಯಗಳು ತಮ್ಮ ಭಾಷೆಯನ್ನು ಕಾಯ್ದುಕೊಳ್ಳುವ ಹುನ್ನಾರಗಳನ್ನು ರೂಪಿಸಿಕೊಳ್ಳುತ್ತಿವೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿರುವ ಭಾರತೀಯ ಭಾಷಾಸಮುದಾಯಗಳನ್ನು ಗಮನಿಸಿ. ಇವರಲ್ಲಿ ಎರಡನೆಯ ತಲೆಮಾರಿಗೆ ಮೂಲ ಭಾಷೆಯನ್ನು ಕಳೆದುಕೊಂಡು ಇಂಗ್ಲಿಶ್

ಏಕಭಾಷಿಕರಾಗುವುದು ಸಹಜವೆಂದು ತಿಳಿಯಲಾಗುತ್ತಿತ್ತು. ಆದರೆ ಈಗ ಪರಿಸ್ಥಿತಿ ಬದಲಾಗುತ್ತಿದೆ. ಈ ದ್ವಿಭಾಷಿಕ ಸಮುದಾಯಗಳು ತಮ್ಮ ಮೂಲಭಾಷೆಯನ್ನು ಕಾಯ್ದುಕೊಳ್ಳುವ ಅಗತ್ಯವನ್ನು ಹೇಗೋ ಮನಗಂಡಿದ್ದಾರೆ. ಇದರಿಂದ ಸರಕಾರಗಳ ಭಾಷಾಯೋಜನೆಗಳ ಸ್ವರೂಪ ಬದಲಾಗುತ್ತಿದೆ. ಭಾರತದಲ್ಲೂ ಇಂತಹುದೇ ಪರಿಸ್ಥಿತಿ ಹಲವು ರಾಜ್ಯಗಳಲ್ಲಿ ಈಗಾಗಲೇ ಉಂಟಾಗಿದೆ. ಏನೇ ಆಗಲಿ, ಮುಂದಿನ ದಶಕಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಬಳಸುವ ಸಮುದಾಯಗಳ ಹಿತಚಿಂತನೆಯನ್ನು ಮರೆಯುವಂತಿಲ್ಲ.

## ನೆನಪು ಮರೆವಿನ ಕಣ್ಣುಮುಚ್ಚಾಲೆಯಾಟ

ಹಾಳು ಮರೆವು ಎಂದು ಗೊಣಗದವರಿಲ್ಲ. ಮರೆವಿನ ನೆರವು ಪಡೆದು ತಮ್ಮ ಅರೆಕೊರೆಗಳನ್ನು ಮುಚ್ಚಿಟ್ಟುಕೊಳ್ಳುವುದು ಎಲ್ಲರೂ ಆಡುವ ಆಟವೇ ಸರಿ. ಹಾಗೆಯೇ ನೆನಪು ಚೆನ್ನಾಗಿರುವವರು ನಮ್ಮ ಮೆಚ್ಚುಗೆಯನ್ನು ಪಡೆಯುತ್ತಾರೆ, ಜಾಣರೆಂದೆನಿಸಿಕೊಳ್ಳುತ್ತಾರೆ. ಈ ನೆನಪು ಮರೆವಿನ ಕಣ್ಣುಮುಚ್ಚಾಲೆಯಲ್ಲಿ ಭಾಷೆಗೇನಾದರೂ ಜಾಗವಿದೆಯೇ ಎನ್ನುವುದನ್ನು ಈಗ ನೋಡೋಣ. ನಮಗೆ ಒಬ್ಬರು ಚೆನ್ನಾಗಿ ಗೊತ್ತು ಎಂದಿಟ್ಟುಕೊಳ್ಳಿ. ಕೆಲಕಾಲ ನಮ್ಮ ಕಣ್ಣಿಗೆ ಬೀಳದಿದ್ದರೆ ಅವರನ್ನು ನಾವು ಮರೆಯುವುದುಂಟು. ಆದರೆ ಈ ಮರೆವಿಗೆ ಎರಡು ನೆಲೆಗಳಿವೆ. ಈಗ ಅವರು ನಮ್ಮ ಕಣ್ಣೆದುರಿಗೆ ಬಂದರೆ, ಅವರು ನಮಗೆ ಗೊತ್ತಿರುವವರು ಎನಿಸಿದರೂ, ಅವರ ಹೆಸರು ನಮ್ಮ ನೆನಪಿಗೆ ಬಾರದೇ ಹೋಗಬಹುದು. ಮತ್ತೆ ಕೆಲವೊಮ್ಮೆ ಅವರ ಹೆಸರು ನಮ್ಮ ನೆನಪಿನಲ್ಲಿ ಉಳಿದಿದ್ದರೂ, ಅವರೇ ಎದುರಿಗೆ ಬಂದು ನಿಂತರೂ ನಾವು ಅವರನ್ನು ಗುರುತಿಸದೇ ಹೋಗಬಹುದು. ಇವೆಲ್ಲವೂ ನಮ್ಮೆಲ್ಲರಿಗೂ ಆಗಿರುವ ಅನುಭವಗಳೇ ಸರಿ. ಈ ಎರಡು ಬಗೆಯ ಮರೆವನ್ನು ಭಾಷೆಯ ನೆರವಿನಿಂದ ಅರಿತುಕೊಳ್ಳೋಣ. ಒಂದು ಪದಕ್ಕೆ ದನಿಯ ನೆಲೆ ಇರುವಂತೆ, ತಿರುಳಿನ ನೆಲೆಯೂ ಇರುವುದಷ್ಟೆ. ಬಲ್ಲವರು ಈ ಎರಡು ನೆಲೆಗಳನ್ನು ಪದ–ಪದಾರ್ಥಗಳ ನೆಲೆ ಎಂದಿದ್ದಾರೆ. ದನಿ ಮತ್ತು ತಿರುಳುಗಳೆರಡೂ ನಮಗೆ ಗೊತ್ತಿದ್ದರೆ ಆ ಪದವನ್ನು ಬಳಸಬಹುದು. ಇವೆರಡರಲ್ಲಿ ಯಾವುದೊಂದನ್ನು ಮರೆತರೂ ನಾವು ಗೊಂದಲಕ್ಕೆ ಒಳಗಾಗುತ್ತೇವೆ. ಎರಡನ್ನೂ ಮರೆತರಂತೂ ನಮ್ಮ ಪಾಡು ಇನ್ನಷ್ಟು ಇಕ್ಕಟ್ಟಿಗೆ ಸಿಕ್ಕುವುದು. ನಾವು ನೆನಪಿಟ್ಟುಕೊಳ್ಳುವ ಬಗೆಯಲ್ಲೂ ಈ ಎರಡು ನೆಲೆಗಳಿರುವಂತೆ ತೋರುತ್ತದೆ. ನೆನಪಿನ 'ದನಿಯ'ನೆಲೆ ಒಂದು; ನೆನಪಿನ ತಿರುಳಿನ ನೆಲೆ ಇನ್ನೊಂದು. 'ದನಿ'ಯ ನೆಲೆ ಮರೆತರೆ ಏನೋ ಮರೆತಂತೆ ಅನ್ನಿಸುತ್ತದೆ. ಆದರೆ ಏನು ಮರೆತೆವೆಂದು ಹೇಳಲಾರೆವು. 'ತಿರುಳಿನ' ನೆಲೆ ಮರೆತರೆ ಬೇರೇನೋ ನೆನಪಿಗೆ ಬರುತ್ತದೆಯಾದರೂ ಬೇಕಾದ್ದು ನೆನಪಿಗೆ ಬರುವುದಿಲ್ಲ. ಒಮ್ಮೆ ಕಲಿತ ಹಾಡೊಂದನ್ನು ಈಗ ನೆನೆದುಕೊಳ್ಳಿ. ಸರಿಯಾಗಿ ಹೇಳಲು ಬಂದರೆ ಸರಿ. ಮರೆತಿದ್ದರೆ ಏನಾಗುವುದೆಂದು ನೋಡಿ. ಆ ಹಾಡಿನ ಧಾಟಿ ಮರೆತಿದ್ದರೆ ಅದರ ಪದಗಳನ್ನು ನೆನಪಿಟ್ಟುಕೊಂಡಿದ್ದರೂ ಹಾಡಲಾಗುವುದಿಲ್ಲ. ಧಾಟಿ ನೆನಪಿದ್ದು ಪದಗಳು ಮರೆತಿದ್ದರೆ ನಾವು ಹಾಡನ್ನು ಗುನುಗತೊಡಗುತ್ತೇವೆ. ಸಾಲುಗಟ್ಟಲೆ ಗುನುಗಿಯೇ ಹಾಡಿ ಮುಗಿಸುತ್ತೇವೆ. ಮೊದಲನೆಯದು 'ದನಿ' ಯ ನೆಲೆಯ ಮರೆವು; ಎರಡನೆಯದು 'ತಿರುಳಿನ'ನೆಲೆಯ ಮರೆವು.

ಸರಿ. ಹೀಗೇಕಾಗುತ್ತದೆ? ನಮ್ಮ ಮೆದುಳಿನಲ್ಲಿ ದನಿ ಮತ್ತು ತಿರುಳನ್ನು ಕೂಡಿಟ್ಟುಕೊಳ್ಳುವ ಮತ್ತು ಮರಳಿ ನಮ್ಮ ಬಳಕೆಗೆ ಒದಗಿಸುವ ತಾಣಗಳು ಬೇರೆಬೇರೆಯಾಗಿವೆ. ದನಿಯ ನೆಲೆಯು ಬ್ರಾಕಾನ ತಾಣದಲ್ಲಿದ್ದರೆ, ತಿರುಳಿನ ನೆಲೆಯು ವರ್ನಿಕೆಯ ತಾಣದಲ್ಲಿರುತ್ತದೆ. ಇವೆರಡಲ್ಲಿ ಯಾವೊಂದು ತಾಣಕ್ಕೆ ತೊಂದರೆಯಾದರೂ ಮಾತು ಕಟ್ಟುತ್ತದೆ. ಅಂದರೆ ನೆನಪು ಕುಗ್ಗುತ್ತದೆ. ಬ್ರಾಕಾನ ತಾಣಕ್ಕೆ ತೊಂದರೆಯಾದರೆ ಏನನ್ನೋ ಹೇಳಬೇಕೆಂದರೂ ಹೇಳಲು ತಕ್ಕ ಪದಗಳು ದಕ್ಕುವುದಿಲ್ಲ. ಏಕೆಂದರೆ ಆ ಪದಗಳನ್ನು ದನಿಯ ನೆಲೆಗೆ ಒಯ್ಯಲು ನಮಗೆ ಆಗುವುದಿಲ್ಲ. ಹಾಗೆಯೇ ವರ್ನಿಕೆಯ ತಾಣಕ್ಕೆ ತೊಂದರೆಯಾದರೆ ಏನು ಹೇಳಬೇಕೆಂದಿರುತ್ತೇವೋ ಅದನ್ನು ಹೇಳಲಾಗದೆ ಬೇರೆ ಏನನ್ನೋ ಹೇಳುತ್ತಿರುತ್ತೇವೆ. ಮರ ಎನ್ನುವ ಬದಲು ಹಕ್ಕಿ, ಹಣ್ಣು, ಎಲೆ, ದೆವ್ವ ಹೀಗೆ ಏನನ್ನಾದರೂ ( ಆದರೂ ಮರದೊಡನೆ ನಂಟಿರುವ ಯಾವುದೋ ಪದವನ್ನು) ಹೇಳಬಹುದು. ನೆನಪುಗಳೆಲ್ಲವೂ ಭಾಷೆಯೊಡನೆ ನಂಟನ್ನು ಪಡೆದಿರುತ್ತವೆಂದು ಹೇಳಲಾಗದು. ಆದರೂ ನೆನಪಿನ ಕಟ್ಟೋಣಕ್ಕೂ ಭಾಷೆಯ ಕಟ್ಟೋಣಕ್ಕೂ ಹೊಂದಾಣಿಕೆ ಇದೆ ಎನ್ನುವುದಂತೂ ದಿಟ. ಅಂದರೆ ಭಾಷೆಯಲ್ಲಿ ಇರುವ ಎರಡು ನೆಲೆಗಳಂತೆ ನೆನಪಿಗೂ ಎರಡು ನೆಲೆಗಳಿರುತ್ತವೆ ಎಂದಾಯ್ತು.

ನೆನಪಿಟ್ಟುಕೊಳ್ಳುವುದು ಎಂದರೇನು? ಬೇಕಾದಾಗ, ಬೇಕಾದ್ದು ಬೇಕಾದಷ್ಟು ನಮ್ಮ ಎಚ್ಚರದ ನೆಲೆಗೆ ಬಂದರೆ ಅದನ್ನು ನೆನಪು ಎನ್ನುತ್ತೇವೆ ತಾನೆ? ಹೀಗೆ ನೆನಪಿಟ್ಟುಕೊಳ್ಳುವವರ ಬಗೆಗಳನ್ನು ಗಮನಿಸಿ. ಕೆಲವರು ಮಾತಾಡುವಾಗ ಯಾವುದೋ ಗಾದೆ ಮಾತನ್ನು ಹೇಳಬೇಕೆಂದು ಬಯಸುತ್ತಾರೆ. ಆದರೆ ಆ ಗಾದೆ ನೆನಪಿಗೆ ಬರುವುದಿಲ್ಲ. ಅದರ ಬದಲಿಗೆ 'ಅದೇನೋ ಅಂತಾರಲ್ಲ ಹಾಗಾಯ್ತು ನಿನ್ನ ಕತೆ' ಎಂದುಬಿಡುತ್ತಾರೆ. ಇವರು ಪದವನ್ನು ಮರೆತು ಹಾಡು ಗುನುಗುವ ಬಗೆಯವರು. ಮತ್ತೆ ಕೆಲವರು ಗಂಟೆಗಟ್ಟಲೆ ಒಂದು ಕತೆಯನ್ನು ಹಾಡಿನಲ್ಲಿ ಹೇಳುವವರಿದ್ದಾರೆಂದುಕೊಳ್ಳಿ. ಇವರು ಎಂದೋ ಯಾರೋ ಹೇಳಿದ ಹಾಡನ್ನು 'ಕಲಿತು' ತಾವೂ ಹೇಳತೊಡಗಿದವರು. ಮತ್ತೆ ಮತ್ತೆ ಅದೇ ಹಾಡನ್ನು ಹೇಳಬಲ್ಲರು. ಇಂತಹವರು ಆ ಹಾಡನ್ನು ಹೇಗೆ ನೆನಪಿಟ್ಟುಕೊಳ್ಳುತ್ತಾರೆಂಬುದು ಒಂದು ಸೋಜಿಗ. ಕೆಲವರು ಹೇಳುವಂತೆ ಆ ಹಾಡಿನಲ್ಲಿ ಮತ್ತೆ ಮತ್ತೆ ಬರುವ ಕೆಲವು ಮಾತುಗಳಿರುತ್ತವೆ; ಹಾಗೆಯೇ ಅದರ ಓಟವನ್ನು ಕಟ್ಟಿಕೊಡುವ ಧಾಟಿಯೊಂದಿರುತ್ತದೆ. ಆ ಧಾಟಿ ಕೂಡ ಮತ್ತೆ ಮತ್ತೆ ಬರುತ್ತಲೇ ಇರುತ್ತದೆ. ಈ ಎರಡೂ ನೆಲೆಗಳು ಆ ನೀಳವಾದ ಹಾಡನ್ನು ಮರೆಯದಂತೆ ನೆನಪಿಟ್ಟುಕೊಳ್ಳಲು ಆ ಹಾಡುಗಾರರಿಗೆ ನೆರವಾಗುತ್ತವೆ. (ಚಿಕ್ಕವರಿದ್ದಾಗ ನಮಗೆ 'ಕಲಿಸಿದ'/ ನಾವು ' ಕಲಿತ' ಮಕ್ಕಳಹಾಡುಗಳನ್ನು ಈಗ ಒಮ್ಮೆ ನೆನಪು ಮಾಡಿಕೊಂಡರೆ ಈ ಮೇಲೆ ಹೇಳಿದ್ದು ಇನ್ನಷ್ಟು ಚೆನ್ನಾಗಿ ಗೊತ್ತಾಗುತ್ತದೆ.)

ಮರೆಯದೇ ಇರಬೇಕೆಂದು ನಾವೆಲ್ಲರೂ ಬಯಸುವವರು. ' ನಾನು ಹೇಳಿದ್ದನ್ನು ಸೆರಗಿಗೆ ಗಂಟು ಹಾಕಿಟ್ಟುಕೋ, ಮರೀಬೇಡ' ಎನ್ನುವವರುಂಟು. 'ಆಗಿದ್ದನ್ನೆಲ್ಲ ಕಂಕುಳಲ್ಲಿರಿಸಿಕೊಂಡಿದ್ದೇನೆ. ಮರೆತೇನೆಯೇ' ಎಂದು ಮತ್ತೆ ಕೆಲವರು ಹೇಳುತ್ತಾರೆ. ನೆನಪಿಟ್ಟುಕೊಳ್ಳುವುದಕ್ಕೂ ಅವರು ಹೇಳುತ್ತಿರುವ ಕೆಲಸಕ್ಕೂ ಏನೂ ನಂಟಿಲ್ಲ. ಆದರೂ

ಹೀಗೆ ಹೇಳುವುದೇಕೆ? ಸೆರಗಿನ ಗಂಟನ್ನು ನೋಡಿದಾಗ ಏನನ್ನೋ ನೆನಪಿಸಿಕೊಳ್ಳಬೇಕೆಂದು ಅನಿಸುತ್ತದೆ; ಆಗ ಅದನ್ನು ನೆನಪಿಸಿಕೊಳ್ಳುತ್ತೇವೆ ಎನ್ನಬಹುದೇ? ಅದೇನೋ ಸರಿ. ಆದರೆ ಏನೋ ನೆನಪಿಟ್ಟುಕೊಳ್ಳಬೇಕಿತ್ತು ಎನ್ನುವುದಷ್ಟೇ ನೆನಪಿಗೆ ಬಂದು, ಏನು ನೆನಪಿಸಿಕೊಳ್ಳಬೇಕೋ ಅದೇ ಮರೆತು ಹೋದರೇನು ಮಾಡುವುದು? ಮನೆಗೆ ಬರುವಾಗ ಅಂಗಡಿಯಿಂದ ಏನನ್ನೋ ತರಲು ಮನೆಯಲ್ಲಿ ಹೇಳಿದ್ದಾರೆಂದುಕೊಳ್ಳಿ. ಹಿಂದಿರುಗಿ ಬರುವಾಗ ಅಂಗಡಿ ಕಣ್ಣಿಗೆ ಬೀಳುತ್ತದೆ. ಏನನ್ನೋ ಇಲ್ಲಿಂದ ತೆಗೆದುಕೊಂಡು ಹೋಗಬೇಕಿದೆ ಎನ್ನುವುದು ನೆನಪಿಗೆ ಬರುತ್ತದೆ. ಆದರೆ ಏನದು ಎಂಬುದು ನೆನಪಿಗೆ ಬರುವುದಿಲ್ಲ. ಇದನ್ನು ನೆನಪು ಎನ್ನಬೇಕೋ ಮರೆವು ಎನ್ನಬೇಕೋ?

ಭಾಷೆಯ ನೆಲೆಯ ನೆನಪುಗಳು ಹೇಗೆ ನೆಲೆಗೊಂಡಿರುತ್ತವೆ ಎನ್ನುವುದನ್ನು ತಿಳಿಯಲು ಹಲವರು ಮುಂದಾಗಿದ್ದಾರೆ; ಆ ದಿಕ್ಕಿನಲ್ಲಿ ತುಂಬ ಕೆಲಸಗಳನ್ನು ಮಾಡಿದ್ದಾರೆ. ಅವರ ತಿಳುವಳಿಕೆಯನ್ನು ಈಗ ಕೊಂಚ ಗೊತ್ತು ಮಾಡಿಕೊಳ್ಳೋಣ. ನಾವು ಒಂದು ಪದವನ್ನು ನೆನಪಿನಲ್ಲಿರಿಸಿಕೊಳ್ಳಲು ಇಲ್ಲವೇ ಅದನ್ನು ನೆನಪು ಮಾಡಿಕೊಳ್ಳಲು ಎರಡು ದಾರಿಗಳನ್ನು ಹಿಡಿಯಬಹುದು. ಒಂದು: ಆ ಪದದ ದನಿಯ ಹೋಲಿಕೆ ಇರುವ ಪದಗಳನ್ನು ನೆನಪಿಗೆ ತಂದುಕೊಳ್ಳುವುದು. ಎರಡು: ಆ ಪದದ ತಿರುಳಿನೊಡನೆ ನಂಟಿರುವ ಪದಗಳನ್ನು ನೆನಪಿಗೆ ತಂದುಕೊಳ್ಳುವುದು. ಕವಿಗಳು ತಮ್ಮ ಕವಿತೆಗಳಲ್ಲಿ ಪದಗಳನ್ನು ಜೋಡಿಸುವಾಗ ಈ ಎರಡೂ ಹಾದಿಗಳನ್ನು ಹಿಡಿಯುತ್ತಾರೆ. 'ಯಾರಾಗ ಹಾಡಿದರೂ ಯಾರಾಗ ಕೇಳುವರು' 'ಗಿಡಗಂಟಿಯಾ ಕೊರಳೊಳಗಿಂದ ಹಕ್ಕಿಗಳ ಹಾಡು' ಈ ಎರಡೂ ಸಾಲುಗಳಲ್ಲಿ ಮೊದಲನೆಯದು ಒಂದು ಪದದ ದನಿಯ ನೆಲೆಯ ನಂಟನ್ನು ಹೊಂದಿರುವ ಇನ್ನೊಂದು ಪದವನ್ನು ಜೋಡಿಸಿಟ್ಟುಕೊಂಡಿದೆ. 'ಯಾ(ವ)ರಾಗ ಹಾಡಿದರೂ ಯಾರಾ(ರು.ಆ)ಗ ಕೇಳುವರು.' ಎರಡನೆಯ ಸಾಲಿನಲ್ಲಿ ತಿರುಳಿನ ನಂಟಿರುವ ಪದವನ್ನು ಬಳಸಿಕೊಳ್ಳಲಾಗಿದೆ. ಗಿಡಗಳ ಕೊರಳು ಅ ಗಿಡದಲ್ಲಿ ಅಡಗಿದ ಹಕ್ಕಿಗಳ ಕೊರಳಾಗಿ ಬಿಡುತ್ತದೆ. ಈ ಸಾಲುಗಳನ್ನು ಇಲ್ಲಿ ಹೇಳಿದ್ದೇಕೆ? ಭಾಷೆಯಲ್ಲಿ ಈ ಹಾದಿಗಳನ್ನು ಹಿಡಿದು ನಾವು ನೆನಪಿಟ್ಟುಕೊಳ್ಳಬೇಕಾದ್ದನ್ನು ಮರೆಯದಂತೆ ನೋಡಿಕೊಳ್ಳುತ್ತೇವೆ ಎಂಬುದನ್ನು ಗುರುತಿಸಿಕೊಳ್ಳಬೇಕು. **ಈ ಎರಡು ಹಾದಿಗಳಲ್ಲಿ ಒಂದು ಹೋಲಿಕೆಯನ್ನು(=ಸಾದೃಶ್ಯವನ್ನು) ನೆಮ್ಮಿದರೆ, ಇನ್ನೊಂದು ನಂಟನ್ನು (=ಸಂಬಂಧವನ್ನು) ನೆಮ್ಮುತ್ತದೆ.**

ನಮ್ಮ ಸಂಸ್ಕೃತಿಯಲ್ಲಿ ಕೂಡಿಕೊಂಡ ನೆನಪುಗಳು ಕೂಡ ಹೀಗೆ ಹೋಲಿಕೆ ಮತ್ತು ನಂಟನ್ನು ನೆಮ್ಮಿಕೊಂಡಿರುತ್ತವೆ. ಇಲ್ಲಿರುವ ನೂರಾರು ಆಚರಣೆಗಳು, ಕತೆಗಳು, ಹಾಡುಗಳು ಹೀಗೆ ನೆನಪಿಗೆ ನೆರವಾಗುವ ಮೀಟುಗೋಲಾಗುವ ಬಯಕೆಯನ್ನು ಹೊಂದಿರುತ್ತವೆ. ಆದರೆ ಅವೆಲ್ಲವೂ ದಿನಕಳೆದಂತೆ ಹೀಗೆ ನೆನಪಿಗೆ ತಂದುಕೊಡಬಲ್ಲ ನೆಲೆಯನ್ನು ಕಾಯ್ದುಕೊಳ್ಳುತ್ತವೋ ಇಲ್ಲವೇ ಅದನ್ನು ಕಳೆದುಕೊಳ್ಳುತ್ತವೋ ಎನ್ನುವುದು ಬೇರೆಯ ಮಾತು. ನೆನಪು ಮರೆವಿನ ಕಣ್ಣು ಮಚ್ಚಾಲೆಯಾಟ ಒಬ್ಬೊಬ್ಬರ ಮಟ್ಟಿಗೆ ಎಷ್ಟು ದಿಟವೋ ಇಡೀ ಸಮುದಾಯಕ್ಕೂ ಅಷ್ಟೇ ದಿಟ.

# ನುಡಿ–ಸಂಸ್ಕೃತಿಗಳ ಸಂಬಂಧ

ಕನ್ನಡ ಭಾಷೆಗೂ ಕನ್ನಡ ಸಂಸ್ಕೃತಿಗೂ ಇರುವ ಸಂಬಂಧವೇನು? ಸಾಮಾನ್ಯವಾಗಿ ಇವೆರಡೂ ಒಂದೇ ಎಂಬಂತೆ ವ್ಯವಹರಿಸುವುದನ್ನು ಕಾಣುತ್ತೇವೆ. ಕನ್ನಡ ಸಂಸ್ಕೃತಿಯನ್ನು ನಾವು ಹೇಗೆ ಕಲ್ಪಿಸಿಕೊಳ್ಳುತ್ತೇವೆ ಎಂಬುದನ್ನು ಅವಲಂಬಿಸಿ ನಮ್ಮ ಚರ್ಚೆಗೆ ತಕ್ಕ ದಿಕ್ಕು ದೊರಕಬಹುದಾಗಿದೆ. ಈವರೆಗಿನ ನಮ್ಮ ಚರಿತ್ರೆಯನ್ನು ಅದರ ನಿರೂಪಣೆಯನ್ನು ಮತ್ತು ಅದರ ಭೌತಿಕ ಉಳಿಕೆಗಳನ್ನು ಸಂಸ್ಕೃತಿ ಎಂದು ಹೇಳುವುದುಂಟು. ಈ ಚರಿತ್ರೆ ಮತ್ತದರ ನಿರೂಪಣೆಗಳು ಆಳುವ ಶಕ್ತಿಗಳಿಂದ ನಿರ್ದೇಶಿತವಾಗಿರುತ್ತವೆಯಾದರೂ, ಆ ನಿರೂಪಣೆಗಳಿಗೆ ಪ್ರತಿಯಾದ ನಿರೂಪಣೆಗಳನ್ನು ನಿರಾಕರಿಸುವ ದನಿಗಳು ಇದ್ದೇ ಇರುತ್ತವೆ. ಈ ಸಂಕೀರ್ಣ ಸಂದರ್ಭವನ್ನು ಕನ್ನಡ ಭಾಷೆ ತನ್ನ ಒಡಲಿನಲ್ಲಿ ಅಡಗಿಸಿಟ್ಟುಕೊಂಡಿರುತ್ತದೆ. ಇದು ಎಲ್ಲ ಭಾಷೆಗಳಿಗೂ ಅನ್ವಯವಾಗುವ ಸಂಗತಿ. ಅಂದರೆ ಭಾಷೆಯೊಂದು ಅದನ್ನಾಡುವ ಜನಸಮುದಾಯದ ಸಾಂಸ್ಕೃತಿಕ ನೆಲೆಗಳನ್ನು ತನ್ನ ರಚನೆಯಲ್ಲಿ ಮತ್ತು ಬಳಕೆಯಲ್ಲಿ ಹುದುಗಿಸಿಟ್ಟುಕೊಂಡಿರುತ್ತದೆ ಅಥವಾ ಆ ಭಾಷೆಯನ್ನಾಡುವ ಜನರು ತಮ್ಮ ಸಾಂಸ್ಕೃತಿಕ ನೆಲೆಗಳನ್ನು ತಾವು ಆಡುವ ಭಾಷೆಯ ಮೂಲಕ ಆಚರಿಸುತ್ತಿರುತ್ತಾರೆ.

ಕನ್ನಡ ಭಾಷೆಯಲ್ಲಿ ಕನ್ನಡ ಸಂಸ್ಕೃತಿ ಬಿಂಬಿತವಾಗಿರುತ್ತದೆ ಎಂಬ ಮಾತನ್ನು ಮೇಲಿನ ವಿವರಣೆಯಲ್ಲಿ ನಾವು ಸರಿಯಾಗಿ ಗ್ರಹಿಸಬೇಕು. ಭಾಷೆಗೆ ಸಂಸ್ಕೃತಿಯ ನೆಲೆಗಳನ್ನು ನಿರ್ದೇಶಿಸುವ ಸಾಮರ್ಥ್ಯಗಳನ್ನು ಆರೋಪಿಸಲು ಬರುವುದಿಲ್ಲ. ಅದು ಸೂಚಕವಾಗಿ ಮಾತ್ರ ಕಾರ್ಯ ನಿರ್ವಹಿಸಬಲ್ಲುದು. ಅಂದರೆ ಸಂಸ್ಕೃತಿಯಲ್ಲಿ ಆಗುತ್ತಿರುವ ಪಲ್ಲಟಗಳನ್ನು ಕೂಡ ಭಾಷೆ ಬಿಂಬಿಸುತ್ತಿರುತ್ತದೆ. ಈ ಅಂಶವನ್ನು ಗಮನಿಸದಿದ್ದರೆ ಭಾಷೆಯ ಮೂಲಕ ಸಂಸ್ಕೃತಿಗೆ ನಿರ್ದೇಶನಗಳನ್ನು ನೀಡುವ ಅಪಾಯಕ್ಕೆ ತುತ್ತಾಗುತ್ತೇವೆ. ಈ ನೆಲೆಯಲ್ಲಿ ನಮ್ಮ ಸದ್ಯದ ಕೆಲವು ಆತಂಕಗಳನ್ನು ಪರಿಶೀಲಿಸೋಣ.

ಮೊದಲಲ್ಲಿ ಹೇಳಿದಂತೆ ಸಂಸ್ಕೃತಿಯಲ್ಲಿ ಪರಸ್ಪರ ವಿರೋಧವುಳ್ಳ ಹಲವು ನೆಲೆಗಳಿರುತ್ತವೆ. ಅವುಗಳಲ್ಲಿ ಕೆಲವು ಆಯಾ ಸಂದರ್ಭಕ್ಕನುಗುಣವಾಗಿ ಶಕ್ತಿ ರಾಜಕಾರಣದ ಒತ್ತಾಸೆಯನ್ನು ಪಡೆದು ತಾವೇ ಅಧಿಕೃತವೆಂಬಂತೆ ಬಿಂಬಿತವಾಗುತ್ತವೆ. ಆದರೆ ಉಳಿದ ನೆಲೆಗಳನ್ನು ಇಡಿಯಾಗಿ ಹತ್ತಿಕ್ಕುವುದು ಸಾಧ್ಯವಿಲ್ಲ. ಅವುಗಳನ್ನು ತಾತ್ಕಾಲಿಕವಾಗಿ ಹಿಂದಕ್ಕೆ ಸರಿಸಬಹುದು ಇಲ್ಲವೇ ನಿಷ್ಕ್ರಿಯಗೊಳಿಸಬಹುದು ಅಷ್ಟೆ. ಭಾಷೆಯು ಈ

ತಿಕ್ಕಾಟವನ್ನು ಹಲವು ನೆಲೆಗಳಲ್ಲಿ ಹೊರಗೆಡುಹುತ್ತಿರುತ್ತದೆ. ನಾವು ಪ್ರಧಾನವಾದುದನ್ನೇ ಗಮನಿಸುತ್ತಿದ್ದರೆ ಆಗ ಭಾಷೆಯಲ್ಲಿ ಕಾಣಿಸುವ ಇನ್ನಿತರ ಸಾಧ್ಯತೆಗಳನ್ನು ನಿರಾಕರಿಸುತ್ತೇವೆ ಅಥವಾ ಅವುಗಳಿಗೆ ಕಣ್ಮುಚ್ಚಿಕೊಳ್ಳುತ್ತೇವೆ. ಉದಾಹರಣೆಗೆ ಕನ್ನಡದ ಹಲವು ಪ್ರಭೇದಗಳನ್ನು ನೋಡೋಣ. ಇವುಗಳಲ್ಲಿ ಒಂದೆರಡು ಪ್ರಭೇದಗಳು 'ಶುದ್ಧ' ಅಥವಾ 'ಶಿಷ್ಟ' ಎನ್ನುವ ನಂಬಿಕೆಗೆ ಪಾತ್ರವಾಗಿವೆ. ಇದು ಆ ಪ್ರಭೇದಗಳನ್ನಾಡುವ ಪ್ರದೇಶ ಅಥವಾ ಸಮುದಾಯಗಳು ಸಾಂಸ್ಕೃತಿಕವಾಗಿ ಮೇಲುಗೈ ಪಡೆದಿರುವುದರ ಫಲಿತ. ಉಳಿದ ಪ್ರಭೇದಗಳು, ಒಂದೋ ತಮ್ಮ ಪ್ರಸಾರ ಸಾಧ್ಯತೆಯನ್ನು ಕಳೆದುಕೊಳ್ಳುತ್ತಿರುತ್ತವೆ ಅಥವಾ ಕೆಲವು ಸಾಮಾಜಿಕ ನೆಲೆಗಳ ಸೂಚಕಗಳಾಗಿ ಕೆಲಸಮಾಡತೊಡಗುತ್ತವೆ. ಸುಮ್ಮನೆ ನಮ್ಮ ಜನಪ್ರಿಯ ಪ್ರಸಾರ ಮಾಧ್ಯಮಗಳ ಕಾರ್ಯಕ್ರಮಗಳನ್ನು ನೋಡೋಣ. ಅಲ್ಲಿ ಪಾತ್ರ ಮತ್ತು ಸನ್ನಿವೇಶಗಳ ಚಿತ್ರಣದಲ್ಲಿ ಜಾತಿ ಮತ್ತು ಸಾಮಾಜಿಕ ಹಿನ್ನೆಲೆಗಳನ್ನು ಬಚ್ಚಿಡುವ ಯತ್ನವಿದ್ದಂತೆ ತೋರುತ್ತದೆಯಾದರೂ, ಅಲ್ಲಿ ಬಳಸುವ ಭಾಷೆಯು ಈ ಬಚ್ಚಿಡುವ ಯತ್ನವನ್ನು ಬಯಲು ಮಾಡುತ್ತದೆ. ಏಕೆಂದರೆ ಒರಟಾದ ಅಥವಾ ಕೆಡುಕಿನ ಸ್ವಭಾವದ ಕೆಲವು ಪಾತ್ರಗಳ ಚಿತ್ರಣದಲ್ಲಿ ಆ ಪಾತ್ರಕ್ಕೆ ಒದಗಿಸುವ ಭಾಷಾ ಪ್ರಭೇದವನ್ನು ಗಮನಿಸಿದರೆ ಈ ಅಂಶ ಸ್ಪಷ್ಟವಾಗುತ್ತದೆ. ಆ ಪಾತ್ರಗಳು 'ಶುದ್ಧ' ಇಲ್ಲವೇ 'ಶಿಷ್ಟ' ಪ್ರಭೇದಗಳಿಂದ ಹೊರಬಂದು ಬೇರೊಂದು ಕನ್ನಡವನ್ನು ಬಳಸುತ್ತಿರುತ್ತವೆ. ಈ ಭಾಷಾಪ್ರಭೇದವು ಪಾತ್ರದ ಸ್ವಭಾವವನ್ನು ಸೂಚಿಸುತ್ತದೆ ಎನ್ನುವುದಕ್ಕಿಂತ, ಸಾಂಸ್ಕೃತಿಕವಾಗಿ ಆ ಭಾಷಾಪ್ರಭೇದಕ್ಕೆ ನಾವು ಹಚ್ಚಿರುವ ಹಣೆಪಟ್ಟಿಯನ್ನು ತೋರಿಸುತ್ತದೆ.

ಕನ್ನಡ ಸಂಸ್ಕೃತಿ ಎಂದು ಗುರುತಿಸುತ್ತಿರುವ ಸ್ಥಿತಿಗೆ (ಇದು ನಿರಂತರ ಚಲನಶೀಲವಾದ್ದರಿಂದ 'ಸ್ಥಿತಿ' ಎಂಬ ಪದದ ಬಳಕೆ ಅಷ್ಟು ಸರಿಯಲ್ಲ), ಈಗ ಒಳಗೊಳ್ಳುವ ನೆಲೆ ಒದಗಿಬಂದಿದೆ. ಆದ್ದರಿಂದ 'ಅನ್ಯ'ವೆಂದು ವ್ಯಾಖ್ಯಾನಿಸುತ್ತಿರುವ ಸಂಸ್ಕೃತಿಯ ನೆಲೆಗಳೂ ಹೇಗಾದರೂ ಒಂದು ಬಗೆಯಲ್ಲಿ ಕನ್ನಡ ಸಂಸ್ಕೃತಿಯಲ್ಲಿ ಒಳನುಗ್ಗುತ್ತಲೇ ಇವೆ. ಈ 'ಅನ್ಯ' ಸಾಂಸ್ಕೃತಿಕ ಸಂಗತಿಗಳು ಕನ್ನಡ ಭಾಷೆಯಲ್ಲಿ ಹೇಗೆ ಕಾಣಿಸಿಕೊಳ್ಳುತ್ತವೆ ಎನ್ನುವುದು ಕುತೂಹಲದ ಸಂಗತಿ. ಆಳುವ ನೆಲೆಗಳು ಈ 'ಅನ್ಯ' ನೆಲೆಗಳನ್ನು ದೂರವಿರಿಸಲು ನಡೆಸಿರುವ ಯತ್ನಗಳ ಒಡನೆಯೇ ಈ 'ಅನ್ಯ'ನೆಲೆಗಳು ಕನ್ನಡ ಸಂಸ್ಕೃತಿಯಲ್ಲಿ ನೆಲೆಯೂರಿರುವ ಬಗೆಯೂ ಕನ್ನಡದಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು ನಿದರ್ಶನದಿಂದ ಈ ಪ್ರಕ್ರಿಯೆಯನ್ನು ಅರಿತುಕೊಳ್ಳಲು ಯತ್ನಿಸೋಣ.

ಜನರು ಮಾತಿನಲ್ಲಿ 'ಏನೋ ಹಣೆಯಲ್ಲಿ ಬರೆದಂತೆ ಆಗುತ್ತೆ; ಅಲ್ಲಿ ಬರೆದದ್ದನ್ನು ಅಳಿಸಲು ಬರುತ್ತಾ?' ಎನ್ನುವುದನ್ನು ಕೇಳಿದ್ದೇವೆ. ಹಾಗೆಯೇ ಮತ್ತೆ ಕೆಲವೊಮ್ಮೆ 'ಎಲ್ಲ ನಮ್ಮ ಕರ್ಮಫಲ; ಮಾಡಿದ್ದುಣ್ಣೋ ಮಹರಾಯ ಎಂಬಂತೆ ಎಲ್ಲವನ್ನು ಅನುಭವಿಸಬೇಕು' ಎಂದೂ ಹೇಳುವುದುಂಟು. ಇವೆರಡೂ ಒಂದೇ ಬಗೆಯ ಪ್ರತಿಕ್ರಿಯೆಗಳೆಂದು ಮೇಲು ನೋಟಕ್ಕೆ ತೋರುತ್ತದೆ. ಆದರೆ ಹಣೆಬರಹ ಮತ್ತು ಕರ್ಮಫಲಗಳು ಒಂದೇ ಅಲ್ಲ. ಮೊದಲನೆಯದು ಹುಟ್ಟಿದಾಗ ಅಥವಾ ಹುಟ್ಟಿದ ಮೇಲೆ ನಿಗದಿಯಾಗುವುದು. ಅದರಲ್ಲಿ

ಆಯ್ಕೆಗಳಿಲ್ಲ. ಕನ್ನಡ ಸಂಸ್ಕೃತಿಯ ಹಲವು ಆಚರಣೆ ಮತ್ತು ನಂಬಿಕೆಗಳು ಹುಟ್ಟಿದ ಮಗುವಿನ ಹಣೆಯ ಮೇಲೆ ಯಾರೋ (ಸಾಮಾನ್ಯವಾಗಿ ಇದಿಯಮ್ಮ ಇಲ್ಲವೇ ಶೆಟವಿ. ಮೌಖಿಕ ಪರಂಪರೆಗಳು ಈ ಕೆಲಸವನ್ನು ಹೆಣ್ಣು ದೈವತಗಳಿಗೆ ನೀಡಿದರೆ, ಶಿಷ್ಟ ಪರಂಪರೆಯು ಈ ಕೆಲಸ ಬ್ರಹ್ಮನದ್ದು ಎಂದು ನಂಬುತ್ತವೆ.) ಬಂದು ಈ ಬರೆಹವನ್ನು ಮೂಡಿಸುತ್ತಾರೆಂಬುದನ್ನು ಸೂಚಿಸುತ್ತವೆ. ಆದರೆ ಕರ್ಮಫಲ ಹುಟ್ಟುಸಾವುಗಳ ನಿರಂತರತೆಯನ್ನು ನಂಬುವಂತಹುದು. ಈ ಹುಟ್ಟಿನಲ್ಲಿ ಏನಾಗಬೇಕೆಂಬುದು ಹಿಂದಿನ ಹುಟ್ಟುಗಳಲ್ಲಿ ಮಾಡಿದ ಕೆಲಸಗಳ ಫಲಿತವಾಗಿರುತ್ತದೆ. ಇದರಲ್ಲಿ ಕೊಂಚ ಮಟ್ಟಿನ ಆಯ್ಕೆ ಸಾಧ್ಯವೆಂಬ ಸೂಚನೆ ಇದೆ. ಹೇಗೆಂದರೆ ಈ ಹುಟ್ಟಿನಲ್ಲಿ ಏನು ಮಾಡುತ್ತೇವೋ ಅದು ಮುಂದೆ ಲೆಕ್ಕಕ್ಕೆ ಬರುವುದರಿಂದ ನಮ್ಮ ಕಾರ್ಯವೈಖರಿಯನ್ನು ನಾವು ಅಗತ್ಯಗಳಿಗೆ ತಕ್ಕಂತೆ ರೂಪಿಸಿಕೊಂಡು 'ಪುಣ್ಯ ಸಂಚಯ' ಮಾಡಲು ಸಾಧ್ಯವಿದೆ. ನಮಗೆ ಇವೆರಡೂ ಚಿಂತನೆಗಳಲ್ಲಿ ಯಾವುದು ಸರಿ, ಯಾವುದು ತಪ್ಪು ಎನ್ನುವುದು ಮುಖ್ಯವಲ್ಲ. ಭಾಷೆಯಲ್ಲಿ ನಮ್ಮ ಸಂಸ್ಕೃತಿಯಲ್ಲಿ ಇರುವ ವಿರುದ್ಧ ನೆಲೆಗಳು ಹೇಗೆ ಕಾಣಿಸಿಕೊಳ್ಳುತ್ತವೆ ಎನ್ನುವುದನ್ನು ಗಮನಿಸುವುದಷ್ಟೇ ಈ ನಿದರ್ಶನದ ಉದ್ದೇಶ. ಹಣೆಬರಹ ಮತ್ತು ಕರ್ಮಫಲ ಎಂಬ ಮಾತುಗಳು ಲೋಕಗ್ರಹಿಕೆಯಲ್ಲಿ ಕನ್ನಡ ಸಂಸ್ಕೃತಿ ಅವಲಂಬಿಸುವ ವಿರುದ್ಧ ನೆಲೆಗಳ ಬಿಂಬಗಳಾಗಿವೆ. (ಇವುಗಳಲ್ಲಿ ಒಂದು ಕನ್ನಡದ ಪದರಚನೆಯಾದರೆ, ಇನ್ನೊಂದು ಸಂಸ್ಕೃತ ಪದರಚನೆಯಾಗಿರುವುದು ಆಕಸ್ಮಿಕವಲ್ಲ)

ಮೇಲಿನ ವಿವರಣೆಯನ್ನು ಎಚ್ಚರದಿಂದ ಗಮನಿಸಬೇಕು. ಜನ ಮಾತಾಡುವಾಗ ಹಣೆಬರಹವೆನ್ನಲಿ ಅಥವಾ ವಿಧಿಲಿಖಿತವೆನ್ನಲಿ ಆ ಮಾತುಗಳು ಅವರ ನಂಬಿಕೆಯ ಜಗತ್ತನ್ನು ಯಥಾವತ್ತಾಗಿ ಬಿಂಬಿಸುತ್ತವೆಂದು ವಾದಿಸಲು ಬರುವುದಿಲ್ಲ. ಅದು ಸಂಸ್ಕೃತಿಯ ಸಾಧ್ಯತೆಯೇ ಹೊರತು ಜನರ ನಂಬಿಕೆಯ ಜಗತ್ತಿನ ಪ್ರತಿಫಲನವಲ್ಲ. ಅಂದರೆ ಭಾಷೆ ಸಂಸ್ಕೃತಿಯ ಸಾಧ್ಯತೆಗಳನ್ನು ಹಿಡಿದಿಟ್ಟುಕೊಂಡಿರುತ್ತದೆಯೇ ಹೊರತು ಭಾಷಿಕರ ಅವಕಾಶಗಳನ್ನು ನಿಯಂತ್ರಿಸುವುದಿಲ್ಲ. ಇನ್ನೊಂದು ಉದಾಹರಣೆಯನ್ನು ಗಮನಿಸೋಣ.

ಕನ್ನಡ ಮಾತಾಡುವ ವ್ಯಕ್ತಿಯೊಬ್ಬರು 'ಯೋಚನೆ' ಎಂಬ ಪದವನ್ನು ಯಾವಾಗಲೂ 'ಏಚ್ನೆ' ಎಂದು ಉಚ್ಚರಿಸುತ್ತಾರೆ ಎಂದುಕೊಳ್ಳೋಣ. ಹೀಗೆ 'ಏಚ್ನೆ' ಎಂದು ಹೇಳುವ ಕನ್ನಡಿಗರ ಬಗೆಗೆ ನಮ್ಮ ಸಾಮಾಜಿಕ ತೀರ್ಮಾನಗಳು ಕೆಲವು ಇರುತ್ತವೆ. ಅವು ಒತ್ತಟ್ಟಿಗಿರಲಿ. ಈ ಕನ್ನಡಿಗರ ಜೊತೆಯಲ್ಲಿ ಇನ್ನೊಬ್ಬ ಕನ್ನಡಿಗರು ಮಾತಾಡುತ್ತಿದ್ದಾರೆ ಎಂದು ಕೊಳ್ಳಿ. ಈ ವ್ಯಕ್ತಿ 'ಯೋಚನೆ' ಎಂದೇ ಸದಾ ಉಚ್ಚರಿಸುವವರು. ಒಂದುವೇಳೆ ಈ ಎರಡನೆಯ ವ್ಯಕ್ತಿ ಮಾತಿನ ನಡುವೆ ಮೊದಲನೆಯ ವ್ಯಕ್ತಿಯ ಜತೆ ಮಾತನಾಡುತ್ತ 'ಏಚ್ನೆ' ಎಂದು ಬೇಕಂತಲೇ ಉಚ್ಚರಿಸಿದರೆ ಏನಾಗುತ್ತದೆ? ಸಹಜವಾಗಿಯೇ ಮೊದಲನೆಯ ವ್ಯಕ್ತಿಗೆ ತನ್ನನ್ನು ಅಥವಾ ತನ್ನ ಉಚ್ಚಾರಣೆಯನ್ನು ಎರಡನೆಯ ವ್ಯಕ್ತಿ ಗೇಲಿ ಮಾಡುತ್ತಿರುವಂತೆ ಅನ್ನಿಸುತ್ತದೆ. ಹೀಗಾಗಲು ಏಕೆ ಸಾಧ್ಯವೆಂದರೆ ಇಬ್ಬರಿಗೂ ಎರಡೂ

ಉಚ್ಚಾರಣೆಗಳು ಗೊತ್ತಿವೆ. ಆದರೆ ಯಾರು ಯಾವುದನ್ನು ಎಲ್ಲಿ ಮತ್ತು ಯಾರೊಡನೆ ಉಚ್ಚರಿಸಬೇಕೆಂಬ ಬಗೆಗೆ ಒಂದು ಸಾಮಾಜಿಕ ಒಪ್ಪಂದವಿರುತ್ತದೆ. ಇದನ್ನು ಉಲ್ಲಂಘಿಸುವುದು ಅಷ್ಟು ಸುಲಭವಲ್ಲ. ಅಂದರೆ ಭಾಷೆಯು ಸಂಸ್ಕೃತಿಯ ಒಳಗಿರುವ ಭಿನ್ನತೆಗಳನ್ನು ತನ್ನೊಳಗೆ ತುಂಬಿಕೊಂಡಿದ್ದರೂ, ಭಾಷಿಕರಿಗೆ ಈ ಭಿನ್ನ ಸಾಧ್ಯತೆಗಳೆಲ್ಲವೂ ಆಯ್ಕೆಗಳಾಗಿ ಲಭ್ಯವಿರುತ್ತವೆ. ಹೀಗಾಗಿ ಕನ್ನಡ ಸಂಸ್ಕೃತಿಯು ಕನ್ನಡ ಭಾಷೆಯಲ್ಲಿ ಬಿಂಬಿತವಾಗಿರುತ್ತದೆಂದು ಹೇಳುವಾಗ ಭಾಷಿಕರಿಗೆ ಇರುವ ಅವಕಾಶಗಳನ್ನು ಗಮನಿಸಬೇಕು. ಈ ಅಂಶವನ್ನು ನಮ್ಮ ಶಿಕ್ಷಣ ಕ್ರಮವು ಸಂಪೂರ್ಣವಾಗಿ ಮರೆತಿರುವುದರಿಂದಲೇ ಭಾಷಾಬಳಕೆಯಲ್ಲಿ, ಸಂವಹನದಲ್ಲಿ ಹಲವು ಗೊಂದಲಗಳು ಹುಟ್ಟಿಕೊಂಡಿವೆ. ಈ ಬಗೆಗೆ ನಾವು ಚಿಂತಿಸುವ ಅಗತ್ಯವಿದೆ.

# ನಡೆ ಮತ್ತು ನುಡಿ

ನಮ್ಮ ನುಡಿಯಲ್ಲಿ 'ನಡೆ' ಮತ್ತು 'ನುಡಿ' ಎಂಬ ಪದಗಳಿವೆ. ಇವುಗಳಲ್ಲಿ 'ನಡೆ'ಯು ನಾವು ಮಾಡುವ ಕೆಲಸವನ್ನೂ, 'ನುಡಿ'ಯು ನಾವು ಆಡುವ ಮಾತನ್ನೂ ಹೇಳುತ್ತವೆ. ನಡೆನುಡಿಗಳಲ್ಲಿ ಹೊಂದಾಣಿಕೆ ಇರಬೇಕೆಂದು ಬಲ್ಲವರು ಹೇಳುತ್ತಲೇ ಇದ್ದಾರೆ. ಹಾಗೆ ಹೊಂದಾಣಿಕೆ ಇದ್ದವರೇ ಒಳ್ಳೆಯವರು. ಹಾಗಿಲ್ಲದಿರುವುದು ಒಳ್ಳೆಯ ನಡತೆಯಲ್ಲವೆಂದೂ ಹೇಳುತ್ತಾರೆ. ಹೇಳುವುದು ಒಂದು, ಮಾಡುವುದು ಮತ್ತೊಂದು ಆದರೆ ಅದು ಸರಿಯಲ್ಲ ಎನ್ನುವುದೇ ಸನ್ನಡತೆಯ ನೆಲೆಯಾಗಿದೆ. ಇಲ್ಲಿಯೂ 'ಹೇಳು' ಮತ್ತು 'ಮಾಡು' ಎಂಬ ಪದಗಳು ನುಡಿ ಮತ್ತು ನಡೆಗಳನ್ನೇ ಸೂಚಿಸುತ್ತಿವೆ. ಆದರೆ ನಮ್ಮ ಭಾಷೆಯ ರಚನೆಯಲ್ಲಿ ಹೀಗೆ ನಡೆ ಮತ್ತು ನುಡಿಗಳನ್ನು ಒಂದಾಗಿಸಲು ಅವಕಾಶಗಳಿವೆಯೇ ಎಂಬುದು ಒಂದು ಪ್ರಶ್ನೆ. ಅಂದರೆ ನಡೆ ನುಡಿಗಳು ಒಂದಾಗಬೇಕೆಂಬುದು ನಮ್ಮ ಬಯಕೆಯಾಗಿದ್ದರೂ, ನಾವು ಬಳಸುವ ಭಾಷೆಯಲ್ಲೇ ಇವೆರಡೂ ನೆಲೆಗಳನ್ನು ಬೇರೆಬೇರೆಯಾಗಿ ಇರಿಸುವ ಲಕ್ಷಣಗಳಿವೆಯೇ? ಅದನ್ನು ಗಮನಿಸುವುದು ಈ ಟಿಪ್ಪಣಿಯ ಗುರಿ.

ಈ ವಾಕ್ಯಗಳನ್ನು ನೋಡಿ: ' ಜನರು ಓಡುತ್ತಿದ್ದಾರೆ', 'ಹುಡುಗರು ಗೋಡೆ ಹಾರಿದರು', 'ಮಗು ಹಾಲು ಕುಡಿಯಿತು', 'ನಾನು ಹಣ್ಣು ತಿಂದೆ' ಇವೆಲ್ಲ ವಾಕ್ಯಗಳಲ್ಲೂ ಒಂದೊಂದು ಕ್ರಿಯಾಪದವಿದೆ. ಕ್ರಿಯಾಪದಗಳು ಒಂದು ಕೆಲಸವನ್ನು ಬಣ್ಣಿಸುತ್ತವೆ. ಸಾಮಾನ್ಯವಾಗಿ ಈ ಕೆಲಸಗಳು ನಿಜಜೀವನದಲ್ಲಿ ನಡೆಯಬಹುದಾದ ಇಲ್ಲವೇ ನಡೆದಿರುವಂತಹವು. ಓಡುವುದು, ಹಾರುವುದು, ಕುಡಿಯುವುದು, ತಿನ್ನುವುದು ನಾವು ಮಾಡುವ ಕೆಲಸಗಳೇ ತಾನೇ?. ಆದರೆ ಮತ್ತೆ ಕೆಲವು ಬಗೆಯ ಕ್ರಿಯಾಪದಗಳು ನಮಗೆ ಆದ ಅನುಭವವನ್ನು ಹೇಳುತ್ತವೆಯೇ ಹೊರತು ನಾವು ಗಮನಿಸಬಹುದಾದ ಕೆಲಸಗಳನ್ನಲ್ಲ. ಉದಾ.ಗೆ ' ರಂಗನಿಗೆ ಹುಲಿ ಕಾಡಿನಲ್ಲಿ ಕಾಣಿಸಿತು' ಎಂಬ ವಾಕ್ಯದಲ್ಲಿ ರಂಗ ಹುಲಿಯನ್ನು 'ಕಂಡ' ಬಣ್ಣನೆ ಇದೆ. ಆದರೆ 'ಕಾಣುವುದು' ಅನುಭವವೇ ಹೊರತು ಅದನ್ನು ಯಾರೂ ಒಂದು ಕೆಲಸದಂತೆ ನೋಡಲು ಬರುವುದಿಲ್ಲ. ಅಂದರೆ ಹಾಗೆ ಒಂದು ಕ್ರಿಯೆ ನಡೆಯಿತೇ ಇಲ್ಲವೇ ಎಂಬುದನ್ನು ಖಚಿತವಾಗಿ ಹೇಳಲಾಗುವುದಿಲ್ಲ. 'ಕೆಟ್ಟ ಕನಸು ಕಂಡು ಎಚ್ಚರವಾಯಿತು' ಎಂದು ಯಾರಾದರೂ ಹೇಳಿದರೆ, ಅವರು ಎರಡು ಕ್ರಿಯೆಗಳನ್ನು ಕುರಿತು ಹೇಳುತ್ತಿದ್ದಾರೆ. ಕನಸು 'ಕಂಡದ್ದು' ಒಂದು ಕೆಲಸವಾದರೆ, 'ಎಚ್ಚರಗೊಂಡದ್ದು' ಇನ್ನೊಂದು ಕೆಲಸ. ಇವುಗಳಲ್ಲಿ ಎರಡನೆಯದು ನಮಗೆ

ಗೊತ್ತಾಗುತ್ತದೆ. ಅದು ಸಟೆಯೋ ದಿಟವೋ ಎಂಬುದನ್ನು ಹೇಳಬಹುದು. ಆದರೆ ಕನಸು ಅದನ್ನು ಕಂಡವರ ಅನುಭವ. ಅದು ಅವರಿಗೆ ಬಿದ್ದಿದೆಯೋ ಇಲ್ಲವೇ ಹಾಗೆ ಕನಸು ಬಿದ್ದಿತೆಂದು ಸುಮ್ಮನೆ ಹೇಳುತ್ತಿದ್ದಾರೋ ಎಂಬುದನ್ನು ಗೊತ್ತು ಮಾಡಿಕೊಳ್ಳಲು ಆಗುವುದಿಲ್ಲ.

ಇನ್ನೂ ಒಂದು ಬಗೆಯ ಕ್ರಿಯಾಪದಗಳಿವೆ. ಇವು ಕೆಲವೊಮ್ಮೆ ನಾವು ನೋಡಬಹುದಾದ ಕೆಲಸಗಳನ್ನು ಬಣ್ಣಿಸಿದರೆ, ಮತ್ತೆ ಕೆಲವೊಮ್ಮೆ ಅನುಭವದಲ್ಲಿ ದಿಟವಾಗುವ ಕೆಲಸಗಳನ್ನು ಹೇಳುತ್ತಿರುತ್ತವೆ. 'ಜನರು ಬಸ್ಸನ್ನು ಸುಟ್ಟರು' ಮತ್ತು 'ಬೆಂಕಿ ಸುಡುತ್ತದೆ' ಎಂಬ ವಾಕ್ಯಗಳನ್ನು ನೋಡಿ. 'ಸುಡು' ಎಂಬುದು ಮೊದಲ ವಾಕ್ಯದಲ್ಲಿ ನಾವು ನೋಡಬಹುದಾದ ಕೆಲಸವಾದರೆ, ಎರಡನೆಯ ವಾಕ್ಯದಲ್ಲಿ ಅದು ನಮಗೆ ಆಗುವ ಅನುಭವದ ಬಣ್ಣನೆ. 'ಕೇಳು' ಎನ್ನುವುದು ಇಂತಹುದೇ ಇನ್ನೊಂದು ಕ್ರಿಯಾಪದ. 'ಗೆಳೆಯನಲ್ಲಿ ಹಣ ಸಾಲ ಕೇಳಿದೆ' ಮತ್ತು 'ದೂರದಲ್ಲಿ ಯಾರೋ ಹಾಡುವುದು ಕೇಳಿಸಿತು' ಎಂಬ ಎರಡು ವಾಕ್ಯಗಳಲ್ಲಿ 'ಕೇಳು' ಎರಡು ಬೇರೆಬೇರೆ ಬಗೆಯಲ್ಲಿ ಬಳಕೆಯಾಗಿದೆ. ಮೊದಲನೆಯದರಲ್ಲಿ ನಾವು ಮಾಡುವ ಕೆಲಸದ ಬಣ್ಣನೆಯಿದ್ದರೆ, ಎರಡನೆಯದರಲ್ಲಿ ನಮಗೆ ಅಗುವ ಅನುಭವದ ಬಣ್ಣನೆಯಿದೆ.

ಇದಲ್ಲದೆ ಕೆಲವೊಮ್ಮೆ ನಾವು ದಿಟವಾಗಿಯೂ ನೋಡಬಹುದಾದ ಕೆಲಸಗಳನ್ನು ಬಣ್ಣಿಸುವ ಕ್ರಿಯಾಪದಗಳನ್ನು ನಮ್ಮ ಅನುಭವವನ್ನು ಬಣ್ಣಿಸಲು ಬಳಸಲು ಬರುತ್ತದೆ. 'ಅವನು ಸುಖದ ಬೆನ್ನಟ್ಟಿ ಓಡುತ್ತಿದ್ದಾನೆ', ' 'ನಾನು ತೋಡಿದ ಗುಳಿಯಲ್ಲಿ ಅವನು ಬಿದ್ದ' ' ಈ ವ್ಯವಹಾರದಲ್ಲಿ ಪೆಟ್ಟು ತಿಂದೆ' ಮುಂತಾದ ವಾಕ್ಯಗಳನ್ನು ಗಮನಿಸಿ. ಮೊದಲನೆಯದಲ್ಲಿ 'ಓಡುವುದು' ನಮಗೆ ಗೊತ್ತಾಗುವ ಕೆಲಸವಲ್ಲ. ಒಬ್ಬರ ನಡವಳಿಕೆಯನ್ನು ಬಣ್ಣಿಸಲು ಆ ಕ್ರಿಯಾಪದವನ್ನು ನಾವು ಬಳಸಿದ್ದೇವೆ. ಹಾಗೆ ಎರಡನೆಯ ವಾಕ್ಯದಲ್ಲಿ ಯಾರೂ 'ಬಿದ್ದಿಲ್ಲ'. ಇಲ್ಲಿಯೂ ಮೋಸಹೋದ ಅನುಭವವನ್ನು ಬಣ್ಣಿಸಲು ಆ ಕ್ರಿಯಾಪದದ ಬಳಕೆಯಾಗಿದೆ. ಮೂರನೆಯದಂತೂ ಸರಿಯೇ ಸರಿ. ಇಲ್ಲಿ 'ತಿನ್ನು'ವುದೇನೂ ಇಲ್ಲವಷ್ಟೆ. ಅಂದರೆ ನಾವು ಇಂತಹ ಕಡೆಗಳಲ್ಲಿ ಬಳಸುವ ಕ್ರಿಯಾಪದಗಳನ್ನು ಅವುಗಳ ಮೂಲನೆಲೆಗಳಿಂದ ಬದಲಿಸಿ ಬಳಸುತ್ತಿದ್ದೇವೆ ಎಂದು ತಿಳಿಯಬೇಕು. ನಮ್ಮ ದಿನದಿನದ ನೂರಾರು ವಾಕ್ಯಗಳು ಈ ಬಗೆಯಲ್ಲೇ ಇರುತ್ತವೆ.

ಇನ್ನೂ ಒಂದು ಬಗೆಯ ಕ್ರಿಯಾಪದಗಳಿವೆ. ಇವು ದಿಟವಾದ ಕೆಲಸಗಳನ್ನು ಬಣ್ಣಿಸುವುದಿಲ್ಲ. ಹಾಗೆಯೇ ಅನುಭವವೊಂದನ್ನು ಬಣ್ಣಿಸುತ್ತಲೂ ಇರುವುದಿಲ್ಲ. ಆದರೆ ಒಂದು 'ಕೆಲಸ' ಮಾಡಿದ್ದನ್ನು ಹೇಳುವಂತಿರುತ್ತವೆ. ಉದಾ.ಗೆ ಈ ಮುಂದಿನ ವಾಕ್ಯಗಳನ್ನು ನೋಡಿ: ' ಅಧಿಕಾರಿಯ ವರ್ತನೆಯ ವಿರುದ್ಧ ಜನರು ಪ್ರತಿಭಟಿಸಿದರು' , 'ಮನೆಯಲ್ಲಿ ಹೆಂಡತಿ ಯುದ್ಧವನ್ನೇ ಘೋಷಿಸಿದ್ದಾಳೆ', 'ಅಭ್ಯರ್ಥಿಯನ್ನು ಚುನಾವಣೆಯಲ್ಲಿ ತಿರಸ್ಕರಿಸಿ', ' ದೇಶವನ್ನು ಪ್ರಗತಿಪಥದಲ್ಲಿ ಕರೆದೊಯ್ಯಲು ನಾವೆಲ್ಲ ಪಣತೊಟ್ಟೆವು', 'ಬಹುರಾಷ್ಟ್ರೀಯ ಕಂಪನಿಗಳನ್ನು ಬಹಿಷ್ಕರಿಸಲು ಕರೆನೀಡಿದರು' ಈ ವಾಕ್ಯಗಳಲ್ಲಿ ಕ್ರಿಯಾಪದಗಳು ಇರುವುದೇನೋ ನಿಜ. ಆದರೆ ಈ ಕ್ರಿಯಾಪದಗಳು ಯಾವುದೇ ಗೊತ್ತಾದ

ಕೆಲಸವನ್ನಾಗಲೀ ಅನುಭವವನ್ನಾಗಲೀ ಬಣ್ಣಿಸುತ್ತಿಲ್ಲ. ಇವೆಲ್ಲವೂ ಮಾತಿನಲ್ಲಿ ನಡೆದಿರುವ ಕೆಲಸಗಳು. ನಾವು ಹಾಗೆ ಹೇಳುತ್ತೇವೆ ಅಷ್ಟೆ. ಅದಕ್ಕೆ ಸಂಬಂಧಿಸಿದ ಯಾವ ಕೆಲಸವೂ ಅಲ್ಲಿ ನಡೆದಿರುವುದಿಲ್ಲ. ಆದರೆ ಇವು ನಡೆಯದ ಕೆಲಸಗಳೆಂದು, ಹಾಗಾಗಿ ಸುಳ್ಳುಗಳೆಂದು ವಾದಿಸಲು ಬರುವುದಿಲ್ಲ. ಏಕೆಂದರೆ ನಾವು ಇಲ್ಲಿ ಬಣ್ಣಿಸಲಾದ ಕೆಲಸಗಳನ್ನು ನಂಬುತ್ತೇವೆ. ಅಲ್ಲೆಲ್ಲ ಒಂದು ಬಗೆಯ ಒಪ್ಪಂದ ಇದೆ. ಹೇಳುವವರು ಮತ್ತು ಕೇಳುವವರು ಈ ಒಪ್ಪಂದದಲ್ಲಿ ಪಾಲುದಾರರು. ಇಬ್ಬರ ಒಪ್ಪಿಗೆಯಿಂದಲೇ ಈ ಬಗೆಯ ಕ್ರಿಯಾಪದಗಳ ಬಳಕೆ ಸಾಧ್ಯ. ಇಂತಹ ಕ್ರಿಯಾಪದಗಳು ಬಣ್ಣಿಸುವ ಕೆಲಸವನ್ನು 'ಭಾಷಿಕ ಕ್ರಿಯೆ' ಎಂದು ಹೇಳುವುದುಂಟು. ಅಂದರೆ ಈ ಕೆಲಸಗಳು ಮಾತಿನಲ್ಲಿ ನಡೆದಿರುತ್ತವೆ. ಅವುಗಳಿಗೆ ಸಂಬಂಧಿಸಿದ ಯಾವ ಕೆಲಸವೂ ನಡೆದಿರುವುದಿಲ್ಲ. ಈ ಮಾತನ್ನು ಸರಿಯಾಗಿ ತಿಳಿಯಬೇಕು. ' ನಾನು ಪ್ರತಿಭಟಿಸುತ್ತೇನೆ' ಎಂದಾಗ ನಾನು ಹಾಗೆ ಹೇಳಿದ್ದೇನೆ ಅಷ್ಟೆ. ಪ್ರತಿಭಟಿಸುವ ಯಾವ ಕೆಲಸವನ್ನೂ ಮಾಡಬೇಕಿಲ್ಲ. ಹಾಗೆಂದು ಪ್ರತಿಭಟಿಸಿರುವುದು ಸುಳ್ಳು ಎಂದಲ್ಲ. ಪ್ರತಿಭಟಿಸುವುದನ್ನು ಸೂಚಿಸುವ ಮತ್ತು ಅದನ್ನು ಇತರರು ಗುರುತಿಸಲು ಬರುವ ಯಾವ ಕೆಲಸವೂ ನಡೆಯುವುದು ಇಲ್ಲಿ ಅಗತ್ಯವಾಗುವುದಿಲ್ಲ. (ಈ ಭಾಷಿಕಕ್ರಿಯೆಯನ್ನು ಹೇಳುವ ಪದಗಳು ಹೆಚ್ಚಾಗಿ ಸಂಸ್ಕೃತದಿಂದ ಬಂದಿವೆ ಎನ್ನುವುದನ್ನು ಕುತೂಹಲಕ್ಕಾಗಿ ಗುರುತಿಸಿಟ್ಟುಕೊಳ್ಳಬಹುದು)

ಈಗ ಮತ್ತೆ ನಮ್ಮ ಮೊದಲ ಮಾತಿಗೆ ಬರೋಣ. ನಡೆ ಮತ್ತು ನುಡಿಗಳು ಒಂದಾಗಿ ಬೆರೆಯಬೇಕೆನ್ನುವುದು ಆ ಮಾತು. ಆದರೆ ಅನುಭವವನ್ನು ಬಣ್ಣಿಸುವ ಕ್ರಿಯಾಪದಗಳು ಮತ್ತು ಭಾಷಿಕಕ್ರಿಯೆಗಳನ್ನು ಬಣ್ಣಿಸುವ ಕ್ರಿಯಾಪದಗಳು ಹೀಗೆ ನಡೆ ನುಡಿಗಳು ಬೆರೆಯದೆಯೂ ಇರಬಹುದಾದ ಅವಕಾಶಗಳನ್ನು ಹುಟ್ಟಿಹಾಕಿವೆ. ಅಂದರೆ ಈ ಕ್ರಿಯಾಪದಗಳು ರೂಪಿಸುವ ಲೋಕ ದಿಟದಲ್ಲಿ ಇರುವ ಲೋಕವಾಗಿರಬೇಕಿಲ್ಲ. ಆದರೆ ನಾವೆಲ್ಲರೂ ಈ ಕ್ರಿಯಾಪದಗಳು ಹುಟ್ಟುಹಾಕುವ ಲೋಕವನ್ನು ದಿಟವೆಂದೇ ನಂಬುತ್ತೇವೆ. ಹಾಗೆ ವ್ಯವಹರಿಸುತ್ತೇವೆ. ಇಲ್ಲೆಲ್ಲ ನಡೆನುಡಿಗಳ ನಡುವೆ ಬಿರುಕು ಬಿಟ್ಟಿದೆಯೆಂದು ತಿಳಿಯುವುದಿಲ್ಲ.

ನಮ್ಮ ಸುತ್ತ ಇರುವ ಮಾತಿನ ಲೋಕ ಬಹು ದೊಡ್ಡದು. ಅದರಲ್ಲೂ ರಾಜಕಾರಣದ ಲೋಕವು, ಮಾತಿನ ನೆಲೆಯಲ್ಲಿ ಕಟ್ಟಿಕೊಳ್ಳುವ ಬಗೆ ಮತ್ತು ದಿಟವಾಗಿ ಮೈತಳೆಯವ ಬಗೆಯಲ್ಲಿ ತುಂಬಾ ಅಂತರವಿರುತ್ತದೆ. ಇದನ್ನು ನಾವು ಒಪ್ಪಿಯೇ ಅಲ್ಲಿನ ಮಾತಿನ ನೆಲೆಗಳನ್ನು ಅರಿಯುತ್ತೇವೆ. ಆ ನುಡಿಯ ಲೋಕ ಭಾಷಿಕಕ್ರಿಯೆಗಳಿಂದಲೇ ತುಂಬಿರುತ್ತದೆ. ಆ ಲೋಕವೂ ಕೂಡ ಸ್ವಯಂಪೂರ್ಣ. ಅಲ್ಲಿ ಚರ್ಚೆಗಳಿಂದಲೇ ಚರ್ಚೆಗಳು ಬೆಳೆಯುತ್ತಿರುತ್ತವೆ. ಇದು ನಮ್ಮ ದಿನದಿನದ ಹತ್ತಾರು ನೆಲೆಗಳಲ್ಲೂ ನೆಲೆಯೂರಿರುವ ಲಕ್ಷಣವೇ ಆಗಿದೆ. ಅಂದರೆ ನಡೆನುಡಿಗಳು ಬೇರೆಯಬೇಕೆಂಬುದು ನಮ್ಮ ಬಯಕೆಯಾದರೆ ಅವು ಬೇರೆಬೇರೆಯಾಗಿಯೂ ಇರಲು ಬೇಕಾದ ಅವಕಾಶವನ್ನು ಭಾಷೆ ನಮಗೆ ರೂಪಿಸಿಕೊಟ್ಟಿದೆ ಎಂದಾಯ್ತು. ಇದು ಇಂದಿನ ಸಮಸ್ಯೆಯಲ್ಲ. ಲಾಗಾಯ್ತಿನಿಂದಲೂ ಇರುವ ಪ್ರಶ್ನೆಯಾಗಿದೆ.

# ಮಾತು ಮತ್ತು ಬರೆಹ

ಕನ್ನಡ ಮಾತು ಮತ್ತು ಬರೆವಣಿಗೆಗಳ ನಡುವೆ ಇರುವ ಸಂಬಂಧದ ಸ್ವರೂಪವನ್ನು ನಾವಿನ್ನೂ ಸರಿಯಾಗಿ ಅರಿತಿಲ್ಲವೆಂದು ತೋರುತ್ತದೆ. ಆಡುವ ಮಾತಿನ ಎಲ್ಲ ಧ್ವನಿಗಳನ್ನೂ, ಧ್ವನಿ ಸಂಯೋಜನೆಗಳನ್ನೂ ಯಥಾನುಕ್ರಮವಾಗಿ ಬರೆವಣಿಗೆಯಲ್ಲಿ ನಾವು ಸೂಚಿಸುತ್ತೇವೆ ಎಂದು ಸಾಂಪ್ರದಾಯಿಕವಾಗಿ ನಂಬಲಾಗಿದೆ. ಹಾಗಿಲ್ಲದೆ ಬರೆಯುವುದೊಂದು ಉಚ್ಚರಿಸುವುದೊಂದು ಆಗಿರುವ ಹಲವಾರು ಅನ್ಯಭಾಷೆಯ ನಿದರ್ಶನಗಳನ್ನು ಕೊಟ್ಟು ಕನ್ನಡ ಹೆಚ್ಚು ತಾರ್ಕಿಕ ಬರೆವಣಿಗೆಯನ್ನು ಹೊಂದಿರುವ ಭಾಷೆಯೆಂದು ಸಾಧಿಸುವುದುಂಟು. ಆದರೆ ವಾಸ್ತವದಲ್ಲಿ ಹಾಗಿಲ್ಲ. ನಮ್ಮ ಸಮಕಾಲೀನ ಬರೆವಣಿಗೆಯಲ್ಲೇ ಇರುವ ಹಲವಾರು ಗೊಂದಲಗಳನ್ನು ಇದಕ್ಕೆ ನಿದರ್ಶನಗಳನ್ನಾಗಿ ನೀಡಬಹುದಾಗಿದೆ.

ಇದಕ್ಕೂ ಮೊದಲು ಗಮನಿಸಬೇಕಾದ ಸಂಗತಿಯನ್ನು ಮುಂದೆ ಚರ್ಚಿಸಲಾಗಿದೆ. ಕನ್ನಡ ಲಿಪಿಯ ಉಗಮ ಮತ್ತು ವಿಕಾಸಗಳನ್ನು ಕುರಿತು ಸಾಕಷ್ಟು ಅಧ್ಯಯನಗಳು ನಡೆದಿವೆ. ತಜ್ಞರು ಲಿಪಿಯ ಸ್ವರೂಪದಿಂದ ಆ ಬರೆಹ ಯಾವ ಕಾಲದ್ದು ಎಂದು ಸಾಕಷ್ಟು ನಿಖರವಾಗಿ ತಿಳಿದ ಮಾತ್ರಕ್ಕೆ ಬರೆವಣಿಗೆಯ ಸಮಸ್ಯೆಗಳು ಪರಿಹಾರವಾದವು ಎನ್ನುವಂತಿಲ್ಲ. ಉಚ್ಚಾರಣೆಯಲ್ಲಿ ಹಲವಾರು ಧ್ವನಿಗಳು ಸಂಯೋಜನೆಗೊಳ್ಳುತ್ತಿರುತ್ತವೆ. ಈ ಸಂಯೋಜನೆಗಳನ್ನು ಪ್ರತಿನಿಧಿಸಲು ಕಾಗುಣಿತವನ್ನು, ಒತ್ತಕ್ಷರಗಳನ್ನು ರೂಪಿಸಲಾಗುತ್ತದೆ. ಅಲ್ಲದೆ ಅಪರಿಚಿತವಾದ ಅನ್ಯ ಭಾಷೆಯ ಪದಗಳನ್ನು ಎರವಲು ಪಡೆದಾಗ ಅವುಗಳನ್ನು ಕನ್ನಡ ಲಿಪಿ ಸಂಯೋಜನೆಯಲ್ಲಿ ಪ್ರತಿನಿಧಿಸುವ ಸಮಸ್ಯೆ ಬೇರೆ ಇರುತ್ತದೆ. ಇದಲ್ಲದೆ ಭಾಷೆಯಲ್ಲಿ ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಧ್ವನಿವ್ಯತ್ಯಾಸಗಳು ನಿರಂತರವಾಗಿ ನಡೆಯುತ್ತಲೇ ಇರುತ್ತವೆ. ಹಾಗಾದಾಗ ಈ ಎಲ್ಲ ಧ್ವನಿವ್ಯತ್ಯಾಸಗಳನ್ನೂ ಬರೆವಣಿಗೆಯಲ್ಲಿ ಪ್ರತಿನಿಧಿಸುವುದು ಅವಶ್ಯವಾಗುತ್ತದೆ. ಆದರೆ ಬರೆವಣಿಗೆಯಲ್ಲಿ ಲಭ್ಯವಿರುವ ಚಿಹ್ನೆಗಳು ಮತ್ತು ಅವುಗಳ ಬಳಕೆಯ ಸಂಯೋಜನೆಗಳು ಈ ವ್ಯತ್ಯಾಸಗಳನ್ನು ಸೂಚಿಸಲು ಅನುವು ಮಾಡಿಕೊಡುವಂತಿರುವುದಿಲ್ಲ. ಅಲ್ಲದೆ ಧ್ವನಿವ್ಯತ್ಯಾಸಗಳ ಸ್ವರೂಪ ಕೂಡ ಅಸ್ಪಷ್ಟವಾಗಿದ್ದರೆ ಆಗ ಸಮಸ್ಯೆ ಮತ್ತೂ ಜಟಿಲವಾಗುತ್ತದೆ.

ಕನ್ನಡದಲ್ಲಿ ಲಭ್ಯವಿರುವ ಬರೆವಣಿಗೆಗಳ ದಾಖಲೆಗಳನ್ನು ಈ ದೃಷ್ಟಿಯಿಂದ ಮರುಚಿಂತನೆಗೆ ಗುರಿಪಡಿಸಬೇಕಾಗಿದೆ. ಅಂಥ ದಾಖಲೆಗಳು: 1.ಶಾಸನಗಳು

2. ಹಸ್ತಪ್ರತಿಗಳು (ತಾಳೆವೋಲೆ ಮತ್ತು ಕಾಗದ) 3. ಕಡತಗಳು ಮತ್ತು 4. ಮುದ್ರಿತ ಕೃತಿಗಳು. ಈ ಪಟ್ಟಿಯಲ್ಲಿ ಮುದ್ರಿತ ಕೃತಿಗಳನ್ನು ಆಕರವಾಗಿ ಸೇರಿಸಿರುವುದು ವಿಚಿತ್ರ ಎನಿಸಬಹುದು. ಮುದ್ರಿತವಾದದ್ದು ಹೇಗೆ ಬರೆವಣಿಗೆಂಯಾದೀತು ಎಂದು ಹುಬ್ಬೇರಿಸಲೂಬಹುದು. ಆದರೆ ನಮ್ಮ ಈ ವಿಶ್ಲೇಷಣೆಯಲ್ಲಿ ಉಚ್ಚಾರಣೆಯನ್ನು ಲಿಪಿ ರೂಪಕ್ಕೆ ತರುವ ಎಲ್ಲ ಪ್ರಯತ್ನಗಳನ್ನೂ ಬರೆವಣಿಗೆ ಎಂದೇ ತಿಳಿದು ವ್ಯವಹರಿಸಲಾಗಿದೆ. ಮುದ್ರಿತ ಕೃತಿಗಳೂ, ಅದರಲ್ಲೂ ಹತ್ತೊಂಬತ್ತನೆಯ ಶತಮಾನದ ಬಗೆಬಗೆಯ ಮುದ್ರಣ ತಂತ್ರಗಳಲ್ಲಿ ಸಿದ್ಧಗೊಂಡ ಕೃತಿಗಳು ನಮಗೆ ಒಳ್ಳೆಯ ಆಕರಗಳನ್ನು ಒದಗಿಸಬಲ್ಲವು.

ಈ ಆಕರಗಳಿಂದ ಕನ್ನಡ ಭಾಷೆಯ ರಚನೆಗಳನ್ನು ಆಧುನಿಕರ ಓದಿಗೆ ಸಿದ್ಧ ಪಡಿಸುವಾಗ ಅಲ್ಲಿನ ಕನ್ನಡ ಬರೆವಣಿಗೆಯಲ್ಲಿ ಇರುವ 'ದೋಷ'ಗಳನ್ನು ನಿವಾರಿಸುತ್ತಾರೆ. ಈ ದೋಷಗಳನ್ನು ಸ್ಖಾಲಿತ್ಯಗಳೆಂದು ಕರೆಯಲಾಗುತ್ತದೆ. ಈ ಸ್ಖಾಲಿತ್ಯಗಳಿಗೆ ಎಲ್ಲ ಪ್ರಸಂಗಗಳಲ್ಲೂ ಲಿಪಿಕಾರರು ವೈಯಕ್ತಿಕವಾಗಿ ಕಾರಣರೆಂದು ತಿಳಿಯುವುದು ಸರಿಯಲ್ಲ. ಅವುಗಳಲ್ಲಿ ಹಲವು ಆಯಾ ಕಾಲ ಮತ್ತು ಆಯಾ ಪ್ರದೇಶದ ಕನ್ನಡ ಉಚ್ಚಾರಣೆಯ ಕೆಲವು ಲಕ್ಷಣಗಳನ್ನು ಪ್ರತಿನಿಧಿಸುತ್ತಿರುವ ಸಾಧ್ಯತೆಗಳಿವೆ.

ಈ ಕೆಳಗಿನ ನಿದರ್ಶನಗಳನ್ನು ನೋಡೋಣ: ಕನ್ನಡದ ಶಾಸನಗಳಲ್ಲಿ ಈಗ ನಾವು ಬಳಸುವ 'ಕೆರೆ' ಪದವನ್ನು ಬರೆಯುವಾಗ 'ಕೆಱೆ', 'ಕೆರ್ರೆ' ಮತ್ತು 'ಕೆರ್ಱೆ' ಎಂದು ಬರೆದಿರುವುದು ಕಂಡು ಬರುತ್ತದೆ. ಮೊದಲನೆಯದು ಆ ಪದದ ನಿಜ ರೂಪ. ಸಾಮಾನ್ಯವಾಗಿ ಉಳಿದೆರಡು ರೂಪಗಳನ್ನು ದೋಷಯುಕ್ತ ರೂಪಗಳೆಂದು ಪರಿಗಣಿಸಲಾಗುವುದು. ಆದರೆ ಕನ್ನಡದಲ್ಲಿದ್ದ ಱಕಾರ ರಕಾರವಾಗಿ ಪರಿವರ್ತಿತವಾದಾಗ ಱಕಾರದ ಉಚ್ಚಾರಣೆ ಮತ್ತು ರಕಾರದ ಉಚ್ಚಾರಣೆಗಳು ಒಂದೇ ಆಗತೊಡಗಿದುವಷ್ಟೆ. ಆಗ ರಕಾರವನ್ನುಳ್ಳ ಪದಗಳನ್ನು ಬರೆಯುವವರಿಗೆ ಆ ಪದದಲ್ಲಿರುವುದು (ಅಥವಾ ಮೊದಲು ಇದ್ದುದು) ಱಕಾರವೆಂದು ಸೂಚಿಸಬೇಕಿತ್ತು. ಆದರೆ ಱಕಾರದ ಲಿಪಿಯನ್ನು ಬಳಸುವಂತಿರಲಿಲ್ಲ. ಱಕಾರದ ಉಚ್ಚಾರಣೆಯನ್ನು ಸೂಚಿಸುವ ಪ್ರಯತ್ನವಾಗಿ ಮೇಲೆ ಹೇಳಿದ ನಿದರ್ಶನದಲ್ಲಿ ರಕಾರಕ್ಕೆ ರಕಾರದ ಒತ್ತನ್ನು ನೀಡಲಾಗಿದೆ. ಈಗಲೂ ಱಕಾರವನ್ನು ಉಳಿಸಿಕೊಂಡಿರುವ ಕನ್ನಡದ ಉಪಭಾಷೆಯಾದ ಸೋಲಿಗ ಕನ್ನಡವನ್ನು ಕೇಳಿಸಿಕೊಂಡಾಗ ಅಲ್ಲಿ ಱಕಾರದ ಉಚ್ಚಾರಣೆ ನಮಗೆ 'ರ್ಱ' ಅಥವಾ 'ರ್ರ' ಎಂದೋ ಕೇಳಿಸುತ್ತದೆ. ಅಂದರೆ ಶಾಸನವನ್ನು ಬರೆಯುತ್ತಿದ್ದವರು ತಮ್ಮ ಕಾಲದಲ್ಲಿ ನಡೆದಿದ್ದ ಧ್ವನಿ ಪರಿವರ್ತನೆಗೆ ಸಂವಾದಿಯಾಗಿ ಬರೆವಣಿಗೆಯಲ್ಲಿ ಇಂಥ ಸೂಚನೆಗಳನ್ನು ನೀಡಿದ್ದಾರೆ ಎನ್ನಬಹುದು. ಅಲ್ಲದೆ ಱಕಾರ ಉಚ್ಚಾರಣೆಯನ್ನು ಆ ಶಾಸನದ ಕಾಲದಲ್ಲಿ ಹೇಗೆ ಗ್ರಹಿಸಲಾಗುತ್ತಿತ್ತು ಎಂಬುದನ್ನೂ ಈ 'ಸ್ಖಾಲಿತ್ಯ' ಸೂಚಿಸುತ್ತದೆ.

ರೇಫೆಯುಕ್ತ ವ್ಯಂಜನದ್ವಿತ್ವಗಳಲ್ಲಿ ಸಮರೂಪಧಾರಣೆಯಾದದ್ದು ಕನ್ನಡದಲ್ಲಿ ಸಂಭವಿಸಿದ ಇನ್ನೊಂದು ಧ್ವನಿವ್ಯತ್ಯಾಸ. ಇರ್ದ>ಇದ್ದ, ಅದರ್ಕೆ>ಅದಕ್ಕೆ ಇವು ಇಂಥ

ಬದಲಾವಣೆಗೆ ನಿದರ್ಶನಗಳು. ಇಂಥ ರೂಪಗಳನ್ನು ಶಾಸನಗಳಲ್ಲಿ ಬರೆಯುವಾಗಲೂ ಮೊದಲು ಇದ್ದ ರೇಫೆಯನ್ನು ಮತ್ತು ಅನಂತರ ಬಂದ ಸಜಾತೀಯ ದ್ವಿತ್ವವನ್ನು ಒಟ್ಟಾಗಿ ಬರೆಯುವುದು ಕಂಡುಬರುತ್ತದೆ. ಅಂದರೆ 'ಅದಕ್ಕೆ' ಬದಲಾಗಿ 'ಅದರ್ಕೆ' ಎಂದು ಬರೆಯಲಾಗುತ್ತದೆ. ಈ ಎರಡೂ ಚಿಹ್ನೆಗಳನ್ನು (ರೇಫೆ ಮತ್ತು ವ್ಯಂಜನದ ದ್ವಿತ್ವ) ಬರೆಯಲು ಕಾರಣಗಳಿವೆ. ಈಗ ದ್ವಿತ್ವವಾಗಿರುವ ರೂಪಗಳ ಮೂಲರೂಪದಲ್ಲಿ ರೇಫೆ ಇದ್ದಿತೆಂಬುದನ್ನು ಸೂಚಿಸುವುದು ಉದ್ದೇಶ. ನಾವು ಈಗ ಇಂಗ್ಲಿಶಿನಿಂದ ಎರವಲು ಪಡೆದ ಪದಗಳಲ್ಲಿ F ಧ್ವನಿಗೆ ಸ್ವತಂತ್ರ ಉಚ್ಚಾರಣೆ ಇದ್ದರೆ ಅದನ್ನು ಬರೆವಣಿಗೆಯಲ್ಲಿ ಸೂಚಿಸಲು ಫಕಾರದ ಕೆಳಗೆ ಅಕ್ಕಪಕ್ಕದಲ್ಲಿ ಎರಡು ಚುಕ್ಕಿಗಳನ್ನು ಇಡುತ್ತೇವೆ. ಆದರೆ ಉಚ್ಚರಿಸುವಾಗ ಇಂಗ್ಲಿಶಿನ ಉಚ್ಚಾರಣೆಯನ್ನು ಅನುಸರಿಸುತ್ತೇವೆ ಎಂಬುದು ಖಾತ್ರಿಯಿಲ್ಲ. ಅಂದರೆ ಬರೆವಣಿಗೆಯಲ್ಲಿ ಮೂಲರೂಪವನ್ನು ಸೂಚಿಸುವ ಉದ್ದೇಶ ಮಾತ್ರ ಇದ್ದೇ ಇರುತ್ತದೆ. ಹಾಗೆಯೇ ಶಾಸನಗಳಲ್ಲೂ ರೇಫೆಯುಕ್ತ ಪದಗಳನ್ನು ಬರೆಯುವಾಗ ಇಂಥ ಕಾಗುಣಿತದ ಸೂಚನೆಗಳನ್ನು ನೀಡುತ್ತಿರುವಂತಿದೆ.

ಶಾಸನವೊಂದರಲ್ಲಿ 'ಅಧಿಕಾರಿಗಳಿಗೆವೂ' ಗಉಡಗಳಿಗೆವೂ' 'ಮಾಧುವದೇವರಿಗೆವೂ' ಎಂಬ ರೂಪಗಳು ಕಂಡುಬರುತ್ತವೆ. (ಎ.ಕ. 7 ಪು. 87) ಬರೆವಣಿಗೆಯಲ್ಲಿ ನಾವು ನಿರೀಕ್ಷಿಸುವ ರೂಪಗಳು ಕ್ರಮವಾಗಿ ಅಧಿಕಾರಿಗಳಿಗೂ, ಗೌಡಗಳಿಗೂ, ಮಾಧವದೇವರಿಗೂ ಎಂದಾಗಿರುತ್ತದೆ. ಸಮುಚ್ಚಯವಾಚಿಯಾದ ಊಕಾರವನ್ನು, ಗೆಯನ್ನು ಚತುರ್ಥೀ ವಿಭಕ್ತಿ ಪ್ರತ್ಯಯವಾಗಿ ಉಳ್ಳ ರೂಪಗಳಿಗೆ ಹೇಗೆ ಹತ್ತಿಸಬೇಕೆಂಬುದು ಸಮಸ್ಯೆಯೇ ಸರಿ. ತಲೆಗೆ+ಊ ತಲೆಗೆಯೂ ಎಂದಾಗಬಹುದು. ಆದರೆ ನಾವು ಅದನ್ನು ತಲೆಗೂ ಎಂದು ಉಚ್ಚರಿಸುತ್ತೇವೆ ಹಾಗೂ ಬರೆಯುತ್ತೇವೆ. ನಮ್ಮ ಪಾಲಿಗೆ ಅಲ್ಲಿ ಸಮಸ್ಯೆ ಇಲ್ಲ. ಆದರೆ ವಾಸ್ತವವಾಗಿ ಅಲ್ಲಿರುವ ಉಚ್ಚಾರಣೆಯ ಸಮಸ್ಯೆಯನ್ನೇ ಶಾಸನವು ಬರೆವಣಿಗೆಯಲ್ಲಿ ದಾಖಲು ಮಾಡುತ್ತಿದೆ. ಆದ್ದರಿಂದ ಈ ನಿದರ್ಶನದಲ್ಲಿರುವ ಬರೆವಣಿಗೆ ಸ್ಖಾಲಿತ್ಯವಾಗಿರದೆ ಕನ್ನಡ ಬರೆವಣಿಗೆಯ ಚರಿತ್ರೆಯಲ್ಲಿ ಒಂದು ಮುಖ್ಯ ಮಜಲನ್ನು ಸೂಚಿಸುತ್ತದೆ.

ಇ/ಉ ಸ್ವರಾದಿ ಪದಗಳನ್ನು ಬರೆಯುವಾಗ ಹಸ್ತಪ್ರತಿಗಳಲ್ಲಿ ಕ್ರಮವಾಗಿ ಯಿ ಮತ್ತು ವು ಗಳನ್ನು ಸ್ವರಗಳ ಬದಲಾಗಿ ಬರೆಯುವುದುಂಟು. ಹಾಗೆಯೇ ಈ ಎರಡೂ ಸ್ವರಗಳ ದೀರ್ಘರೂಪಗಳನ್ನು ಆದಿಯಲ್ಲುಳ್ಳ ಪದಗಳನ್ನು ಬರೆಯುವಾಗ ಆ ಸ್ವರಗಳಿಗೆ ಬದಲಾಗಿ ಯೀ ಮತ್ತು ವೂ ಗಳನ್ನು ಬರೆದಿರುವ ನಿದರ್ಶನಗಳಿವೆ. ಹಾಗೆಯೇ ಎ/ ಒ ಕಾರಾದಿ ಪದಗಳನ್ನು ಬರೆಯುವಾಗ ಆಯಾ ಸ್ವಗಳ ಬದಲು ಪದಾದಿಯಲ್ಲು ಯೆ ಮತ್ತು ವೊ ಗಳನ್ನು ಬರೆಯುತ್ತಾರೆ. ಎ/ಒಕಾರಾದಿ ಪದಗಳನ್ನು ಬರೆಯುವಾಗ ಎ/ ಒಕಾರದ ಬದಲು, ಕ್ರಮವಾಗಿ ಯೆ/ವೊ ಬರೆಯುವ ಬದಲು ಕೆಲವು ಸಂದರ್ಭಗಳಲ್ಲಿ ಯ/ವ ಕಾರವನ್ನು ಬರೆಯುವುದಿದೆ. ಉದಾಹರಣೆಗೆ 'ಒಂದು' ಪದವನ್ನು ವೊಂದು ಅಥವಾ ವಂದು ಎಂದು ಎರಡೂ ರೀತಿಗಳಲ್ಲಿ ಬರೆಯುವುದನ್ನು ಕಾಣುತ್ತೇವೆ. ಈ ಬರೆವಣಿಗೆಯ ಕ್ರಮವನ್ನು ನಾವು ಆಯಾ ಕಾಲದ ಮತ್ತು ಹಸ್ತಪ್ರತಿಕಾರರ ಪ್ರದೇಶದ ಕನ್ನಡದ ಉಚ್ಚಾರಣೆಯ ಲಕ್ಷಣಗಳೆಂದು ತಿಳಿಯಬೇಕಾಗಿದೆ. ಈಗಲೂ ಈ ಸ್ವರಗಳನ್ನು

ಆದಿಯಲ್ಲುಳ್ಳ ಪದಗಳನ್ನು ಉಚ್ಚರಿಸುವಾಗ ಸ್ವರಾದಿಯಾಗಿ ಉಚ್ಚರಿಸುವುದಕ್ಕಿಂತ ಸಂಬಂಧಿಸಿದ ವ್ಯಂಜನಗಳನ್ನೇ ಆದಿಯಲ್ಲಿ ಉಚ್ಚರಿಸುವ ಪ್ರವೃತ್ತಿಯಿದೆ. ಇದಲ್ಲದೆ ಎ/ಒ ಕಾರಗಳಿಗೆ ಸಂಬಂಧಿಸಿದಂತೆ ಮೇಲೆ ಹೇಳಿದ ವಿಕಲ್ಪಗಳು ಅಧ್ಯಯನಕ್ಕೆ ಯೋಗ್ಯವಾಗಿವೆ. ಈ ವಿಕಲ್ಪಗಳ ಪ್ರಸಾರವನ್ನು ಗಮನಿಸುವ ಮೂಲಕ ಕನ್ನಡ ಭಾಷೆಯ ಆಡುನುಡಿಯ ವಿಕಲ್ಪಗಳ ಗಡಿರೇಖೆಗಳನ್ನು ಗುರುತಿಸುವುದು ಸಾಧ್ಯವಾಗುತ್ತದೆ.

ಶಾಸನಶಾಸ್ತ್ರದಲ್ಲಿ ಪರಿಣಿತರಾದವರ ಪ್ರಕಾರ ವಿಜಯನಗರದ ಅರಸರ ಕಾಲ ಮತ್ತು ಅನಂತರದ ಪಾಳೆಯಗಾರರ ಕಾಲದಲ್ಲಿ ಆಂಧ್ರಪ್ರದೇಶದ ಹಲವಾರು ಲಿಪಿಕಾರರು ಕನ್ನಡನಾಡಿನಲ್ಲಿ ನೆಲೆಸಿದ್ದಾರೆ. ಅವರೆಲ್ಲ ದ್ವಿಭಾಷಿಕರು. ಅವರು ಕನ್ನಡ ಶಾಸನಗಳನ್ನು ಬರೆಯುವಾಗ ಸಹಜವಾಗಿಯೇ ತೆಲುಗು ಭಾಷೆಯ ಕೆಲವು ಉಚ್ಚಾರಣೆಯ ಲಕ್ಷಣಗಳನ್ನು ಕನ್ನಡ ಲಿಪಿಗಳಲ್ಲಿ ಪ್ರತಿನಿಧಿಸಿರುವ ಸಾಧ್ಯತೆಗಳಿವೆ. ನ, ಣ ಮತ್ತು ಲ, ಳಗಳಿಗೆ ಸಂಬಂಧಿಸಿದ ವ್ಯತ್ಯಯಗಳು ಗಮನಾರ್ಹವಾಗಿವೆ. ಇವರು ಬರೆದಿರುವ ಅಥವಾ ಕೆತ್ತಿರುವ ಶಾಸನಗಳಲ್ಲಿರುವ ಇಂಥ ಬರವಣಿಗೆಯ ಸ್ಖಾಲಿತ್ಯಗಳು ವಾಸ್ತವವಾಗಿ ದ್ವಿಭಾಷಿಕರ ಉಚ್ಚಾರಣೆಯ ಸಮಸ್ಯೆಗಳನ್ನು ಸೂಚಿಸುತ್ತವೆ. ಮರಾಠಿ ಮತ್ತು ಕನ್ನಡ ದ್ವಿಭಾಷಿಕ ಪ್ರದೇಶದ ಶಾಸನಗಳಲ್ಲಿ ಮತ್ತು ಕನ್ನಡ ತಮಿಳು ದ್ವಿಭಾಷಿಕ ಪ್ರದೇಶದ ಶಾಸನಗಳಲ್ಲಿ ಆಯಾ ಪ್ರದೇಶದ ದ್ವಿಭಾಷಿಕರ ಉಚ್ಚಾರಣೆಯ ವೈವಿಧ್ಯಗಳು ಕನ್ನಡ ಭಾಷೆಯ ಲಿಪೀಕರಣ ಪ್ರಕ್ರಿಯೆಯಲ್ಲಿ ತಲೆಹಾಕಿರುವುದು ಸಹಜವೇ ಆಗಿದೆ.

ಈ ಮೇಲಿನ ಕೆಲವು ನಿದರ್ಶನಗಳಿಂದ, ನಮಗೆ ಲಭ್ಯವಿರುವ ಲಿಖಿತ ದಾಖಲೆಗಳ ಮೂಲಕ, ಕನ್ನಡ ಭಾಷೆಯ ಉಚ್ಚಾರಣೆಗಳ ವಿಕಲ್ಪಗಳನ್ನು ಪ್ರತಿನಿಧಿಸಲು ಕನ್ನಡ ಬರವಣಿಗೆ ಪ್ರಯತ್ನಿಸಿರುವ ಬಗೆಯನ್ನು ತಿಳಿಯುವುದು ಸಾಧ್ಯವೆಂಬುದು ಸ್ಪಷ್ಟವಾಗಿವೆ.

## ಮಾತಿನಲ್ಲಿ ಸಾಮಾಜಿಕತೆ

ಕೊಡೆಯೆಂಬರಾತ ಪತ್ರಮನುದರ ದೇಶಮಂ
ಪೊಡೆಯೆಂಬರೊಲಿದು ಮಥನವೆಸಗೆಂಬುದಂ
ಕಡೆಯೆಂಬರಾರಡಿಯನಳಿಯೆಂಬರುದಕ ಪ್ರವಾಹಮಂ
ತೊರೆಯೆಂಬರು

ಮಡಿಯೆಂಬರಂಬರದ ಧೌತಮಂ ಕಬರಿಯಂ
ಮುಡಿಯೆಂಬರೆಡೆ ಬಿಡದೆ ಮುಸಕಿರ್ದ ಮೇಘಮಂ
ಜಡಿಯೆಂಬರುರು ಶಿಲೆಯನರೆಯೆಂಬರಲ್ಲದಿವ ನುಡಿಯರವ
ನಾಳ್ವೆಳೆಯೊಳು

ಇದು ಲಕ್ಷ್ಮೀಶನ ಜೈಮಿನಿ ಭಾರತದ ಪದ್ಯ. ನಡುಗನ್ನಡದ ಹಲವು ಕೃತಿಗಳಲ್ಲಿ ರಾಜ್ಯವರ್ಣನೆಯ ಪ್ರಸಂಗಗಳು ಬಂದಾಗ ಈ ಮೇಲಿನ ಮಾದರಿಯ ರಚನೆಗಳು ಕಂಡುಬರುತ್ತವೆ.

ದೊಡ್ಡಯ್ಯನ (ಚಂದ್ರಪ್ರಭ ಪುರಾಣ) ವರ್ಣನೆ ಹೀಗಿದೆ.

ಪಿಡಿಯೆಂಬೀ ನುಡಿ ಪೆಣ್ಣಾನೆಗಳೊಳು
ಮಡಿಯೆಂಬುದು ರಜಕರೊಳು
ಜಡತೆ ಜಲಾಶಯದೊಳಗಲ್ಲದಾನಾ
ಡೆಡೆಯೊಳಗಿಲ್ಲ ಭಾವಿಪಲು
ತಡೆಯೆಂಬುದು ಪನ್ನಗ ಸಂತತಿಯೊಳು
ತೊಡೆಯೆಂಬುದು ಜಠರದೊಳು
ಕೊಡೆಯೆಂಬುದಾತಪತ್ರದೊಳಗಲ್ಲದೆ
ನುಡಿಯಲಿಲ್ಲಾ ದೇಶದೊಳು

ಕನಕದಾಸರ (ಮೋಹನ ತರಂಗಿಣಿ) ವರ್ಣನೆ

ಪೊಡೆಯೆಂಬುದು ಗಂಧಶಾಲಿಯೊಳ್ ಕೈಯೊಳು
ಕೊಡೆಯೆಂಬರಾತ ಪತ್ರವನು

ತಡೆಯೆಂಬುದಹಿಮಂತ್ರದೊಳಗಲ್ಲದಾ ದೇಶ
ದೆಡೆಯೊಳೀ ಶಬ್ದಂಗಳಿಲ್ಲ

ಇವು ಕೆಲವು ಮಾದರಿಗಳು. ನಿರ್ದಿಷ್ಟ ಮಾದರಿಯ 'ಕವಿಸಮಯ'ಗಳಂತೆ ಕಂಡರೂ ಕುತೂಹಲದ ಸಂಗತಿಗಳನ್ನು ಅಡಕಗೊಳಿಸಿಕೊಂಡಿವೆ.

ಮೊದಲ ಷಟ್ಪದಿಯನ್ನು ಉದಾಹರಣೆಗಾಗಿ ವಿವರಿಸಿಕೊಳ್ಳೋಣ

ಆ ರಾಜ (=ಧರ್ಮರಾಯ)ನ ಆಳ್ವಿಕೆಯ ಪ್ರದೇಶದಲ್ಲಿ ಜನರು ಆತಪತ್ರವನ್ನು 'ಕೊಡೆ' ಉದರದೇಶವನ್ನು 'ಪೊಡೆ', ಮಥನ ಮಾಡುವುದನ್ನು 'ಕಡೆ' ಆರಡಿಯನ್ನು 'ಅಳಿ' ಉದಕ ಪ್ರವಾಹವನ್ನು 'ತೊರೆ' ಬಟ್ಟೆಯ ಶುಚಿಯನ್ನು 'ಮಡಿ' ಕೂದಲನ್ನು 'ಮುಡಿ' ದಟ್ಟೈಸಿದ ಮೋಡಗಳಿಗೆ 'ಜಡಿ' ಎನ್ನುತ್ತಾರೆ. ಹೀಗಿಲ್ಲದೆ ಬೇರೆ ಅರ್ಥಗಳಲ್ಲಿ (=ಪ್ರಸಂಗಗಳಲ್ಲಿ) ಈ ಪದಗಳನ್ನು (=ಕೊಡೆ, ಪೊಡೆ, ಕಡೆ, ಅಳಿ, ತೊರೆ, ಮಡಿ, ಮುಡಿ ಮತ್ತು ಜಡಿ) ಅಲ್ಲಿನ ಜನರು ಬಳಸುವುದಿಲ್ಲ.

ಜನರ ಸ್ವಭಾವವನ್ನು ಸೂಚಿಸುವ ವರ್ಣನೆಯಿದು. ಸಾಮಾಜಿಕ ಭಾಷಾಶಾಸ್ತ್ರಜ್ಞರು ಸಾಮಾಜಿಕರ ಸ್ವಭಾವವನ್ನು, ಚಹರೆಯನ್ನು ಗುರುತಿಸುವ ಹಲವು ಸೂಚಕಗಳಲ್ಲಿ ಭಾಷೆಯೂ ಒಂದೆಂದು ತಿಳಿಯುತ್ತಾರೆ. ಇಂಥ ವರ್ಣನೆಗಳ ಮಾದರಿಯನ್ನು ಅನುಸರಿಸಿದ ಕವಿಗಳು ತಮಗರಿವಿಲ್ಲದಂತೆ ಸಾಮಾಜಿಕ ಭಾಷಾಶಾಸ್ತ್ರಜ್ಞರ ಈ ನಿಲುವನ್ನು ಒಪ್ಪಿದಂತಿದೆ. ಕೊಂಚ ವಿವರಗಳನ್ನು ನೋಡೋಣ. ಈ ಷಟ್ಪದಿಯಲ್ಲಿ ಉಲ್ಲೇಖಿಸಿದ ಎಂಟು ಪದಗಳಲ್ಲಿ ಕೆಲವು ನಾಮಪದಗಳಾಗಿ ಮಾತ್ರವಲ್ಲ ಕ್ರಿಯಾಪದಗಳಾಗಿಯೂ ಕನ್ನಡದಲ್ಲಿ ಬಳಕೆಯಲ್ಲಿವೆ. ಕೊಡೆ=ಕೊಡುವುದಿಲ್ಲ, ಪೊಡೆ=ಹೊಡೆ, ಕಡೆ=ಹೊರಗೆ ನಡೆ, ಅಳಿ=ನಾಶವಾಗು, ತೊರೆ=ಕೈಬಿಡು, ಮಡಿ-ಅಂತ್ಯವಾಗು ಮುಡಿ=ಕೊನೆ, ಜಡಿ=ಜೋರಾಗಿ ಹೊಡೆ. ಈ ಎಲ್ಲ ಪದಗಳಿಗೂ ಹಾಗಾಗಿ ಒಂದಕ್ಕಿಂತ ಹೆಚ್ಚು ಅರ್ಥಗಳಿವೆ. ಕವಿ ಹೇಳುವಂತೆ ಆ ಜನರು ಈ ಪದಗಳನ್ನು ಒಂದು ಅರ್ಥದಲ್ಲಿ ಮಾತ್ರ ಬಳಸುತ್ತಾರೆ: ಉಳಿದ ಅರ್ಥ(ಗಳೆಲ್ಲ)ವನ್ನು ಅವರು ಹತ್ತಿಕ್ಕುತ್ತಾರೆ. ಅವರು ಬಳಸುವುದು ಕವಿಯ ಗ್ರಹಿಕೆಯಂತೆ ಸಾಮ್ಯರ್ಥ ಅಥವಾ ಉತ್ತಮಾರ್ಥದಲ್ಲಿ. ಆ ಪದಗಳಿಗಿರುವ ಇನ್ನಿತರ ಅರ್ಥಗಳು ಹೀನಾರ್ಥಗಳು. ಅಂದರೆ ಸಾಮಾಜಿಕರು ತಮ್ಮ ಭಾಷೆಯ ಪದಕೋಶವನ್ನು ಬಳಸುವಾಗ 'ಒಪ್ಪಿತ' ಸಾಮಾಜಿಕ ಚೌಕಟ್ಟುಗಳನ್ನು ಪಾಲಿಸುತ್ತಾರೆಂದು ಕವಿ ಹೇಳಿದಂತಾಯ್ತು. ಸಾಮಾಜೀಕರಣವು ಪ್ರವೃತ್ತವಾಗುವ, ಸೂಚಿತವಾಗುವ ಬಗೆಯಲ್ಲಿ ಭಾಷೆಯ ಬಳಕೆಯ ಪರಿಷ್ಕರಣವೂ ಒಂದೆಂದು ತಿಳಿಯಲಾಗಿದೆಯಷ್ಟೆ. ಭಾಷೆಯ ಪದಗಳಿಗಿರುವ ಅನ್ಯಾರ್ಥಗಳನ್ನು ನಿರಾಕರಿಸಲು ಬರುವುದಿಲ್ಲ; ಹೆಚ್ಚೆಂದರೆ ಆ ಅನ್ಯಾರ್ಥಗಳನ್ನು ಬಳಕೆಯಿಂದ ಹೊರಗಿಡುವ ಕೆಲಸವನ್ನು ಮಾತ್ರ ಮಾಡಬಹುದು. ಅಂದರೆ ನಿರಂತರವಾಗಿ ಭಾಷಾಬಳಕೆಯಲ್ಲಿ ಎಚ್ಚರವನ್ನು ಕಾಯ್ದುಕೊಳ್ಳಬೇಕಾಗುತ್ತದೆ. ಇಂಥ ವರ್ಣನೆಗಳನ್ನು ಮಾಡಿದ ಕವಿ ಜನರ 'ಪರಿಷ್ಕೃತ' ನಡವಳಿಕೆಯ ಸೂಚನೆಗಳನ್ನು ಅವರ ಭಾಷಾಬಳಕೆಯಲ್ಲಿ ಕಾಣಬಹುದೆಂದು ಹೇಳಿದ್ದಾನೆ.

ಒಂದು ಭಾಷೆಯ ಪದಕೋಶದಲ್ಲಿ ಒಂದೇ ರೂಪಕ್ಕೆ ಒಂದಕ್ಕಿಂತ ಹೆಚ್ಚು ಅರ್ಥಗಳು ಏಕೆ ಬರುತ್ತವೆ ಎಂಬುದು ಅಧ್ಯಯನಾಸಕ್ತಿಯ ವಿಷಯವಾಗಿರುವಂತೆ ಹೀಗೆ ಒದಗಿದ 'ಬಹ್ವರ್ಥ'ದ ಪರಿಸ್ಥಿತಿಯನ್ನು ಭಾಷಿಕರು ಹೇಗೆ ನಿಭಾಯಿಸುತ್ತಾರೆ ಎಂಬುದೂ ಅಧ್ಯಯನಯೋಗ್ಯವಾಗಿದೆ. ಭಾಷೆಯ ಸಮುಚಿತ ಉಪಯೋಗದಲ್ಲಿ ಕಾಣಿಸಿಕೊಳ್ಳುವ ಎಷ್ಟೋ ಭಾಷಾಕ್ರೀಡೆಗಳಿಗೆ ಪದಕೋಶದಲ್ಲಿರುವ ಈ 'ಬಹ್ವರ್ಥ ಸಾಧ್ಯತೆ'ಯೇ ಒಂದು ಮುಖ್ಯನೆಲೆಯನ್ನು ಒದಗಿಸುತ್ತದೆ. ಸೃಜನಶೀಲ ಬರೆಹಗಳಲ್ಲಂತೂ ಭಾಷೆಯ ಈ ಸಾಧ್ಯತೆಯನ್ನು ಬಳಸಿಕೊಳ್ಳುವುದು ಕಂಡುಬರುತ್ತದೆ. ಆದರೆ ನಾವು ಪರಿಶೀಲಿಸುತ್ತಿರುವ ವರ್ಣನೆಗಳಲ್ಲಿ ಪದಗಳಿಗೆ ಹೆಚ್ಚು ಅರ್ಥಗಳಿರುವ ಪರಿಸ್ಥಿತಿಯನ್ನು ಬಳಕೆಯ ಮೂಲಕ ನಿಯಂತ್ರಿಸುವ ಕಡೆಗೆ ಒಲುವೆ ಇದೆ. ಇದು ಭಾಷೆಯ ಬಳಕೆಯ ಪ್ರಮಾಣೀಕರಣ ಮತ್ತು ಸಾಮಾಜಿಕ ವರ್ತನೆಗಳಿಗೆ ಇರುವ ನೇರ ಸಂಬಂಧವನ್ನು ನಮ್ಮ ಗಮನಕ್ಕೆ ತರುತ್ತದೆ.

ಇನ್ನೂ ಒಂದು ಕುತೂಹಲದ ಸಂಗತಿ ಇದೆ. ಈ ವರ್ಣನೆಗಳಲ್ಲಿ ಬರುವ ರಾಜ್ಯಗಳು ಕನ್ನಡ ಭೂಭಾಗಕ್ಕೆ ಸೇರಿದವರಲ್ಲ. ಅಂದರೆ ಅಲ್ಲಿನ ಜನರ ಆಡುನುಡಿ ಕನ್ನಡವಲ್ಲ. ಆದರೆ ಕವಿಗಳು ಕನ್ನಡ ಭಾಷೆಯ ಸಾಧ್ಯತೆಗಳನ್ನು ಅವಲಂಬಿಸಿ ವರ್ಣನೆಗಳನ್ನು ಮಾಡಿದ್ದಾರೆ. ನಡುಗನ್ನಡ ಕವಿಗಳು ಕಾವ್ಯವಸ್ತುವನ್ನು ಕಾಲದೇಶಗಳಿಗೆ ಬದ್ಧಗೊಳಿಸಲು ಅನುಸರಿಸುತ್ತಿದ್ದ ಒಂದು ತಂತ್ರವಿದು. ದೇಶೀಯ ನೆಲೆಗಳಿಗೆ ಕಥಾನಕವನ್ನು ತಂದಿರಿಸುವ ಈ ವಿಧಾನಕ್ಕೆ ಕನ್ನಡ ಭಾಷೆಯ ಅರ್ಥಸಾಧ್ಯತೆಗಳನ್ನು ಸಾಧನವನ್ನಾಗಿ ಬಳಸಿಕೊಂಡಿರುವುದನ್ನು ನಾವಿಲ್ಲಿ ಗುರುತಿಸಬೇಕು.

## ಮಾತು ಮತ್ತು ಬರೆಹ: ಮತ್ತಷ್ಟು ವಿಚಾರಗಳು

ಮಾತು ಆಡಿದರೆ ಹೋಯಿತು ಮುತ್ತು ಒಡೆದರೆ ಹೋಯಿತು ಎನ್ನುವುದು ಒಂದು ಗಾದೆ: ಮಾತು ಎಂಬ ಪದಕ್ಕೆ ನುಡಿಯುವುದು ಎನ್ನುವ ಅರ್ಥದೊಡನೆ ಆ ನುಡಿಗೆ ಬದ್ಧವಾಗಿರುವುದು ಎನ್ನುವ ಅರ್ಥಕೂಡ ಇದೆ. 'ಮಾತು ಕೊಟ್ಟಿದ್ದೇನೆ' ಎನ್ನುತ್ತೇವೆ. 'ಕೊಟ್ಟ ಮಾತಿಗೆ ತಪ್ಪಿ ನಡೆದರೆ ಮೆಚ್ಚನಾ ಜಗದೀಶನು' ಎಂದು ಗೋವಿನ ಹಾಡು ಕವಿತೆಯಲ್ಲಿ ಪುಣ್ಯಕೋಟಿ ಹೇಳುತ್ತದೆ. ಇಲ್ಲೆಲ್ಲಾ ಮಾತು ಎಂದರೆ ನುಡಿದದ್ದಕ್ಕೆ ಬದ್ಧವಾಗಿರುವುದು ಎನ್ನುವ ಅರ್ಥ ಕೂಡ ಇದೆಯಷ್ಟೆ. ಮಾತಾಡುವಾಗ ನಾವು ಬಳಸುವ ಮುಖ್ಯ ಧ್ವನ್ಯಂಗವಾದ 'ನಾಲಿಗೆ' ಎನ್ನುವ ಪದಕ್ಕೆ ಮಾತು ಮತ್ತು ಮಾತಿಗೆ ಬದ್ಧವಾಗಿರುವುದು ಎಂಬ ಅರ್ಥಗಳಿವೆ. 'ನನಗೆ ಒಂದೇ ನಾಲಿಗೆ' ಎಂದು ಹೇಳಿದರೆ ಅದು ವಾಚ್ಯದ ನೆಲೆಗಷ್ಟೇ ನಿಲ್ಲುವುದಿಲ್ಲ. 'ನಾನು ಆಡುವ ಮಾತಿಗೆ ನಾನು ಬದ್ಧ' ಎಂದೂ ಅರ್ಥವಾಗುತ್ತದೆ. ಹೀಗೆ ಇನ್ನೂ ಹಲವು ವಾಡಿಕೆಯ ಉಕ್ತಿಗಳಿಂದ ಈ ಅಂಶವನ್ನು ಕಂಡುಕೊಳ್ಳಬಹುದು.

ಮಾತಿಗೂ ಮಾತಾಡುವ ವ್ಯಕ್ತಿಗೂ ಒಂದು ನಿಕಟ ಸಂಬಂಧವನ್ನು ಎಲ್ಲ ಸಂಸ್ಕೃತಿಗಳೂ ಕಲ್ಪಿಸುತ್ತವೆ. ಕೆಲವೊಮ್ಮೆ ಮಾತಾಡುವ ವ್ಯಕ್ತಿ ತಾನಾಡಿದ ಮಾತಿಗೆ ತಾನು ಜವಾಬ್ದಾರನಲ್ಲವೆಂದು ತಿಳಿಯುವ ಸಂದರ್ಭಗಳೂ ಇರುತ್ತವೆ. ಉದಾಹರಣೆಗೆ ದೇವರು ಮೈದುಂಬುವ ಸಂದರ್ಭದಲ್ಲಿ ವ್ಯಕ್ತಿಯ ಮೂಲಕ ಮಾತುಗಳು ಬರುತ್ತವೆ ಎಂದು ತಿಳಿಯಲಾಗುತ್ತದೆ. ಹೀಗಿದ್ದಾಗಲೂ ಆ ಮಾತುಗಳ ಅಧಿಕೃತತೆಯನ್ನು ಸಮುದಾಯಗಳು ಪ್ರಶ್ನಿಸುವುದಿಲ್ಲ. ವ್ಯಕ್ತಿಯ ಮೂಲಕ ಬಂದ ಮಾತುಗಳನ್ನು ಒಪ್ಪುತ್ತವೆ. ಮಾಧ್ಯಮವಾದ ವ್ಯಕ್ತಿಗೆ ಮಾತಿನ ಜವಾಬ್ದಾರಿ ಇಲ್ಲವಾದರೂ ಮಾಧ್ಯಮವಾಗುವುದು ಕೂಡ ಒಂದು ಜವಾಬ್ದಾರಿಯಾಗಿ ಬಿಡುತ್ತದೆ. ಕಾವ್ಯಪರಂಪರೆಗಳಲ್ಲೂ ಈ ಅಂಶ ಪ್ರವೃತ್ತವಾಗುವುದನ್ನು ಕಾಣುತ್ತೇವೆ. ಕವಿ ಕುಮಾರವ್ಯಾಸ ತನ್ನನ್ನು ಲಿಪಿಕಾರ ಎಂದು ಕರೆದುಕೊಳ್ಳುತ್ತಾನೆ. 'ತನ್ನ ಮೂಲಕ ಬಂದ ಮಾತುಗಳಿವು' ಎಂದು ಹೇಳುವುದನ್ನು ನಾವು ಕೇವಲ ಕವಿಯ ವಿನಯದ ಮಾತುಗಳು ಎಂದು ತಿಳಿದರೆ ಸಾಲದು. ಇಂಥ ನಿದರ್ಶನಗಳಿಂದ, ಮಾತುಗಳು ಮತ್ತು ಮಾತಾಡುವ ವ್ಯಕ್ತಿ ಈ ಎರಡರ ಸಂಬಂಧದಲ್ಲಿ ಸಂಸ್ಕೃತಿಯು ರಚಿಸಿಕೊಂಡಿರುವ ವಿಶಿಷ್ಟ ವಿನ್ಯಾಸವನ್ನು ಗುರುತಿಸುವುದು ಸಾಧ್ಯವಾಗಬೇಕು.

ಹಲವು ಭಾಷಿಕ ಸಮುದಾಯಗಳಲ್ಲಿ ಮಾತು ಮತ್ತು ಬರೆಹಗಳಲ್ಲಿ ಮಾತು ಹೆಚ್ಚು ಅಧಿಕೃತವಾದದ್ದು ಎಂಬ ನಂಬಿಕೆ ಬಲವಾಗಿದೆ. ಬರೆವಣಿಗೆಯ ಬೆಳವಣಿಗೆ

ಮತ್ತು ಅಕ್ಷರಸ್ಥ ಸಂಸ್ಕೃತಿಯ ಯಾಜಮಾನ್ಯದಿಂದಾಗಿ ಪರಿಸ್ಥಿತಿಯಲ್ಲಿ ಅಷ್ಟಿಷ್ಟು ಪಲ್ಲಟವಾಗಿದೆ. ಅಂದರೆ ಬರೆದದ್ದು ಅಧಿಕೃತ. ಮಾತಿಗೆ ದಾಖಲೆ ಇಲ್ಲ. ಹಾಗಾಗಿ ಅದು ಅಧಿಕೃತವಲ್ಲವೆಂಬ ನಿಲುವು ಬಲಗೊಳ್ಳುತ್ತಿದೆ. ಆದರೂ ಮಾತು ಮತ್ತು ಬರೆಹಗಳಲ್ಲಿ ಯಾವುದನ್ನು ಹೆಚ್ಚು ಅಧಿಕೃತವೆಂದು ತಿಳಿಯಬೇಕೆಂಬ ಇಕ್ಕಟ್ಟಿನಲ್ಲಿ ಹಲವು ಭಾಷಿಕ ಸಮುದಾಯಗಳು ಸಿಲುಕಿವೆ.

ಅಧಿಕಾರ ಕೇಂದ್ರಗಳು ಮಾತಿಗೆ ಬದಲಾಗಿ ಬರೆಹವನ್ನು ಬಲಪಡಿಸುತ್ತವೆ. ಎಲ್ಲವನ್ನೂ ಬರೆಹಕ್ಕೆ ಪರಿವರ್ತಿಸುವ ಪ್ರವೃತ್ತಿ ಅಲ್ಲಿ ಬಲವಾಗಿರುತ್ತದೆ. ಶಾಸನಗಳನ್ನು ರಚಿಸಿ ಕಲ್ಲಿನ ಮೇಲೆ, ಸುಲಭವಾಗಿ ನಾಶವಾಗದ ತಾಮ್ರದ ಪಟ್ಟಿಗಳ ಮೇಲೆ ಕೆತ್ತಿಸುವ ಕ್ರಮದಲ್ಲಿ ಈ ಅಂಶ ತಿಳಿಯುತ್ತದೆ. ಇದು ಸಂಗತಿಗಳನ್ನು ತಲೆಮಾರಿನಿಂದ ತಲೆಮಾರಿಗೆ ದಾಟಿಸುವ ಯಶಸ್ವಿ ವಿಧಾನವೆಂದು ವಾದಿಸಲು ಸಾಧ್ಯವಿದೆ. ಆದರೆ ಬರೆಹದಲ್ಲಿ ಬಂದ ಹೊರತು ಅಧಿಕೃತಗೊಳ್ಳದು ಎನ್ನುವ ನಂಬಿಕೆಯೇ ಇಲ್ಲಿ ಮುಖ್ಯವಾಗಿದೆ. ಒಂದು ನಿದರ್ಶನವನ್ನು ಗಮನಿಸೋಣ. ಪಂಪನ ತಮ್ಮ ಜಿನವಲ್ಲಭನ ಶಾಸನ ಈ ತಾಕಲಾಟವನ್ನು ಸೂಚ್ಯವಾಗಿ ನಮ್ಮ ಗಮನಕ್ಕೆ ತರುತ್ತದೆ. ಜಿನವಲ್ಲಭನ ಶಾಸನ ಹೇಳುವ ಹಲವು ಸಂಗತಿಗಳಲ್ಲಿ ಒಂದು ಹೀಗಿದೆ. ಪಂಪನಿಗೆ ಅರಿಕೇಸರಿ ಮೆಚ್ಚುಗೆಯಾಗಿ ಅಗ್ರಹಾರವನ್ನು ದಾನ ಮಾಡಿದನೆಂಬುದಕ್ಕೆ ಏನು ಸಾಕ್ಷಿ? ಜಿನವಲ್ಲಭ ಜನರಲ್ಲಿ ಇದ್ದಿರಬಹುದಾದ ಸಂದೇಹಕ್ಕೆ ಉತ್ತರ ನೀಡುವ ಧಾಟಿಯಲ್ಲಿ ತನ್ನ ಶಾಸನದಲ್ಲಿ, ಅರಿಕೇಸರಿ ದಾನ ನೀಡಿದನೆಂಬುದನ್ನು ಖಚಿತಪಡಿಸುವ ದಾನಶಾಸನವನ್ನು ವೃಷಭಾಚಲದಲ್ಲಿ ಹೋಗಿ ನೋಡಲು ಹೇಳುತ್ತಾನೆ. ರಾಜಾಜ್ಞೆಯು ಮಾತಿನ ರೂಪದಿಂದ ಲಿಖಿತ ರೂಪಕ್ಕೆ ಬಾರದ ಹೊರತು ನಿಜವಾಗುವುದಿಲ್ಲ, ಅಧಿಕೃತವಾಗುವುದಿಲ್ಲವೆಂಬ ತಿಳುವಳಿಕೆ ಜಿನವಲ್ಲಭನ ಶಾಸನದ ಹಿನ್ನೆಲೆಯಲ್ಲಿ ತಿಳಿಯಬೇಕಾದ ಮಾತಾಗಿದೆ.

ಮಾತಿಗೆ ಬದಲಾಗಿ ಅಥವಾ ಮಾತಿನ ಜೊತೆಗೆ ಅದಕ್ಕೆ ಸಮಾನ ಸ್ಥಾನಮಾನದಲ್ಲಿ ಬರೆಹವನ್ನು ಇರಿಸುವುದನ್ನು ಸಂಸ್ಕೃತಿಗಳು ಸುಲಭವಾಗಿ ಅರಗಿಸಿಕೊಂಡಿಲ್ಲ. ಈಜಿಪ್ಟ್‌ನ ರಾಜನೊಬ್ಬನೆದುರು ಬರೆಹಕ್ಕೆ ಅನುಕೂಲವಾಗುವ ಲಿಪಿ ಮತ್ತು ಬರೆಹ ವ್ಯವಸ್ಥೆಯೊಂದನ್ನು ರೂಪಿಸಿ ಇರಿಸಿದಾಗ ಆತ ಸಾರಾಸಗಟಾಗಿ ಬರೆವಣಿಗೆಯನ್ನು ನಿರಾಕರಿಸುತ್ತಾನೆ. ಅವನ ವಾದದ ತಿರುಳಾಗಿ ಎರಡು ಅಂಶಗಳನ್ನು ಗುರುತಿಸಬಹುದು. ಒಂದು ಬರೆಹ ನೆನಪನ್ನು ನಿರಾಕರಿಸುತ್ತದೆ. ಏಕೆಂದರೆ ಒಮ್ಮೆ ಬರೆಯಲು ಸಾಧ್ಯವಾಯಿತೆಂದರೆ ಸಮುದಾಯಗಳು ನೆನಪಿಟ್ಟುಕೊಳ್ಳಬೇಕಾದ ಜವಾಬ್ದಾರಿಯಿಂದ ತಪ್ಪಿಸಿಕೊಳ್ಳುತ್ತವೆ. ಎರಡು: ಬರೆಹ ಅಧಿಕೃತವಲ್ಲ. ಯಾರು ಯಾರ ಮಾತನ್ನಾದರೂ ತನ್ನದೆಂಬಂತೆ ಬರೆಯಬಹುದು. ಆದರೆ ಮಾತಾಡುವಾಗ ಮಾತಾಡುವ ವ್ಯಕ್ತಿ ತಾನೇ ಮಾತಾಡಬೇಕಾಗಿರುವುದರಿಂದ ಆ ಮಾತುಗಳಿಗೆ ಜವಾಬ್ದಾರನಾಗುತ್ತಾನೆ. ಈ ವಾದದಲ್ಲಿ ಸರಿತಪ್ಪುಗಳೆಷ್ಟು ಎಂಬುದು ಮುಖ್ಯವಲ್ಲ. ಮಾತು ಮತ್ತು ಬರೆಹಗಳ ಸಾಹಚರ್ಯವನ್ನು ಒಪ್ಪದಿರುವ ಸಂಗತಿಯಷ್ಟೇ ನಮಗಿಲ್ಲಿ ಮುಖ್ಯವಾಗಿದೆ.

ಮಾತಿನಿಂದ ಬರೆಹಕ್ಕೆ ಯಾಜಮಾನ್ಯವನ್ನು ಭಾಷಿಕ ಸಮುದಾಯಗಳು ರವಾನಿಸುತ್ತಿರುವುದಕ್ಕೆ ಬಹು ದೊಡ್ಡ ಚರಿತ್ರೆ ಇದೆ. ಈ ರವಾನೆಯ ಪರಿಣಾಮವನ್ನು ಸುಲಭವಾಗಿ ಅರಗಿಸಿಕೊಳ್ಳುವುದು ಎಲ್ಲ ಸಮುದಾಯಗಳಿಗೂ ಸಾಧ್ಯವಾಗಿದೆ ಎನ್ನಲು ಬರುವುದಿಲ್ಲ. ಆದರೆ ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ನಮಗೆ ಗೊತ್ತಿಲ್ಲದಂತೆ ಮಾತಿಗೆ ಇರುವ ಅಧಿಕೃತತೆಯು ಇನ್ನಷ್ಟು ಕಡಿಮೆಯಾಗುತ್ತಿರುವ ಸಂಗತಿ ನಮ್ಮ ಗಮನಕ್ಕೆ ಬಂದಿಲ್ಲ. ಅದನ್ನು ಮುಂದೆ ಚರ್ಚಿಸಲಾಗಿದೆ.

ಮಾತಿಗೆ ಭಾಷಿಕ ಆಕಾರವಿದೆ. ಮಾತಾಡುವ ವ್ಯಕ್ತಿಯೊಬ್ಬರು ಇರುತ್ತಾರೆ ಮತ್ತು ಮಾತಾಡುವುದು ನಿರ್ದಿಷ್ಟ ಕಾಲದೇಶಗಳಲ್ಲಿ ಸಂಭವಿಸಿರುತ್ತದೆ. ವ್ಯಕ್ತಿ, ಭಾಷೆ ಮತ್ತು ಕಾಲದೇಶಗಳು ಈ ಮೂರು ಸಂಗತಿಗಳು ಸಂಯೋಜಿತವಾಗಿರುವುದು ಎಲ್ಲ 'ಮಾತು'ಗಳ ಮುಖ್ಯ ಲಕ್ಷಣ. ಮಾತು ಏನು, ಮಾತನ್ನು ಆಡಿದವರು ಯಾರು ಮತ್ತು ಯಾವಾಗ, ಎಲ್ಲಿ ಆ ಮಾತನ್ನು ಆಡಲಾಯಿತು ಎಂಬ ಮೂರೂ ಪ್ರಶ್ನೆಗಳು ಒಂದನ್ನೊಂದು ಹೊಂದಿಕೊಂಡು ಉತ್ತರವನ್ನು ಕಂಡುಕೊಳ್ಳುತ್ತವೆ. ಅಲ್ಲದೆ ಮಾತಿನ ಅಧಿಕೃತತೆ ಸಾಧಿತವಾಗುವುದು ಈ ಮೂರೂ ಪ್ರಶ್ನೆಗಳ ಹೆಣೆತದಿಂದಲೇ ಎಂಬುದನ್ನು ಗಮನಿಸಬೇಕು. ತಂತ್ರಜ್ಞಾನದ ಬೆಳವಣಿಗೆಯಿಂದಾಗಿ ನಾವೀಗ ಈ ಮೂರೂ ಸಂಗತಿಗಳನ್ನು ವಿಘಟಿತಗೊಳಿಸುವ ಸಾಧ್ಯತೆಯನ್ನು ಕಾಣುತ್ತಿದ್ದೇವೆ. ಒಂದು ನಿದರ್ಶನವನ್ನು ನೋಡೋಣ.

ಚಲನಚಿತ್ರವೊಂದನ್ನು ನೋಡುತ್ತಿದ್ದೇವೆ ಎಂದುಕೊಳ್ಳಿ. ಅದರಲ್ಲಿನ ಪಾತ್ರವೊಂದು ಮಾತಾಡುವುದನ್ನು ನಾವು ಕೇಳುತ್ತೇವೆ. ಸಿನಿಮಾದ ತಂತ್ರಜ್ಞಾನ ಬಲ್ಲವರಿಗೆ ಗೊತ್ತಿರುವ ಸಂಗತಿ ಎಂದರೆ ಆ ಪಾತ್ರ ಆ ಮಾತಿಗೆ ಆಂಗಿಕ ಅಭಿನಯವನ್ನು ನೀಡಿದ್ದಕ್ಕೂ ಮತ್ತು ವಾಸ್ತವವಾಗಿ ಆ ಮಾತುಗಳನ್ನು ಉಚ್ಚರಿಸಿದ್ದಕ್ಕೂ ಸಾಕಷ್ಟು ಕಾಲದ ಅಂತರವಿರುತ್ತದೆ. ಎಷ್ಟೋ ವೇಳೆಗಳಲ್ಲಿ ಆಂಗಿಕ ಅಭಿನಯವನ್ನು ನೀಡುವ ಪಾತ್ರಧಾರಿ ಮತ್ತು ಆ ಆಂಗಿಕಕ್ಕೆ ಮಾತನ್ನು ನೀಡುವ ವ್ಯಕ್ತಿ ಇವರಿಬ್ಬರೂ ಬೇರೆಬೇರೆಯಾಗಿರುತ್ತಾರೆ. ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ಡಬ್ ಆಗಿರುವ ಚಲನಚಿತ್ರಗಳಲ್ಲಂತೂ ಈ ಮಾತು ಇನ್ನಷ್ಟು ನಿಜ. ಚಿತ್ರಗಳಲ್ಲಿ ಹಾಡುಗಳನ್ನು ಕೇಳುತ್ತೇವೆ ಎಂದುಕೊಳ್ಳಿ. ಆ ಹಾಡನ್ನು ಹೇಳಿದ ಕಾಲ ಮತ್ತು ಅದಕ್ಕೆ ಅಭಿನಯ ನೀಡಿದ, ತುಟಿ ಚಲನೆ ನೀಡಿದ ಕಾಲ ಬೇರೆಬೇರೆಯಾಗಿರುತ್ತದೆ. ಮತ್ತು ಬಹಳ ಸಂದರ್ಭದಲ್ಲಿ ಹಾಡಿದ ವ್ಯಕ್ತಿ ಮತ್ತು ಅಭಿನಯಿಸಿದ ವ್ಯಕ್ತಿ ಬೇರೆಬೇರೆಯಾಗಿರುತ್ತಾರೆ. ಈ ನಿದರ್ಶನದಿಂದ ಗೊತ್ತಾಗುವುದೇನು? ಮಾತು, ಮಾತಾಡಿದವರು ಮತ್ತು ಮಾತು ಸಂಭವಿಸಿದ ಕಾಲದೇಶಗಳ ಸಾಹಚರ್ಯವನ್ನು ಭಗ್ನಗೊಳಿಸಬಹುದು. ಮತ್ತು ಹಾಗೆ ಭಗ್ನಗೊಳಿಸಿಯೂ ಆ ಮೂರೂ ಸಂಗತಿಗಳು ಒಟ್ಟಾಗಿವೆ ಎಂಬ ಭ್ರಮೆಯನ್ನು ಉಂಟುಮಾಡಬಹುದಾಗಿದೆ.

ಮಾತಿನ ಅಂಗಾಂಗಗಳ ಈ ವಿಘಟನೆಯ ಸಾಧ್ಯತೆ ತಂತ್ರಜ್ಞಾನದ ಕೊಡುಗೆ. ಈ ಮೊದಲು ಈಜಿಪ್ಟ್‌ನ ರಾಜ ಬರೆಹಕ್ಕೆ ಯಾವ ಆರೋಪವನ್ನು ಹೊರಿಸಿದನೋ ಅದೇ ಆರೋಪದಿಂದ ಈಗ ಮಾತನ್ನೂ ಅನಧಿಕೃತವೆಂದು ಹೇಳಲು ಸಾಧ್ಯವಾಗುತ್ತದೆ.

ವ್ಯಕ್ತಿ ಮಾಧ್ಯಮವಾಗಿ ಉಳಿದು ಮಾತು ತನ್ನ ಅಧಿಕೃತತೆಯನ್ನು ಉಳಿಸಿಕೊಳ್ಳುತ್ತಿದ್ದ ಪ್ರಸಂಗಗಳನ್ನು ಮೇಲೆ ಹೇಳಲಾಗಿದೆಯಷ್ಟೆ. ಆದರೆ ನಾವೀಗ ಕಾಣುತ್ತಿರುವ ವಿಘಟನೆಯ ಸಾಧ್ಯತೆಯಲ್ಲಿ ಆ ಬಗೆಯ ಸಮರ್ಥನೆಗೂ ಅವಕಾಶವಿಲ್ಲವಾಗಿದೆ.

ಏನೇ ಆಗಲಿ. ಮಾತು ಮತ್ತು ಬರೆಹಗಳ ಮುಖಾಮುಖಿ ಹೊಸಪಟ್ಟುಗಳೊಡನೆ ಮುಂದುವರೆಯುತ್ತಲೇ ಹೋಗುತ್ತದೆಂದು ತೋರುತ್ತದೆ. ಸಂಸ್ಕೃತಿಗಳು ಮಾತಿಗೆ ಅನವಶ್ಯಕವಾಗಿ ಮಹತ್ವವನ್ನು ನೀಡಿವೆಯೆಂದೂ, ನಿಜವಾಗಿ ಮಾತು ಅಪೂರ್ಣ, ಬರೆಹವೇ ಸಂಪೂರ್ಣ ಎಂದು ಬರೆಹದ ಪರವಾಗಿ, ಅದರ ಅಧಿಕೃತತೆಯ ಪರವಾಗಿ ಕಳೆದ ಕೆಲವು ದಶಕಗಳಲ್ಲಿ ದೊಡ್ಡ ವಾದವನ್ನು ಮಂಡಿಸಿದವನೆಂದರೆ ಡೆರಿಡಾ. ಮಾತಿನಲ್ಲಿ ಮಾತುಗಾರನ ಇರುವಿಕೆಯನ್ನು ಸಂಪೂರ್ಣವಾಗಿ ತೊಡೆದುಹಾಕಲು ಸಾಧ್ಯವಿಲ್ಲದಿರುವುದೇ ಅದರ ದೊಡ್ಡ ಕೊರತೆಯೆಂದೂ, ಬರೆಹದಲ್ಲಿ ಬರೆಹಗಾರ ಬರೆಹ ಪೂರ್ಣಗೊಂಡ ಅನಂತರ ಗೈರುಹಾಜರಾಗುವುದೇ ಬರೆಹಕ್ಕಿರುವ ಮಹತ್ವದ ಗುಣವೆಂದೂ ವಾದ ಹೂಡಲಾಗಿದೆ. ಇವೆಲ್ಲವೂ ಪ್ರತ್ಯೇಕವಾದ ಪರಿಶೀಲನೆಗೆ ಅನುವು ಮಾಡಿಕೊಡುವ ವಿಚಾರಗಳಾಗಿವೆ.

## ಮಾತು ಮೊದಲು; ಬರೆಹ ಆಮೇಲೆ: ಹೌದೇ?

ಮೊದಲು ಮಾತು. ಅನಂತರ ಬರೆಹ. ಇದು ಸಾಮಾನ್ಯ ತಿಳುವಳಿಕೆ. ಲಿಪಿ/ಬರೆಹವೆಂದರೆ ಮಾತನ್ನು ಕಣ್ಣಿಗೆ ಕಾಣುವ ಸಂಕೇತಗಳಲ್ಲಿ ಪ್ರತಿನಿಧಿಸುವ ಕ್ರಮ. ಮಾತಿನ ಧ್ವನಿ ಘಟಕಗಳನ್ನು ಲಿಪಿರೂಪದಲ್ಲಿ ಬರೆಹ ಹಿಡಿದಿಡುತ್ತವೆ; ಇದು ಒಂದರ್ಥದಲ್ಲಿ ಮಾತಿನ ಫೋಟೋ.

ಮಾತಿನ ಎಲ್ಲ ಅಂಗಗಳನ್ನೂ, ಕನಿಷ್ಠ ಘಟಕಗಳನ್ನೂ ಲಿಪೀಕರಿಸಲು ಸಾಮರ್ಥ್ಯವಿರುವ ಬರೆವಣಿಗೆಯೇ ಅತ್ಯುತ್ತಮವೆಂದು ತಿಳಿಯಲಾಗಿದೆ. ಲಿಪಿಗಳ ವಿಕಾಸವನ್ನು ಗುರುತಿಸುವಾಗ ಮಾತಿನ ಪ್ರತಿನಿಧೀಕರಣದಲ್ಲಿ ಆಯಾ ಲಿಪಿವ್ಯವಸ್ಥೆಗಳು ಎಷ್ಟು ಪರಿಪೂರ್ಣತೆಯನ್ನು ತೋರಿಸುತ್ತವೆ ಎನ್ನುವುದನ್ನು ಮಾನದಂಡವನ್ನಾಗಿ ಇಟ್ಟುಕೊಳ್ಳಲಾಗಿದೆ.

ಆದರೆ ಈ ಮಾತು-ಬರೆಹದ ಸಂಬಂಧ ಅಷ್ಟು ಸರಳವಾಗಿಲ್ಲ. ಈಗ ನಮಗೆ ಲಭ್ಯವಾಗುವ ಎಷ್ಟೋ ಬರೆಹಗಳಿಗೆ ಮಾತಿನ ಪೂರ್ವರೂಪವೆನ್ನುವುದು ಇರುವುದೇ ಇಲ್ಲ. ಅವು ಬರೆಹಗಳಾಗಿಯೇ ಆಕಾರ ತಳೆಯುತ್ತವೆ; ಬರೆಹಗಳಾಗಿಯೇ ಬಳಕೆಯಾಗುತ್ತವೆ. ಆದ್ದರಿಂದ ಈ ಬರೆಹಗಳು ಯಾವ ಮಾತನ್ನು ಪ್ರತಿನಿಧಿಸುತ್ತವೆಂದು ಹೇಳುವುದು ಸಾಧ್ಯವಿಲ್ಲ. ಇನ್ನೂ ಕೆಲವು ಬರೆಹಗಳು ಮಾತಿನ ಪೂರ್ವರೂಪವನ್ನು ಹೊಂದಿಲ್ಲದಿದ್ದರೂ ಅನಂತರ ಮಾತಾಗಿ ಪರಿವರ್ತನೆ ಹೊಂದುತ್ತವೆ. ಇಂಥ ಪ್ರಸಂಗಗಳು ನೂರಾರು. ದೂರದರ್ಶನ, ಆಕಾಶವಾಣಿಗಳಲ್ಲಿ ವಾರ್ತಾವಾಚಕರಿಗಾಗಿ ಬರೆದು ಸಿದ್ಧಪಡಿಸುವ ವಾರ್ತೆಗಳನ್ನು ಅನಂತರ ಅವರು ಓದುತ್ತಾರೆ. ಬರೆದದ್ದನ್ನು ಹೇಗೆ ಓದಬೇಕು ಎಂಬುದು ಕೆಲವೊಮ್ಮೆ ಸಂದರ್ಭಗಳಿಂದ ನಿರ್ಧಾರವಾಗುತ್ತದೆ. ಮತ್ತೆ ಕೆಲವೊಮ್ಮೆ ಓದುವವರೂ ನಿರ್ಧರಿಸುತ್ತಾರೆ. ನಾಟಕದ ಪಾತ್ರವೊಂದರ ಸಂಭಾಷಣೆಯನ್ನು ಹೇಗೆ ಹೇಳುವುದು ಎಂಬುದನ್ನು ಪಾತ್ರಧಾರಿ ತಾನೇ ಕಂಡುಕೊಳ್ಳುತ್ತಾನೆ. ಒಬ್ಬರು ಆ ಮಾತನ್ನು ಉಚ್ಚರಿಸಿದಂತೆ ಮತ್ತೊಬ್ಬರು ಉಚ್ಚರಿಸದೇ ಇರುವುದೂ ಸಾಧ್ಯ. ಅಂದರೆ ಈ ಎಲ್ಲ ಸಂದರ್ಭಗಳಲ್ಲೂ ಬರೆಹವೇ ಮಾತಿನ ಮೂಲವಾಗಿರುತ್ತದೆ. ಮತ್ತು ಮಾತಿನ ವೈವಿಧ್ಯಕ್ಕೆ ಕಾರಣವಾಗಿರುತ್ತದೆ. ಪ್ರಾಚೀನ ಕಾವ್ಯದ ಪದ್ಯವನ್ನೋ, ಗದ್ಯಭಾಗವನ್ನೋ ಶಾಸನದ ಪಾಠವನ್ನೋ ಹೇಗೆ ಓದುವುದು? ಅದನ್ನು ಓದುವ ಕ್ರಮ, ಅಂದರೆ ಮಾತಿನ ರೂಪಕ್ಕೆ ಪರಿವರ್ತಿಸುವ ಕ್ರಮ, ಕಾಲದಿಂದ ಕಾಲಕ್ಕೆ ಬದಲಾಗುತ್ತಲೇ ಬಂದಿದೆ. ಹಲವು ಓದುವಿಕೆಗಳಿಗೆ ಅವಕಾಶ ದೊರಕಿದೆ.

ಪ್ರಾಸಂಗಿಕವಾಗಿ ಗಮನಿಸಬಹುದಾದ ಸಂಗತಿಯೊಂದಿದೆ. ರಾಜಶೇಖರನ 'ಕಾವ್ಯಮೀಮಾಂಸೆ' ಕೃತಿಯಲ್ಲಿ ಬೇರೆ ಬೇರೆ ಪ್ರದೇಶಗಳ ಜನರು ಕಾವ್ಯಕೃತಿಗಳನ್ನು ಓದುವಾಗ ಆಯಾ ಪ್ರದೇಶಕ್ಕೆ ವಿಶಿಷ್ಟವಾದ ರೀತಿಯನ್ನು ಅನುಸರಿಸುತ್ತಾರೆ ಎಂಬ ಮಾತಿದೆ. ಅಂದರೆ ಒಂದೇ ಬರೆಹರೂಪ ಹಲವು ಮಾತಿನ ರೂಪಗಳಿಗೆ ಕಾರಣವಾಗುವುದನ್ನು ಗುರುತಿಸಿರುವ ಪ್ರಸಂಗವಿದು. ಇದು ಕೇವಲ ಉಚ್ಚಾರಣೆ, ಕಾಕು, ಯತಿ, ಅವಧಾರಣೆಗಳಿಗೆ ಮಾತ್ರ ಮೀಸಲಾದ ವೈವಿಧ್ಯ; ಆದರೆ ಲಿಪೀಕರಣಗೊಂಡ ಧ್ವನಿಗಳ ಉಚ್ಚಾರಣೆಯಲ್ಲಿ ವೈವಿಧ್ಯಕ್ಕೆ ಅವಕಾಶವಿಲ್ಲವೆಂದು ವಾದಿಸಬಹುದು. ಆದರೆ ಭಾಷಾಘಟಕಗಳ ಪ್ರಾಸಂಗಿಕ ಅರ್ಥನಿರ್ಧಾರಕ್ಕೆ ಕಾಕು, ಯತಿ ಮುಂತಾದವೇ ಮುಖ್ಯ ಕಾರಣವಾಗುತ್ತವೆಂದು ನಾವೆಲ್ಲ ಬಲ್ಲೆವು. ಆದ್ದರಿಂದ ಈ ಪಾಠ ವೈವಿಧ್ಯಗಳನ್ನು ಎಚ್ಚರಿಕೆಯಿಂದ ಗಮನಿಸುವುದು ಅವಶ್ಯ. ಅಲ್ಲದೆ ಎಷ್ಟೋ ವೇಳೆ ಸಂದರ್ಭೋಚಿತವೆಂದು ತಿಳಿಯಲಾದ ಓದಿನ ಕ್ರಮವನ್ನು, ಅದರ ಚೌಕಟ್ಟನ್ನು ಉಲ್ಲಂಘಿಸಿದರೆ ಭಾಷಾ ಸಂವಹನದಲ್ಲೂ ತೊಡಕುಗಳಾಗುವುದು ಸಾಧ್ಯ. ಔಪಚಾರಿಕ ಓದನ್ನು ಅಪೇಕ್ಷಿಸುವ ಸಂದರ್ಭದಲ್ಲಿ ಅನೌಪಚಾರಿಕ ಓದಿನ ಬಗೆಯನ್ನು ಅನುಸರಿಸಿದರೆ ಒಂದೋ ಹಾಸ್ಯಕ್ಕೆ ಕಾರಣವಾಗಬಹುದು ಅಥವಾ ಅಸಹನೀಯತೆಗೂ ಕಾರಣವಾಗುವುದು.

ಇವೆಲ್ಲ ವಿವರಗಳಿಂದ ತಿಳಿಯುವುದಿಷ್ಟು. 'ಮಾತು ಮೊದಲು ಬರೆಹ ಅನಂತರ' ಎಂಬ ಸೂತ್ರಕ್ಕೆ ಚಾರಿತ್ರಿಕವಾಗಿ ಎಷ್ಟೇ ಮಹತ್ವವಿದ್ದರೂ ಈಗ ಅದನ್ನು ಸಾರಾಸಗಟಾಗಿ ಒಪ್ಪುವುದು ಕಷ್ಟ. ಬರೆಹವೇ ಮಾತಿನ ವಿನ್ಯಾಸಗಳಿಗೆ ಕಾರಣವಾಗುವ ಪ್ರಸಂಗಗಳ ಹಿನ್ನೆಲೆಯಲ್ಲಿ ಈ ಸೂತ್ರವು ಮರುಪರಿಶೀಲತೆಯನ್ನು ಬಯಸುತ್ತದೆ.

# ಲಲ್ಲೆಮಾತು

ಮಕ್ಕಳು ಮಾತಾಡುವುದನ್ನು ಕಲಿಯುವಾಗ ಒಂದು ವಿಶೇಷ ಬಗೆಯ ಉಚ್ಚಾರಣಾ ರೂಪಗಳನ್ನು ಬಳಸುತ್ತಾರೆ. ಸಾಮಾನ್ಯವಾಗಿ ಇಂಥ ಮಾತನ್ನು ತೊದಲುನುಡಿ ಎಂದು ಕರೆಯುವುದುಂಟು. ಪಾಲಕರಿಗೆ ಈ ತೊದಲುನುಡಿ ಪ್ರಿಯವಾದುದು. ಆಗಾಗ ತೊದಲು ನುಡಿಯನ್ನು ತಿದ್ದಲು ಪ್ರಯತ್ನಿಸಿ ತಮ್ಮ ಉಚ್ಚಾರಣಾ ರೂಪಗಳನ್ನು ಮಕ್ಕಳಿಗೆ ತಿಳಿಸುವರು. ಆದರೂ ಮಕ್ಕಳು ಅದಕ್ಕೆ ಗಮನವಿರಿಸದೆ ತಮ್ಮ ತೊದಲನ್ನು ಮುಂದುವರೆಸುತ್ತಾರೆ. ಇದು ಮಗುವಿನಿಂದ ಮಗುವಿಗೆ ಬೇರೆ ಬೇರೆ ಇರುವಂತೆ ನಮಗೆ ತೋರುತ್ತದೆ. ಆದರೆ ವಯಸ್ಕರ ಭಾಷೆಯ ಉಚ್ಚಾರಣೆಗೂ ತೊದಲುಚ್ಚಾರಣೆಗೂ ವ್ಯವಸ್ಥಿತವಾದ ಸಂಬಂಧವಿದೆ. ಮತ್ತು ಅವೆರಡರ ನಡುವೆ ಇರುವ ಈ ಸಂಬಂಧವನ್ನು ನಿಯಮಬದ್ಧವಾಗಿ ವಿವರಿಸುವುದೂ ಸಾಧ್ಯ. ಇದೇ ತೊದಲುನುಡಿ ಒಂದು ವಯಸ್ಸಿನ ಅನಂತರ ಮುಂದುವರೆದರೆ ಅದು ವಿಕಲತೆಯಾಗುತ್ತದೆ. ಅದರ ಚಿಕಿತ್ಸೆಗೆ ಹಲವು ವಿಧಾನಗಳು ಬೆಳೆದಿವೆ.

ನಾವೀಗ ಇನ್ನೊಂದು ಭಾಷಾಮಾದರಿಯನ್ನು ಕುರಿತು ಗಮನಿಸಲಿದ್ದೇವೆ. ಎಳೆಯ ಮಕ್ಕಳೊಡನೆ ಮಾತಾಡುವಾಗ ಪಾಲಕರು ಬಳಸುವ ಭಾಷಾಮಾದರಿ ಇದು. ಮಕ್ಕಳ ತೊದಲು ನುಡಿಗಿಂತ ಇದು ಭಿನ್ನ. ಇಲ್ಲಿಯೂ ಬೇರೆಯದೇ ಆದ ಉಚ್ಚಾರಣೆಯ ನಿಯಮಗಳಿವೆ; ವಿಶಿಷ್ಟ ಪದಕೋಶವಿದೆ. ಮಾತಿನ ಛಂದೋವಿಧಾನವೂ ಭಿನ್ನವಾದುದು. ಇಂಗ್ಲಿಶ್‌ನಲ್ಲಿ ಈ ಭಾಷಾ ಮಾದರಿಗೆ ಮದರೀಸ್ ಎನ್ನುತ್ತಾರೆ. ಮತ್ತೆ ಕೆಲವರು, ತಂದೆಯೂ ಇದೇ ಮಾದರಿಯ ಭಾಷೆಯನ್ನು ಬಳಸುವುದರಿಂದ ಪೇರಂಟೀಸ್ ಪದ ಸರಿಯೆನ್ನುವರು. ಇಲ್ಲಿಗೇ ನಿಲ್ಲದೆ ಮಗುವಿನೊಡನೆ ಮಾತಾಡುವ 'ಎಲ್ಲರೂ' ಇದೇ ಬಗೆಯನ್ನು ಅನುಸರಿಸುವರಾಗಿ ಇದನ್ನು ಅದರೀಸ್ (ಈ 'ಎಲ್ಲರೂ' 'ಅನ್ಯರು' ತಾನೇ?. ಹಾಗಾಗಿ 'ಅದರ್') ಎನ್ನಬೇಕೆಂದು ವಾದಿಸುತ್ತಾರೆ. ಯಾರು ಬಳಸುವರೆಂಬುದನ್ನು ಬದಿಗಿಟ್ಟರೆ ಇವೆಲ್ಲವೂ ಒಂದೇ. ಕನ್ನಡದಲ್ಲಿ ಇದನ್ನು ಲಲ್ಲೆಮಾತು ಎನ್ನೋಣವೇ? 'ಲಲ್ಲೆ(ಮಾತು)'– ರೂಪಕ್ಕೆ ಇರುವ ಇನ್ನಿತರ ಅರ್ಥಗಳನ್ನು ಮರೆತು ಸದ್ಯ ಅದನ್ನು ಸೀಮಿತ ಅರ್ಥದಲ್ಲಿ ಮಾತ್ರ ಬಳಸುವುದು ಅವಶ್ಯ. ಬೇರೊಂದು ಸೂಕ್ತ ಪದ ದೊರಕುವವರೆಗೆ ಈ ರೂಪವನ್ನು ಇಟ್ಟುಕೊಳ್ಳಬಹುದು.

ದೊಡ್ಡವರು ಮಕ್ಕಳೊಡನೆ ಹೀಗೆ ಭಿನ್ನ ಮಾದರಿಯ ಭಾಷೆಯನ್ನು ಏಕೆ ಬಳಸುತ್ತಾರೆ? ಮುದ್ದು, ಕೊಂಡಾಟ, ವಾತ್ಸಲ್ಯ ಇತ್ಯಾದಿ ಮಾತುಗಳಿಂದ ಈ ಸನ್ನಿವೇಶವನ್ನು ವಿವರಿಸುವುದು ಉಪಯುಕ್ತವಾಗದು. ಹಾಗೆ ನೋಡಿದರೆ ಮಕ್ಕಳ ಭಾಷಾಕಲಿಕೆ ನಡೆಯುವ ಕ್ರಮವನ್ನು ಸಾಮಾನ್ಯವಾಗಿ ವಿವರಿಸುವ ರೀತಿಗೆ ಈ ಲಲ್ಲೆಮಾತು ವಿರುದ್ಧವಾಗಿದೆ. ಏಕೆಂದರೆ ಮಕ್ಕಳು ಭಾಷೆಯನ್ನು ಅನುಕರಣೆಯ ಮೂಲಕ ಕಲಿಯುತ್ತಾರೆಂದು ತಿಳಿಯುವುದುಂಟು. ಆದರೆ ಲಲ್ಲೆಮಾತನ್ನು ಮಕ್ಕಳು ಅನುಕರಿಸುವುದಿಲ್ಲ. ಅಲ್ಲದೆ ಅದು ಅನುಕರಣೆಗೆ ಅರ್ಹವೂ ಅಲ್ಲ. ಅದು ಅವರಿಗೆ ಮಾದರಿಯಲ್ಲ. ಇತರರ ಮಾತುಗಳಿಗೂ ಲಲ್ಲೆಮಾತಿಗೂ ಇರುವ ಹಲವಾರು ವ್ಯತ್ಯಾಸಗಳು ಗೊಂದಲವನ್ನು ಉಂಟುಮಾಡಬಲ್ಲವು. ಹೀಗಾಗಿ ಮಕ್ಕಳಿಗೆ ಈ ಲಲ್ಲೆಮಾತು ಭಾಷೆ ಕಲಿಯಲು ಅನುಕೂಲ ಒದಗಿಸುವುದಿಲ್ಲ. ಅಥವಾ ಅಂಥ ಅನುಕೂಲವಿದ್ದರೂ ಅದು ಅತ್ಯಂತ ಕನಿಷ್ಠ ಪ್ರಮಾಣದಲ್ಲಿ ಇರುತ್ತದೆ.

ಬೇರೆ ಬೇರೆ ಭಾಷೆಗಳಲ್ಲಿ ಇಂಥ ಲಲ್ಲೆಮಾತುಗಳನ್ನು ಅಧ್ಯಯನ ಮಾಡಿದ್ದಾರೆ. ಆ ಭಾಷಾ ಮಾದರಿಯ ನಿಯಮಗಳನ್ನು ಗುರುತಿಸಿದ್ದಾರೆ.

## ಮಾತು, ಬರೆಹ: ಕೊಡುಕೊಳೆ

ಹಲವು ತಿಂಗಳ ಹಿಂದೆ ಖಾಸಗಿ ಟೆಲಿವಿಷನ್ ಚಾನೆಲೊಂದರಲ್ಲಿ ರಾಮಾಯಣ ಧಾರಾವಾಹಿಯು ಪ್ರಸಾರವಾಗಲು ಮೊದಲಿಟ್ಟಿತು. ಕೂಡಲೇ ಅದನ್ನು ತಡೆಯಲು ಹಲವಾರು ಪ್ರಯತ್ನಗಳು ನಡೆದವು. ವಾದವಿವಾದಗಳು ನಡೆದವು. ಹಿಂದೀ ಮೂಲದ ಅವತರಣಿಕೆಯನ್ನು ಕನ್ನಡ ಭಾಷಾಧ್ವನಿಗೆರೆಯೊಡನೆ ಪ್ರಸಾರ ಮಾಡುವುದು ಸೂಕ್ತವಲ್ಲವೆಂದು ವಾದಿಸಿ ಕೊನೆಗೆ ಅದನ್ನು ತಡೆಹಿಡಿಯಲಾಯಿತು. ಅದೇ ವೇಳೆಗೆ ಇಂಗ್ಲಿಶಿನ ಧಾರಾವಾಹಿಯೊಂದು (ಜಂಗಲ್ ಬುಕ್) ಇದೇ ತಾಂತ್ರಿಕ ಬದಲಾವಣೆಯೊಂದಿಗೆ ಹಲವಾರು ವಾರಗಳಿಂದ ಬೆಂಗಳೂರು ದೂರದರ್ಶನದಲ್ಲಿ ಪ್ರಸಾರವಾಗುತ್ತಿತ್ತು. ಈ ಬಗೆಯ ಪ್ರಸಾರಗಳು ಸಲ್ಲ ಎಂಬುದು ಈ ಹಿಂದೆಯೂ ಚರ್ಚೆಗೆ ಬಂದದ್ದುಂಟು. ಡಬ್ಬಿಂಗ್ ಎಂದು ಕರೆಯಲಾಗುವ ಈ ಕ್ರಿಯೆಯ ಮೂಲಕ ಕನ್ನಡದ ಪ್ರತಿಭೆಗೆ ಅವಕಾಶಗಳು ಸಿಗುವುದಿಲ್ಲವೆಂಬುದು ವಾದದ ಒಂದು ನೆಲೆ. ಅಲ್ಲದೆ ಸುಲಭವಾಗಿ ದೊರಕುವ ಇಂಥ ಪರ್ಯಾಯಗಳಿಂದಾಗಿ ಕನ್ನಡದಲ್ಲೇ ಹೊಸದಾಗಿ ಸೃಷ್ಟಿಸಬೇಕೆಂಬ ಛಲ ಕುಗ್ಗಬಹುದೆಂಬುದು ವಾದದ ಇನ್ನೊಂದು ನೆಲೆ.

ದೂರದರ್ಶನದ ಭಾನುವಾರದ ಕಾರ್ಯಕ್ರಮಗಳಲ್ಲಿ ಪ್ರಾದೇಶಿಕ ಚಲನಚಿತ್ರವೊಂದು ಪ್ರಸಾರವಾಗುತ್ತದೆ. ಈಚೆಗೆ ಚಿತ್ರ ಯಾವುದೇ ಭಾಷೆಯಲ್ಲಿರಲಿ. ಅದು ಪ್ರಸಾರವಾಗುವಾಗ ಚಿತ್ರಪಟ್ಟಿಕೆಗಳ ತಳದಲ್ಲಿ ಆಯಾ ಪ್ರಾದೇಶಿಕ ಭಾಷೆಯ ಅಕ್ಷರಗಳಲ್ಲಿ ಮೂಲದ ಅನುವಾದವನ್ನು ನೀಡಲಾಗುತ್ತಿದೆ. ಈ ಅನುವಾದದ ಗುಣಮಟ್ಟ ಹಾಗೂ ಅದರ ಉಪಯುಕ್ತತೆಗಳನ್ನು ನಾವೀಗ ಚರ್ಚಿಸುವುದಕ್ಕೆ ಅವಕಾಶಗಳಿಲ್ಲ. ಆದರೆ ಈ ಪ್ರಯತ್ನವನ್ನು ಯಾರೂ ವಿರೋಧಿಸಿಲ್ಲವೆಂಬುದನ್ನು ಗಮನಿಸಬೇಕು.

ಚಲನಚಿತ್ರಗಳಿಗೆ ಸಂಬಂಧಿಸಿದಂತೆ ಇವೆರಡೂ ಲಾಗಾಯ್ತಿನಿಂದ ಬಳಕೆಯಲ್ಲಿರುವ ತಂತ್ರಗಳೇ ಆಗಿವೆ. ಮೊದಲ ಬಗೆಯಲ್ಲಿ ನಾವು ಕಿವಿಯಿಂದ ನಮ್ಮ ಭಾಷೆಯನ್ನು ಕೇಳುತ್ತೇವೆ. ಪಾತ್ರಧಾರಿ ಆ ಭಾಷೆಯಲ್ಲಿ ಮಾತನಾಡಿರುವುದಿಲ್ಲ. ಎರಡನೆಯ ಬಗೆಯಲ್ಲಿ ಪಾತ್ರಧಾರಿಯ ದನಿ ಅಂದರೆ ಮೂಲಭಾಷೆ ನಮಗೆ ಕೇಳಿಸುತ್ತದೆ. ಆದರೆ ಅದರ ಅನುವಾದವನ್ನು ನಾವು ಓದುತ್ತೇವೆ. ಕಣ್ಣಿನಿಂದ ಗ್ರಹಿಸುತ್ತೇವೆ. ಎರಡನೆಯ ಬಗೆಯ ಬಳಕೆ ಅಕ್ಷರಸ್ಥರನ್ನು ಮಾತ್ರ ಮುಟ್ಟುತ್ತದೆ. ಈ ಕಾರಣದಿಂದಾಗಿ ಈ ಪ್ರಯತ್ನವನ್ನು ಹೆಚ್ಚಾಗಿ ವಿರೋಧಿಸಿಲ್ಲ.

ಅನ್ಯ ಭಾಷೆಯ ಸಂದರ್ಭಗಳನ್ನು ಗಮನಿಸಿ. ಜುರಾಸಿಕ್ ಪಾರ್ಕ್, ಅಲಾದಿನ್ ಮುಂತಾದ ಚಲನಚಿತ್ರಗಳನ್ನು ಹಿಂದಿಗೆ ಡಬ್ ಮಾಡಲಾಗಿದೆ. ಯುರೋಪಿನ ಹಲವು ಭಾಷೆಗಳ ಚಲನಚಿತ್ರಗಳಲ್ಲಿ ಈ ರೀತಿಯ ಪರಸ್ಪರ ಡಬ್ಬಿಂಗ್ ಸಹಜವಾಗಿಬಿಟ್ಟಿದೆ. ಹೀಗಿದ್ದರೆ ಕನ್ನಡಕ್ಕೇಕೆ ಆತಂಕ?

ಹೀಗೆ ಆತಂಕ ಪಡಲು ಕಾರಣವಿಲ್ಲವೆಂದು ವಾದಿಸುವವರು ಕನ್ನಡದಲ್ಲಿ ನಡೆದಿರುವ ಸಾಹಿತ್ಯಾನುವಾದ ಕಾರ್ಯದ ವ್ಯಾಪಕತೆಯನ್ನು ಉದಾಹರಣೆಯನ್ನಾಗಿ ನೀಡುತ್ತಾರೆ. ಯಥಾನುವಾದ ಪ್ರಕ್ರಿಯೆಗೆ ಕನ್ನಡದಲ್ಲಿ ಒಂದು ಶತಮಾನಕ್ಕಿಂತ ಹೆಚ್ಚು ವಯಸ್ಸಾಗಿಲ್ಲ. ಆದರೆ ಅದು ಕನ್ನಡದ ಮಟ್ಟಿಗೆ ತೀರಾ ಸಹಜವಾದ ಕಾರ್ಯವೆಂಬಂತೆ ವಾದಿಸಲಾಗುತ್ತಿದೆ. ಕಳೆದ ನಾಲ್ಕೈದು ದಶಕಗಳಿಂದ ಕನ್ನಡ ಎದುರಿಸುತ್ತಿರುವ ಹಲವಾರು ಸಮಸ್ಯೆಗಳಲ್ಲಿ ಒಂದನ್ನು ಹೀಗೆ ವಿವರಿಸಬಹುದು. ಕನ್ನಡ ಈಗ ಅನುವಾದದ ಭಾಷೆಯಾಗುತ್ತಿದೆ. ಎಲ್ಲ ಪ್ರಮುಖ ಅನುಭವಗಳನ್ನು, ಅದರಲ್ಲೂ ಜ್ಞಾನಸಂಬಂಧಿಯಾದ ಮಾಹಿತಿಯನ್ನು ಕನ್ನಡಕ್ಕೆ ಅನುವಾದಿಸಿಕೊಂಡು ಪಡೆಯಬೇಕಾಗಿದೆ. ಕನ್ನಡವೇ ಅಂಥ ಅನುಭವಗಳನ್ನು ತಾನೇ ಸೃಷ್ಟಿಸುವ ಬದಲು ಅನ್ಯಭಾಷೆಗಳಿಂದ ಅನುವಾದಿಸಿಕೊಳ್ಳುವುದು ಅನಿವಾರ್ಯವೆನ್ನಿಸುವ ವಾತಾವರಣವಿದೆ. ಹಿಂದೀ ಆವೃತ್ತಿಯ ಕನ್ನಡ ಅವತರಣಿಕೆಗೆ ಬಂದ ವಿರೋಧವನ್ನು ನಾವು ಒಂದು ಪ್ರತ್ಯೇಕ ಪ್ರಸಂಗವೆಂದು ಪರಿಗಣಿಸದೆ ಕನ್ನಡವು ಈಗ ವಹಿಸಬೇಕಾಗಿ ಬಂದಿರುವ ಅನುವಾದ ಭಾಷೆಯ ಪಾತ್ರ ಹಾಗೂ ಅದರಿಂದ ಮುಂದಿನ ದಶಕಗಳಲ್ಲಿ ಭಾಷೆಯ ಬೆಳವಣಿಗೆಯ ಮೇಲೆ ಆಗುವ ಪರಿಣಾಮಗಳನ್ನು ಚರ್ಚಿಸಬೇಕಾಗಿದೆ.

# ಬರೆವಣಿಗೆಯ ನಿಯಮಗಳು

ನೀವು ಶಾಸನಗಳನ್ನೋ ಅಥವಾ ತಾಳೆಗರಿಗಳ ಮೇಲಿರುವ ಬರೆಹವನ್ನೋ ನೋಡಿದ್ದರೆ ಅಲ್ಲಿ ಸಾಲುಸಾಲು ಅಕ್ಷರಗಳ ಸರಣಿಯನ್ನು ಗಮನಿಸಿರುತ್ತೀರಿ. ಆದರೆ, ಈಗ ನಾವು ಹೀಗೆ ಬರೆಯುವುದಿಲ್ಲ. ನಮ್ಮ ಮುದ್ರಣ ಕ್ರಮದಲ್ಲೂ ಪದಗಳನ್ನು ಬಿಡಿಸಿ ಬರೆಯುವ ವಿಧಾನ ಬಳಕೆಯಲ್ಲಿದೆ. ಪದಗಳ ನಡುವೆ ತೆರಪು ಇಲ್ಲದಂತೆ ಬರೆದಿರುವ ಬರೆವಣಿಗೆಯನ್ನು ಓದಲು ವಿಶೇಷ ತರಬೇತು ಬೇಕು. ಎಲ್ಲಿ ಪದಗಳು ಬೇರೆ ಬೇರೆಯಾಗುತ್ತವೆ ಎನ್ನುವುದನ್ನು ಗುರುತಿಸುವ ತಾಳ್ಮೆಯ ಜೊತೆಗೆ ಸಂಪನ್ಮೂಲಗಳನ್ನು ಕುರಿತ ತಿಳುವಳಿಕೆ ಕೂಡ ಬೇಕಾಗುತ್ತದೆ. ಅದಿಲ್ಲದೆ ಆ ಬರೆಹಗಳನ್ನು ಓದುವುದು ಆಗದ ಮಾತು. ಆದರೆ ಆ ಹಸ್ತಪ್ರತಿಗಳಲ್ಲಿರುವ ಕೃತಿಗಳನ್ನು ಮುದ್ರಣ ರೂಪಕ್ಕೆ ತರುವಾಗ ಪದಗಳನ್ನು ಬೇರೆ ಬೇರೆ ಮಾಡಿ ಮುದ್ರಿಸುವ ಕ್ರಮವನ್ನು ನೋಡುತ್ತೇವೆ. ಇದರಿಂದ ಆ ಬರೆಹವನ್ನು ಓದಲು ವಿಶೇಷ ತಜ್ಞತೆಯು ಬೇಕಾಗಿಲ್ಲ. ಹೀಗಾಗಿ ಪದಗಳನ್ನು ಬೇರೆ ಬೇರೆ ಮಾಡಿ ಬರೆಯುವುದು, ಮುದ್ರಿಸುವುದು ಭಾಷೆಯ ಬರೆವಣಿಗೆಯ ಚರಿತ್ರೆಯಲ್ಲಿ ತೀರಾ ಈಚಿನ ಬೆಳವಣಿಗೆ.

ನಾವು ಮಾತನಾಡುವಾಗ ಧ್ವನಿಗಳ ಸಾತತ್ಯ ಮಾತ್ರ ಕೇಳುತ್ತದೆ. ಒಂದೇ ಸಮನೆ ಕೇಳುವ ಧ್ವನಿಗಳ ಸರಣಿಯಲ್ಲಿ ಅಲ್ಲಲ್ಲಿ ನಿಲುಗಡೆಗಳು ಕೇಳುತ್ತವೆ. ಈ ನಿಲುಗಡೆಗಳು ಎರಡು ವಾಕ್ಯಗಳ ನಡುವೆ ಇರುತ್ತವೆ. ವಾಕ್ಯದ ನಡುವೆಯೂ ಅಲ್ಲಲ್ಲಿ ನಿಲುಗಡೆಗಳು ಕೇಳುತ್ತವೆಯಾದರೂ ಅವು ಆ ವಾಕ್ಯದಲ್ಲಿ ಬರುವ ಪದಗಳ ನಡುವೆಯೇ ಇರುತ್ತವೆ ಎನ್ನುವಂತಿಲ್ಲ. ಅಂದರೆ ಪ್ರತಿ ಪದದ ಅನಂತರ ಉಚ್ಚಾರಣೆಯಲ್ಲಿ ಬಿಡುವು ಇರುವುದಿಲ್ಲ. ಒಂದು ವಾಕ್ಯದ ನಡುವೆಯೇ ಇಂತಹ ಬಿಡುವು ಕೇಳಿಬಂದರೆ ಅದು ಸಾಮಾನ್ಯವಾಗಿ ಅರ್ಥ ಸಂವಹನಕ್ಕಾಗಿ ನೀಡಿದ ಬಿಡುವಾಗಿರುತ್ತದೆ.

ಬರೆವಣಿಗೆ ನಮ್ಮ ಉಚ್ಚಾರಣಾ ಕ್ರಮವನ್ನು ಅನುಸರಿಸುವುದಿಲ್ಲ. ಒಂದು ವಾಕ್ಯದಲ್ಲಿ ಬರುವ ಎಲ್ಲ ಧ್ವನಿಗಳನ್ನೂ ಉಚ್ಚರಿಸುವ ಹಾಗೆ ಸತತವಾಗಿ ನಾವು ಬರೆಯುವುದಿಲ್ಲ. ಹಾಗೆ ಬರೆಯುವ ಪ್ರಯತ್ನ ಈಚಿನ ಸಾಹಿತ್ಯದಲ್ಲಿ ಕಂಡುಬಂದಿದೆ. ಇದು ಸೀಮಿತ ನೆಲೆಯದ್ದು. ಎಲ್ಲ ಬರೆವಣಿಗೆಯಲ್ಲೂ ಪದಗಳ ನಡುವೆ ಅಂತರವಿರಿಸಿ ಬರೆಯುವುದೇ ರೂಢಿ. ಮಾತನಾಡುವಂತೆಯೇ ಬರೆಯಲು ಯತ್ನಿಸಿರುವುದಕ್ಕೆ ಕೈಲಾಸಂ ಅವರ ನಾಟಕಗಳ ಮುದ್ರಣರೂಪ ಒಂದು ನಿದರ್ಶನ. ಮಕ್ಕಳ್ಸ್ಕೂಲ್ಮನೇಲಲ್ವೇ? (ಮಕ್ಕಳ

ಸ್ಕೂಲು ಮನೆಯಲ್ಲಿ ಅಲ್ಲವೇ) ಮೂರು ತೆರಪುಗಳಿರುವಂತೆ ನಾವು ಬರೆಯುವ, ಮುದ್ರಿಸುವ ವಾಕ್ಯವನ್ನು ತೆರಪುಗಳಿಲ್ಲದಂತೆ ಮುದ್ರಿಸುವ ಬಗೆಯನ್ನು ಆ ನಾಟಕಗಳಲ್ಲಿ ಕಾಣುತ್ತೇವೆ. ಚನ್ನಣ್ಣ ವಾಲಿಕಾರರ 'ಬೆಳ್ಯ' ಕಾದಂಬರಿಯಲ್ಲೂ ಇದೇ ಬಗೆಯ ಮುದ್ರಣ ವಿನ್ಯಾಸವಿದೆ. ಈ ಬಗೆಯಲ್ಲಿ ಉಚ್ಚರಿಸುವ ಕ್ರಮವನ್ನೇ ಮುದ್ರಣದಲ್ಲಿ, ಬರೆಹದಲ್ಲಿ ಅನುಸರಿಸುವುದು ಈ ಹೊತ್ತಿನ ನಮ್ಮ ಓದುವಿಕೆಗೆ ಹಲವು ಸವಾಲುಗಳನ್ನು ಒಡ್ಡುತ್ತವೆ. ಏಕೆಂದರೆ ಓದುವಿಕೆಯಲ್ಲಿ ನಾವು ಪಡೆಯುವ ತರಬೇತಿ, ಪದಗಳ ನಡುವಿನ ವಿರಾಮಕ್ಕೆ ಅನುಗುಣವಾಗಿ ಸಿದ್ಧವಾಗಿದೆ. ಇಂತಹ ವಿರಾಮಗಳಿಲ್ಲದ ಬರೆವಣಿಗೆಯನ್ನು ಕಣ್ಣಿಗೆ ಒಗ್ಗಿಸಿಕೊಳ್ಳುವುದು ತ್ರಾಸದಾಯಕವಾದ ವಿಷಯ.

ಬರೆವಣಿಗೆಯಲ್ಲಾಗಲೀ, ಮುದ್ರಣದಲ್ಲಾಗಲೀ ಪದಗಳ ನಡುವೆ ಇರುವ ತೆರಪು ಮುಖ್ಯವಾಗಿ ಉಚ್ಚಾರಣೆಗೆ ಸಂಬಂಧಿಸಿದ ಸಂಗತಿಯಲ್ಲ. ಇದು ನಮ್ಮ ಕಣ್ಣಿಗೆ ಸಂಬಂಧಿಸಿದ ವಿಷಯ. ಪದಗಳ ನಡುವೆ ಬರೆವಣಿಗೆಯಲ್ಲಿ ಇರುವ ಅಂತರಗಳಿಗೆ ನಮ್ಮ ಕಣ್ಣು ಒಗ್ಗಿ ಹೋಗಿರುತ್ತದೆ. ಅಂತಹ ಅಂತರಗಳಿಲ್ಲದ ಬರೆವಣಿಗೆಯನ್ನು ಅಥವಾ ಸುಮಾರಾಗಿ ಒಂದಕ್ಷರದಷ್ಟು ಅಂತರ ಹೆಚ್ಚಾಗಿರುವ ಬರೆವಣಿಗೆಯನ್ನು ಕಣ್ಣು ಗ್ರಹಿಸುವಾಗ ಮುಜುಗರವನ್ನು ಅನುಭವಿಸುತ್ತದೆ. ಬರೆವಣಿಗೆಯಲ್ಲಿ ಪದಗಳ ನಡುವೆ ಇರುವ ಅಂತರ ಕಣ್ಣಿಗೆ ಮಾತ್ರ ಸಂಬಂಧಿಸಿದ್ದು ಕಿವಿಗಲ್ಲ ಎನ್ನುವುದಕ್ಕೆ ಇನ್ನೂ ಒಂದು ಪುರಾವೆ ಇದೆ. ನಾವು ಉಚ್ಚರಿಸುವಂತೆ ಬರೆಯುವುದಿಲ್ಲ ಎನ್ನುವುದೆಷ್ಟು ನಿಜವೋ ನಾವು ಬರೆದಂತೆ ಉಚ್ಚರಿಸುವುದಿಲ್ಲ ಎನ್ನುವುದೂ ಅಷ್ಟೇ ನಿಜ. ಪದಗಳ ನಡುವೆ ತೆರಪನ್ನು ಕೊಟ್ಟು ಬರೆದಂತೆ ಅವೇ ತೆರಪುಗಳನ್ನು ಕೊಟ್ಟು ಮಾತಾಡುವುದಿಲ್ಲ. ಅಂದರೆ ಒಂದೊಂದು ಪದವನ್ನೇ ಉಚ್ಚರಿಸಿ ತೆರಪು ನೀಡಿ ಅನಂತರ ಮತ್ತೊಂದು ಪದವನ್ನು ಉಚ್ಚರಿಸುವುದಿಲ್ಲ. ಆ ಬಗೆಯ ಮಾತಾಡುವಿಕೆ ತೀರಾ ಅಸಹಜವೆನಿಸುತ್ತದೆ.

ಇಲ್ಲಿಂದ ಮುಂದಕ್ಕೆ ಇನ್ನೊಂದು ಮುಖ್ಯ ಸಮಸ್ಯೆಯ ಕಡೆಗೆ ಗಮನ ಹರಿಸೋಣ. ಬರೆಯುವಾಗ ತೆರಪು ನೀಡಲು ಪದ ಎಂಬ ಘಟಕವನ್ನು ಹೇಗೆ ಗುರುತಿಸುವುದು? ಪದವನ್ನು ಗುರುತಿಸಲು ಖಚಿತವಾದ ನಿಯಮಗಳಿಲ್ಲ. ಅಥವಾ ಈ ದಿಕ್ಕಿನಲ್ಲಿ ನಮ್ಮ ಅಧ್ಯಯನಗಳು ನಡೆದಿಲ್ಲ. ಕೆಲವು ಕುರುಡು ನಿಯಮಗಳನ್ನು ಪಾಲಿಸುತ್ತಿದ್ದೇವೆ. ಈ ನಿಯಮಗಳೂ ಕೂಡ ಅಭ್ಯಾಸದಿಂದ ಅನುಸರಣೆಗೆ ಒಳಗಾಗುತ್ತಿವೆ.

ಪದಗಳಲ್ಲಿ ಪ್ರತ್ಯಯಗಳಿದ್ದರೆ ಆ ಪ್ರತ್ಯಯಗಳನ್ನು ಬಿಡಿಸಿ ತೆರಪಿನೊಡನೆ ಬರೆಯುವುದಿಲ್ಲ ಎನ್ನುವುದು ಒಂದು ನಿಯಮ. **ಪುಸ್ತಕಗಳನ್ನು** ಎಂಬ ಪದವನ್ನು **ಪುಸ್ತಕ ಗಳನ್ನು** ಎಂದಾಗಲೀ **ಪುಸ್ತಕಗಳು ಅನ್ನು** ಎಂದಾಗಲಿ ಬರೆಯುವುದಿಲ್ಲ. ಆದರೆ ಕೆಲವು ಪದಗಳ ರಚನೆಯಲ್ಲಿ ಸಹಾಯಕ ಕ್ರಿಯಾಪದಗಳನ್ನು ಮತ್ತು ಅವ್ಯಯಗಳನ್ನು ಬಿಡಿಸಿ ಬರೆಯುವ ಬಗೆ ಕಂಡುಬರುತ್ತದೆ. **ಕಷ್ಟಪಡುತ್ತಾರೆ** ಎಂಬುದನ್ನು ಕಷ್ಟ ಪಡುತ್ತಾರೆ ಎಂದು ಕೆಲವರು ಬರೆಯುತ್ತಾರೆ. ಹಾಗೆಯೇ **ಕೊಡಬೇಕು** ಎನ್ನುವುದನ್ನು **ಕೊಡಬೇಕು**

ಎಂದು ಬಿಡಿಸಿ ಬರೆಯುವವರುಂಟು. ಇಂತಹ ಕಡೆಗಳಲ್ಲಿ ತೆರಪಿಲ್ಲದೆ ಬರೆಯುವುದು ಸೂಕ್ತವೆಂದು ತೋರುತ್ತದೆ.

ನಾಮಪದಗಳು ಹಲವು ಪದಗಳಿಂದ ರಚನೆಯಾಗಿದ್ದರೆ, ಸಮಾಸ ಪದಗಳಾಗಿದ್ದರೆ ಆಗ ಇನ್ನೊಂದು ಸಮಸ್ಯೆ ತಲೆದೋರುತ್ತದೆ. ಉದಾ. ಗೆ **ಯೋಜನಾಸಚಿವ** ಎಂದು ಬರೆಯಬೇಕೋ ಅಥವಾ **ಯೋಜನಾ ಸಚಿವ** ಎಂದು ಬರೆಯಬೇಕೋ **ಜನಪದಕಾವ್ಯ** ಎನ್ನುವುದು ಸರಿಯೋ ಅಥವಾ **ಜನಪದ ಕಾವ್ಯ** ಸರಿಯೋ ಇಂತಹ ಕಡೆಗಳಲ್ಲಿ ಪಾಲನೆಯಾಗುತ್ತಿರುವ ಒಂದು ಕುರುಡು ನಿಯಮವು ಹೀಗಿದೆ. ಒಂದು ಸಮಾಸ ಪದದಲ್ಲಿ ನಾಲ್ಕಕ್ಕಿಂತ ಹೆಚ್ಚು ಸ್ವರಗಳಿದ್ದರೆ ಆಗ ಆ ಪದವನ್ನು ಎರಡು ಘಟಕಗಳನ್ನಾಗಿ ಒಡೆದು ಅವುಗಳ ನಡುವೆ ತೆರಪಿಟ್ಟು ಬರೆಯುವುದು ಕಂಡುಬರುತ್ತದೆ. ದೂರವಾಣಿ ಎನ್ನುವುದನ್ನು ತೆರಪಿಲ್ಲದೆ ಬರೆದರೆ ಪ್ರವಾಸಕಥನ ಎಂಬುದನ್ನು ಬಿಡಿಸಿ ಪ್ರವಾಸ ಕಥನ ಎಂದು ಬರೆಯುತ್ತೇವೆ. ಹಲವಾರು ನಿದರ್ಶನಗಳನ್ನು ಇಲ್ಲಿ ನೀಡಬಹುದು. ಇದು ಕಟ್ಟುನಿಟ್ಟಾದ ನಿಯಮವಲ್ಲ; ವಿನಾಯತಿಗಳಿವೆ. ಆದರೂ ಬಹುಮಟ್ಟಿಗೆ ಈ ನಿಯಮವನ್ನು ಪಾಲಿಸುವಂತೆ ತೋರುತ್ತದೆ.

ಗುಣವಾಚಕಗಳನ್ನು ಅವುಗಳ ವಿಶೇಷ್ಯಗಳಿಂದ ಬಿಡಿಸಿ ಬರೆಯುತ್ತೇವೆ. ಕೆಟ್ಟಹುಡುಗ ಎಂದು ಬರೆಯುವುದಿಲ್ಲ. ಇದನ್ನೇ **ಕೆಟ್ಟ ಹುಡುಗ** ಎಂದು ಬರೆಯುತ್ತೇವೆ. ಇಲ್ಲಿ ನಾಲ್ಕು ಸ್ವರದ ನಿಯಮವನ್ನು ಪಾಲಿಸುವುದಿಲ್ಲ. ಎರಡು ಪದಗಳಲ್ಲಿ ಮೊದಲನೆಯದು ಗುಣವಾಚಕವಾದರೆ ಅದನ್ನು ನಾಮಪದದಿಂದ ಬೇರೆ ಮಾಡಿ ಬರೆಯಬೇಕು ಎನ್ನುವುದು ಇಲ್ಲಿನ ನಿಯಮ.

ಸಾಲುಗಳನ್ನು ಒಡೆಯುವಾಗ ಬಳಸುವ ನಿಯಮವೂ ಅಸ್ಪಷ್ಟವಾಗಿದೆ. ಈಗಿನ ಗಣಕಗಳ ಕನ್ನಡ ಕಾರ್ಯವಾಹಿಗಳು ಪದಗಳ ತೆರಪನ್ನು ಸಾಲಿನ ಕೊನೆಗೆ ಹೇಗೆ ನೀಡಬೇಕೆಂಬ ಬಗೆಗೆ ಗೊಂದಲದಲ್ಲಿವೆ. ಬರೆಯುವಾಗ ನಾವು ಪದಗಳನ್ನು ಪ್ರತ್ಯಯಗಳನ್ನು ಬೇರೆಬೇರೆ ಸಾಲುಗಳಿಗೆ ಒಯ್ಯಲು ಹಿಂಜರಿಯುವುದಿಲ್ಲ. ಈ ತೆರಪಿನ ಬಗೆಯೇ ಬೇರೆ. ಪದದಲ್ಲೇ ಕಾಗುಣಿತವನ್ನು ಬೇರೆಬೇರೆ ಮಾಡಬಾರದು ಎಂಬ ಖಚಿತ ನಿಯಮ ಮಾತ್ರ ಇಲ್ಲಿ ಪಾಲಿತವಾಗುತ್ತದೆ. ಎಂದರೆ ಸಂಗತಿ ಎಂಬಲ್ಲಿ **ಸ** ಎಂಬುದು ಒಂದು ಸಾಲಿನಲ್ಲೂ **ಂಗತಿ** ಇನ್ನೊಂದು ಸಾಲಿನಲ್ಲೂ ಬರುವುದಿಲ್ಲ. ಮುದ್ರಣದಲ್ಲಿ, ಗಣಕ ಸಂಯೋಜನೆಯಲ್ಲಿ ಪದ ತೆರಪಿನ ನಿಯಮಗಳನ್ನು ಇನ್ನಷ್ಟು ವಿಶದವಾಗಿ ಪರಿಶೀಲಿಸುವ ಅಗತ್ಯ ಈಗ ಹೆಚ್ಚಾಗಿದೆ. ಇದೇ ರೀತಿ ಲೇಖನ ಚಿಹ್ನೆಗಳ ಬಳಕೆ ಕೂಡ ವಿವೇಚನೆಗೆ ಒಳಗಾಗಬೇಕಾಗಿದೆ.

# ಬರೆಮಾತು

(ಅತ್ತ ಬರೆಹವೂ ಅಲ್ಲದ ಇತ್ತ ಮಾತೂ ಅಲ್ಲದ ಭಾಷೆಯ ಇನ್ನೊಂದು ರೂಪ)

ಬರೆಹ ಮತ್ತು ಮಾತುಗಳ ಸ್ವರೂಪವನ್ನು ಕುರಿತು ಸಾಕಷ್ಟು ಚರ್ಚೆಗಳು ಈಗಾಗಲೇ ನಡೆದಿವೆ. ಇವೆರಡು ಭಾಷಾಸಾಮರ್ಥ್ಯಗಳೂ ವ್ಯಕ್ತಿಯಲ್ಲಿ ಪ್ರಕಟಗೊಳ್ಳುವ ಎರಡು ಬಗೆಗಳು. ಇವೆರಡು ಅಭಿವ್ಯಕ್ತಿಗಳ ಕೆಲವು ಸಾಮಾನ್ಯ ಲಕ್ಷಣಗಳನ್ನು ಹೀಗೆ ಹೇಳಬಹುದು. ಮಾತು ಸ್ವಯಂಸ್ಫೂರ್ತ. ಅಂದರೆ ಆಯಾ ಗಳಿಗೆಯಲ್ಲೇ ರೂಪುಗೊಂಡು ಹೊರಬರುವಂತಹುದು. ಇದಕ್ಕೆ ಕಾಲದೇಶಗಳ ಆಯಾಮವಿಲ್ಲ. ರೂಪಗೊಳ್ಳುತ್ತಿರುವಾಗಲೇ ನಾಶವೂ ಆಗುತ್ತಿರುತ್ತದೆ. ತಿದ್ದುಪಡಿಗಳಿಗೆ ಅವಕಾಶಗಳಿಲ್ಲದಿರುವುದರಿಂದ ಮಾತಿನ ವಾಕ್ಯರಚನೆಯಲ್ಲಿ ವಿಶಿಷ್ಟ ತಿರುವುಗಳು ಇರುತ್ತವೆ. ಮಾತನ್ನು ಕೇಳುವವರು ಯಾರು ಎಂಬುದು ಹೆಚ್ಚು ಖಚಿತವಾಗಿರುವುದರಿಂದ ಕೇಳುಗರ ಸ್ವರೂಪವು ಮಾತಿನ ರಚನೆಯನ್ನು ಒಂದಿಲ್ಲೊಂದು ಬಗೆಯಲ್ಲಿ ನಿರ್ದೇಶಿಸುತ್ತದೆ. ಬರೆಹ ಧ್ಯಾನಿತ ಯೋಜಿತವಾಗಿರುತ್ತದೆ. ಕಾಲದೇಶಗಳ ಆಯಾಮವಿರುತ್ತದೆ. ಈಗ ಬರೆದದ್ದು ಯಾವುದೋ ಕಾಲದಲ್ಲಿ ಯಾವುದೋ ದೇಶದಲ್ಲಿ ಓದುಗರಿಗೆ ಲಭ್ಯವಾಗಬಹುದು. ಓದುಗರು ಯಾರು ಎಂಬುದು ಖಚಿತವಿಲ್ಲದಿರುವುದು ಬರೆಹದ ಭಾಷಾರಚನೆಯ ಸ್ವರೂಪವನ್ನು ನಿರ್ದೇಶಿಸುತ್ತಿರುತ್ತದೆ.

ಕೆಲವೊಮ್ಮೆ ಈ ಎರಡು ಮಾದರಿಗಳ ಲಕ್ಷಣಗಳು ಒಂದರೊಳಗೊಂದು ಬೆರೆತು ಹೋಗಬಹುದು. ಉದಾಹರಣೆಗೆ ಬರೆದದ್ದನ್ನು ಓದುವ ಪ್ರಸಂಗವನ್ನು ಕಲ್ಪಿಸಿಕೊಳ್ಳಿ. ಟಿವಿಯಲ್ಲಿ ವಾರ್ತೆಯನ್ನು ಓದುವವರು ಹೀಗೆ ಬರೆದದ್ದನ್ನು ಓದುತ್ತಿರುತ್ತಾರೆ. ಆಗ ಬರೆಹಕ್ಕೆ ಮಾತಿನ ಲಕ್ಷಣಗಳು ಒದಗುತ್ತವೆ. ಇಂತಹ ಬರೆಹಗಳಿಗೆ ಮಾತಿನ ಚಹರೆಗಳನ್ನು ತಂದುಕೊಡಲು ಈ ಬರೆಹದ ಕರ್ತೃಗಳು ಯತ್ನಿಸುವುದುಂಟು. ಹಾಗೆಯೇ ನಾಟಕದಲ್ಲಿ ಸಂಭಾಷಣೆಯನ್ನು ಬರೆಯುವಾಗ ಪಾತ್ರಗಳು ಬರೆದ ಮಾತುಗಳನ್ನು "ಆಡಲಿದ್ದಾರೆ" ಎಂಬುದನ್ನು ನಾಟಕಕಾರ ಗಮನದಲ್ಲಿರಿಸಿಕೊಂಡು ಅದಕ್ಕನುಗುಣವಾಗಿ ಬರೆಯಬೇಕಾಗುತ್ತದೆ.

ಈಗ ನಾವು ಗಮನಿಸಲಿರುವುದು ಇನ್ನೊಂದು ಬಗೆಯ ಭಾಷಾಬಳಕೆಯ ಸಂದರ್ಭವನ್ನು. ಕಳೆದ ಒಂದು ದಶಕದಲ್ಲಿ ಜಗತ್ತನ್ನು ಆವರಿಸಿ ಬೆಳೆಯುತ್ತಿರುವ

ಕಂಪ್ಯೂಟರ್ ಕೇಂದ್ರಿತ ಸಂವಹನದಲ್ಲಿ ಭಾಷೆ ಬಳಕೆಯಾಗುವ ವಿಧಾನವನ್ನು ಪರಿಶೀಲಿಸೋಣ. ಅದರಲ್ಲೂ ಹರಟೆ ಮನೆ (ಚಾಟ್‌ರೂಮ್)ಗಳಲ್ಲಿ "ಸಂಭಾಷಣೆ"ಗಳು ನಡೆಯುವ ವಿಧಾನವನ್ನು ಗಮನಿಸಬಹುದು. ಚಾಟ್‌ರೂಮ್ ಅಥವಾ ಮೆಸೆಂಜರ್‌ಗಳ ಮೂಲಕ ಸಂವಾದ ಮಾಡುವವರು ಒಬ್ಬರನ್ನೊಬ್ಬರು "ನೋಡುವ" ಸಂದರ್ಭಗಳು ಕಡಿಮೆ. ಯಾವಾಗಲೂ ಅಪರಿಚಿತರೇ ಹೀಗೆ ಸಂವಾದದಲ್ಲಿ ತೊಡಗಿರುತ್ತಾರೆ ಎನ್ನುವಂತಿಲ್ಲ. ದೂರದ ಊರು ದೇಶಗಳಲ್ಲಿರುವ ಪರಿಚಿತರೂ ಹೀಗೆ ಸಂವಾದದಲ್ಲಿ ತೊಡಗುವುದುಂಟು. ಆದರೆ ಈ ಸಂವಾದದಲ್ಲಿ ಮಾತುಗಳನ್ನು 'ಆಡು'ವಂತಿಲ್ಲ; 'ಬರೆ'ಯಬೇಕು. ಸಂದೇಶವನ್ನು ಕಂಪ್ಯೂಟರ್ ಕೀಬೋರ್ಡ್ ಬಳಸಿ ಬರೆಯಬೇಕು. ತ್ವರಿತಗತಿಯಲ್ಲಿ ಸಂವಾದ ನಡೆಯಬೇಕಾಗಿರುತ್ತದೆ. ಅಂತರ್ಜಾಲದ ಸಮಯ, ಸಂಪರ್ಕ ಸಮಸ್ಯೆಗಳ ಕಾರಣದಿಂದ ಎಲ್ಲವನ್ನೂ ಬೇಗಬೇಗ ಹೇಳುವುದು ಅಗತ್ಯವಾಗುತ್ತದೆ. ಈ ಮಾತುಗಳಿಗೆ ಉಚ್ಚಾರವಿರುವುದಿಲ್ಲ; ಅಕ್ಷರ ರೂಪವಿರುತ್ತದೆ. ಅತಿ ಚಿಕ್ಕ ವಾಕ್ಯಗಳು, ಅರೆ ವಾಕ್ಯಗಳು, ಸಂಕ್ಷಿಪ್ತ ರೂಪಗಳು ಈ ಸಂವಾದದಲ್ಲಿ ಧಾರಾಳವಾಗಿ ಬಳಕೆಯಾಗುತ್ತಿರುತ್ತವೆ.

ಮಾತಿನ ಅಥವಾ ಸಂವಾದದ ಸಾಮಾನ್ಯ ಲಕ್ಷಣಗಳು ಈ ಭಾಷಾಬಳಕೆಯಲ್ಲಿ ಕಾಣಸಿಗುವುದಿಲ್ಲ. ನಾವು ಮಾತಾಡುವಾಗ ನಮ್ಮ ಮಾತು, ನಮ್ಮ ವಾಕ್ಯಗಳು ಕೇಳುತ್ತಿರುವವರ ಪ್ರತಿಕ್ರಿಯೆಯ ಮೇಲೆ ಬಹುವಾಗಿ ಅವಲಂಬಿತವಾಗಿರುತ್ತದೆ. ಕೇಳಿಸಿಕೊಳ್ಳುತ್ತಿರುವವರು ನೀಡುವ ಭಾಷಿಕ ಮತ್ತು ಭಾಷೇತರವಾದ ಪ್ರತಿಕ್ರಿಯೆಗಳೆಲ್ಲವೂ ನಮ್ಮ ಮಾತನ್ನು ನಿಯಂತ್ರಿಸುತ್ತಿರುತ್ತವೆ. ಕೇಳುವವರ ಸಮ್ಮತಿ, ಅಸಮ್ಮತಿ, ಸಂದೇಹ, ಭಾವನಾತ್ಮಕ ಪ್ರತಿಕ್ರಿಯೆ ಮುಂತಾದ ಹಲವು ಸಂಗತಿಗಳನ್ನು ಅವರು ಕೆಲವು ಧ್ವನಿಗಳ ಮೂಲಕ, ನಮ್ಮ ಮಾತನ್ನು ತಡೆಯುವ ಮೂಲಕ, ದೈಹಿಕವಾದ ವಿವಿಧ ಭಂಗಿಗಳ ಮೂಲಕ ತಿಳಿಸಲು ಯತ್ನಿಸುತ್ತಿರುತ್ತಾರೆ. ಆದರೆ ನಾವು ಗಮನಿಸುತ್ತಿರುವ ಈ ಚಾಟ್ ರೂಮಿನ ಸಂವಾದದಲ್ಲಿ ಇವೆಲ್ಲವೂ ನಮಗೆ ಅಲಭ್ಯ. ಎದುರಿಗೆ ಅವರು ಇದ್ದು ನಮ್ಮ ಮಾತಿಗೆ ಪ್ರತಿಕ್ರಿಯೆ ನೀಡುವುದು ಇಲ್ಲಿ ಆಗದ ಮಾತು. ಇದರಿಂದಾಗಿ ನಮ್ಮ ಮಾತು ಯಾವುದೇ ತತ್ಕಾಲೀನ ಪ್ರತಿಕ್ರಿಯೆಯನ್ನು ಪಡೆಯದೆ ರೂಪುಗೊಳ್ಳುತ್ತಿರುತ್ತದೆ.

ಅರ್ಥಗ್ರಹಿಕೆಯಲ್ಲೂ ಮಾತಿನ ಲಕ್ಷಣಗಳು ಇಲ್ಲಿ ಕಂಡು ಬರುವುದಿಲ್ಲ. ಇಡಿಯಾದ ವಾಕ್ಯಗಳು ರೂಪುಗೊಂಡ ಮೇಲೆಯೇ ಅವು ಸಂವಹನವಾಗಬೇಕು. ಚಾಟ್ ರೂಮಿನಲ್ಲಿ ನಾವು ವಾಕ್ಯವನ್ನು 'ಬರೆಯು'ತ್ತಿರುವಂತೆಯೇ ಕಳಿಸುವ ವ್ಯವಸ್ಥೆ ಇಲ್ಲ. ಏನನ್ನು ಬರೆಯಬೇಕೋ ಅದೆಲ್ಲವನ್ನೂ ಬರೆದ ಮೇಲೆ ನಾವೇ ನೀಡುವ ಒಪ್ಪಿಗೆಯ ಆದೇಶದ ಅನಂತರ ಅದು ರವಾನೆಯಾಗುತ್ತದೆ. ಸಂವಾದದಲ್ಲಿ ನಾವು ಮಾತನಾಡುತ್ತಿರುವಂತೆಯೇ ಕೇಳುವವರಿಗೆ ಅದೇ ಕಾಲದಲ್ಲಿ ಕೇಳಿಸುತ್ತಿರುತ್ತದೆ. ಆದರೆ ಅದು ಇಲ್ಲಿ ಸಾಧ್ಯವಿಲ್ಲ. ಇದರಿಂದ ನಮ್ಮ ಮಾತನ್ನು ಗ್ರಹಿಸುವ ವಿಧಾನ ಬಹುಮಟ್ಟಿಗೆ ಬರೆದ ವಾಕ್ಯದ ಅರ್ಥ ಗ್ರಹಿಕೆಯ ಮಾದರಿಯಲ್ಲಿ ನಡೆಯುತ್ತದೆ.

ಅಂತರ್ಜಾಲದಲ್ಲಿ ನಮ್ಮ ಸಂವಾದಗಳು ಎರಡು ಬಗೆಯಲ್ಲಿ ನಡೆಯಬಹುದು. ನಾವು 'ಮಾತನಾಡು'ತ್ತಿರುವಂತೆಯೇ ನಮ್ಮ ಸಂದೇಶವನ್ನು 'ಕೇಳುವವರು' ಓದುವುದು ಒಂದು ವಿಧಾನ. ನಾವು ನೀಡಿದ ಸಂದೇಶವನ್ನು ಯಾವಾಗಲೋ ಬೇಕೆಂದಾಗ ನೋಡಿ ಓದುವುದು ಇನ್ನೊಂದು ವಿಧಾನ. ಇವೆರಡೂ ವಿಧಾನಗಳಲ್ಲಿ ಸಂವಾದದಲ್ಲಿರುವ ಮಾತಿನ ಲಕ್ಷಣಗಳು ಕಳೆದುಹೋಗುತ್ತವೆ. 'ನಿಜಸಮಯ'ದಲ್ಲಿ ಅಂದರೆ ಆಗಾಗಲೇ ನಡೆಯುತ್ತಿರುವ ಸಂವಾದದಲ್ಲೂ ಸಂದೇಶಗಳು ರವಾನೆಯಾಗಿ ತಲುಪಲು ಹಿಡಿಯುವ ಸಮಯಗಳಲ್ಲಿ ವ್ಯತ್ಯಯವಾಗುತ್ತದೆ. ಇದಕ್ಕೆ ಸಂವಾದದಲ್ಲಿ ತೊಡಗಿರುವವರು ಕಾರಣವಾಗುವಂತೆ ತಾಂತ್ರಿಕ ಕಾರಣಗಳೂ ಇರುತ್ತವೆ. ಸಂವಾದದಲ್ಲಿ ತೊಡಗಿರುವವರು ತಮ್ಮೊಡನೆ ಮಾತನಾಡುತ್ತಿರುವವರು ಕಳುಹಿಸಿದ ಸಂದೇಶವನ್ನು ಓದುವುದು ತಡವಾಗಿಯೇ. ಮಾತಾಡುವಾಗ ಕೂಡಲೇ ಕೇಳಿಸಿಕೊಳ್ಳುವ ರೀತಿಯಲ್ಲಿ ಇದು ಇರುವುದಿಲ್ಲ. ಇದಲ್ಲದೆ ಇನ್ನೂ ಒಂದು ಬಗೆಯಲ್ಲಿ ಈ ಸಂವಾದಗಳು ನಡೆಯುತ್ತವೆ. 'ಗುಂಪು ಚರ್ಚೆ' ಅಥವಾ 'ಗುಂಪು ಹರಟೆ' ಎನ್ನಬಹುದಾದ ಈ ವಿಧಾನದಲ್ಲಿ ಹಲವರು ಏಕಕಾಲಕ್ಕೆ ಮಾತನಾಡುತ್ತಿರುತ್ತಾರೆ. ಯಾರು ಯಾರ ಜೊತೆ ಮಾತನಾಡುತ್ತಿರುತ್ತಾರೆ ಹಾಗೂ ಯಾರ ಮಾತಿಗೆ ಯಾರು ಉತ್ತರ ನೀಡುತ್ತಿರುತ್ತಾರೆ ಎಂಬುದು ಮೊದಲೇ ನಿಗದಿಯಾಗುವುದಿಲ್ಲ. ಬಹುಮಟ್ಟಿಗೆ ಯಾವುದೋ ಒಂದು ನಿರ್ದಿಷ್ಟ ವಿಷಯ ಕುರಿತು ಚರ್ಚೆ ನಡೆಯುತ್ತಿರುತ್ತವೆ. ಪ್ರತಿಯೊಬ್ಬರ ಸಂದೇಶವೂ ಕಂಪ್ಯೂಟರ್‌ನ ತೆರೆಯ ಮೇಲೆ ಅವರ ಹೆಸರಿನೊಡನೆ ಕಾಣಿಸಿಕೊಳ್ಳುತ್ತದೆ. ಇನ್ನೊಂದು ಸಂದೇಶ ಮತ್ತೊಬ್ಬರಿಂದ ಬರುವವರೆಗೂ ಅಲ್ಲಿಯೇ ಇರುತ್ತದೆ. ಮತ್ತೊಂದು ಸಂದೇಶ ಬಂದ ಕೂಡಲೇ ಸರಿದು ಮೇಲಕ್ಕೆ ಹೋಗುತ್ತದೆ. ಯಾರಾದರೂ ಆ ಸಂದೇಶಕ್ಕೆ ಪ್ರತಿಕ್ರಿಯಿಸಬಹುದು. ಅಥವಾ ಓದಿ ಸುಮ್ಮನಾಗಬಹುದು. ಓದುವವರು ನೀಡುವ ಪ್ರತಿಕ್ರಿಯೆ ಮತ್ತೆ ಯಾವಾಗಲೋ ಕಾಣಿಸಿಕೊಳ್ಳುತ್ತದೆ. ಅಂದರೆ ಮಾನವ ಸಹಜ ಸಂವಾದದಲ್ಲಿ ಇಲ್ಲಿಯವರೆಗೆ ಎಂದೆಂದೂ ಕಾಣಿಸಿಕೊಳ್ಳದಿದ್ದ ಮಾದರಿ ಇದು. ಅತ್ಯಂತ ಗೊಂದಲಮಯವಾಗಿ ತೋರುತ್ತದೆ. ಮಾತಿನ, ಸಂವಾದದ ಎಲ್ಲ ನಿಯಮಗಳೂ ಇಲ್ಲಿ ಗಾಳಿಗೆ ತೂರಿಹೋಗುತ್ತವೆ. ಹೀಗಿದ್ದರೂ ಕಂಪ್ಯೂಟರ್ ಮಾಧ್ಯಮದ ಸಂವಾದ ಬರೆಹದ ಲಕ್ಷಣಗಳನ್ನು ಹೊಂದಿದೆ ಎನ್ನುವಂತಿಲ್ಲ. ಬರೆಹದಂತೆ ಇದನ್ನು ಕೀಲಿಮಣೆಯ ಕೀಲಿಗಳನ್ನು ಒತ್ತಿ ನಾವು ಬರೆಯುತ್ತೇವೆ ನಿಜ. ರೂಪುಗೊಳ್ಳುವ ಹಂತದಲ್ಲಿ ಇದು ಬರೆಹದಂತೆ ತೋರುತ್ತದೆ. ಆದರೆ ಸಂವಹನಗೊಳ್ಳುವ ಹಂತದಲ್ಲಿ ಇದು ನಾವು ಬಲ್ಲ ಎಲ್ಲ ಬರೆಹದ ಬಗೆಗಳ ನಿಯಮಗಳನ್ನೂ ಮೀರಿರುತ್ತದೆ. ಸಾಮಾನ್ಯವಾಗಿ ಬರೆಹಕ್ಕೆ ನಾವು ಒಂದು ರೀತಿಯ ಶಾಶ್ವತತೆಯ ಚೌಕಟ್ಟನ್ನು ಕಲ್ಪಿಸುತ್ತೇವೆ. ಅಂದರೆ ಬರೆದದ್ದನ್ನು ಯಾರು ಯಾವಾಗ ಓದಿದರೂ ಸಾಮಾನ್ಯವಾಗಿ ಅದು ಒಂದೇ ರೀತಿಯಲ್ಲಿ ಇರುತ್ತದೆ. ಅದನ್ನು ರೂಪಾಂತರಗೊಳಿಸುವುದು ಅಷ್ಟು ಸುಲಭದ ಮಾತಲ್ಲ. ಆದರೆ ಅಂತರ್ಜಾಲದ ಬರೆವಣಿಗೆಯ ಬಗೆಗೆ ಈ ಮಾತು ಹೇಳುವಂತಿಲ್ಲ. ಅದು ನಿರಂತರವಾಗಿ ಬದಲಾಗುತ್ತಲೇ ಇರಬಹುದು. ಅದನ್ನು ಏಕಘಟಕವನ್ನಾಗಿ ನೋಡಬೇಕೆಂಬ ಒತ್ತಾಯವೂ ಇಲ್ಲ. ಎಲ್ಲಕ್ಕಿಂತ ಮುಖ್ಯವಾಗಿ ಈ ಬರೆವಣಿಗೆಯಲ್ಲಿ 'ಅಧಿಪತ್ಯ'ದ ಸಾಧ್ಯತೆ ಇರುತ್ತದೆ.

ಅಂದರೆ ಒಂದು ಪಠ್ಯದಲ್ಲಿ ಇರುವ ಯಾವುದಾದರೊಂದು ಪದದ ಬಗೆಗೆ ವಿವರಣೆ ಬೇಕೆಂದರೆ ಆ ಪದದ ಮೂಲಕ ಇನ್ನೊಂದು ಪಠ್ಯ ಭಾಗಕ್ಕೆ ನೇರವಾಗಿ ಹೋಗಬಹುದು. ಅಂದರೆ ಓದುವಿಕೆ ಎನ್ನುವುದು ರೇಖಾತ್ಮಕವಾಗಿರುವುದಿಲ್ಲ. ಈ ಬಗೆಯ ಓದು ಈವರೆಗೆ ನಮಗೆ ಅಪರಿಚಿತವಾಗಿತ್ತು. ಹೀಗೆ ಮುಂದೆ ಹೋಗಿ ಓದಿ ಮತ್ತೆ ಹಿಂದಿನ ಪಠ್ಯ ಭಾಗಕ್ಕೆ ಮರಳುವುದೂ ಕೂಡ ಸಾಧ್ಯ.

ಏಕಕಾಲಕ್ಕೆ ಅಂತರ್ಜಾಲದ ಬರೆಹ ಅಸಂಖ್ಯ ಪ್ರತಿಗಳಾಗಬಲ್ಲದು. ಹಲವು ಜನರಿಗೆ ಏಕಕಾಲಕ್ಕೆ ರವಾನೆಯಾಗಬಲ್ಲದು. ಇ–ಮೇಲ್‌ನ ನಮ್ಮ ಪತ್ರ ಒಂದೇ ಆಗಿದ್ದರೂ ಅದನ್ನು ಓದುವವರ ಸಂಖ್ಯೆ ಎಷ್ಟು ಬೇಕಾದರೂ ಆಗಿರಬಹುದು. ಸಾಮಾನ್ಯ ಬರೆಹಗಳು ಈಗ ಬಹುಪ್ರತಿಗಳಾಗುವುದು ಮತ್ತು ಬಹುಜನರ ಓದಿಗೆ ಒಮ್ಮೆಗೇ ಲಭ್ಯವಾಗುವುದು ಸಾಂಪ್ರದಾಯಿಕ ಬರೆವಣಿಗೆಯ ಲಕ್ಷಣವಲ್ಲ.

ಅಂತರ್ಜಾಲದ ಈ ಭಾಷಾಬಳಕೆಯ ಸ್ವರೂಪ ಅತ್ತ ಮಾತೂ ಅಲ್ಲದ ಇತ್ತ ಬರೆಹವೂ ಅಲ್ಲದ ಮತ್ತೊಂದು ಹೊಸ ರೂಪವನ್ನು, ಭಾಷಾಸ್ಥಿತಿಯನ್ನು ನಮ್ಮ ಎದುರು ಇರಿಸಿದೆ. ಈ ಭಾಷಾಸ್ಥಿತಿಯ ಲಕ್ಷಣಗಳನ್ನು ಇನ್ನೂ ಪೂರ್ಣವಾಗಿ ನಾವು ಗ್ರಹಿಸಬೇಕಾಗಿದೆ. ಭಾಷೆಯ ರಚನೆ ಹಾಗೂ ಬಳಕೆಯನ್ನು ಇದು ಪ್ರಭಾವಿಸುವ ಕ್ರಮವನ್ನು ಕುರಿತು ತಿಳಿಯಬೇಕಿದೆ. ಏಕೆಂದರೆ ಇದರಿಂದ ಈ ಎರಡು ವಲಯಗಳೂ ಪ್ರಭಾವಿತವಾಗಲಿವೆ. ಸದ್ಯ ಕನ್ನಡದ ರಚನೆಯ ಮೇಲೆ ಇದರ ಪ್ರಭಾವವೇನು ಎಂಬುದನ್ನು ತಿಳಿಯಲು ನಮ್ಮಲ್ಲಿ ಸಾಮಗ್ರಿಗಳು ಸಾಕಷ್ಟು ಇಲ್ಲ. ಆದರೆ ಬಳಕೆಯ ವಲಯಗಳ ಮೇಲೆ ಆಗುವ ಪ್ರಭಾವವನ್ನು ತಿಳಿಯಲು ಸಾಧ್ಯವಿದೆ. ಈವರೆಗೆ ಕನ್ನಡವು ಬಳಕೆಯಾಗದಿದ್ದ ರೀತಿಯಲ್ಲಿ ಮತ್ತು ಬಗೆಯಲ್ಲಿ ಈಗ ಬಳಕೆಯಾಗುವುದು ಕಂಡುಬರುತ್ತಿದೆ. ಎಲ್ಲಕ್ಕಿಂತ ಮುಖ್ಯ ಸೌಲಭ್ಯ ಮತ್ತು ತುರ್ತಿನ ಕಾರಣಗಳಿಂದ ಇ–ಮೇಲ್‌ನಲ್ಲಿ ಮತ್ತು ಮೆಸೇಜಿಂಗ್ ಸರ್ವೀಸ್‌ನಲ್ಲಿ, ಚಾಟ್ ರೂಮ್‌ಗಳಲ್ಲಿ ಕನ್ನಡವನ್ನು ರೋಮನ್ ಲಿಪಿಯಲ್ಲಿ ಬರೆಯುವುದು ಹೆಚ್ಚಾಗುತ್ತಿದೆ. ಕನ್ನಡದ ವೆಬ್‌ಸೈಟ್‌ಗಳು, ಪತ್ರಿಕೆಯ ಅಂತರ್ಜಾಲ ಪುಟಗಳು ಈಗ ಕನ್ನಡದ ವಿಶಿಷ್ಟ ಬಳಕೆಗೆ ಸನ್ನದ್ಧವಾಗುತ್ತಿವೆ. ತುಂಬಾ ಸಂದರ್ಭಗಳಲ್ಲಿ ಕನ್ನಡದ ವೆಬ್‌ಸೈಟುಗಳು ದ್ವಿಭಾಷಿಕವಾಗಿರುತ್ತವೆ. ಎರಡು ಭಾಷೆಗಳು ಎಂದರೆ ಅವು ಕನ್ನಡ ಮತ್ತು ಇಂಗ್ಲಿಶ್. ಇದರಿಂದಾಗಿಯೂ ಅಲ್ಲಿ ಬಳಕೆಯಾಗುವ ಕನ್ನಡದ ರಚನೆಯ ಮೇಲೆ ಕೆಲವು ಪರಿಣಾಮಗಳು ಆಗುತ್ತಿವೆ. ಎರಡು ಭಾಷೆಗಳಲ್ಲಿ ಇರಬೇಕಾದ ಮಾಹಿತಿ ಮತ್ತು ವಿನ್ಯಾಸ ಸಮಾನವಾಗಿರುವುದು ಅಗತ್ಯ. ಇದರಿಂದಾಗಿ ಕನ್ನಡದ ರಚನೆಯು ತನ್ನಲ್ಲಿ ಅಗತ್ಯವಾದ ಮಾರ್ಪಾಡುಗಳನ್ನು ಮಾಡಿಕೊಳ್ಳಬೇಕಾಗಿದೆ. ಬರಲಿರುವ ದಿನಗಳು ಏನೆಲ್ಲ ಬದಲಾವಣೆಗಳನ್ನು ತರಲಿವೆ ಎಂಬುದನ್ನು ಈಗ ಊಹಿಸುವುದೂ ಕೂಡ ಸಾಧ್ಯವಿಲ್ಲ.

## ಬರೆವಣಿಗೆಯ ದೋಷಗಳು

ಕನ್ನಡ ಬರೆವಣಿಗೆಯಲ್ಲಿ ಮತ್ತು ಮುದ್ರಣದಲ್ಲಿ ಹಲವಾರು ಕಾಗುಣಿತ ದೋಷಗಳು ಸಂಭವಿಸುತ್ತವೆ. ಕೆಲವನ್ನು ಗಮನಿಸಿಯೂ ಸರಿಪಡಿಸಿಕೊಂಡು ಓದುತ್ತೇವೆ. ಮತ್ತೆ ಕೆಲವು ದೋಷಗಳಿಗೆ ಈ ವಿನಾಯತಿ ಕೊಡುವುದಿಲ್ಲ. ಮುದ್ರಣದ ದೋಷಗಳಿಗೆ ಅನವಧಾನವನ್ನು ಕಾರಣ ಮಾಡಿ ವಿನಾಯತಿ ನೀಡುತ್ತೇವೆ. ಅಲ್ಲದೆ ಬರೆಯುವವರು, ಅಕ್ಷರ ಸಂಯೋಜಿಸುವವರು, ಕರಡು ತಿದ್ದುವವರು ಬೇರೆಬೇರೆಯಾಗುವುದರಿಂದ ಆ ದೋಷಗಳಿಗೆ ಯಾರನ್ನಾದರೂ ಬೆರಳು ಮಾಡಿ ತೋರಿಸುವುದು ಯಾವಾಗಲೂ ಸಾಧ್ಯವಾಗುವುದಿಲ್ಲ. ಆದರೆ ಕೈ ಬರೆಹಗಳಿಗೆ ಹೊಣೆಯಾಗುವವರು ಇಂಥವರೇ ಎಂಬುದು ಗೊತ್ತಿರುವುದರಿಂದ ಅಲ್ಲಿನ ದೋಷಗಳಿಗೆ ವಿನಾಯತಿ ನೀಡುವುದಿಲ್ಲ. ಕನ್ನಡದಲ್ಲಿ ಯಾವಯಾವ ಬಗೆಯ ಬರೆವಣಿಗೆಯ ದೋಷಗಳು ಸಂಭವಿಸುತ್ತವೆ ಎಂಬುದನ್ನು ನಾವಿನ್ನೂ ಖಚಿತವಾಗಿ ಅಧ್ಯಯನ ಮಾಡಿಲ್ಲ. ಆದರೆ ಒಂದು ದೋಷವನ್ನಿಲ್ಲಿ ಚರ್ಚಿಸುವುದು ಅವಶ್ಯವೆನಿಸಿದೆ.

ವಿಧ್ಯೆ, ವಿಧ್ಯಾರ್ಥಿ, ವಿಧ್ಯಾಲಯ, ಸಧ್ಯ, ಹಾರ್ಧಿಕ, ವೈಧಿಕ, ಶಬ್ಧ, ಸುಧ್ಧಿ, ಧರ, ಧಾನ, ಧಣಿ

ಈ ದೋಷಗಳನ್ನು ಗುರುತಿಸಿ ತಿದ್ದುಪಡಿಯನ್ನು ಸೂಚಿಸುವುದು ನಡೆದೇ ಇದೆ. ಆದರೆ ಇವು ದೋಷಗಳು ಎಂಬುದನ್ನು ಗಮನಿಸದೇ ಹೋಗುವ ಪ್ರಸಂಗಗಳು ಹೆಚ್ಚಾಗುತ್ತಿವೆ. ಯಾವುದೇ ದೋಷ ಹೀಗೆ ಹೆಚ್ಚು ವ್ಯಾಪಕವಾಗಿ ಮತ್ತು ಹಲವಾರು ವ್ಯಕ್ತಿಗಳಲ್ಲಿ ಸಮಾನ ರೂಪದಲ್ಲಿ ಸಂಭವಿಸುತ್ತಿದ್ದರೆ ಅಂಥ ದೋಷಗಳನ್ನು ನಾವು ಪರಿಗಣಿಸಬೇಕಾದ ವಿಧಾನವೂ ಬೇರೆಯಾಗಬೇಕಾಗುತ್ತದೆ. ಭಾಷೆಯೊಂದರಲ್ಲಿ ಧ್ವನಿ ಪರಿವರ್ತನೆಯು ಸಂಭವಿಸುವಾಗ ಬರೆವಣಿಗೆಯಲ್ಲಿ ದೋಷಗಳಾಗುವುದು ಸಹಜ. ಧ್ವನಿ ಬದಲಾವಣೆಗಳು ಉಚ್ಚಾರಣೆಯಲ್ಲಿ ನಡೆಯುವಂತೆ ಧ್ವನಿಗಳನ್ನು ನಾವು ಕೇಳಿಸಿಕೊಳ್ಳುವ ರೀತಿಯಲ್ಲೂ ಬದಲಾವಣೆಗಳು ನಡೆಯುತ್ತಿರುತ್ತವೆ. ಉದಾಹರಣೆಗೆ ನಾವು ಇಂಗ್ಲಿಶಿನ think ಪದವನ್ನು ಕೇಳಿಸಿಕೊಂಡು ಅದನ್ನು ಕನ್ನಡದಲ್ಲಿ ಬರೆಯುವ ಪ್ರಸಂಗ ಬಂದರೆ ಆಗ ಥಿಂಕ್ ಎಂದು ಬರೆಯುತ್ತೇವೆ. ನಿಜದಲ್ಲಿ ಇಂಗ್ಲಿಶ್ ಪದದ ಮೊದಲಲ್ಲಿ ಇರುವ ಧ್ವನಿ ಥ್ ಅಲ್ಲ. ಅದೊಂದು ದಂತ್ಯ-ವರ್ತ್ಸ್ಯ ಘರ್ಷ ಧ್ವನಿ. ಆದರೆ ಆ ಧ್ವನಿ ಕನ್ನಡದಲ್ಲಿ ಇಲ್ಲ. ಹಾಗಾಗಿ ಕನ್ನಡಿಗರು ಅದನ್ನು ತಾವು ಕೇಳಿಸಿಕೊಂಡ

ಹಾಗೆ ಬರೆಯುತ್ತಾರೆ. ಇದನ್ನು ನಾವು ಒಪ್ಪಿಕೊಳ್ಳುತ್ತೇವೆ. ಹಾಗಿದ್ದರೆ ಮೇಲೆ ಹೇಳಿದ ದೋಷಯುಕ್ತ ಬರವಣಿಗೆಯಲ್ಲೂ ಹೀಗೇ ಆಗಿರಬಾರದೇಕೆ?

ಗಮನಿಸಿದರೆ ಈ ದೋಷಗಳೆಲ್ಲ **ದಕಾರಕ್ಕೆ** ಸಂಬಂಧಿಸಿವೆ ಎನ್ನುವುದು ಗೊತ್ತಾಗುತ್ತದೆ. ಅಂದರೆ ಅಲ್ಪಪ್ರಾಣ ದಕಾರವನ್ನು ನಿರೀಕ್ಷಿಸುವ ಕಡೆಗಳಲ್ಲಿ ಮಹಾಪ್ರಾಣ ಧಕಾರವನ್ನು ಬರೆದಿರುವುದೇ ಇಲ್ಲಿನ ದೋಷ.

ಕನ್ನಡದಲ್ಲಿ **ದಕಾರಕ್ಕೆ** ಮೂರು ಬಗೆಯ ಪ್ರಸಾರಗಳಿವೆ. 1. ಪದಾದಿ(ದಡ, ದರಿ, ದಾರಿ, ದೂಡು...) ಇಲ್ಲಿ ದಕಾರದ ಅನಂತರ ವ್ಯಂಜನವೂ ಬರಬಹುದು. ಈ ಪದಗಳು ಸಾಮಾನ್ಯವಾಗಿ ಬೇರೆ ಭಾಷೆಗಳಿಂದ ಕನ್ನಡಕ್ಕೆ ಬಂದವು. (ದ್ರಾಕ್ಷಿ, ದ್ರವ, ದ್ರಾಬೆ..) 2. ಪದಮಧ್ಯ ಇದರಲ್ಲಿ ಎರಡು ವಿಧ. ಸ್ವರಗಳ ನಡುವೆ ಮತ್ತು ವ್ಯಂಜನಗಳೊಡನೆ. (ಆದರೆ, ಸದರ, ಅದೀಗ, ಸಂದೇಹ, ಸುದೂರ, ಕದಿರು ಇತ್ಯಾದಿ) ಇವು ಕನ್ನಡದ ಪದಗಳಾಗಿರುವಂತೆ ಅನ್ಯಭಾಷೆಯಿಂದ ಬಂದವೂ ಆಗಿವೆ. ವ್ಯಂಜನ ದ್ವಿತ್ವವಾಗಿ ಬರುವಾಗ ದಕಾರ-ಮೊದಲ ವ್ಯಂಜನವಾಗುವುದು ಒಂದು ಬಗೆ. ಮದ್ಯ, ಸದ್ಯ, ಆದ್ಯ, ಸಾದ್ಯಂತ, ಮುದ್ರಣ, ಮುದ್ರೆ, ಅದ್ರಿ, ಉದ್ಯಮ, ತದ್ವತ್ ಇತ್ಯಾದಿ. ಈ ವ್ಯಂಜನ ದ್ವಿತ್ವಗಳಲ್ಲಿ ಎರಡನೆಯ ವ್ಯಂಜನ ಅವರ್ಗೀಯವಾಗಿದೆ. (ಯ, ರ, ವ)ವರ್ಗೀಯ ವ್ಯಂಜನಗಳು ಎರಡನೆಯ ಸ್ಥಾನದಲ್ಲಿ ಬರುವ ಪದಗಳೂ ಕೆಲವಿವೆ. ಉದ್ಭವ, ಗದ್ಗದ, ಉದ್ಗಮ, ಉದ್ಗಾರ ಇತ್ಯಾದಿ. ಎರಡೂ ವ್ಯಂಜನಗಳೂ ದಕಾರಗಳೇ (ಎರಡನೆಯದು ಮಹಾಪ್ರಾಣವೂ ಆಗಿರಬಹುದು)ಆಗಿರುವ ಪದಗಳೂ ಇವೆ. ಉದ್ದೇಶ, ಉದ್ಧಾರ, ಬದ್ಧ, ಉದ್ದು, ಗದ್ದೆ, ಇತ್ಯಾದಿ. ದಕಾರವು ವ್ಯಂಜನ ದ್ವಿತ್ವದ ಎರಡನೆಯ ವ್ಯಂಜನವಾಗಿರುವ ಪದಗಳನ್ನು ನೋಡೋಣ. ಮರ್ದನ, ಶಬ್ದ ಇತ್ಯಾದಿ. ಈ ಗುಂಪಿನಲ್ಲಿ ಕನ್ದ, ಮನ್ದ, ಬನ್ದ, ತನ್ದ ಎಂಬ ರೂಪಗಳೂ ಬರುತ್ತವೆ. ಏನೇ ಇರಲಿ. ದಕಾರ ಕಾಣಸಿಗುವ ಈ ಎಲ್ಲ ಪದಗಳಲ್ಲೂ ಬರೆವಣಿಗೆಯ ದೋಷಗಳು ಎಲ್ಲಿ ವ್ಯಾಪಕವಾಗಿ ನಡೆಯುತ್ತಿವೆ ಎನ್ನುವುದನ್ನು ಗಮನಿಸೋಣ. ಮೇಲೆ ಹೇಳಿದ ನಿದರ್ಶನಗಳನ್ನೇ ನೋಡಿದರೆ ಪದಾದಿಯಲ್ಲಿ ಮತ್ತು ಪದಮಧ್ಯದಲ್ಲಿ ವ್ಯಂಜನ ದ್ವಿತ್ವವಾಗಿರುವ ಕೆಲವು ಸಂದರ್ಭಗಳಲ್ಲಿ ಈ ದೋಷಗಳು ಸಂಭವಿಸುತ್ತಿವೆ. ಈ ದೋಷಗಳಿಗೆ ಬರೆಯುತ್ತಿರುವ ವ್ಯಕ್ತಿಗಳನ್ನು ಮಾತ್ರ ಗುರಿ ಮಾಡಿದರೆ ಸಾಲದೆಂದು ತೋರುತ್ತದೆ.

ಅಲ್ಪಪ್ರಾಣ ದಕಾರವನ್ನು ಮಹಾಪ್ರಾಣ ಧಕಾರವನ್ನಾಗಿ ಬರೆಯುತ್ತಿರುವುದಕ್ಕೆ ಎರಡು ಕಾರಣಗಳಿರಲು ಸಾಧ್ಯ. 1. ಎಲ್ಲಿ ದೋಷಗಳಾಗುತ್ತಿವೆಯೋ ಅಂಥ ಪರಿಸರಗಳಲ್ಲಿ ದಕಾರದ ಉಚ್ಚಾರಣೆಯಲ್ಲೇ ವ್ಯತ್ಯಾಸಗಳು ಉಂಟಾಗುತ್ತಿರಬಹುದು. ಅಂದರೆ ಅಲ್ಪಪ್ರಾಣ ದಕಾರವನ್ನು ಅಂಥ ಕಡೆಗಳಲ್ಲಿ ಮಹಾಪ್ರಾಣದಂತೆ ಉಚ್ಚರಿಸುವ ಧ್ವನಿವ್ಯತ್ಯಾಸ ಕನ್ನಡದಲ್ಲಿ ಸಂಭವಿಸುತ್ತಿರಬೇಕು. ಹೀಗೆ ಧ್ವನಿವ್ಯತ್ಯಾಸಗಳಾಗುತ್ತಿರುವಾಗ ಬರೆವಣಿಗೆಯಲ್ಲಿ ಸಹಜವಾಗಿಯೇ ಗೊಂದಲಗಳು ಉಂಟಾಗುತ್ತವೆ. ಕನ್ನಡದ ಠಳವು ಳಕಾರವಾಗಿ ಬದಲಾಗುತ್ತಿದ್ದಾಗ ಠಳಯುಕ್ತ ಪದಗಳನ್ನು ಳಕಾರಯುಕ್ತವಾಗಿ ಬರೆಯಲು ತೊಡಗಿದ್ದನ್ನು ನೋಡುತ್ತೇವೆ. ಆದರೆ ಬದಲಾವಣೆಯು ನಡೆಯುತ್ತಿದ್ದ ಸಂದರ್ಭದಲ್ಲಿ ಈ ಬರೆವಣಿಗೆಯ ವ್ಯತ್ಯಾಸ ಒಂದು ದೋಷವಾಗಿಯೇ ಕಂಡು ಬಂದಿದ್ದಿರಬೇಕು. 2. ದೋಷಗಳು

ಸಂಭವಿಸುತ್ತಿರುವ ಪರಿಸರದಲ್ಲಿ ಮಹಾಪ್ರಾಣ ಧಕಾರಯುಕ್ತ ಪದಗಳೂ ಕಾಣಸಿಗುತ್ತವೆ. ಪ್ರಧಾನ, ಮಧ್ಯ, ಅರ್ಧ ಇತ್ಯಾದಿ. ಬಹುಪಾಲು ಪದಗಳ ಉಚ್ಚಾರಣೆಯನ್ನು ಕಣ್ಣಿನ ಮೂಲಕವೇ ಗ್ರಹಿಸಬೇಕಾಗಿರುವ ಇಂದಿನ ಸಂದರ್ಭಗಳಲ್ಲಿ ಈ ಮಹಾಪ್ರಾಣ ಧಕಾರಯುಕ್ತ ಪದಗಳ ಮಾದರಿಗಳನ್ನು ಕನ್ನಡಿಗರು ಅನುಸರಿಸತೊಡಗಿರುವುದೂ ಸಾಧ್ಯ. ಉಚ್ಚಾರಣೆಯನ್ನು ಕಣ್ಣಿನ ಮೂಲಕ ಗ್ರಹಿಸುವುದು ಎಂದರೇನು? ನಾವು 'ಬಳಸುವ' ಎಷ್ಟೋ ಪದಗಳನ್ನು ನಾವು ಬರೆವಣಿಗೆಯಲ್ಲಿ ಮಾತ್ರ ನೋಡುತ್ತೇವೆ. ಅವುಗಳ ಉಚ್ಚಾರಣೆಯನ್ನು ಕಿವಿಯ ಮೂಲಕ ಕೇಳುವ ಸಂದರ್ಭವೇ ಬರುವುದಿಲ್ಲ. ಹಾಗಾಗಿ ಅವುಗಳು ನಮಗೆ ಕಣ್ಣಿನ ಮೂಲಕ ಲಭ್ಯ. ಅಂಥ ಪದಗಳನ್ನು ಬರೆಯುವಾಗ ನಾವು ಬಹುಮಟ್ಟಿಗೆ ಕಣ್ಣನ್ನು ನಂಬುತ್ತೇವೆ.

ನಾವೀಗ ಚರ್ಚಿಸುತ್ತಿರುವ ದೋಷಕ್ಕೆ ಮೇಲೆ ಹೇಳಿದ ಎರಡು ಕಾರಣಗಳಲ್ಲಿ ಯಾವುದು ಸರಿಯಾದುದೋ ತಿಳಿದಿಲ್ಲ. ಅಥವಾ ಇವೆರಡೂ ಕಾರಣಗಳಿರುವುದೂ ಸಾಧ್ಯ. ಹೇಳಬೇಕಿದ್ದ ಮಾತು ಇಷ್ಟೆ: ಬರೆವಣಿಗೆಯಲ್ಲಿ ಸಂಭವಿಸುವ ವ್ಯಾಪಕ ಮತ್ತು ಸಾಮಾನ್ಯ ದೋಷಗಳನ್ನು ವಿವರಿಸಲು ಬೇರೆಯೇ ಮಾನದಂಡಗಳು ಬೇಕಾಗುತ್ತವೆ.

ಇಲ್ಲಿಯೇ ಗಮನಿಸಬೇಕಾದ ಇನ್ನೊಂದು ಸಂಗತಿ ಇದೆ. ಕನ್ನಡದ ಹಲವು ಉಪಭಾಷೆಗಳಲ್ಲಿ ಹೀಗೆ ಅಲ್ಪಪ್ರಾಣಗಳಿರಬೇಕಾದ ಕಡೆಗಳಲ್ಲಿ ಮಹಾಪ್ರಾಣಗಳನ್ನು ಉಚ್ಚರಿಸುವ ಪರಿಪಾಠವಿದೆ. ಖಿಡಕಿ, ಥೋರ, ಘಾಯ, ಫಳಿಗೆ, ಛಳಿ, ಭಾಳ, ಭಾವಿ, ಭತ್ತ ಇತ್ಯಾದಿ. ಇವುಗಳಲ್ಲಿ ಕೆಲವು ಬರೆವಣಿಗೆಗೂ ದಾಟಿ ಬಂದಿವೆ. ಉಚ್ಚಾರಣೆಯಲ್ಲಿ ಈ 'ದೋಷ'ಗಳು ಸಂಭವಿಸಲು ಕಾರಣಗಳೇನೇ ಇರಲಿ, ನಾವು ಕೊಡುತ್ತಿರುವ ಅವಧಾರಣೆಯನ್ನು ಕೂಡ ತೋರಿಸುತ್ತಿರಬಹುದಲ್ಲವೇ?

# ಬರೆಹದ ಸಾಮಾಜಿಕತೆ

ಬ್ರೆಸಿಲ್‌ನ ಆದಿವಾಸಿಗಳನ್ನು ಅಭ್ಯಾಸಮಾಡುವಾಗ ಆದ ಅನುಭವವೊಂದನ್ನು ಕ್ಲಾಡ್ ಲೆವಿ ಸ್ಟ್ರಾಸ್ ತನ್ನ 'ದ ರೈಟಿಂಗ್ ಲೆಸನ್ ಎಂಬ ಲೇಖನದಲ್ಲಿ ಬಣ್ಣಿಸಿದ್ದಾನೆ. ಆ ಅನುಭವದ ಸಾರ ನಿರೂಪಣೆ ಹೀಗಿದೆ: ಆ ಪ್ರದೇಶದ ಎಷ್ಟೋ ಆದಿವಾಸಿ ಸಮುದಾಯಗಳು ಕೆಲವೇ ದಶಕಗಳ ಅವಧಿಯಲ್ಲಿ ವಿನಾಶದ ಅಂಚಿಗೆ ಬಂದು ನಿಂತಿದ್ದವು. ಸಂಪನ್ಮೂಲಗಳ ಕೊರತೆ, ಆಹಾರದ ಅಭಾವ, ಮದ್ದು ತಿಳಿಯದ ಅಂಟು ಜಾಡ್ಯಗಳು ಇವೇ ಮುಂತಾದ ಕಾರಣಗಳಿಂದ ಉಂಟಾಗಿದ್ದ ಪರಿಸ್ಥಿತಿಯಿದು. ಹಾಗಾಗಿ ಅಲೆಮಾರಿಗಳೂ ಆಗಿದ್ದ ಆ ಆದಿವಾಸಿಗಳ ಸಮುದಾಯಗಳ ಖಾನೇಶುಮಾರಿಯಂತೂ ಅಸಾಧ್ಯವಾಗಿತ್ತು. ಇಂಥ ಸಂದರ್ಭದಲ್ಲಿ ಒಂದು ಅಂಥ ಸಮುದಾಯವನ್ನು ಅರಿಯುವ ಯೋಜನೆಯನ್ನು ಲೆವಿ ಸ್ಟ್ರಾಸ್ ತಂಡದವರು ಹಾಕಿಕೊಂಡರು. ಪರಿಚಿತ ಗುಂಪಿನ ಸದಸ್ಯರೊಬ್ಬರ ಮೂಲಕ ಮಾತ್ರ ಅಪರಿಚಿತ ಗುಂಪನ್ನು ಪ್ರವೇಶಿಸುವುದು ಸಾಧ್ಯ. ಭಾಷೆ ಗೊತ್ತಿಲ್ಲದಿರುವುದು, ಆದಿವಾಸಿ ಸಮುದಾಯಗಳ ನಡುವಣ ಶತ್ರುತ್ವ, ಇವೆಲ್ಲದರಿಂದ 'ಗೊತ್ತಿಲ್ಲದ' ಜನರ ನಡುವೆ ನೇರವಾಗಿ ಹೋಗುವುದು ಅಪಾಯಕಾರಿ. ಅಲ್ಲದೆ ಪರಿಚಯ ಬಯಸಿ ಹೋಗುವವರು ಹಲವಾರು ಕೊಡುಗೆಯ ವಸ್ತುಗಳನ್ನು ಒಯ್ಯುವುದು ಅವಶ್ಯ. ಇದೆಲ್ಲವನ್ನೂ ಬಲ್ಲ ಅಧ್ಯಯನಕಾರರು ಸೂಕ್ತ ಸಿದ್ಧತೆಯೊಡನೆ ಹೊಸ ಗುಂಪಿನೊಳಗೆ ಸೇರಿದರು. ಈ ಅಪರಿಚಿತ ಸಮುದಾಯಕ್ಕೆ ಬರೆವಣಿಗೆ ಎಂದರೇನೆಂಬುದು ತಿಳಿದಿರಲಿಲ್ಲ. ಅವರಲ್ಲಿ ಬರೆವಣಿಗೆ ಇರಲಿಲ್ಲ. ಅಲ್ಲದೆ ಬರೆವಣಿಗೆ ಎಂಬುದನ್ನು ಅನ್ಯರಲ್ಲೂ ಅವರು ಕಂಡವರಲ್ಲ. ಈ ಗುಂಪಿಗೆ ಹೋದಾಗ ಅಧ್ಯಯನಕಾರರು ಕಾಗದ ಮತ್ತು 'ಬರೆಯಲು' ಸೀಸದ ಕಡ್ಡಿಗಳನ್ನು ಅವರಿಗೆ ಕೊಟ್ಟರು. ಅವರು ಏನು ಮಾಡಲೂ ತೋಚದಂತಿದ್ದರೂ ಕೊನೆಗೆ ತಾವೂ 'ಬರೆಯ'ತೊಡಗಿದರು. ಬರೆದದ್ದು ಗೆರೆಗಳು. ಅಡ್ಡಡ್ಡ, ಉದ್ದುದ್ದ ಗೆರೆಗಳು.

ಅದೇನೇ ಇರಲಿ, ಮುಂದಿನದು ಸೋಜಿಗದ ವಿಷಯ. ಆ ಗುಂಪಿನ ನಾಯಕ-ಜಾಣನಾದುದರಿಂದಲೇ ನಾಯಕ-ಲೆವಿ ಸ್ಟ್ರಾಸ್ ಬಳಿ ಕುಳಿತು ತನ್ನ ಬಳಿ ಇದ್ದ ಕಾಗದದ ಹಾಳೆಯನ್ನು ಹರಡಿಕೊಂಡು ಲೆವಿ ಸ್ಟ್ರಾಸ್‌ಗೂ ಒಂದು ಹಾಳೆ ತೆಗೆದುಕೊಳ್ಳಲು ಹೇಳಿದ. ಲೆವಿ ಸ್ಟ್ರಾಸ್ ಆ ಸಮುದಾಯದ ರೀತಿನೀತಿಗಳ ಬಗ್ಗೆ ಏನಾದರೂ ಕೇಳಿದರೆ ಅದಕ್ಕೆ ಬಾಯ್ದೆರೆಯ ಉತ್ತರ ನೀಡುವ ಬದಲು ತನ್ನ ಬಳಿಯಿದ್ದ ಹಾಳೆಯ ಮೇಲೆ ಏನನ್ನೋ ಗೀಚುತ್ತಿದ್ದ. ಅದೇ ತನ್ನ ಉತ್ತರವೆಂದೂ 'ಬರೆದು' ತೋರಿಸುತ್ತಿರುವಂತೆ

ನಟಿಸುತ್ತಿದ್ದ. ತಾನು ಬರೆದ ಗೆರೆಗಳಲ್ಲಿ ಏನೋ ಅರ್ಥವಿದೆಯೆಂಬಂತೆ ದಿಟ್ಟಿಸಿ ನೋಡುತ್ತ ಅದನ್ನು ಉತ್ತರವನ್ನಾಗಿ ಲೆವಿ ಸ್ಟ್ರಾಸ್‌ಗೆ ನೀಡುತ್ತಿದ್ದ. ಕೆಲವೊಮ್ಮೆ ತನ್ನ 'ಬರೆವಣಿಗೆ' ಸೂಕ್ತವಾಗಲಿಲ್ಲವೇನೋ ಎಂಬಂತೆ ಖಿನ್ನನಾಗುತ್ತಿದ್ದ. ಆ ಗೆರೆಗಳ ಮೂಲಕ ಉತ್ತರವನ್ನು 'ಓದಿ'ಕೊಳ್ಳಲು ಲೆವಿ ಸ್ಟ್ರಾಸ್ ಕೂಡ ನಟಿಸಬೇಕಾಯಿತು. ಸಂವಾದ ಮುಗಿಯದಂತೆ ನಾಯಕ, ಬರೆವಣಿಗೆಗೆ ವ್ಯಾಖ್ಯಾನವೆಂಬಂತೆ ವಿವರಣೆಯನ್ನು-ವಾಸ್ತವವಾಗಿ ಉತ್ತರವನ್ನೂ ನೀಡುತ್ತಿದ್ದ. ಈ ಕ್ರಮದಿಂದ ಅವನು ಬರೆವಣಿಗೆಯು ಮಧ್ಯವರ್ತಿಯಾಗಿ ವಹಿಸುವ ಸಾಮರ್ಥ್ಯವನ್ನು ಕಂಡುಕೊಂಡಿದ್ದನು. ಅಲ್ಲದೆ ತನ್ನ ಗುಂಪಿನಿಂದ ಬೇರೆಯಾಗಿ ರಹಸ್ಯ ಸಂಧಾನ ಮಾಡಬಲ್ಲ ಹುನ್ನಾರವನ್ನೂ ತಿಳಿದುಬಿಟ್ಟಿದ್ದನು.

ಮುಂದುವರೆದು ಆತ ತನ್ನ ಬುಟ್ಟಿಯೊಳಗಿಂದ ಒಂದು ಹಾಳೆ ತೆಗೆದ. ಅದರಲ್ಲಿ ಆಗಲೇ ಏನೇನೋ ಗೆರೆಗಳನ್ನಾತ ಬರೆದಿದ್ದ. ಈ ಹಾಳೆಯನ್ನು ಮುಂದಿಟ್ಟುಕೊಂಡು ಆತ 'ಓದ'ತೊಡಗಿದ. ಓದಿದ್ದೇನು? ತನ್ನ ಗುಂಪಿನ ಒಬ್ಬೊಬ್ಬ ಸದಸ್ಯರ ಹೆಸರು ಅಲ್ಲಿದೆಯೆಂಬಂತೆ 'ಓದು'ವುದು. ಕೂಡಲೇ ಅವರಿಗೆ ಅಧ್ಯಯನಕಾರರು ಏನು ಕೊಡುಗೆ ನೀಡಲಿದ್ದಾರೆಂಬುದೂ 'ಬರೆ'ದಿದೆಯೆಂಬಂತೆ 'ಓದು'ವುದು. ಹಾಗೂ ಅದಕ್ಕೆ ಪ್ರತಿಯಾಗಿ ಅಧ್ಯಯನಕಾರರಿಗೆ ಆ ಸದಸ್ಯರು ತನ್ನಲ್ಲಿರುವ ಯಾವ ವಸ್ತುವನ್ನು ನೀಡುವುದೆಂದೂ 'ಓದು'ತ್ತಿದ್ದ. ಸುಮಾರು ಎರಡು ತಾಸು ಈ 'ಓದುವ' ನಾಟಕ ಮುಂದುವರೆಯಿತು.

ನಾಯಕ ಬರೆಹದ ಮಹತ್ವವನ್ನು ಕಂಡುಕೊಂಡಿದ್ದನೆಂದು ತೋರುತ್ತದೆ. ತನ್ನ ಗುಂಪಿನಲ್ಲೇ ತಾನು ಜಾಣನೆಂದು ಸಾಬೀತು ಮಾಡಲು ಬರೆಹವನ್ನು ಓದುವ ತನ್ನ ಹೊಸ ಸಾಮರ್ಥ್ಯವನ್ನು ಪ್ರದರ್ಶಿಸಿರಬಹುದು. ಅಧ್ಯಯನ ಮಾಡಲು ಬಂದ ಬಿಳಿಯರ ಉದ್ದೇಶಗಳನ್ನು ಅರಿಯಬಲ್ಲವನೆಂದು ತನ್ನ ಗುಂಪಿನವರಿಗೆ ತೋರಿಸುತ್ತಿದ್ದನೆಂದೂ ಹೇಳುವುದು ಸಾಧ್ಯ. ಏನೇ ಇರಲಿ, 'ಬರೆಹ' ಏನೆಲ್ಲ ಆಗಬಹುದೆಂಬುದಕ್ಕೆ ಇದೊಂದು ನಿದರ್ಶನ.

ಲೆವಿ ಸ್ಟ್ರಾಸ್ ಈ ಅನುಭವವನ್ನು ವ್ಯಾಖ್ಯಾನಿಸುವುದು ಹೀಗೆ: ಈ ಆದಿವಾಸಿಗಳ ನಡುವೆ ಬರೆವಣಿಗೆ ಕಾಲಿಟ್ಟಿತು. ನಾಗರಿಕತೆಗಳು ಹಲವು ಶತಮಾನಗಳ ಶ್ರಮ, ಪ್ರಯೋಗಗಳ ಮೂಲಕ ಪಡೆದುಕೊಂಡ ಮಾಧ್ಯಮವಾಗಿ ಅಲ್ಲ. ಇದೊಂದು ಸಂಕೇತವಾಗಿ ಬಿಟ್ಟಿತ್ತು. ಬೌದ್ಧಿಕ ಸಾಧನವಾಗುವ ಬದಲು ಸಾಮಾಜಿಕ ನಿಯಂತ್ರಣದ ವಿಧಾನವಾಗಿತ್ತು. ಬರೆವಣಿಗೆ ನೆನಪನ್ನು ಕಾಯ್ದಿಡುವ, ಮಾಹಿತಿಯನ್ನು ರೂಪಿಸುವ, ಅರಿವನ್ನು ಹೆಚ್ಚಿಸುವ ಮಾಧ್ಯಮವಾಗುವ ಬದಲು ವ್ಯಕ್ತಿಯೊಬ್ಬ ತನ್ನ ಅಧಿಕಾರವನ್ನೂ, ಇತರರ ಮೇಲೆ ತನಗಿರುವ ಹಿಡಿತವನ್ನೂ ಬಲಪಡಿಸಲು ನೆರವಾಗಿತ್ತು.

ಈ ವ್ಯಾಖ್ಯಾನ ನೀಡಿದ ಮೇಲೆ ನಾಗರಿಕತೆ ಮತ್ತು ಬರೆವಣಿಗೆಗಳ ಸಂಬಂಧವನ್ನು ಲೆವಿ ಸ್ಟ್ರಾಸ್ ವಿವರಿಸುತ್ತಾನೆ. ಈ ವಿವರಣೆ ಬರೆವಣಿಗೆಯ ಆವಿಷ್ಕಾರ ಮತ್ತು ಅದರ ಸಾಮಾಜಿಕ ಪಾತ್ರವನ್ನು ಭಿನ್ನ ರೀತಿಯಲ್ಲಿ ವಿವರಿಸುವುದು. ಆದ್ದರಿಂದ ಸಂಗ್ರಹಯೋಗ್ಯವಾಗಿದೆ.

ಬರೆವಣಿಗೆಯೊಂದು ವಿಶಿಷ್ಟ ಆವಿಷ್ಕಾರ, ಮಾನವರ ಜೀವನಕ್ರಮದಲ್ಲಿ ಅಭೂತಪೂರ್ವ ಬದಲುಗಳನ್ನು ಇದು ತಂದಿರುವುದನ್ನು ಯಾರೂ ಗಮನಿಸಬಹುದು. ಸಾಮಾನ್ಯವಾಗಿ ಇಂಥ ಬದಲಾವಣೆಗಳು ಬೌದ್ಧಿಕ ನೆಲೆಗೆ ಸೇರಿರುತ್ತವೆ. ಜ್ಞಾನವನ್ನು ಸಂಗ್ರಹಿಸಿಕೊಳ್ಳುವ ವಿಶೇಷ ಸವಲತ್ತು ಬರೆವಣಿಗೆಯಿಂದಾಗಿ ಮಾನವರಿಗೆ ಒದಗಿಬಂತು. ಇದೊಂದು ಬಗೆಯ ಕೃತಕ ನೆನಪು. ಕಳೆದುಹೋದ ಕಾಲದ ನೆನಪನ್ನೀಗ ರಕ್ಷಿಸಿಟ್ಟುಕೊಳ್ಳಲು ಹೊಸ ಸಾಧನ ಒದಗಿದಂತಾಯ್ತು. ಭೂತಕಾಲದ ಸಾಮಗ್ರಿಯನ್ನು ಬರೆಹದಲ್ಲಿ ಸಂಗ್ರಹಿಸುವುದು ಸಾಧ್ಯವಾಯಿತು. ಅದರಿಂದ ವರ್ತಮಾನ ಮತ್ತು ಭವಿಷ್ಯಕಾಲಗಳ ನಿರ್ವಹಣೆಯಲ್ಲೂ ಬದಲಾವಣೆಗಳಾದವು. ಬರ್ಬರತೆ, ಮತ್ತು ನಾಗರಿಕತೆಗಳ ನಡುವೆ ಇರುವ ವ್ಯತ್ಯಾಸಗಳನ್ನು ಹೇಳಲು ಬಳಸುವ ಯಾವ ಸೂಚಕವೂ ಸಮರ್ಪಕವಲ್ಲವೆಂದು ತಿಳಿದರೂ ಬರೆವಣಿಗೆಯನ್ನಂತೂ ಮುಖ್ಯ ವ್ಯತ್ಯಾಸವನ್ನಾಗಿ ಪರಿಗಣಿಸುವುದನ್ನು ಅಲ್ಲಗಳೆಯಲಾಗದು. ಬರೆವಣಿಗೆ ಎಂದರೇನೆಂದು ತಿಳಿಯದ ಜನಾಂಗಗಳಿವೆ. ಬರೆಹ ತಿಳಿದ ಜನಾಂಗಗಳು ಜ್ಞಾನವನ್ನು ಸಂಗ್ರಹಿಸಿಕೊಂಡು ಹೊಸ ಗುರಿಗಳತ್ತ ದಾಪುಗಾಲು ಹಾಕುತ್ತವೆ. ಬರೆಹವಿಲ್ಲದ ಜನಾಂಗಗಳು ಭೂತಕಾಲದ ಸಾಧನೆಗಳನ್ನು ನೆನಪಿಟ್ಟುಕೊಳ್ಳಲು ವ್ಯಕ್ತಿಯ ನೆನಪನ್ನಷ್ಟೇ ಅವಲಂಬಿಸುತ್ತವೆ. ಇದರಿಂದಾಗಿ ಅವುಗಳ ಸಾಧನೆ ಸೀಮಿತಗೊಳ್ಳುತ್ತದೆ. ತಮಗೊಂದು ಹೊಸ ಗುರಿಯನ್ನು ರೂಪಿಸಿಕೊಳ್ಳಲು ಇಂಥ ಜನಾಂಗಗಳಿಗೆ ಸಾಧ್ಯವಾಗದೇ ಹೋಗುತ್ತದೆ.

ಈ ಮೇಲೆ ಹೇಳಿದ್ದೆಲ್ಲ ಬರೆವಣಿಗೆಯ ಮಹತ್ವವನ್ನು ಕುರಿತು ಪ್ರಚಲಿತವಿರುವ ಸಾಮಾನ್ಯ ತಿಳುವಳಿಕೆಗಳು. ಈ ತಿಳುವಳಿಕೆಯನ್ನು ಸಮರ್ಥಿಸುವುದು ಕಷ್ಟ. ಮಾನವರ ಜೀವನಕ್ರಮದಲ್ಲಿ ಬರೆವಣಿಗೆ ವಹಿಸಿರುವ ಪಾತ್ರವನ್ನು ಗಮನಿಸಿದರೆ ಮೇಲಿನ ಈ ನಂಬಿಕೆಗಳಿಗೆ ಬುಡವಿಲ್ಲವೆಂದು ತಿಳಿಯುತ್ತದೆ. ಮಾನವರ ಚರಿತ್ರೆಯಲ್ಲಿ ಅತ್ಯಂತ ಸೃಜನಶೀಲ ಹಂತವೆಂದರೆ ನವಶಿಲಾಯುಗದ ಮೊದಲ ಭಾಗ. ಆಗಲೇ ಕೃಷಿಯು ರೂಪುಗೊಂಡಿದ್ದು, ಪ್ರಾಣಿಗಳನ್ನು ಸಾಕತೊಡಗಿದ್ದು. ಜತೆಗೇ ಹಲವಾರು ಕಲಾಕೌಶಲಗಳೂ ಬೆಳೆದವು. ಸಾವಿರಾರು ವರ್ಷಗಳವರೆಗೆ ಚಿಕ್ಕ ಚಿಕ್ಕ ಸಮುದಾಯಗಳು ಪ್ರಯೋಗಗಳನ್ನು ಮಾಡುತ್ತ, ತಮ್ಮ ತಪ್ಪುಗಳನ್ನು ಕಂಡುಕೊಂಡು ಪಾಠ ಕಲಿಯುತ್ತ ಬಂದದ್ದರಿಂದ ಇಂಥ ಮಹತ್ತ್ವದ ಸಾಧನೆಗಳು ಸಾಧ್ಯವಾದವು. ಇಷ್ಟು ದೀರ್ಘಾವಧಿಯಲ್ಲಿ ಈ ಸಮುದಾಯಗಳು ತಾವು ಕಲಿತದ್ದನ್ನೂ, ಕಂಡುಕೊಂಡಿದ್ದನ್ನು ನೆನಪಾಗಿ ಸಂಗ್ರಹಿಸಿಡಲು ಬಳಸಲು ಬರೆಹವೇ ಇರಲಿಲ್ಲ ಕ್ರಿ.ಪೂ. 2000 ರಿಂದ 3000 ವರ್ಷಗಳ ಅವಧಿಯಲ್ಲಿ ಬರೆಹ ಆವಿಷ್ಕಾರಗೊಂಡಿತು. ನವಶಿಲಾಯುಗದಲ್ಲಿಯೇ ಇದು ಸಂಭವಿಸಿದ್ದು. ಬರೆಹದ ಆವಿಷ್ಕಾರಕ್ಕೂ ನವಶಿಲಾಯುಗದ ಮಹಾನ್ ತಾಂತ್ರಿಕ ಸಾಧನೆಗಳಿಗೂ ಹೀಗಾಗಿ ನೇರವಾದ ಸಂಬಂಧವಿಲ್ಲ. ಒಂದು ವೇಳೆ ಅಂಥ ಸಂಬಂಧವನ್ನೇನಾದರೂ ಕಲ್ಪಿಸುವುದಾದರೆ ವಾಸ್ತುಶಿಲ್ಪವನ್ನಷ್ಟೇ ನಿದರ್ಶನವನ್ನಾಗಿ ಹೇಳಬಹುದು. ಹೀಗಿದ್ದರೂ ಬರೆಹ ತಿಳಿದಿದ್ದ ಈಜಿಪ್ಷಿನವರು ಮತ್ತು ಸುಮೇರಿಯನ್ನರು ವಾಸ್ತುವಿನಲ್ಲಿ ಮಾಡಿದ ಸಾಧನೆಗಳು ಅಮೇರಿಕಾದ ಹಲವು ಬರೆಹ ತಿಳಿಯದಿದ್ದ ಮೂಲನಿವಾಸಿಗಳ ಸಾಧನೆಗಳಿಗಿಂತ ಉತ್ತಮವೆಂದು ಹೇಳಬರುವುದಿಲ್ಲ.

ಇನ್ನೂ ಗಮನಿಸಿ. ಬರೆಹ ಆವಿಷ್ಕಾರಗೊಂಡ ಈ ಐದುಸಾವಿರ ವರ್ಷಗಳ ಅವಧಿಯಲ್ಲಿ ಆಧುನಿಕ ವಿಜ್ಞಾನದ ಮೊದಲ ದಿನಗಳು ಆರಂಭಗೊಳ್ಳುವವರೆಗೂ ಮನುಷ್ಯರ ಜೀವನಕ್ರಮದಲ್ಲಿ ಅಭೂತಪೂರ್ವ ಬೆಳವಣಿಗೆಗಳು ಕಾಣಬರಲಿಲ್ಲ. ರೋಮನ್ ನಾಗರಿಕರ ಬದುಕಿನ ಕ್ರಮಕ್ಕೂ, ಏಳೆಂಟನೆಯ ಶತಮಾನದಲ್ಲಿ ಪಶ್ಚಿಮದ ದೇಶಗಳ ಮಧ್ಯಮವರ್ಗದ ನಾಗರಿಕರ ಬದುಕಿನ ಕ್ರಮಕ್ಕೂ ಅಷ್ಟೇನೂ ವ್ಯತ್ಯಾಸಗಳಿರಲಿಲ್ಲವೆಂದು ತೋರಿಸಿಕೊಡಲಾಗಿದೆ. ಜ್ಞಾನದ ಬೆಳವಣಿಗೆಯಲ್ಲಿ ಏಕಪ್ರಕಾರವಾದ ಹೆಚ್ಚಳವೆಂಬುದು ಈ ಅವಧಿಯಲ್ಲಿ ಉಂಟಾಗಲಿಲ್ಲ.

ಬರೆವಣಿಗೆ ಇಲ್ಲದಿದ್ದರೂ ನವಶಿಲಾಯುಗದಲ್ಲಿ ಅಗಾಧ ತಾಂತ್ರಿಕ ಸಾಧನೆ ನಡೆಯಿತು. ಬರೆವಣಿಗೆ ಇದ್ದರೂ ಆಧುನಿಕ ಪೂರ್ವಯುಗದಲ್ಲಿ ಎದ್ದು ಕಾಣುವ ತಾಂತ್ರಿಕ ಸಾಧನೆ ನಡೆಯಲಿಲ್ಲ. ಆಧುನಿಕ ಯುಗದಲ್ಲಿ ವಿಜ್ಞಾನದ ಪ್ರಗತಿಗೆ ಬರೆವಣಿಗೆ ನೆರವಾಗಿದೆ ಎನ್ನುವುದನ್ನೂ ಅಲ್ಲಗಳೆಯುವಂತಿಲ್ಲ. ಆದರೂ ಆ ಪ್ರಗತಿಗೆ ಬರೆವಣಿಗೆಯೆಂಬ ಸಾಧನವೇ ಕಾರಣವೆಂದು ನಿಗದಿಪಡಿಸುವುದು ಕಷ್ಟ.

ಹಾಗಿದ್ದರೆ ನಾಗರಿಕತೆಯ ವಿಕಾಸಕ್ಕೂ ಬರೆವಣಿಗೆಗೂ ಯಾವ ಬಗೆಯ ಸಂಬಂಧವೂ ಇಲ್ಲವೆನ್ನಬಹುದೇ? ಹಾಗಿಲ್ಲ. ಈ ಸಂಬಂಧವನ್ನು ಪರಿಶೀಲಿಸುವ ವಿಧಾನ ಬೇರೆಯಾಗಬೇಕಿದೆ. ಬರೆವಣಿಗೆಗೂ ಮಹಾನಗರಗಳ, ಸಾಮ್ರಾಜ್ಯಗಳ ಸ್ಥಾಪನೆಗೂ ಸಂಬಂಧವಿದ್ದಂತಿದೆ. ಅಂದರೆ ಬಹುಸಂಖ್ಯೆಯ ಜನಸಮುದಾಯವನ್ನು ರಾಜಕೀಯ ವ್ಯವಸ್ಥೆಯಲ್ಲಿ ಒಳಗೊಳ್ಳಲು ಅವರನ್ನು ವಿವಿಧ ವರ್ಣ ವರ್ಗಗಳ ಶ್ರೇಣಿಯಲ್ಲಿ ವಿಭಜಿಸಲು ಬರೆವಣಿಗೆ ಕಾರಣವಾಗಿದೆ. ಕೊನೆಯ ಪಕ್ಷ ಈಜಿಪ್ಟ್ ಇಲ್ಲವೇ ಚೀನಾದ ಇತಿಹಾಸದಲ್ಲಿಯಂತೂ ಇದಕ್ಕೆ ಪುರಾವೆಗಳಿವೆ. ಅಲ್ಲಿ ಸಾಮಾಜಿಕ ವಿಕಾಸದೊಡನೆ ಜನರನ್ನು ಶೋಷಿಸುವ ಪ್ರವೃತ್ತಿ ಬೆಳೆಯಿತೇ ಹೊರತು ಆ ಜನರ ಬೌದ್ಧಿಕ ವಿಕಾಸದ ಕಡೆಗೆ ಒತ್ತು ಬೀಳಲಿಲ್ಲ. ಈ ಶೋಷಣೆಯೂ ಎಂಥದೆಂದರೆ ಸಾವಿರಾರು ಜನ ದುಡಿಮೆಗಾರರನ್ನು ಒಂದೆಡೆ ಸೇರಿಸಿ ಮೈಮುರಿಯುವ ಶ್ರಮದಾಯಕ ಕೆಲಸಗಳಲ್ಲಿ ಅವರು ತೊಡಗುವಂತೆ ಮಾಡುವುದು. ಇಂಥ ಪರಿಸ್ಥಿತಿಯಿಂದ ಮಹಾನ್ ವಾಸ್ತು ಶಿಲ್ಪಾಕೃತಿಗಳು ಮೈದಳೆದವು. ಆದ್ದರಿಂದ ಬರೆವಣಿಗೆಗೂ ವಾಸ್ತುಶಿಲ್ಪ ಪ್ರಗತಿಗೂ ಇರುವ ಸಂಬಂಧ ಪರೋಕ್ಷವಾದುದು. ಒಟ್ಟಾರೆ ಹೇಳುವುದಾದರೆ ಬರೆಣಿಗೆಯ ಮೂಲೋದ್ದೇಶವೇ ಗುಲಾಮಿಕೆಯನ್ನು ಬೆಳೆಸುವುದು. ಇನ್ನುಳಿದಂತೆ ಬೌದ್ಧಿಕ ಮತ್ತು ಕಲಾತ್ಮಕ ನೆಲೆಗಳಲ್ಲಿ ಬರೆವಣಿಗೆಯಿಂದ ಸಾಧಿತವಾಗಿರುವುದು ಅದರ ಗೌಣ ಸಾಧನೆ ಮಾತ್ರ. ಈ ಸಾಧನೆಯೂ ಎಷ್ಟೋ ವೇಳೆ ಮೂಲೋದ್ದೇಶವನ್ನು ಬಲಪಡಿಸುವ, ಸಮರ್ಥಿಸುವ, ಮುಚ್ಚಿಡುವ ಕೆಲಸವನ್ನೇ ಮಾಡಿದೆ.

ಇನ್ನೊಂದು ಪರ್ಯಾಯ ಸಂದರ್ಭವನ್ನು ನೋಡೋಣ. ಆಫ್ರಿಕಾದ ಬೃಹತ್ ಸಾಮ್ರಾಜ್ಯಗಳೂ ಸಾವಿರಾರು ಜನರನ್ನು ಕೂಡಿಹಾಕುವಲ್ಲಿ ಯಶಸ್ಸು ಪಡೆದಿದ್ದವು. ಅಮೇರಿಕಾದ ಇಂಕಾ ಸಾಮ್ರಾಜ್ಯದ ನೆರಳಿನಲ್ಲಿಯೂ ಸಾಪಿರಾರು ಜನ ಜೀವಿಸಿದ್ದರು. ಆದರೆ ಈ ಸಾಮ್ರಾಜ್ಯಗಳು ದೀರ್ಘಕಾಲ ಬದುಕುಳಿಯಲಿಲ್ಲ. ಇಂಕಾ ಸಾಮ್ರಾಜ್ಯ

ಸ್ಥಾಪನೆಯಾದದ್ದು ಹನ್ನೆರಡನೆಯ ಶತಮಾನದಲ್ಲಿ ಫಿರ್ಯಾರೋನ ಸೈನಿಕರು ಮೂರು ಶತಮಾನಗಳ ಅನಂತರ ಈ ಸಾಮ್ರಾಜ್ಯವನ್ನು ವಶಪಡಿಸಿಕೊಂಡರು. ಈ ಸಾಮ್ರಾಜ್ಯದ ಬುಡವೇ ಶಿಥಿಲವಾಗಿರದಿದ್ದರೆ ಈ ಜಯ ಸಾಧ್ಯವಾಗುತ್ತಿರಲಿಲ್ಲ. ಆಫ್ರಿಕದ ಸಾಮ್ರಾಜ್ಯಗಳ ಕಥೆಯೂ ಇದಕ್ಕಿಂತ ಬೇರೆಯಲ್ಲ. ದೊಡ್ಡ ದೊಡ್ಡ ರಾಜಕೀಯ ವಂಶಗಳು ನೆಲೆಯೂರಿದ ಕೆಲವೇ ದಶಕಗಳಲ್ಲಿ ನಿರ್ನಾಮವಾಗಿವೆ. ಇಂಥ ಸಂದರ್ಭಕ್ಕೂ ಬರೆವಣಿಗೆಗೂ ಯಾವ ಬಗೆಯ ಸಂಬಂಧವಿದೆ? ಆಳುವವರ ಕೈಗಳನ್ನು ಬಲಪಡಿಸಲು ಬರೆವಣಿಗೆ ಇಂಥ ಕಡೆಗಳಲ್ಲೂ ನೆರವಾಗಿದೆ. ಆದರೆ ಈ ಸಾಮ್ರಾಜ್ಯಗಳ, ರಾಜವಂಶಗಳ ಸಾಧನೆಗಳನ್ನು ಜ್ಞಾನ ಸಾಮಗ್ರಿಯನ್ನು ಮಾತ್ರ ಆ ಸಂದರ್ಭದ ಬರೆವಣಿಗೆ ಹಿಡಿದಿಡಲು ವಿಫಲವಾಗಿದೆ. ತೀರಾ ಈಚಿನ ಉದಾಹರಣೆಗಳನ್ನೇ ನೋಡಿ. ಯುರೋಪಿನ ದೇಶಗಳಲ್ಲಿ ಶಿಕ್ಷಣವನ್ನು ಕಡ್ಡಾಯಗೊಳಿಸಿರುವುದಕ್ಕೂ, ಸೈನ್ಯ ವ್ಯವಸ್ಥೆ ಮತ್ತು ಶ್ರಮಿಕರ ಸಂಖ್ಯಾಬಲ ಬೆಳೆಯುವುದಕ್ಕೂ ಸಂಬಂಧವಿದೆ. ಅನಕ್ಷರತೆಯ ವಿರುದ್ಧ ರಾಜ್ಯಶಕ್ತಿ ಹೋರಾಡುತ್ತಿದೆಯೆಂದರೆ ಅದು ನಾಗರಿಕರ ಮೇಲೆ ತನ್ನ ಹಿಡಿತವನ್ನು ಬಲಪಡಿಸಿಕೊಳ್ಳುತ್ತಿದೆಯೆಂದೇ ಅರ್ಥ. ಎಲ್ಲರೂ ಓದಿ ಬರೆಯಲು ಕಲಿಯಬೇಕು. ಏಕೆಂದರೆ ಆಗ ಸರ್ಕಾರವು 'ಕಾನೂನು ಗೊತ್ತಿಲ್ಲದಿರುವುದು ವಿನಾಯಿತಿಯಲ್ಲ' ಎಂದು ಹೇಳಬಹುದಷ್ಟೆ.

ಇದು ಈಗ ಅಂತಾರಾಷ್ಟ್ರೀಯ ಮಟ್ಟದ ವಿಷಯವಾಗಿದೆ. ಅಭಿವೃದ್ಧಿ ಹೊಂದಿದ ದೇಶಗಳು ಕೆಲವು ಶತಮಾನಗಳ ಹಿಂದೆ ಎದುರಿಸಿದ್ದ ಸಮಸ್ಯೆಗಳನ್ನು ವಸಾಹತು ಆಡಳಿತ ಬಿಡುಗಡೆಯಾದ ದೇಶಗಳು ಈಗ ಎದುರಿಸುತ್ತಿವೆ. ಈ ಎರಡೂ ಗುಂಪುಗಳ ನಡುವೆ ಇಕ್ಕಟ್ಟುಗಳುಂಟಾಗಿವೆ. ಹಿಂದುಳಿದ ದೇಶಗಳ ಆಶಿಕ್ಷಿತರು, ಬರೆದ ಪದಗಳ ಮೂಲಕ ಯೋಚಿಸಲಾರರು; ಬರೆದ ಪದಗಳ ಮೂಲಕ ನೀಡುವ ಸೂಚನೆಗಳಿಗೆ ತಕ್ಕಂತೆ ವರ್ತಿಸಲಾರರು. ಹೀಗಾಗಿ ಇಂಥ ಬೃಹತ್ ಜನಸಮುದಾಯದ ಪ್ರತಿಕ್ರಿಯೆಯ ಬಗ್ಗೆ ಮುಂದುವರಿದ ದೇಶಗಳು ಹೆದರಿವೆ. ತಮ್ಮ ಭದ್ರತೆಗೆ ಇಂಥ ಪರಿಸ್ಥಿತಿಯಿಂದ ಅಪಾಯವಿದೆಯೆಂದು ತಿಳಿದಿವೆ. ಹಿಂದುಳಿದ ದೇಶಗಳ ಜನಗಳಲ್ಲಿ ಓದು–ಬರೆಹ ಕಲಿತವರು ಗ್ರಂಥಾಲಯಗಳಲ್ಲಿ ಸಂಗ್ರಹಗೊಂಡ ಪುಸ್ತಕಗಳ ಓದಿನ ಮೂಲಕ ಮುಂದುವರೆದ ದೇಶಗಳು ಹರಡುತ್ತಿರುವ ಸುಳ್ಳುಗಳ ಜಾಲದೊಳಗೆ ಸಿಕ್ಕಿಹಾಕಿಕೊಂಡಿದ್ದಾರೆ. ಇದೇನೇ ಇರಲಿ, ಇಲ್ಲಿಂದ ಹಿಂದಿರುಗುವ ಪ್ರಶ್ನೆಯೇ ಇಲ್ಲ.

# ಓದುವ ಹೊಸ ಬಗೆಗಳು

ನಾವು ಓದುವ ಕ್ರಮವೀಗ ಹಲವಾರು ಪಲ್ಲಟಗಳನ್ನು ಕಂಡಿದೆ. ನಮಗೆ ಓದಲು ಕಲಿಸಿದವರು ರೇಖಾತ್ಮಕ ಓದಿನ ತರಬೇತಿಯನ್ನು ನೀಡಿದ್ದಾರೆ. ಈಗಲೂ ಶಾಲೆಗಳಲ್ಲಿ ಇಂಥ ಓದನ್ನೇ ಕಲಿಸುವುದು. ಪಾಠ ಅಂದರೆ ಮೊದಲ ವಾಕ್ಯದಿಂದ ಕೊನೆಯವರೆಗೆ ಒಂದಾದ ಮೇಲೆ ಒಂದರಂತೆ ವಾಕ್ಯಗಳನ್ನು ಓದುತ್ತಾ ಪಠ್ಯದ ಅರ್ಥವನ್ನು ಗ್ರಹಿಸುತ್ತ ಹೋಗುವ ವಿಧಾನವನ್ನು ನಮಗೆ ಹೇಳಿಕೊಡಲಾಗಿದೆ. ಇದು ಭಾಷಾಪಠ್ಯಗಳಲ್ಲಿ ಓದಿನ ಲಕ್ಷಣವಾಗಿರುವಂತೆ ಇತರ ವಿಷಯ–ವಿಜ್ಞಾನ, ಸಮಾಜಶಾಸ್ತ್ರ ಇತ್ಯಾದಿಗಳಿಗೂ ಅನ್ವಯಿಸುತ್ತದೆ.

ಆದರೆ ಈಗ ನಾವು ಓದಬೇಕಾಗಿರುವ ಪಠ್ಯಗಳು ಬೇರೆ ರೀತಿಯ ಓದನ್ನು ಬಯಸುತ್ತವೆ. ದಿನಪತ್ರಿಕೆಯೊಂದನ್ನು ನಾವು ಹೇಗೆ ಓದುತ್ತೇವೆ? ಎಲ್ಲರೂ ಒಂದೇ ರೀತಿ ಮತ್ತು ಒಂದೇ ಲಯದಲ್ಲಿ ಓದುತ್ತಾರೋ? ಅಥವಾ ದಿನಪತ್ರಿಕೆಯ ಪಠ್ಯವೇ ಬೇರೆ ಬೇರೆ ರೀತಿ ಓದಲು, ಬೇರೆ ಬೇರೆ ಲಯದಲ್ಲಿ ಓದಲು ಅವಕಾಶವನ್ನು ನೀಡುವಂತೆ ಇರುತ್ತದೋ? ಇವೆರಡೂ ನಿಜವಿರುವಂತೆ ತೋರುತ್ತದೆ. ಪತ್ರಿಕೆಯಲ್ಲಿ ವಿವಿಧ ಬಗೆಯ ವಿಷಯಗಳು ಹರಡಿಕೊಳ್ಳುವ ಕ್ರಮವೊಂದಿರುತ್ತದೆ. ಓದುಗರು ತಮಗೆ ಬೇಕಾದ ರೀತಿಯಲ್ಲಿ ಪತ್ರಿಕೆಯನ್ನು ಪ್ರವೇಶಿಸುತ್ತಾರೆ. ಕೆಲವು ಭಾಗಗಳನ್ನು ವಿವರವಾಗಿ, ಮತ್ತೆ ಕೆಲವನ್ನು 'ಸಂಕ್ಷಿಪ್ತವಾಗಿ' (ಕಣ್ಣಾಡಿಸಿ) ಓದುತ್ತಾರೆ. ಓದದೇ ಹೋಗುವ ಭಾಗಗಳೂ ಇರುತ್ತವೆ. ಓದಲು ತೆಗೆದುಕೊಳ್ಳುವ ಸಮಯ ಕೂಡ ಪ್ರತಿ ಓದುಗರಿಗೂ ಬೇರೆ ಬೇರೆ ಆಗಿರುವುದು ಸಾಧ್ಯ. ಈ ಎಲ್ಲ ವಿಷಯ ತೀರಾ ಸಾಮಾನ್ಯ ವಿವರವೆಂದು ತೋರಿದರೂ ನಾವೀಗ ಕೇವಲ ರೇಖಾತ್ಮಕ ಚಲನೆಯ ಓದಿಗೆ ಮಾತ್ರ ಸೀಮಿತಗೊಂಡಿಲ್ಲ. ಎಂಬುದನ್ನು ತಿಳಿಯಲು ಈ ವಿವರಗಳು ಅವಶ್ಯವಾಗಿವೆ.

ಹಾಗೆ ನೋಡಿದರೆ ನಮ್ಮ ಪ್ರಾಚೀನ ಕೃತಿಗಳೂ ರೇಖಾತ್ಮಕ ಓದನ್ನು ಬಯಸುವುದಿಲ್ಲ. ಇಡೀ ಕೃತಿ ಹಲವು ಘಟಕಗಳ ಸಂಯೋಜನೆಯಾಗಿದ್ದು ಒಂದೊಂದು ಘಟಕವೂ ಸ್ವತಂತ್ರ ಓದಿಗೆ ದಕ್ಕುವಂತಿರುತ್ತದೆ. ಕುಮಾರವ್ಯಾಸ ಭಾರತದ ಪರ್ವಗಳು ಹೀಗೆ ಬೇರೆ ಬೇರೆಯಾಗಿ ಹಸ್ತಪ್ರತಿಗಳಲ್ಲಿ ಸಿಗುವುದು ಗಮನಾರ್ಹ ಸಂಗತಿ. ಓದುವವರು ವಿರಾಟಪರ್ವವನ್ನೋ, ಅರಣ್ಯಪರ್ವವನ್ನೋ ಓದಬಹುದಿತ್ತು. ವಚನಗಳ ದಾಖಲಾತಿಯೂ ಹೀಗೆ ವಿವಿಧ ಬಗೆಯ ಸಂಯೋಜನೆಗೆ ಪಕ್ಕಾಗಿವೆ. ಕೀರ್ತನೆಗಳ

ರಚನೆ ಇನ್ನೊಂದು ರೀತಿಯಲ್ಲಿ ರೇಖಾತ್ಮಕ ಓದನ್ನು ನಿರಾಕರಿಸುತ್ತದೆ. ಚರಣಗಳಿಂದ ಮತ್ತೆ ಪಲ್ಲವಿಗೆ ಹಿಂದಿರುಗುವ ಕ್ರಮದಲ್ಲಿ ಕೀರ್ತನೆಗಳು ರಚಿತವಾಗಿವೆ.

ನಮ್ಮ ಕೃತಿಗಳು ನೇರ ಓದಿಗೆ-ರೇಖಾತ್ಮಕ ಓದಿಗೆ ಅನುವಾಗಿಲ್ಲವೆಂಬುದು ಅವುಗಳ ಕಥನ ಕ್ರಮದಲ್ಲಿ ಗೊತ್ತಾಗುತ್ತದೆ. ಅದೆಲ್ಲ ಬೇರೆ ಚರ್ಚೆಯ ಭಾಗ. ನಮಗೀಗ ಮುಖ್ಯವಾದುದು ಬರೆವಣಿಗೆಯ ಪಠ್ಯ ಓದುಗರಿಂದ ವಿಶಿಷ್ಟ ಬಗೆಯನ್ನು ಬಯಸುವ ಸಂಗತಿ ತೀರಾ ಹೊಸದೇನೂ ಅಲ್ಲವೆಂಬ ಸಂಗತಿ. ಈ ಹೊತ್ತಿನ ತಾಂತ್ರಿಕತೆ ನಮ್ಮನ್ನು ಸುತ್ತು ಬಳಸಿನ ಓದಿಗೆ ಹೆಚ್ಚಿನ ಪ್ರಮಾಣದಲ್ಲಿ ಸಿದ್ಧಪಡಿಸುತ್ತಿದೆ.

ಪದಬಂಧಗಳು, ವ್ಯಂಗ್ಯಚಿತ್ರಗಳು, ಚಿತ್ರಕಥಾಮಾಲಿಕೆಗಳು ಬಳಸು ಓದಿಕೆಗೆ ಸುಲಭ ನಿದರ್ಶನಗಳು. ಚಿತ್ರ ಕಥಾಮಾಲಿಕೆಯಲ್ಲಿ ಭಾಷೆಯ ಅಂಶ ಮತ್ತು ಭಾಷೇತರ ಅಂಶಗಳು ಪೂರಕವಾಗಿರುವುದು ಒಂದು ಲಕ್ಷಣ. ಹೀಗಾಗಿ ಕೇವಲ ಭಾಷಿಕ ಅಂಶದ ಜೋಡಣೆಯಿಂದ ಕಥಾನಕದ ಓದು ಸಾಧ್ಯವಾಗುವುದಿಲ್ಲ. ಚಿತ್ರಗಳೊಡನೆ ಲಿಖಿತ ಮಾತನ್ನು ಹೊಂದಿಸಿಕೊಳ್ಳುವಾಗ ಅರ್ಥಪ್ರತೀತಿ ಸಾಧ್ಯವಾಗುತ್ತದೆ. ಚಲನಚಿತ್ರಗಳಿಗೆ ನೀಡುವ ಸಬ್ ಟೈಟಲ್‌ಗಳಲ್ಲೂ ಪೂರ್ಣ ವಾಕ್ಯಗಳು ಬಿಡಿಬಿಡಿಯಾಗಿ ಇರುತ್ತವೆ. ಆ ವಾಕ್ಯಗಳನ್ನೆಲ್ಲಾ ಒಟ್ಟಿಗೆ ಸೇರಿಸಿ ಒಂದಾಗಿ ಓದುವುದು ಸಾಧ್ಯವಿಲ್ಲ. ಹಾಗೆ ಓದಿದರೂ ಅರ್ಥಪ್ರತೀತಿಯಾಗುವುದಿಲ್ಲ. ಏಕೆಂದರೆ ಜತೆಯ ದೃಶ್ಯಾವಳಿಯೊಡನೆ ಅಯಾ ವಾಕ್ಯಗಳು ಸಂಬಂಧ ಪಡೆದಿರುತ್ತವೆ. ಆ ದೃಶ್ಯಗಳನ್ನು ಹೊರತುಮಾಡಿದರೆ ಯಾವ ಅರ್ಥವೂ ವಾಕ್ಯಗಳಿಂದ ಹೊರಡದು, ಅಥವಾ ತೀರಾ ಸಂದರ್ಭಮುಕ್ತವಾದ ವಾಕ್ಯಾರ್ಥವೊಂದು ನಮಗೆ ದೊರಕಬಹುದು. ಜಾಹೀರಾತುಗಳಲ್ಲೂ ಇಂಥದೇ ವಿಧಾನವನ್ನು ನಾವು ಎದುರಿಸುತ್ತಿದ್ದೇವೆ. ಮುದ್ರಿತ ಜಾಹೀರಾತುಗಳಲ್ಲಿ ಭಾಷಿಕ ಅಂಶ ಬಳಕೆಯಾಗಿರುತ್ತದೆ. ಅಲ್ಲಿನ ವಾಕ್ಯಗಳನ್ನು ಗ್ರಹಿಸುವ ವಿಧಾನವನ್ನು ಹಲವು ರೀತಿಯಲ್ಲಿ ನಿಯಂತ್ರಿಸಲಾಗುತ್ತದೆ. ಉದಾ:ಅಕ್ಷರಗಳ ಗಾತ್ರದಿಂದ ದೊಡ್ಡ ಗಾತ್ರದ ಅಕ್ಷರಗಳ ವಾಕ್ಯವನ್ನು ಬಿಡದೆ ಓದಲು ಆ ಅಕ್ಷರಗಳ ಗಾತ್ರವೇ ಒತ್ತಾಯಿಸುತ್ತದೆ. ಅಥವಾ ಚಿತ್ರದ ಬದಿಯ ವಾಕ್ಯಗಳಿಗೆ ಹೆಚ್ಚು ಪ್ರಾಶಸ್ತ್ಯ ಮೊದಲ ಓದು ಆ ವಾಕ್ಯಗಳಿಗೆ ದಕ್ಕುತ್ತದೆ. ಉಳಿದ ಗಾತ್ರದ ಅಕ್ಷರಗಳಲ್ಲಿರುವ ವಾಕ್ಯಗಳನ್ನು ಬೇಕೆಂದರೆ ಓದುತ್ತೇವೆ. ಎಷ್ಟೋ ವೇಳೆ ಓದುವುದೂ ಇಲ್ಲ. ಸುಮ್ಮನೆ ನೋಡಿರುತ್ತೇವೆ.

ಭಾಷಿಕ ಮಾಹಿತಿಯನ್ನು ಚಿತ್ರಗಳನ್ನಾಗಿ ಪರಿವರ್ತಿಸಿ ಒದಗಿಸುವ ವಿಧಾನವೂ ಇದೆ. ಲೇಖನಗಳಲ್ಲಿ ಅಂಕಿ ಅಂಶಗಳನ್ನು ವಾಕ್ಯಗಳಲ್ಲಿ ಹೇಳುವ ಬದಲು ವಿವಿಧ ಬಗೆ ನಕ್ಷೆಗಳಲ್ಲಿ (ರೇಖೆ, ಸ್ತಂಭ, ವೃತ್ತ, ಇತ್ಯಾದಿ) ತೋರಿಸುವುದು ಈಗ ವಾಡಿಕೆಯಲ್ಲಿದೆ. ಗಣಕಗಳಲ್ಲಿ ಹೀಗೆ ಭಾಷಿಕ ಮಾಹಿತಿಯನ್ನು ನಕ್ಷೆಗಳನ್ನಾಗಿ ಮರು ರೂಪಿಸುವ ಕಾರ್ಯವಾಹಿಗಳೇ ಸಿದ್ಧವಾಗಿವೆ. ಓದುಗರು ಇಂಥ ಮಾದರಿಗಳನ್ನು ವೃತ್ತಪತ್ರಿಕೆಗಳಲ್ಲಿ ದಿನವೂ ಎದುರಿಸುತ್ತಾರೆ.

ಇವೆಲ್ಲ ನಿದರ್ಶನಗಳು ಸ್ಪಷ್ಟಪಡಿಸುವುದಿಷ್ಟೆ: ಇಂದಿನ ತಾಂತ್ರಿಕತೆ ನಮ್ಮನ್ನು ಒಂದು ತುದಿಯಿಂದ ಕೊನೆಗೆ ರೇಖೆಯಲ್ಲಿ ಚಲಿಸುವ ಓದಿನ ಕ್ರಮದಿಂದ ಪಲ್ಲಟಗೊಳಿಸಿದೆ. ಇಂಥ ಹೊಸ ಓದಿಗೆ ನಮ್ಮನ್ನು ನಾವು ಹೊಂದಿಸಿಕೊಳ್ಳುವುದು ಅವಶ್ಯವಾಗಿದೆ. ಮುದ್ರಣದ ಮತ್ತು ಇತರ ಸಂಪರ್ಕ ಮಾಧ್ಯಮಗಳಿಂದ ಒದಗಿರುವ ಈ ಬದಲಾವಣೆ ಈಗ ಗಣಕಗಳಿಂದ ಮತ್ತೆ ಬೇರೊಂದು ದಿಕ್ಕು ಹಿಡಿದಿದೆ.

ಗಣಕಗಳಲ್ಲಿ ಭಾಷಿಕ ಮಾಹಿತಿ ಅದರ ನೆನಪಿನಲ್ಲಿ ಸಂಗ್ರಹಗೊಂಡಿರುತ್ತದೆ. ಸಾಮಾನ್ಯವಾಗಿ ಈ ಮಾಹಿತಿ 'ಅನುಕ್ರಮ'ವಾಗಿ ಜೋಡಣೆಯಾಗಿದ್ದರೂ ಬಳಕೆಯಾಗುವ ಹಾಗೆ ಅನುಕ್ರಮವಾಗಿರಬೇಕಾಗಿಲ್ಲ. ಉದಾ:ಗೆ ಒಂದು ಕಾದಂಬರಿ ಗಣಕದ ತೆರೆಗೆ ತರಿಸಿ ಓದಿ ಅನಂತರ ಮುಂದಿನ ಪುಟಗಳನ್ನು ಅನುಕ್ರಮವಾಗಿ ತರಿಸಿ ಓದುತ್ತಾ ಹೋಗಬಹುದು. ಆದರೆ ಈ ವಿಧಾನವನ್ನು ಪಾಲಿಸುವುದು ತ್ರಾಸದಾಯಕ. ಗಣಕಗಳು ಈಗ ಭಾಷಿಕ ಮಾಹಿತಿಯನ್ನು ಇನ್ನು ಪರಿಷ್ಕೃತ ವಿಧಾನದಲ್ಲಿ ನಮಗೆ ನೀಡಲು ಸಿದ್ಧವಿವೆ. ಇಡೀ ಮಾಹಿತಿ ಕೋಶವನ್ನು ಹಲವು ವಿಭಾಗಗಳಲ್ಲಿ ಒಡೆದು, ಆಯಾ ವಿಭಾಗಗಳನ್ನು ಇನ್ನೂ ಚಿಕ್ಕಚಿಕ್ಕ ಭಾಗಗಳಲ್ಲಿ ಇರಿಸಿಕೊಳ್ಳುವುದು ಸಾಧ್ಯ. ನಾವು ಓದುವವರು ಬೇಕಾದ ಭಾಗವನ್ನು ಬೇಕಾದ ಅನುಕ್ರಮದಲ್ಲಿ ತರಿಸಿ ಓದುವುದಕ್ಕೆ ಸಾಧ್ಯ. ಇದು ಎಷ್ಟು ಸಂಕೀರ್ಣವಾಗಿರಬಹುದು ಎಂಬುದಕ್ಕೆ ಒಂದು ನಿದರ್ಶನವನ್ನು ನೋಡೋಣ. ಶೇಕ್ಸ್‌ಪಿಯರನ ನಾಟಕಗಳನ್ನು ನೆನಪಿನಲ್ಲಿರಿಸಿಕೊಂಡ ಗಣಕದಿಂದ ನಾವೀಗ ಒಥೆಲೋ ನಾಟಕವನ್ನು ಓದಲು ಆರಂಭಿಸಿದರೆ ನಾವು ಬೇಕಾದ ದೃಶ್ಯವನ್ನು ಆಯ್ದುಕೊಳ್ಳಬಹುದು. ಕೊನೆಯ ಅಂಕವನ್ನು ಆಯ್ದುಕೊಂಡು ಡೆಸ್ಡಿಮೊನಾಳ ಕೊಲೆಯ ದೃಶ್ಯವನ್ನು ಓದಲು ತೊಡಗಿದರೆ ನಮಗೆ ಹಲವು ಆಯ್ಕೆಗಳಿರುತ್ತವೆ. 1. ಸುಮ್ಮನೆ ಲಿಖಿತ ಮಾಹಿತಿಯನ್ನು ತೆರೆಯಮೇಲೆ ಓದುವುದು. 2. ಯಾರೋ ಓದುವುದನ್ನು ಲಿಖಿತ ರೂಪದೊಡನೆ ಓದುತ್ತಾ ಕೇಳಿಸಿಕೊಳ್ಳುವುದು. 3. ಯಾರೋ ಮಾಡಿದ ನಾಟಕದ ಅಭಿನಯ ದೃಶ್ಯವನ್ನು ನೋಡುತ್ತಾ ನಾಟಕದ ಸಾಲುಗಳನ್ನು ಕೇಳಿಸಿಕೊಳ್ಳುವುದು. 4. ಪಾಂಡಿತ್ಯಪೂರ್ಣ ಟಿಪ್ಪಣಿಗಳೊಡನೆ ಮೂಲ ನಾಟಕವನ್ನು ಓದುವುದು. ಇಲ್ಲಿ ನಮ್ಮ ಆಯ್ಕೆಗಳು ಎಂದರೇನಾಯ್ತು? ನಮ್ಮ ಓದುವಿಕೆಯನ್ನು ಗಣಕಗಳು ಬದಲಿಸುತ್ತವೆ. ಓದಿನ ಅನುಭವ ಏಕತ್ರವಾಗಿ ನಮ್ಮಲ್ಲಿ ಮೂಡುವುದು ಈಗ ಅಸಾಧ್ಯ. ಮತ್ತೆ ಮೊದಲಿಗೆ ಬರುವುದಾದರೆ ಭಾಷೆಯ ಲಿಖಿತ ರೂಪದ ಪ್ರಸಾರದಲ್ಲಿ ಯಾವತ್ತೂ ಮುಖ್ಯ ಪಾತ್ರವಹಿಸಿರುವ ತಂತ್ರಜ್ಞಾನದ ಅವಶ್ಯಕತೆಗಳಿಗೆ ಅನುಗುಣವಾಗಿ ನಮ್ಮ ಓದಿನ ಕಲಿಕೆಯೂ ಇರಬೇಕಾಗುತ್ತದೆ. ಶಿಕ್ಷಣದಲ್ಲಿ ಓದಿನ ಕೌಶಲ್ಯವನ್ನು ಕಲಿಸುವವರು ಈ ದಿಕ್ಕಿನಲ್ಲಿ ಚಿಂತಿಸಬೇಕಾದ ಅವಶ್ಯಕತೆ ಎಂದಿಗಿಂತ ಈಗ ಹೆಚ್ಚಾಗಿದೆ.

# ಅರ್ಥಜಾಲ

ನಿಘಂಟುಗಳನ್ನು ನೋಡಿದರೆ ನಾವು ಬಲ್ಲ ಪದಕೋಶದಲ್ಲಿ ಇರುವ ಪದಗಳು ಹಾಗೆಯೇ ಸಂಗ್ರಹಗೊಂಡಿರುತ್ತವೆಂಬಂತೆ ಭಾಸವಾಗುತ್ತದೆ. ಪ್ರತಿ ಪದವೂ ತಂತಾನೇ ಪರಿಪೂರ್ಣವಾದ ಘಟಕವೆಂದು ನಾವು ತಿಳಿಯುವಂತೆ ಅಲ್ಲಿನ ಅಕಾರಾದಿ ಪಟ್ಟಿ ನಮ್ಮನ್ನು ಪ್ರೇರೇಪಿಸುತ್ತದೆ. ಆದರೆ ಪದಗಳು ಹೀಗೆ ದ್ವೀಪಗಳಂತೆ ಇರುವುದಿಲ್ಲ. ವಾಸ್ತವವಾಗಿ ಅವುಗಳು ಒಂದು ಜಾಲದಲ್ಲಿ ಸೇರಿ ಹೋಗಿರುತ್ತವೆ. ಪದಗಳ ನಡುವೆ ಏರ್ಪಡುವ ಈ ಜಾಲದಲ್ಲಿ ಎಲ್ಲ ಪದಗಳು ಒಂದಿಲ್ಲೊಂದು ಬಗೆಯಲ್ಲಿ ಇನ್ನೊಂದು ಪದದೊಡನೆ ಸಂಬಂಧವನ್ನು ಏರ್ಪಡಿಸಿಕೊಂಡಿರುತ್ತವೆ. ಈ ಪದಕೋಶ ಜಾಲದಲ್ಲಿ ಪದಗಳ ಅರ್ಥದ ನೆಲೆಯ ಸಂಬಂಧಗಳು, ವ್ಯಾಕರಣಾತ್ಮಕ ನೆಲೆಗಳು ತೀರ್ಮಾನವಾಗುತ್ತವೆ. ಭಾಷಿಕರಿಗೆ ಈ ಜಾಲದ ಸ್ವರೂಪ ತಿಳಿದಿರುತ್ತದೆ. ಅಂದರೆ ಅದನ್ನು ಅವರು ವಿವರಿಸಲು ಬಲ್ಲರು ಎಂದಲ್ಲ. ಆ ಜಾಲದ ಪರಿಧಿಯಲ್ಲೇ ಅವರ ಭಾಷಾಬಳಕೆ ನಡೆಯುತ್ತಿರುತ್ತದೆ.

ಪದಗಳು ಅರ್ಥಜಾಲವೊಂದರಲ್ಲಿ ಸಿಲುಕಿರುತ್ತವೆ. ಒಂದು ಪದದ ಅರ್ಥ ಇನ್ನೊಂದು ಪದದ ಅರ್ಥದೊಡನೆ ಹೇಗೋ ಸಂಬಂಧವನ್ನು ಪಡೆದುಕೊಳ್ಳುವುದನ್ನು ನೋಡುತ್ತೇವೆ. ತಲೆ ಎಂಬ ಪದವನ್ನೇ ತೆಗೆದುಕೊಳ್ಳಿ, ತಲೆ ಎಂದರೆ ಏನು? ಅದು ಒಂದೆಡೆ ದೇಹದ ಅಂಗಾಗಗಳನ್ನು ಸೂಚಿಸುವ ಪದಗಳ ಜೊತೆಗೆ ಒಂದು ಬಗೆಯ ಸಂಬಂಧವನ್ನು ರೂಪಿಸಿಕೊಂಡಿದ್ದರೆ, ಇನ್ನೊಂದೆಡೆ ಅಂಗಾಂಗಗಳ ಕ್ರಿಯಾಸಾಮರ್ಥ್ಯವನ್ನು ಸೂಚಿಸುವ ಪದಗಳ ಜೊತೆಗೆ ಸಂಬಂಧ ಹೊಂದಿದೆ. ಮತ್ತೂ ಒಂದು ಕಡೆ ಸಾಮಾಜಿಕ ಸಂಬಂಧಗಳನ್ನು ಸೂಚಿಸುವ ಪದಗಳ ಜೊತೆಗೂ ಸೇರಿಕೊಂಡಿದೆ. ಆದ್ದರಿಂದ ಪದಗಳು ಈ ವಿಶಿಷ್ಟ ಅರ್ಥ ಜಾಲದೊಳಗಿನಿಂದಲೇ ತಮ್ಮ ಅರ್ಥಗಳನ್ನು ನಮಗೆ ತೋರಬೇಕು.

ಇದಲ್ಲದೆ ಪದಗಳ ಧ್ವನಿಸ್ತರ ಮತ್ತು ಅರ್ಥದ ಸ್ತರಗಳು ಯಾವಾಗಲೂ ಬೆಸೆದುಕೊಂಡೇ ಇರುತ್ತವೆಯೋ ಅಥವಾ ಬೇರೆಬೇರೆಯಾಗಿದ್ದುಕೊಂಡು ಬೇಕಾದಾಗ ಬೆಸೆದುಕೊಳ್ಳುತ್ತವೋ ಎಂಬುದೂ ಒಂದು ಮುಖ್ಯ ಪ್ರಶ್ನೆಯಾಗಿದೆ. ಸಾಮಾನ್ಯ ತಿಳುವಳಿಕೆಯಂತೆ ಅವೆರಡೂ ಯಾವಾಗಲೂ ಬೆಸೆದುಕೊಂಡೇ ಇರುತ್ತವೆ. ಆದರೆ ನಮಗೆ ದೊರಕುವ ಮಾಹಿತಿಯಂತೆ ಈ ತಿಳುವಳಿಕೆಯನ್ನು ನಾವು ಬದಲಾಯಿಸಿ ಕೊಳ್ಳಬೇಕಾಗಿದೆ. ಪದಗಳ ಧ್ವನಿಸ್ತರದಲ್ಲಿ ಯಾವ ಧ್ವನಿಗಳು ಬರುತ್ತವೆ ಎಂಬುದು

ನಿಗದಿಯಾಗಿರುವುದಿಲ್ಲ. ಆದರೆ ಆ ಪದದ ಸ್ವರ ವ್ಯಂಜನ ರಚನೆ ಅರ್ಥದ ಆಯ್ಕೆ ಆಗುವ ಮೊದಲೇ ಜರುಗಬಹುದು. ಅಥವಾ ಅರ್ಥದ ಆಯ್ಕೆಯ ಅನಂತರವೂ ನಡೆಯಬಹುದು. ಈ ಸಾಧ್ಯತೆಯನ್ನು ಕೆಳಗಿನ ಉದಾಹರಣೆಯ ಮೂಲಕ ವಿವರಿಸಲು ಯತ್ನಿಸುತ್ತೇನೆ. ನಾವು 'ನೋಡಲು ಬಳಸುವ ಅಂಗ'ವನ್ನು ಸೂಚಿಸಲು ಕನ್ನಡದಲ್ಲಿ ಒಂದು ಪದವಿದೆ. ಅದು ಯಾವುದೆಂದು ನಮಗೆಲ್ಲ ಗೊತ್ತು. ಆ ಪದಕ್ಕೆ ಒಂದು ಛಂದೋ ಬಂಧವಿದೆ. CVCCV ಎಂಬುದೆ ಆ ಬಂಧ. ಈ ಬಂಧದಲ್ಲಿ ಕ್ ಅ ಣ್ ಣ್ ಉ ಎಂಬ ಧ್ವನಿಗಳನ್ನು ತುಂಬುವುದು ಆಮೇಲೆ ನಡೆಯುವ ಕೆಲಸ. ಇದಕ್ಕೆ ಏನು ಪುರಾವೆ ಎಂದು ಯಾರಾದರೂ ಕೇಳಬಹುದು. ನಮ್ಮ ಮಾತಿನಲ್ಲಿ ಓಘದಲ್ಲಿ ನಮಗೆ ಗೊತ್ತಿಲ್ಲದಂತೆ ನಡೆಯುವ ಬಾಯಿತಪ್ಪುಗಳನ್ನು ಗಮನಿಸಿದರೆ ನಮಗೆ ಬೇಕಾದ ಪುರಾವೆಗಳು ಸಿಗುತ್ತವೆ. ಒಂದು ಊಹೆಯ ಬಾಯಿತಪ್ಪು ಹೀಗಿರಬಹುದು. ವಾಕ್ಯವೊಂದರಲ್ಲಿ ಕಣ್ಣು ಎಂಬ ಪದ ಬರಬೇಕಾಗಿರುವಲ್ಲಿ ಆ ವಾಕ್ಯದಲ್ಲೇ ಬರುವ ಬೇರೆ ಯಾವುದೊ ಒಂದು ಪದದ ಧ್ವನಿಯನ್ನು ಕಣ್ಣು ಪದದ ಧ್ವನಿಗಳ ಜೊತೆಗೆ ಬೆರೆಸಿ ಹೇಳುವ ಬಾಯ್ತಪ್ಪು ಸಹಜ. ಸ್ಪೂನರಿಸಂ ಎಂದು ಈ ಬಾಯ್ತಪ್ಪನ್ನು ಕರೆಯುತ್ತಾರೆ. **ಕಣ್ಣುಮುಚ್ಚಾಲೆ** ಎನ್ನುವ ಬದಲು **ಮಣ್ಣು ಕುಚ್ಚಾಲೆ** ಎನ್ನಬಹುದು. ಪದದ ಧ್ವನಿ ಬಂಧಕ್ಕೆ ಯಾವ ಧಕ್ಕೆಯೂ ಆಗಿಲ್ಲ. ಅಲ್ಲಿ ಬರಬಹುದಾದ ಧ್ವನಿಗಳಲ್ಲಿ ಮಾತ್ರ ಏರುಪೇರಾಗಿದೆ. ಇಂಥದೆ ಕೆಲವು ಉದಾಹರಣೆಗಳ ಮೂಲಕ ಪದದ ಧ್ವನಿಸ್ತರ ಮತ್ತು ಅರ್ಥದ ಸ್ತರಗಳು ಯಾವಾಗಲೂ ಬೆಸದುಕೊಂಡಿರುವುದಿಲ್ಲ ಎಂಬುದನ್ನು ತೋರಿಸಿಕೊಡಬಹುದಾಗಿದೆ.

ಅರ್ಥದ ಜಾಲದಲ್ಲಿ ಪದಗಳು ನಾನಾರ್ಥ, ಸಮಾನಾರ್ಥ, ವಿರುದ್ಧಾರ್ಥ ಎಂಬ ಬೇರೆ ಬೇರೆ ಬಗೆಯ ಸಂಬಂಧವನ್ನು ರಚಿಸಿಕೊಳ್ಳುತ್ತವೆ. ಒಂದೇ ಧ್ವನಿ ರೂಪಕ್ಕೆ ಹಲವು ಅರ್ಥಗಳಿರುವುದನ್ನು ನಾನಾರ್ಥ ಎನ್ನುತ್ತಾರೆ. ಇದು ಹೇಗೆ ಸಾಧ್ಯವಾಗುತ್ತದೆ? ಕತ್ತಿ ಎಂದು ಬರೆದ ಪದಕ್ಕೆ ಗುಲ್ಬರ್ಗಾ ಕನ್ನಡದಲ್ಲಿ ಕತ್ತರಿಸಲು ಬಳಸುವ ಸಾಧನ ಎಂಬ ಒಂದು ಅರ್ಥವಿದ್ದರೆ ನಾಲ್ಕು ಕಾಲಿನ ಹೊರೆಹೊರುವ ಮೊದ್ದು ಪ್ರಾಣಿ ಎಂಬ ಅರ್ಥವೂ ಇದೆ. (ಈ ಎರಡೂ ಅರ್ಥಗಳನ್ನು ಸೂಚಿಸಲು ಬೇರೆ ಬೇರೆ ರೀತಿಯಲ್ಲಿ ಈ ಪದವನ್ನು ಉಚ್ಚರಿಸುವುದನ್ನು ಕೇಳಿಸಿಕೊಳ್ಳಬಹುದು) ಕೆಲವು ಪದಗಳಿಗೆ ಕ್ರಿಯಾಪದವಾಗಿ ಒಂದು ಅರ್ಥ, ನಾಮಪದವಾಗಿ ಇನ್ನೊಂದು ಅರ್ಥ ಇರುವುದಕ್ಕೆ ಹಲವಾರು ಉದಾಹರಣೆಗಳನ್ನು ನಾವು ನೋಡಬಹುದು. ಈ ನಾನಾರ್ಥ ಉಳ್ಳ ಪದಗಳನ್ನು ಬಳಸುವಾಗ ಅರ್ಥಜಾಲದಲ್ಲಿ ಯಾವ ಆಯ್ಕೆಯನ್ನು ಮಾಡಿಕೊಳ್ಳಬೇಕೆಂಬುದು ಭಾಷಿಕರಿಗೆ ಸಮಸ್ಯೆಯಲ್ಲ. ಪ್ರಸಂಗಾನುಸಾರವಾಗಿ ಅರ್ಥ ನಿರ್ಧಾರವಾಗುತ್ತದೆ. ಪದಕೋಶದಲ್ಲಿ ಬೇರೆ ಬೇರೆ ಅರ್ಥಗಳಿಗೆ ಬೇರೆ ಬೇರೆ ಪದಗಳು ಇರುವ ಸಾಧ್ಯತೆ ಇಲ್ಲ. ಅಂದರೆ ತೆರೆ(=ಪರದೆ) ಮತ್ತು ತೆರೆ (=ಅಲೆ) ಎಂಬ ಎರಡು ಪದಗಳು ಇರುವುದಿಲ್ಲ. ಎರಡು ಅರ್ಥಗಳು ಯುಕ್ತ ರೀತಿಯಲ್ಲಿ ಬಳಕೆಯಾಗುತ್ತವೆ.

ಸಮಾನಾರ್ಥಕ ಮತ್ತು ವಿರುದ್ಧಾರ್ಥಕಗಳ ರಚನೆ ಬೇರೆ ರೀತಿಯದು. ನಾನಾರ್ಥಗಳಲ್ಲಿ ಪಟ್ಟಿ ಮಾಡುವ ಪದಗಳನ್ನು ಸ್ಥೂಲಾರ್ಥದಲ್ಲಿ ಸಮಾನಾರ್ಥಕಗಳೆಂದು

ಕರೆಯಬಹುದು. ನಿಜವಾಗಿ ಸಮಾನಾರ್ಥಕಗಳೆಂದು ಕರೆಯಬಹುದಾದ ಪದಗಳು ಭಾಷೆಯಲ್ಲಿ ಇರಲಾರವು. ಒಂದು ಅರ್ಥವನ್ನು ಹೇಳಲು ಒಂದು ಪದವನ್ನು ನಿರ್ಮಿಸಿಕೊಂಡ ಮೇಲೆ ಅದೇ ಅರ್ಥವನ್ನು ಹೇಳುವ ಇನ್ನೊಂದು ಪದವನ್ನು ಭಾಷೆ ಏಕೆ ಬಯಸುತ್ತದೆ? ಅಂದರೆ ನಾವು ಸಮಾನಾರ್ಥಕಗಳೆಂದು ತಿಳಿಯುವ ಪದಗಳ ನಡುವೆ ಬಳಕೆಯ ನೆಲೆಯಲ್ಲಿ ಸೂಕ್ಷ್ಮ ವ್ಯತ್ಯಾಸಗಳು ಇರುತ್ತವೆ. ತೆರೆ ಪದಕ್ಕೆ ಪರದೆ ಸಮಾನಾರ್ಥಕ ಎಂದ ಮಾತ್ರಕ್ಕೆ ಎರಡು ಪದಗಳನ್ನು ಒಂದರ ಬದಲಿಗೆ ಇನ್ನೊಂದನ್ನು ಬಳಸಲು ಬರುವುದಿಲ್ಲ. ಬಳಕೆಯ ನೆಲೆಯಲ್ಲಿ ಪ್ರತಿಯೊಂದು ಪದವೂ ತನ್ನ ಸಮಾನಾರ್ಥಕ ಪದಕ್ಕಿಂತ ಭಿನ್ನವಾಗಿರುತ್ತದೆ.

ವಿರುದ್ಧಾರ್ಥ ಪದಗಳದ್ದು ಇನ್ನೊಂದು ಕಥೆ. ಶಾಲಾ ಶಿಕ್ಷಣದಲ್ಲಿ ಯಾವ ಯಾವ ಪದಗಳನ್ನು ವಿರುದ್ಧಾರ್ಥಕಗಳೆಂದು ಕರೆಯಬೇಕೆಂಬ ಬಗೆಗೆ ಗೊಂದಲಗಳು ತುಂಬಿವೆ. ಗಂಡ/ಹೆಂಡತಿ, ಕೈ/ಕಾಲು, ಹೊಟ್ಟೆ/ಬೆನ್ನು ಈ ಪದಗಳನ್ನು ವಿರುದ್ಧಾರ್ಥಕಗಳೆಂದು ವಾದಿಸುವವರಿದ್ದಾರೆ. ವಿರುದ್ಧಾರ್ಥಕಗಳಲ್ಲಿ ಕೆಲವು ಮಾದರಿಗಳಿವೆ. ಪೂರಕಗಳು, ಪ್ರಮಾಣಕಾರಕಗಳು ಮತ್ತು ಸಂಬಂಧ ಸೂಚಿಗಳು ಎಂಬ ಬಗೆಗಳನ್ನು ಗುರುತಿಸುತ್ತಾರೆ. ಪೂರಕಗಳಿಗೆ ನಿದರ್ಶನ: ಜೀವ/ಸಾವು, ನ್ಯಾಯ/ಅನ್ಯಾಯ, ನಿಜ/ಸುಳ್ಳು, ಹಿಂಸೆ/ಅಹಿಂಸೆ, ವಿದ್ಯೆ/ಅವಿದ್ಯೆ ಇತ್ಯಾದಿ ಈ ಜೋಡಿ ಪದಗಳಲ್ಲಿ ಒಂದು ಇನ್ನೊಂದರ ಅಸ್ತಿತ್ವವನ್ನು ಪೂರ್ಣವಾಗಿ ನಿರಾಕರಿಸುತ್ತದೆ. ಒಂದು ಇದೆಯೆಂದರೆ ಇನ್ನೊಂದು ಸಂಪೂರ್ಣವಾಗಿ ಇರುವುದಿಲ್ಲವೆಂದೇ ಅರ್ಥ. ಪ್ರಮಾಣಕಾರಕಗಳಿಗೆ ನಿದರ್ಶನಗಳು: ಚಿಕ್ಕ/ದೊಡ್ಡ, ಎತ್ತರ/ಕುಳ್ಳ, ತೂಕ/ಹಗುರ, ಬೆಚ್ಚಗೆ/ತಣ್ಣಗೆ ಇತ್ಯಾದಿ. ಈ ಜೋಡಿಗಳಲ್ಲಿ ಒಂದು ಇನ್ನೊಂದರ ಇರುವಿಕೆಯನ್ನು ಪೂರ್ಣವಾಗಿ ನಿರಾಕರಿಸುವುದಿಲ್ಲ. ಎತ್ತರವಾಗಿಲ್ಲ ಎಂದರೆ ಕುಳ್ಳ ಎಂದು ತಿಳಿಯಬೇಕಾಗಿಲ್ಲ. ಸುಡುತ್ತಿಲ್ಲ ಎಂದರೆ ತಣ್ಣಗಿದೆ ಎನ್ನುವಂತಿಲ್ಲ. ಎಂದರೆ ಈ ಜೋಡಿಪದಗಳು ಒಂದೇ ಗುಣದ ಬೇರೆ ಬೇರೆ ಪ್ರಮಾಣಗಳನ್ನು ಸೂಚಿಸುತ್ತಿರುತ್ತವೆ. ಇವುಗಳ ವಿರುದ್ಧಾರ್ಥಕಗಳಾಗಿರುವುದು ತಮ್ಮ ನಡುವಣ ಪ್ರಮಾಣದ ನೆಲೆಯ ವ್ಯತ್ಯಾಸದಿಂದಾಗಿ ಮಾತ್ರ. ಸಂಬಂಧ ಸೂಚಿಗಳಿಗೆ ನಿದರ್ಶನ: ಕೊಡು/ಪಡೆ, ಮಾರು/ಕೊಳ್ಳು, ತಳ್ಳು/ಬೀಳು, ಇಂತ ಪದಗಳು ಒಂದೇ ಕ್ರಿಯೆಯನ್ನು ವಿವರಿಸುತ್ತಿರುತ್ತವೆ. ನಿಯೋಗಿ ಮತ್ತು ಅನುಭೋಗಿಗಳ ನೆಲೆಯಿಂದ ಇವುಗಳ ನಡುವೆ ವಿರುದ್ಧಾರ್ಥ ಉಂಟಾಗುತ್ತದೆ. ಮಾರುವುದು ಮತ್ತು ಕೊಳ್ಳುವುದು ಒಂದೇ ಕ್ರಿಯೆಯ ಬೇರೆ ಬೇರೆ ವಿವರಣೆಗಳು. ಮಾರುವ ವ್ಯಕ್ತಿ ನಿಯೋಗಿಯಾದರೆ ಕೊಳ್ಳುವ ವ್ಯಕ್ತಿ ಅನುಭೋಗಿ.

ಈ ಮೇಲಿನ ವಿವರಣೆಗಳಿಂದ ಭಾಷೆಯ ಪದಕೋಶದ ಪದಗಳು ಸ್ವಯಂಪೂರ್ಣ ಘಟಕಗಳಲ್ಲವೆಂಬುದು ಸ್ಪಷ್ಟವಾಗುತ್ತದೆ. ಅವುಗಳ ನಡುವಣ ಅರ್ಥಜಾಲ ಒಂದು ಮುಖ್ಯ ಭಾಷಿಕ ಸಂಗತಿ. ಮಾತಾಡುವವರಿಗೆ ಈ ಅರ್ಥಜಾಲದ ನಿಯಮಗಳು 'ಕರಗತ'ವಾಗದಿದ್ದರೆ ಭಾಷಾ ಬಳಕೆಯಲ್ಲಿ ಹಲವು ಇಕ್ಕಟ್ಟುಗಳು ಉಂಟಾಗುತ್ತವೆ. ತಿನ್ನುವವನ ಬಗೆಗಿನ ತಿರಸ್ಕಾರದಿಂದ 'ದೋಣಿ ತುಂಬಿತಾ' ಎನ್ನುವುದುಂಟು. (<ಟೊಳ್ಳು)

## ಪದಬಂಧಗಳು

ವೃತ್ತ ಪತ್ರಿಕೆಗಳಲ್ಲಿ ಈಗ ದಿನದಿನವೂ ಪದಬಂಧಗಳನ್ನು ರಚಿಸಿ ಓದುಗರ ಎದುರು ಇಡುವುದನ್ನು ಗಮನಿಸಿದ್ದೇವೆ. ವಾಸ್ತವಾಗಿ ಇವು ತಲೆ ಕೆಳಗಾದ ನಿಘಂಟುಗಳು. ನಿಘಂಟುಗಳಲ್ಲಿ ಪದ (ರೂಪ)ಗಳಿಗೆ ಅರ್ಥಗಳನ್ನು ಹುಡುಕುತ್ತೇವೆ. ಪದಬಂಧಗಳಲ್ಲಿ ಅರ್ಥಗಳಿಗೆ ತಕ್ಕ ಪದ (ರೂಪ)ಗಳನ್ನು ಕಂಡುಕೊಳ್ಳುವುದು ಮುಖ್ಯ. ಪದರೂಪಗಳಿಗೆ ಹಲವು ಅರ್ಥಚ್ಛಾಯೆಗಳನ್ನು ನಿಘಂಟು ದಾಖಲಿಸಿದ್ದರೆ ನಮಗೆ ಅವಶ್ಯ ಇಲ್ಲವೇ ಸೂಕ್ತವೆನಿಸಿದ ಅರ್ಥವನ್ನು ನಾವು ಆಯ್ಕೆ ಮಾಡುತ್ತೇವೆ. ಪದಬಂಧದಲ್ಲಿ ನೀಡಲಾದ ಅರ್ಥವನ್ನು ಸೂಚಿಸುವ ಹಲವು ಪದ(ರೂಪ) ಗಳಿರುವುದು ಸಾಧ್ಯ. ಪದಬಂಧದ ಇತರ ಪದಗಳಿಗೆ ಹೊಂದುವ ಪದವನ್ನು ಸಾಧ್ಯರೂಪಗಳಿಂದ ಆಯ್ಕೆ ಮಾಡಿಕೊಳ್ಳುತ್ತೇವೆ. ಉದಾ: ಮೂರು ಕಣ್ಣುಳ್ಳ ದೇವತೆ ಎಂಬ ಅರ್ಥಕ್ಕೆ ಈಶ್ವರ, ಶಿವ, ಮುಕ್ಕಣ್ಣ, ಗಿರಿಜಾಪತಿ, ಪಾರ್ವತೀಶ, ರುದ್ರ ಹೀಗೆ ಹಲವು ಪದ (ರೂಪ)ಗಳು ಸಾಧ್ಯ. ಆದರೆ ಪದಬಂಧ ಪದದ ಅಕ್ಷರಗಳ ಸಂಖ್ಯೆಯನ್ನು ನಿಗದಿಪಡಿಸಿರುತ್ತದೆ ಮತ್ತು ಆಯ್ಕೆ ಮಾಡಿದ ಪದ, ಪದಬಂಧದ ಇತರ ಪದಗಳೊಡನೆ ಹೊಂದಿಕೊಳ್ಳಬೇಕಾಗುತ್ತದೆ. ಭಾಷೆಯ ಬಳಕೆಯ ಒಂದು ವಿಶಿಷ್ಟ ಸಂದರ್ಭವಿದು. ನಿಘಂಟು ರಚಕರು ಪದ(ರೂಪ)ಗಳ ಬಳಕೆಯನ್ನು ಆಧರಿಸಿ ಅರ್ಥ ವಿವರಣೆ ಮಾಡುವ ವಿಧಾನವನ್ನು ಬಹು ಹಿಂದಿನಿಂದಲೂ ಅನುಸರಿಸುತ್ತಿದ್ದಾರೆ. ಪದಬಂಧಗಳು ಭಾಷಿಕರ ಭಾಷಾ ಸ್ಮೃತಿಯನ್ನು ಮತ್ತೊಂದು ದಿಕ್ಕಿನಿಂದ ಉದ್ದೀಪಿಸಿ ಪರೀಕ್ಷಿಸುತ್ತವೆ. ಪದದಿಂದ ಪದಾರ್ಥದ ಕಡೆಗೆ ನಡೆಯುವ ಚಲನೆಯೊಂದಾದರೆ (ನಿಘಂಟು) ಪದಾರ್ಥದಿಂದ ಪದದ ಕಡೆಗೆ ನಡೆಯುವ ಚಲನೆ ಮತ್ತೊಂದು (ಪದಬಂಧ)

ನಮ್ಮ ಭಾಷಾ ಬಳಕೆಯಲ್ಲಿ ಪದ-ಪದಾರ್ಥಗಳ ಸಂಬಂಧ ಯಾವ ಬಗೆಯಲ್ಲಿರುವುದೆಂಬುದು ಕುತೂಹಲಕಾರಿ. ಈ ಟಿಪ್ಪಣಿಯ ಮಟ್ಟಿಗೆ ಈ ಸಂಬಂಧದ ಸ್ವರೂಪವನ್ನು ನಮ್ಮ ಶಿಕ್ಷಣ ಪದ್ಧತಿ ಗ್ರಹಿಸಿರುವ ವಿಧಾನವಷ್ಟೇ ಪ್ರಸ್ತುತವಾಗಿದೆ. ಒಂದು ಉದಾಹರಣೆ: ಗಣಿತದಲ್ಲಿ ಗುಣಿಸುವ ಕ್ರಿಯೆಯನ್ನು ಬೋಧಿಸುವಾಗ 3x4=12 ಎಂದು ಕಲಿಯುವಂತೆ 12 ಸಂಖ್ಯೆಗೆ 2 ಮತ್ತು 4 ಅಪವರ್ತನಗಳು (ಇದು ಒಂದು ಜೋಡಿ. ಇಂಥವು ಹಲವು ಅಪವರ್ತನಗಳು 12ಕ್ಕೆ ಇವೆ) ಎಂಬುದನ್ನು ಕಲಿಯುತ್ತೇವೆ. ಹೀಗೆ ಎರಡು ಮುಖಗಳಿಂದ ಒಂದು ಸಂಗತಿಯನ್ನು ಗ್ರಹಿಸುವುದು ಗಣಿತ ಕಲಿಕೆಯಲ್ಲಿ ನಡೆಯುತ್ತದೆ. ಪದಕೋಶ ಸ್ಥಿರೀಕರಣದಲ್ಲಿ ಪದದಿಂದ-ಪದಾರ್ಥಗಳ ಸಂಬಂಧವನ್ನು ಅರಿಯುವುದು ಎಷ್ಟು ಮುಖ್ಯವೋ ಪದಾರ್ಥದಿಂದ ಪದವನ್ನೂ ಗೊತ್ತು ಮಾಡುವುದೂ ಅಷ್ಟೇ ಮುಖ್ಯವಾಗಬೇಕು. ಹಾಗಾಗಿ ನಮ್ಮ ಶಿಕ್ಷಣ ಕ್ರಮದಲ್ಲಿ ಈ ಪದಾರ್ಥ-ಪದ ಗ್ರಹಿಕೆಯ ಸಾಮರ್ಥ್ಯಗಳನ್ನು ಹೆಚ್ಚಿಸುವ ಅಭ್ಯಾಸ ಕ್ರಮಗಳನ್ನು ಸೇರಿಸುವುದು ಅವಶ್ಯ.

ಪದಬಂಧಗಳಲ್ಲಿ ಮತ್ತೊಂದು ಬಗೆಯವು ಇವೆ. ಇಲ್ಲಿ ಪದಗ್ರಹಿಕೆಯಾಗಲು ನೀಡುವ ಸೂಚನೆಗಳು ಆ ಪದದ ಅರ್ಥವನ್ನು ಅವಲಂಬಿಸಿರುವುದಿಲ್ಲ. ಬದಲಿಗೆ ಆ ಪದದ ಶಾಬ್ದಿಕ ಸ್ತರವನ್ನು ಅವಲಂಬಿಸಿರುತ್ತವೆ. ಕೆಳಗಿನ ಕೆಲವು ಸೂಚನೆಗಳನ್ನು

ಗಮನಿಸಿ:

1. ಇವಳು ಕೆಟ್ಟ ಗ್ರಾಮದೇವತೆಯೇ?(3)
2. ಈ ಧಾನ್ಯದ ತಲೆ ಕತ್ತರಿಸಿದರೆ ಹಕ್ಕಿಯ ಪುಕ್ಕ ಸಿಗುತ್ತದೆ (3)
3. ಈ ಸಂಗೀತ ವಾದ್ಯದಲ್ಲಿ ನೀರಿನ ಸಂಗ್ರಹವಿದೆ.(3)

ಕ್ರಮವಾಗಿ ನಾವು ಗ್ರಹಿಸಬೇಕಾದ ಪದಗಳು: ಕುಮಾರಿ, ತೊಗರಿ ಮತ್ತು ಕೊಳಲು. ಈ ಪದಗಳಿಗೂ ನೀಡಲಾದ ಸೂಚನೆಗಳಿಗೂ ಅರ್ಥದ ನೆಲೆಯ ಸಂಬಂಧಗಳಿಲ್ಲ. ಆಯಾ ಪದಗಳ ಧ್ವನಿರಚನೆಯನ್ನು ಅವಲಂಬಿಸಿ ಈ ಸೂಚನೆಗಳು ನಿರ್ಮಾಣಗೊಂಡಿವೆ. ಇಲ್ಲಿ ಜಾಣತನ ಮಾತ್ರ ಇದೆ ಎನ್ನುವಂತಿಲ್ಲ. ಭಾಷೆಯ ಶಬ್ದ ಮತ್ತು ಅರ್ಥಗಳ ಸಂಬಂಧವನ್ನು ಭಿನ್ನ ರೀತಿಯಲ್ಲಿ ನೋಡುವ ಉದ್ದೇಶವಿದೆ. ಈ ಬಗೆಯ ಪದಬಂಧಗಳೂ ಕೂಡ ಭಾಷಾ ಶಿಕ್ಷಣದಲ್ಲಿ ಅತ್ಯವಶ್ಯ. ಕಲಿಯುವವರಿಗೆ ಪದರೂಪವನ್ನು ಅರ್ಥದೊಡನೆ ಸದಾ ಜೋಡಿಸಿ ನೋಡುವ ಪ್ರವೃತ್ತಿಯಿಂದ ಹೊರಬರಲು ಈ ಪದಬಂಧಗಳು ಅವಕಾಶ ನೀಡುತ್ತಿದೆ.

# ಕಥನದಲ್ಲಿ ಭಾಷೆ

ಯಾರನ್ನಾದರೂ ಮಾತನಾಡಿಸಿ ಅವರು ನೋಡಿದ ಸಿನಿಮಾ ಒಂದರ ಕಥೆಯನ್ನು ಹೇಳಲು ಕೋರೋಣ. ಬಹುಪಾಲು ಜನರ ನಿರೂಪಣೆ ಹೀಗಿರುತ್ತದೆ. "ಹೀರೋ ಕಾಲೇಜ್‌ನಲ್ಲಿ ಓದುತ್ತಿರುತ್ತಾನೆ. ಅಲ್ಲಿಗೆ ಹೀರೋಯಿನ್ ಕಾರಲ್ಲಿ ಬರುತ್ತಾಳೆ. ಕಾಲೇಜ್ ಹುಡುಗರ ತಂಡದವರು ಅವಳನ್ನು ಚುಡಾಯಿಸುತ್ತಾರೆ. ಹೀರೋಗೂ ವಿಲನ್‌ಗೂ ಫೈಟಿಂಗ್ ನಡೆಯುತ್ತದೆ...." ವಾಕ್ಯ ಸರಣಿ ಹೀಗೇ ಮುಂದುವರೆಯುತ್ತದೆ.

ಜೀವನ ಚರಿತ್ರೆಗಳಲ್ಲೂ ಇಂಥ ವಾಕ್ಯ ಸರಣಿ ಅಲ್ಲಲ್ಲಿ ನೋಡ ಸಿಗುತ್ತವೆ " ಅವರು 1869ರಲ್ಲಿ ಜನಿಸುತ್ತಾರೆ. ಊರಿನಲ್ಲೇ ವಿದ್ಯಾಭ್ಯಾಸ ಮಾಡಿ ಕಸ್ತೂರ್ ಬಾ ಅವರನ್ನು ಮದುವೆಯಾಗುತ್ತಾರೆ. ಅನಂತರ ಕಾನೂನು ವಿದ್ಯಾಭ್ಯಾಸಕ್ಕಾಗಿ ವಿಲಾಯಿತಿಗೆ ಹೋಗುತ್ತಾರೆ. ಅಲ್ಲಿ ಅವರಿಗೆ ವರ್ಣಭೇದ ನೀತಿಯ ಪರಿಚಯವಾಗುತ್ತದೆ...."

ಈ ನಿದರ್ಶನಗಳಲ್ಲಿ ಮೊದಲನೆಯದು ಹೆಚ್ಚು ಪ್ರಚಲಿತ; ಎರಡನೆಯದು ವಿರಳ. ಸಮಸ್ಯೆ ಇರುವುದು ಈ ವಾಕ್ಯ ಸರಣಿಯ ಕಾಲ ಸೂಚಕಗಳಲ್ಲಿ. ಇಲ್ಲೆಲ್ಲಾ ಘಟನೆಗಳು ಇನ್ನೂ ಸಂಭವಿಸಿಲ್ಲವೆಂಬಂತೆ ನಿರೂಪಣೆಯಿದೆ. ವಾಸ್ತವವಾಗಿ ಎರಡೂ ಸನ್ನಿವೇಶಗಳಲ್ಲಿ ಘಟನೆಗಳು ಈಗಾಗಲೇ ಸಂಭವಿಸಿವೆ. ಹಾಗಿದ್ದರೂ ಕಾಲಸೂಚಕಗಳಲ್ಲಿ ಈ ಪಲ್ಲಟ ಏಕೆ? ಜನಪದ ಕಥನದ ಮಾದರಿಯೊಂದನ್ನು ನೋಡೋಣ. "ಒಂದೂರಲ್ಲಿ ಒಬ್ಬ ರಾಜ ಇದ್ದ, ಅವನಿಗೆ ಇಬ್ಬರು ಮಕ್ಕಳಿದ್ದರು......ಚಿಕ್ಕವನು ಕುದುರೆ ಮೇಲೆ ಹೋಗ್ತಾ ಇರ್ತಾನೆ. ದಾರೀಲಿ ಒಂದು ಹುಲಿ ಅಡ್ಡಬರ್ತದೆ... " ಇಲ್ಲಿ ಘಟನೆಯ ಸೂಚನೆಗೆ ಎರಡೂ ರೀತಿಯ ಕಾಲವಾಚಕಗಳು ಬಳಕೆಯಾಗುತ್ತಿವೆ ಕೆಲವು ಕಡೆ ಭೂತ ಕಾಲಸೂಚಕಗಳಿವೆ. ಮತ್ತು ಕೆಲವು ಕಡೆ ನಿರೂಪಣೆಯ ಕಾಲದ ಅಥವಾ ಅದಕ್ಕೂ ಮುಂದಿನ ಕಾಲವನ್ನು ಸೂಚಿಸುವ ವಾಕ್ಯಗಳೂ ಬಳಕೆಯಾಗಿವೆ. ಮೇಲೆ ಉದಾಹರಿಸಿದ ಸಿನಿಮಾ ಕಥೆಯ ಮಾದರಿ ನಮಗೆ ಸಿನಿಮಾದ ಚಿತ್ರಕಥೆಗಳಲ್ಲಿ, ನಾಟಕದಲ್ಲಿ ಪಾತ್ರಗಳ ಮಾತಿಗೆ ಮೊದಲು ಅಥವಾ ಅನಂತರ ನಾಟಕಕಾರರು ನೀಡುವ ಸೂಚನೆಗಳಲ್ಲಿ ಕಾಣಸಿಗುತ್ತವೆ. ನಾಟಕಗಳಲ್ಲಿ ಪಾತ್ರದ ಮಾತುಗಳಲ್ಲದೆ ನಾಟಕಕಾರರು ಸನ್ನಿವೇಶದ ಬಗೆಗೆ ನೀಡುವ ಸೂಚನೆಗಳು ಹೀಗೆ ಸಂಭವನೀಯ ನೆಲೆಯನ್ನೇ ಹೊಂದಿರುತ್ತವೆ. ಉದಾ.

1. ರಂಗದ ಬಲಬದಿಗೆ ಹೋಗುತ್ತಾನೆ. ಅಲ್ಲಿ ಬಿದ್ದಿರುವ ಪುಸ್ತಕವನ್ನು ಎತ್ತಿಕೊಳ್ಳುತ್ತಾನೆ.

2. ತೆರೆ ಸರಿದಾಗ ಒಳಬದಿಯಲ್ಲಿ ಬೆಳಕು ಮೂಡುತ್ತದೆ. ಮೆಲು ಸಂಗೀತದ ನಾದ ಕೇಳಿಬರುತ್ತದೆ. ತಟ್ಟನೆ ಕಾರು ಬಂದು ನಿಂತ ಸದ್ದು ಕೇಳುತ್ತದೆ.

ಇವು ಯಾವುದೇ ನಾಟಕದ ನಿಜ ನಿದರ್ಶನಗಳಲ್ಲ. ಅದರೆ ಹೀಗಿರುವುದು ಅಪರೂಪವಲ್ಲ. ಸಿನಿಮಾದಲ್ಲಿ ಅಥವಾ ನಾಟಕದಲ್ಲಿ ನಿರೂಪಿತವಾದ ಸಂದರ್ಭಗಳು ಮರಳಿ ಪ್ರದರ್ಶಿತವಾಗುವ, ಪ್ರಯೋಗಗೊಳ್ಳುವ ಸಂಭವಿರುವುದರಿಂದ ಕಥನದಲ್ಲಿ ಈ ಬಗೆಯ ಕಾಲಪಲ್ಲಟ ಸೂಚಿತವಾಗುವುದೆಂದು ತಿಳಿಯಬೇಕಿದೆ. ಸಿನಿಮಾ ಈಗಾಗಲೇ ಸಿದ್ಧಗೊಂಡಿದ್ದರೂ ತೆರೆಯ ಮೇಲೆ ಮತ್ತೆ ಮೂಡುವಾಗ ಕಥನ ನಿರ್ವಾಣವಾಗುವುದರಿಂದ ಅಲ್ಲಿನ ಕಥೆ ಹೇಳುವವರು ಹೇಗೆ ಅಭೂತ ಕಾಲಸೂಚಕಗಳನ್ನು ಆಶ್ರಯಿಸುತ್ತಾರೆ. ಆಗಿರುವ ಘಟನೆಗಳು ಎನ್ನುವುದು ಮುಖ್ಯವಾಗಿದೆ. ಆಗಬೇಕಾದ ಘಟನೆಗಳು ಎನ್ನುವಂತೆ ವಾಕ್ಯ ರಚನೆಯಾಗುತ್ತದೆ.

**ಇನ್ನೊಂದು ನಿದರ್ಶನ**

ಪತ್ರಿಕೆಗಳಲ್ಲಿ ಅಪರಾಧ, ಕೊಲೆ, ಮುಂತಾದವುಗಳ ತನಿಖೆ ನಡೆಸಿದ ಸಂದರ್ಭದಲ್ಲಿ, ಅಪಘಾತಗಳ ವಿವರಣೆ ನೀಡುವ ವರದಿಗಳಲ್ಲಿ ಬಳಕೆಯಾಗುವ ಭಾಷೆಯನ್ನು ನೋಡೋಣ.

"ಆ ಜಾಗಕ್ಕೆ ರಾತ್ರಿ ಹತ್ತುಗಂಟೆಗೆ ಬಂದಿದ್ದಾನೆ. ಅಲ್ಲಿದ ಗುಂಪಿನವರೊಡನೆ ಜಗಳವಾಗಿದೆ. ಕೈಯಲ್ಲಿದ್ದ ಚೂರಿಯಿಂದ ಇರಿದಿದ್ದಾರೆ. ದಾರಿಯಲ್ಲೇ ಬಿದ್ದು ಸತ್ತಿದ್ದಾನೆ". ಮಾತಿನಲ್ಲಿ ಮಾತ್ರವಲ್ಲದೆ ಈಚೆಗೆ ಬರವಣಿಗೆಯಲ್ಲೂ ಇಂಥ ಭಾಷಾ ಬಳಕೆಯನ್ನು ಕಾಣುತ್ತೇವೆ.

ಘಟನೆಗಳ ಪುನಾರಚನೆಯ ಸಂದರ್ಭಗಳಲ್ಲಿ ಈ ಮಾದರಿ ಭಾಷಾಬಳಕೆಯಾಗುವಂತೆ ಸದ್ಯಕ್ಕೆ ತೋರುತ್ತಿದೆ. ಅಪರಾಧ, ಕೊಲೆ ಮುಂತಾದ ಸಂದರ್ಭಗಳಲ್ಲಿ ನಡೆದ ಘಟನೆಗಳನ್ನು ಪುನಾರಚಿಸುವಾಗ ನಿರೂಪಕ 'ತಾನು ಕಂಡಂತೆ' ಹೇಳಲಾಗುವುದಿಲ್ಲ. ಆಗ ನಿರೂಪಣೆಗೆ ಸಾಕ್ಷ್ಯದ ಬೆಲೆ ಬರುತ್ತದೆ. ಹಾಗೇನಾದರೂ ನಿರೂಪಿಸಿದರೆ ಕೇಳಿದವರು 'ಓಹೋ ತಾನೇ ಕಂಡಂತೆ' ಹೇಳುತ್ತಿದ್ದಾನೆಂದು ನಿರೂಪಣೆಯನ್ನು ಸಂದೇಹದಿಂದ ನೋಡುತ್ತಾರೆ. ಬದಲಿಗೆ 'ಊಹೆ ಮಾಡಿದಂತೆ' ಬಹುಶಃ, ಇರಬೇಕು ಇತ್ಯಾದಿ ಪದಗಳನ್ನು ಬಳಸಿ ನಿರೂಪಿಸಿದರೆ ಕೇಳುವವರು ನಿರೂಪಣೆಯತ್ತ ಆಸಕ್ತರಾಗುವುದಿಲ್ಲ. ಊಹೆಗೆ ಅದರದ್ದೇ ಆದ ಮಿಥ್ಯೆಯ ಸಾಧ್ಯತೆ ಇರುವುದಷ್ಟೆ ನಿರೂಪಕರು (ವರದಿಗಾರರು) ಈ ಎರಡು ಅಪಾಯದ ಅತಿರೇಕಗಳಿಂದ ದೂರ ಉಳಿಯಲು ನಡುವಣ ಮಾರ್ಗ ಹಿಡಿಯುವುದು ಅನಿವಾರ್ಯ. ಮೇಲೆ ಹೇಳಿದ ಬಗೆಯ ನಿರೂಪಣೆಯಲ್ಲಿ 'ತಾವೇ ಕಂಡಂತೆ' ಹೇಳುವ ಮಾದರಿ ಅಥವಾ ಹೀಗಿರಬೇಕೆಂದು 'ಊಹಿಸಿದ' ಮಾದರಿ ಇಲ್ಲ. ಎರಡು ಅಪಾಯಗಳಿಲ್ಲದ ಭಾಷಾ ಬಳಕೆಯಿದು. ಹಾಗಾಗಿ ಆ ವಾಕ್ಯಗಳಲ್ಲಿ ವಿಶಿಷ್ಟ ಕಾಲವಾಚಕ ಬಳಕೆಯಾಗಿದೆ. ಅಲ್ಲಿನ ನಿರೂಪಣೆಯ ವಾಕ್ಯಗಳಲ್ಲಿ ಇರು ಕ್ರಿಯಾಪದದ ಭೂತರೂಪ ಬಳಕೆಯಾಗಿದೆ. ಹೊಡೆದನು, ಹೊಡೆದಿರಬೇಕು, ಹೊಡೆದಿದ್ದಾನೆ. ಎಂಬ ಈ ಮೂರು ರೂಪಗಳಲ್ಲಿ ಮೊದಲನೆಯದು ಸಾಕ್ಷ್ಯದ ಮಾದರಿ, ಎರಡನೆಯದು ಊಹೆಯ ಮಾದರಿ, ಮೂರನೆಯದು ಇವೆರಡೂ

ಅಲ್ಲ. ಘಟನೆ ಈಗಾಗಲೇ ನಡೆದು ಹೋಗಿದೆಯಾಗಿ ಪೂರ್ಣ ಭೂತ ಕ್ರಿಯಾರೂಪವನ್ನು ಬಳಸುವುದು ಅವಶ್ಯವಿತ್ತು. ಆದರೆ ಘಟನೆಗಳ ಪುನಾರಚನೆ ನಡೆಯುತ್ತಿರುವುದರಿಂದ ಪೂರ್ಣಕ್ರಿಯಾ ರೂಪವನ್ನು ಬಳಸುವುದು ಅಸಾಧ್ಯ. ಸಂಭವಿಸುವ ಅನುಕ್ರಮವನ್ನು ಸಂಭವಿಸುತ್ತಿರುವಂತೆಯೇ ನಿರೂಪಿಸಬೇಕಾದ ಅವಶ್ಯಕತೆ ಇರುವುದರಿಂದ ಈ ಬಗೆಯ ಕಾಲಸೂಚಕಗಳನ್ನು (ಇರು ಕ್ರಿಯಾಪದದ ನೆರವಿನಿಂದ) ಬಳಸುತ್ತಾರೆಂದು ತಿಳಿಯಲೇಬೇಕಾಗಿದೆ.

**–ಇನ್ನು ಒಂದು ಪ್ರಸಂಗ**

ಕನ್ನಡದ ಕಥನದ ವಾಕ್ಯಗಳನ್ನು ಇಂಗ್ಲಿಶಿಗೆ ಅನುವಾದಿಸುವಾಗ ಈ ಕಾಲಸೂಚಕಗಳ ಇಕ್ಕಟ್ಟು ಹೆಚ್ಚೆಂದು ಅನುವಾದಕರು ವಾದಿಸುತ್ತಾರೆ. ಈ ಇಕ್ಕಟ್ಟು ಎಂಥದೆಂದು ತಿಳಿಯೋಣ. ಇಂಗ್ಲಿಶ್ ಮಾಧ್ಯಮದಲ್ಲಿ ಓದುತ್ತಿರುವ ವಿದ್ಯಾರ್ಥಿಗಳನ್ನು (ಅವರ ಮಾತೃಭಾಷೆ ಕನ್ನಡವೆಂದು ತಿಳಿಯೋಣ) ಮಾತಾಡಿಸುತ್ತ 'ಶಾಲೆಗೆ ಹೋಗ್ತಿದಿಯಾ? ಎಂದು ಕೇಳಿದರೆ ಬರುವ ಉತ್ತರ ಸಾಮಾನ್ಯವಾಗಿ ಹೀಗಿರುತ್ತದೆ. 'ಈವತ್ತು ಭಾನುವಾರ ರಜೆ' ಅಥವಾ 'ಇನ್ನು ಟೈಮಿದೆ, ಹತ್ತಕ್ಕೆ ಕ್ಲಾಸು' ಅಥವಾ 'ಆಗಲೇ ಹೋಗಿಬಂದೆ' ನಿಮ್ಮ ಪ್ರಶ್ನೆಯ ಉದ್ದೇಶಕ್ಕೂ, ಉತ್ತರಗಳಿಗೂ ತಾಳಮೇಳವೇ ಇಲ್ಲ. ಏಕೆ ಹೀಗಿರುತ್ತದೆ. ವಿದ್ಯಾರ್ಥಿ ನಿಮ್ಮ ಪ್ರಶ್ನೆಯನ್ನು ಗ್ರಹಿಸುತ್ತಿರುವ ವಿಧಾನವೇ ಬೇರೆ. ನೀವು ನಿರಂತರ ವರ್ತಮಾನದಲ್ಲಿ ಪ್ರಶ್ನೆ ಕೇಳಿದ್ದೀರಿ. ಅಂದರೆ ಮಗುವಿನ ದೈನಂದಿನ ಚಟುವಟಿಕೆಗಳಲ್ಲಿ ಶಾಲೆಗೆ ಹೋಗುವ ಚಟುವಟಿಕೆ ಇದೆಯೇ ಇಲ್ಲವೋ ಎಂಬುದನ್ನು ತಿಳಿಯಲು ಪ್ರಶ್ನೆ ಕೇಳಿದ್ದೀರಿ. ಅಲ್ಲಿನ ಕಾಲಸೂಚಕ ನಿಮ್ಮ ಪ್ರಕಾರ ನಿರಂತರ ವರ್ತಮಾನಕ್ಕೆ ಸೇರಿದೆ. 'ನಮ್ಮ ಮಗ ಶಾಲೆಗೆ ಹೋಗ್ತಾನೆ', 'ಈ ದೇಶದ ನೂರಾರು, ಸಾವಿರ ಮಕ್ಕಳು ಶಾಲೆಗೆ ಹೋಗುತ್ತಿಲ್ಲ' ಎಂಬ ವಾಕ್ಯಗಳು ಇದೇ ಮಾದರಿಯಲ್ಲಿವೆ. ಶಾಲೆಗೆ ಮಕ್ಕಳು ಹೋಗುತ್ತಿಲ್ಲವೆಂದರೆ ಇಂದು, ನಾಳೆಗೆ ಸಂಬಂಧಿಸಿದ ಮಾತಲ್ಲ. ಆ ಮಕ್ಕಳ ದಿನಚರಿಯಲ್ಲಿ ಶಾಲೆಗೆ ಹೋಗುವುದು ಸೇರಿಲ್ಲವೆಂದೇ ಅರ್ಥ. ಆದರೆ ಮೊದಲು ನೀವು ಕೇಳಿದ ಪ್ರಶ್ನೆಗೆ ವಿದ್ಯಾರ್ಥಿ ಉತ್ತರಿಸುವಾಗ ಪ್ರಶ್ನೆಯ ಕಾಲವನ್ನು ಸದ್ಯ ವರ್ತಮಾನಕ್ಕೆ ಸೀಮಿತಗೊಳಿಸಿಕೊಂಡಿರುವುದು ಸ್ಪಷ್ಟ ನನ್ನ ದಿನಚರಿಯಲ್ಲಿ ಶಾಲೆಗೆ ಹೋಗುವುದು ಇದ್ದರೂ 'ಈ ದಿನ ನಾನು ಹೋಗಬೇಕಿಲ್ಲ' ಅಥವಾ 'ಕೊಂಚ ಕಾಲ ಕಳೆದ ಮೇಲೆ ಹೋಗುತ್ತೇನೆ' ಅಥವಾ 'ಹೋಗಿ ಬಂದಾಯಿತು' ಎಂಬ ಅರ್ಥದಲ್ಲಿ ಉತ್ತರಗಳು ರೂಪುಗೊಂಡಿವೆ.

ಕನ್ನಡದ ಕಥನ ನಿರಂತರ ಮತ್ತು ಸದ್ಯ ವರ್ತಮಾನಗಳನ್ನು ಸಾಮಾನ್ಯವಾಗಿ ಬೇರೆ ಮಾಡಿ ಇಡುವುದಿಲ್ಲ. ಇದೇ ಮಾದರಿಯನ್ನು ಅವರು ಬಳಸುವ ಇಂಗ್ಲಿಶಿನಲ್ಲೂ ಕಾಣಬಹುದು. 'ಮೈ ಸನ್ ಗೋಸ್ ಟು ಸ್ಕೂಲ್' ಮತ್ತು 'ಮೈ ಸನ್ ಈಸ್ ಗೋಯಿಂಗ್ ಟು ಸ್ಕೂಲ್'ಗಳ ನಡುವೆ ಕನ್ನಡಿಗರಿಗೆ ಅಷ್ಟೊಂದು ವ್ಯತ್ಯಾಸವಿಲ್ಲ. ಇವೆರಡರಲ್ಲಿ ಅವರು ನಿರಂತ ವರ್ತಮಾನದಲ್ಲೂ ಎರಡನೇ ವಾಕ್ಯವನ್ನೇ ಬಳಸಲು ಸಿದ್ಧ. ಅದೇನೇ ಇರಲಿ. ಅವರ ಕಥನದ ಕಾಲಸೂಚಕಗಳ ಮೇಲಿನ ಇಕ್ಕಟ್ಟು ಇಂಗ್ಲಿಶ್ ಅನುವಾದಕರಿಗೆ ತೊಡಕಾಗಿ ಕಾಣುತ್ತದೆ.

# ದಿಟ ಸಟೆಗಳ ನಡುವಣ ಗಡಿಗೆರೆ

ಈಚಿನ ದಿನಗಳಲ್ಲಿ ಪೋಲಿಸರು ಆರೋಪಿಗಳು ಸುಳ್ಳು ಹೇಳುತ್ತಿದ್ದಾರೋ ಇಲ್ಲವೇ ದಿಟ ನುಡಿಯುತ್ತಿದ್ದಾರೋ ಎಂಬುದನ್ನು ಗೊತ್ತುಮಾಡಲು ಯಂತ್ರಗಳನ್ನು ಬಳಸುತ್ತಿದ್ದಾರೆ. ಇದಲ್ಲದೆ ಆ ಆರೋಪಿಗಳಿಂದ ದಿಟವನ್ನು 'ಮಾತಾಡಿಸಲು' ಮಂಪರು ಪರೀಕ್ಷೆಗೆ ಒಳಗುಮಾಡುತ್ತಿದ್ದಾರೆ. ಇವೆರಡೂ ಭಾಷೆ, ಸತ್ಯ ಮತ್ತು ಮನಸ್ಸುಗಳ ಸಂಬಂಧವನ್ನು ಸಾಮಾಜಿಕ ನೆಲೆಯಲ್ಲಿ ಪರಿಶೀಲಿಸಲು ನಮಗೆ ಹೆಚ್ಚಿನ ಅವಕಾಶಗಳನ್ನು ಕಲ್ಪಿಸಿವೆ.

ಮೈಮೇಲಿನ ಪರಿವೆ ಇಲ್ಲದಿರುವಾಗ ನಾವಾಡುವ ಮಾತುಗಳನ್ನು ಯಾರೂ ಗಂಭೀರವಾಗಿ ಪರಿಗಣಿಸುವುದಿಲ್ಲ; ಎಷ್ಟೋ ವೇಳೆ ಅಂತಹ ಪರಿಸ್ಥಿತಿಯಲ್ಲಿ ಆಡುವ ಮಾತುಗಳು ಗೇಲಿಗೆ ಒಳಗಾಗುತ್ತವೆ. ಹುಚ್ಚರೆಂದು ನಾವು ತಿಳಿದಿರುವವರು, ಅರೆಮರುಳರು, ಅರಳು ಮರುಳಿಗೆ ಒಳಗಾದವರು, ತೀವ್ರ ಜ್ವರಪೀಡಿತರು ಇಲ್ಲವೇ ಮದ್ಯಪಾನವೇ ಮುಂತಾದ ಅಮಲಿನ ಪ್ರಭಾವಕ್ಕೆ ಒಳಗಾದವರು ಆಡುವ ಮಾತುಗಳನ್ನು ನಾವು ಹೇಗೆ ಪರಿಗಣಿಸುತ್ತೇವೆಂಬುದನ್ನು ಕೊಂಚ ಯೋಚಿಸಿ. ಹಾಗೆಯೇ ನಿದ್ದೆಯಲ್ಲಿ ಕನವರಿಸಿಕೊಳ್ಳುತ್ತಿರುವವರ ಮಾತುಗಳನ್ನು ಕೇಳಿಸಿಕೊಂಡವರು, ಹಾಗೆ ನುಡಿದವರು ಎಚ್ಚರಗೊಂಡಮೇಲೆ ಕನವರಿಕೆಯ ಮಾತುಗಳನ್ನು ಮರಳಿ ಹೇಳಿ ತಮಾಶೆ ಮಾಡುವುದನ್ನು ಕಂಡಿದ್ದೇವೆ. ಇದೆಲ್ಲವೂ ಏನನ್ನು ಸೂಚಿಸುವಂತಿದೆ? ನಾವು ಮೈಮೇಲಿನ ಎಚ್ಚರವನ್ನು ಕಳೆದುಕೊಂಡಾಗ ಆಡುವ ಮಾತುಗಳನ್ನು ದಿಟವೆಂದು ಯಾರೂ ನಂಬುವುದಿಲ್ಲ ಎಂದಲ್ಲವೇ? ನಾವು ಮಾತಾಡುವಾಗ ಇಲ್ಲವೇ ಬರೆಯುವಾಗ ಸಂಪೂರ್ಣ ಎಚ್ಚರದಿಂದ ಮತ್ತು ಸ್ವಂತ ಇಚ್ಚೆಯಿಂದ ಯಾರ ಬಲಾತ್ಕಾರಕ್ಕೂ ಪ್ರಭಾವಕ್ಕೂ ಒಳಗಾಗದೇ ಇದ್ದೇನೆಂದು ಪ್ರಮಾಣಮಾಡುವುದೂ ಇದೆಯಲ್ಲವೇ. ಉಯಿಲುಗಳನ್ನು ಬರೆಯುವಾಗ ಅದರಲ್ಲಿ ಬಿಡದೆ ಇಂತಹ ಅರ್ಥವಿರುವ ವಾಕ್ಯವನ್ನು ಸೇರಿಸಿಯೇ ಇರುತ್ತಾರೆ. ಉಯಿಲನ್ನು ಬರೆಯುವಾಗ ಇಲ್ಲವೇ ಹೇಳಿ ಬರೆಸುವಾಗ ತಾನು ಎಚ್ಚರದಿಂದ ಇದ್ದೇನೆಂದು ಇಚ್ಛೆಯಿಂದ ಹೇಳಿದ್ದೇನೆಂದು ಪ್ರಮಾಣಮಾಡುವುದು ಅಗತ್ಯ. ಸಾಕ್ಷಿ ಹೇಳುವಾಗಲೂ ಹೇಳಿದ್ದನ್ನು ಮತ್ತೊಮ್ಮೆ ಕೇಳಿ ಇಲ್ಲವೇ ದಾಖಲಾದದ್ದನ್ನು ಓದಿ ತಾನು ಆ ಮಾತುಗಳನ್ನು ಎಚ್ಚರದಲ್ಲಿರುವಾಗಲೇ ಹೇಳಿದ್ದೆಂದು ಒಪ್ಪಿಕೊಳ್ಳಬೇಕಾಗುತ್ತದೆ.

ಇದೆಲ್ಲವನ್ನು ನೋಡಿದಾಗ ತಿಳಿಯುವುದಿಷ್ಟು: ನಮ್ಮ ಮಾತು ಯಾರಿಗಾದರೂ ದಿಟವೆನ್ನಿಸಬೇಕಾದರೆ ಆ ಮಾತುಗಳನ್ನು ನುಡಿದ ನಾವು ನುಡಿಯುವಾಗ ಪೂರ್ಣ

ಎಚ್ಚರವಿರಿಸಿಕೊಂಡು ನುಡಿದಿರಬೇಕೆಂಬುದು ಒಂದು ಶರತ್ತಾಗಿರುತ್ತದೆ; ಒಂದು ವೇಳೆ ಈ ಶರತ್ತು ಪಾಲನೆಯಾಗದಿದ್ದರೆ ನಮ್ಮ ನುಡಿಗಳಿಗೆ, ದಿಟಕ್ಕೆ ಸಿಗುವ ಮನ್ನಣೆ ಸಿಗುವುದಿಲ್ಲ. ಹೀಗಿದ್ದರೂ ಸಂಸ್ಕೃತಿಯ ಕೆಲವು ಸಂದರ್ಭಗಳಲ್ಲಿ 'ಮೈಮೇಲೆ' ಬಂದವರು ನುಡಿದ ಮಾತುಗಳಿಗೆ ಹೆಚ್ಚಿನ ಮಹತ್ವ ದೊರಕುವುದುಂಟು. ದೈವಾರಾಧನೆಗಳಲ್ಲಿ ಪೂಜಾರಿ ಇಲ್ಲವೇ ಯಾರೋ ಒಬ್ಬರು ವ್ಯಕ್ತಿ 'ಆವೇಶ'ಕ್ಕೆ ಒಳಗಾಗುತ್ತಾರೆ. ಈ ಆವೇಶಕ್ಕೆ ಒಳಗಾಗುವ ಆಚರಣೆಗಳೂ ಇರುತ್ತವೆ. ಆವೇಶ ಬಂದಾಗ 'ಮೈದುಂಬಿದ' ವ್ಯಕ್ತಿ ಹೇಳುವ ಮಾತುಗಳನ್ನು ಸಮುದಾಯ ಎಚ್ಚರದಿಂದ ಕೇಳಿಸಿಕೊಳ್ಳುತ್ತದೆ. ಆ ಮಾತುಗಳಿಗೆ ಅರ್ಥವನ್ನು ನೀಡಲಾಗುತ್ತದೆ. ಎಲ್ಲಕ್ಕಿಂತ ಹೆಚ್ಚಿನ ಮಾತೆಂದರೆ ಈ 'ಮೈಮೇಲೆ ಬಂದಾಗ' ಹೇಳಿದ ಮಾತನ್ನು ದಿಟವೆಂದು ನಂಬಲಾಗುತ್ತದೆ. ಹೀಗೆ ಆವೇಶದಲ್ಲಿ ಹೇಳಿದ ವ್ಯಕ್ತಿಗೆ ಆವೇಶ ಇಳಿದ ಮೇಲೆ ತಾನು ಏನು ಹೇಳಿದ್ದೆನೆಂಬುದು ನೆನಪಿರುವುದಿಲ್ಲ. ಇಲ್ಲವೇ ನೆನಪಿರಬೇಕೆಂಬ ಶರತ್ತಿರುವುದಿಲ್ಲ. ಅಂದರೆ ಆ ಮಾತುಗಳನ್ನು ಹೇಳಿದ ವ್ಯಕ್ತಿ 'ಎಚ್ಚರ'ದಲ್ಲಿದ್ದಾಗ ಆ ಮಾತುಗಳನ್ನು ಹೇಳದಿದ್ದರೂ ಆ ಮಾತುಗಳಿಗೆ ದಿಟದ ಸ್ಥಾನಮಾನಗಳು ದೊರಕುತ್ತವೆ. ಆದರೆ ಇಲ್ಲಿ ಗಮನಿಸಬೇಕಾದ ಮಾತೊಂದಿದೆ. ಹೀಗೆ ಆವೇಶ ಬಂದಾಗ ಹೇಳಿದ ಮಾತುಗಳು ಆ ವ್ಯಕ್ತಿಯ ಸ್ವಂತಕ್ಕೆ ಸಂಬಂಧಿಸಿದ್ದವಲ್ಲ. ಹೊರಗಿನ ಯಾರಿಗೋ ಇಲ್ಲವೇ ಇಡೀ ಸಮುದಾಯಕ್ಕೆ ಅನ್ವಯಿಸುವ ಮಾತುಗಳಾಗಿರುತ್ತವೆ. ಕೆಲವೊಮ್ಮೆ ಇವು ಆಗಿ ಹೋದ ಸಂಗತಿಗಳನ್ನು ಕುರಿತಿದ್ದರೆ ಮತ್ತೆ ಕೆಲವೊಮ್ಮೆ ಆಗಬಹುದಾದ ಸಂಗತಿಗಳನ್ನೂ ಕುರಿತಿರುತ್ತವೆ. ಆವೇಶ ಬಂದವರು ತಮ್ಮ ಸ್ವಂತ ಅನುಭವವನ್ನು , 'ತಮ್ಮ ನಿಜ'ವನ್ನು ಹೇಳುತ್ತಿದ್ದಾರೆಂದು ನಾವು ತಿಳಿಯುವುದಿಲ್ಲ. ಒಂದು ವೇಳೆ ಅವರು ನುಡಿದ ಮಾತು ಮುಂದೆ ದಿಟವಾಗದಿದ್ದರೂ (ಉದಾ.ಗೆ ನೀನು ಕಳೆದುಕೊಂಡ ಹಸು ಉತ್ತರ ದಿಕ್ಕಿನಲ್ಲಿ ಸಿಗುತ್ತದೆ ಎಂದು ಹೇಳಿದರೂ ಹಾಗೆ ಸಿಗದೇ ಹೋದರೆ ಇಲ್ಲವೇ ದಕ್ಷಿಣ ದಿಕ್ಕಿನಲ್ಲಿ ಸಿಕ್ಕಿದರೆ ) ಆಗಲೂ ನುಡಿದವರು ಸುಳ್ಳು ಹೇಳಿದರೆಂದು ಭಾವಿಸುವ ಪ್ರಸಂಗಗಳು ಕಡಿಮೆ.

ಮೊದಲಲ್ಲಿ ಹೇಳಿದ ಪ್ರಸಂಗಕ್ಕೆ ಮತ್ತೆ ಬರೋಣ. ಆರೋಪಿಯನ್ನು ವಿಚಾರಣೆಗೆ ಗುರಿಪಡಿಸುವ ಪೋಲಿಸರು ಮಂಪರು ಪರೀಕ್ಷೆಗೆ ಗುರಿಪಡಿಸುವಾಗ ಆ ವ್ಯಕ್ತಿಗೆ 'ಮಂಪರು' ಬರುವಂತೆ ಮಾಡುತ್ತಾರೆ.( ವಿಚಾರಣೆಗೆ ನೆರವಾಗುವ ವಿಜ್ಞಾನಿಗಳು ಮಂಪರು ಬರಿಸುತ್ತಾರೆ). ಎಚ್ಚರವಾಗಿದ್ದಾಗ ಆ ವ್ಯಕ್ತಿ ದಿಟ ನುಡಿಯುತ್ತಿಲ್ಲ, ಇಲ್ಲವೇ ತನಗೆ ತಿಳಿದಿರುವುದನ್ನೆಲ್ಲ ಹೇಳುತ್ತಿಲ್ಲ ಎಂದಾಗ ವಿಚಾರಣೆ ಈ ಹಾದಿಯನ್ನು ಹಿಡಿಯುತ್ತದೆ. ಆರೋಪಿ 'ಸುಳ್ಳು' ಹೇಳುತ್ತಿದ್ದಾರೆಂದು 'ಅನಿಸಿದಾಗ' ಕೂಡ ಹೀಗೆ ಎಚ್ಚರ ತಪ್ಪಿಸುವ ವಿಧಾನಕ್ಕೆ ಮೊರೆ ಹೋಗುತ್ತಿದ್ದಾರೆ. ಅಂದರೆ ವ್ಯಕ್ತಿಯಿಂದ ದಿಟವನ್ನು ಹೊರತರಲು ಅವರು ಎಚ್ಚರದಲ್ಲಿ ಇರದಂತೆ ಮಾಡುವುದೇ ಸರಿಯಾದ ಮಾರ್ಗವೆಂದು ತಿಳಿದಂತಾಯ್ತು. ಇದು ನಾವು ಸಾಮಾನ್ಯವಾಗಿ ಒಪ್ಪಿರುವ ಬಗೆಯನ್ನು ತಲೆಕೆಳಗು ಮಾಡುವ ಗ್ರಹಿಕೆಯಾಗಿದೆ. ವ್ಯಕ್ತಿ ಎಚ್ಚರದಿಂದ ಇದ್ದಾಗ ಸುಳ್ಳು ಹೇಳುತ್ತಿದ್ದಾರೆಂದು ನಮಗೆ ಅನಿಸಿದಾಗ ಆ ವ್ಯಕ್ತಿಗೆ ಎಚ್ಚರ ಇಲ್ಲದಂತೆ ಮಾಡಿ 'ದಿಟವನ್ನು ನುಡಿಸು'ತ್ತಿರುವಂತಿದೆ. ಇದು ಆವೇಶ ಬಂದ

ಸ್ಥಿತಿಯಲ್ಲ. ಏಕೆಂದರೆ ಇಲ್ಲಿ ಹೊರತರುತ್ತಿರುವ ದಿಟ ಆ ವ್ಯಕ್ತಿಗೆ ಮಾತ್ರ ಗೊತ್ತಿರುವಂತಹದು. ಆ ವ್ಯಕ್ತಿಯ ಅನುಭವ ಜಗತ್ತಿಗೆ ಸೇರಿರುವಂತಹುದು.

ವ್ಯಕ್ತಿಯನ್ನು ಮಂಪರುಗೊಳಿಸಿ ದಿಟವನ್ನು ನುಡಿಯುವಂತೆ ಮಾಡಬಹುದೆಂದು ತಿಳಿಯಲು ಇರುವ ಕಾರಣಗಳನ್ನು ಮನಶ್ಶಾಸ್ತ್ರದ ನೆರವಿನಿಂದ ವಿವರಿಸಲಾಗುತ್ತಿದೆ. ತನಗೆ ಗೊತ್ತಿರುವ ದಿಟವನ್ನು ಮಾತಿನಲ್ಲಿ ಹೇಳದೆ ವ್ಯಕ್ತಿ 'ಮುಚ್ಚಿಡುವುದು' ಸಾಧ್ಯ ಅಂದರೆ ಆಗ ದಿಟದ ಬದಲಿಗೆ ಸುಳ್ಳನ್ನು ಹೇಳುತ್ತಿರುತ್ತಾರೆ. ಅಂದರೆ ಎಚ್ಚರವಿದ್ದಾಗ ಹೇಳುವುದೆಲ್ಲ ದಿಟವೆನ್ನಲಾಗದು. ಎಚ್ಚರವಿದ್ದಾಗ ದಿಟವನ್ನು ನುಡಿಯಬೇಕೋ ಇಲ್ಲವೇ ಅದನ್ನು ಮುಚ್ಚಿಟ್ಟು ಸುಳ್ಳನ್ನು ಮುಂದಿಡಬೇಕೋ ಎಂಬುದು ವ್ಯಕ್ತಿಯ ಆಯ್ಕೆಯಾಗಿರುತ್ತದೆಂದಾಯ್ತು. ಇದಲ್ಲದೆ ಇನ್ನೂ ಒಂದು ಸಂದರ್ಭದಲ್ಲಿ ವ್ಯಕ್ತಿಗೆ 'ಮಂಪರು'ಬರಿಸಿ ದಿಟವನ್ನು ಹೊರತರುವುದುಂಟು. ಈ ಪ್ರಸಂಗದಲ್ಲಿ ವ್ಯಕ್ತಿಗೆ ತನಗೆ ಏನು ಗೊತ್ತಿದೆ ಎನ್ನುವುದರ ಅರಿವೇ ಇರುವುದಿಲ್ಲ: ಅದನ್ನವರು 'ಮರೆತಿರು'ತ್ತಾರೆ. ಹೀಗೆ ಒಳಮನಸ್ಸಿನ ಪದರಕ್ಕೆ ಸರಿದ ದಿಟವನ್ನು ಹೊರತರಲು ವ್ಯಕ್ತಿಯ ಮನಸ್ಸನ್ನು ವಶೀಕರಿಸಿಕೊಳ್ಳುವುದುಂಟು. ಇಲ್ಲಿಯೂ ದಿಟವೆಂದರೆ ಏನು ಎಂಬುದೇ ಮುಖ್ಯ ಪ್ರಶ್ನೆಯಾಗಿ ಬಿಡುತ್ತದೆ. ನಮಗೆ ಗೊತ್ತಿರುವುದು ದಿಟವೇ? ಗೊತ್ತಿದ್ದೂ ಅದನ್ನು ನುಡಿಯದೆ ಮುಚ್ಚಿಡುವ ಆಯ್ಕೆ ನಮಗಿದೆಯೇ? ಹಾಗೆ ಮುಚ್ಚಿಡುತ್ತೇವೆಂದು ತಿಳಿದರೂ ನಮಗೇ ಗೊತ್ತಿಲ್ಲದಂತೆ ಅದನ್ನು ನಮ್ಮಿಂದ ನುಡಿಸುವುದು ಸಾಧ್ಯವಾಗುವುದಾದರೆ, ಆ ದಿಟ ನಮಗೆ ಗೊತ್ತಿತ್ತೆಂದು ನಾವು ಒಪ್ಪುವುದು ಹೇಗೆ? ಇವೆಲ್ಲವೂ ದೊಡ್ಡ ತಾತ್ವಿಕ ಚರ್ಚೆಯ ಕಡೆಗೆ ನಮ್ಮನ್ನು ಒಯ್ಯುತ್ತವೆ.

ನಾವು ದಿಟವನ್ನೆ ನುಡಿಯುತ್ತಿದ್ದೇವೆಂದರೂ ಅದು ದಿಟವಾಗದೇ ಇರಬಹುದು. ನಾವು ದಿಟವನ್ನು ನುಡಿಯದೇ ಮುಚ್ಚಿಡುತ್ತಿದ್ದೇವೆಂದರೂ ಹಾಗೆ ಮುಚ್ಚಿಡುತ್ತಿರುವುದು ಬೇರೆಯವರಿಗೆ ಗೊತ್ತಾಗಬಹುದು. ಅವರು ನಮ್ಮ ನುಡಿಗಳನ್ನು ನಂಬದೇ ನಮ್ಮಿಂದ ದಿಟವನ್ನು ಹೊರಹಾಕಲು ಬೇರೆ ದಾರಿಗಳನ್ನು ಹುಡುಕಿಕೊಳ್ಳಬಹುದು. ಅಲ್ಲದೆ ನಮಗೆ ದಿಟ ಯಾವುದೆಂಬುದು ಗೊತ್ತಾಗದೆಯೂ ನಮ್ಮೊಳಗೆ ಹುದುಗಿರಬಹುದು. ಅದನ್ನೂ ಹೊರತರಲು ದಾರಿಗಳಿವೆ ಎಂದಾಯಿತು. ಹೀಗಿರುವಾಗ ನಮ್ಮ ಮಾತಿಗೆ ನಾವು ಹೊಣೆಗಾರರು ಎಂಬುದಕ್ಕೆ ಅರ್ಥವೇ ಇಲ್ಲ. ನಾವು ಮಾತಾಡುವಾಗಲೇ ನಮ್ಮ ಮಾತು ದಿಟವೋ ಸುಳ್ಳೋ ಎಂಬುದನ್ನು 'ಪತ್ತೆ'ಮಾಡುವ ಯಂತ್ರ (ನಾವು ಬೇಕೆಂತಲೇ ದಿಟವನ್ನು ಮುಚ್ಚಿಟ್ಟು ಸುಳ್ಳನ್ನು ಹೇಳುತ್ತಿದ್ದೇವೋ ಎಂಬುದನ್ನು ಗೊತ್ತುಮಾಡುವ ಯಂತ್ರ) ಇದೆಯಲ್ಲ. ಇದು ನಮ್ಮ ದೇಹದ ಬೇರೆ ಚರ್ಯೆಗಳನ್ನು ದಾಖಲು ಮಾಡುವ ಮೂಲಕ ನಾವು ದಿಟವನ್ನು ಬಚ್ಚಿಡಲು ಯತ್ನಿಸುತ್ತಿರುವುದನ್ನು ಬಯಲಿಗಿಡುತ್ತದಂತೆ. ಇದೆಲ್ಲವೂ ಕೊನೆಗೆ ನಮ್ಮೊಳಗೆ ಇರುವ ದಿಟವನ್ನು ಹೊರತರುವುದೋ ಇಲ್ಲವೇ ದಿಟವಿದ್ದೀತೆಂದು ಬೇರೆಯವರು ತಿಳಿದದ್ದನ್ನು ಹೊರತರುವುದೋ ಗೊತ್ತಿಲ್ಲ. ಅಂತೂ ಭಾಷೆ, ಸತ್ಯ ಮತ್ತು ಮನಸ್ಸುಗಳ ಸಂಬಂಧವನ್ನು ನಾವು ಸಾಮಾಜಿಕ ನೆಲೆಯಲ್ಲಿ ರೂಪಿಸಿಕೊಂಡಿರುವ ಬಗೆ ತುಂಬ ಗೋಜಲಿನಿಂದ

ಕೂಡಿದೆ. ಮೈಮೇಲಿನ ಅರಿವನ್ನು ಕಾಯ್ದಿರಿಸಿಕೊಂಡು ನುಡಿಯುವ ಶರತ್ತನ್ನು ಪಾಲಿಸಿದರೂ ಸಾಮಾಜಿಕ ನೆಲೆಯಲ್ಲಿ ನಮ್ಮ ನುಡಿಗಳು ದಿಟವೆಂಬ ಒಪ್ಪಿಗೆಯನ್ನು ಪಡೆಯದೆಯೂ ಹೋಗಬಹುದು. ನಮ್ಮ ಮಾತನ್ನು ಕೇಳಿಸಿಕೊಂಡವರು ಅದನ್ನು ತಪ್ಪಾಗಿ ತಿಳಿದುಕೊಳ್ಳುವ ಪ್ರಸಂಗಗಳನ್ನು ದಿನವೂ ನಾವು ಎದುರಿಸುತ್ತಿರುತ್ತೇವೆ. ಆದರೆ ದಿಟ ಸಟೆಗಳ ನಡುವಣ ಗಡಿಗೆರೆಗಳನ್ನು ನಮ್ಮ ಮಾತು ಗುರುತಿಸಿಕೊಳ್ಳಲಾಗದೇ ಹೋಗುವ ಪ್ರಸಂಗಗಳು ನಾವು ತಿಳಿದಿರುವುದಕ್ಕಿಂತಲೂ ಜಟಿಲವಾಗಿರುತ್ತವೆ. ಆಗಲೇ ಮಾತು ಮನುಷ್ಯನಿಗೊಂದು ಶಾಪ ಎನಿಸತೊಡಗುತ್ತದೆ.

# ಗುಂಪು ಹೆಸರುಗಳು

ನಾವು ದಿನವೂ ಬಳಸುವ, ಕೇಳುವ, ಓದುವ ನೂರಾರು ನಾಮಪದಗಳು ಹೇಗೆ ರೂಪುಗೊಂಡಿವೆ ಎಂಬ ಬಗೆಗೆ ಹೆಚ್ಚು ತಲೆಕೆಡಿಸಿಕೊಳ್ಳುವುದಿಲ್ಲ. ಅವುಗಳಲ್ಲಿ ಹಲವು ಲಾಗಾಯ್ತಿನಿಂದ ಬಳಕೆಯಲ್ಲಿರುತ್ತವೆ. ಹೆಚ್ಚು ಬದಲಾಗದೆ ಮುಂದೆ ಕೂಡ ಬಳಕೆಯಲ್ಲಿ ಉಳಿದುಕೊಳ್ಳುತ್ತವೆ. ಹಾಗಿಲ್ಲದೆ ಮತ್ತೆ ಕೆಲವು ಕಾಲಕಾಲಕ್ಕೆ ನಮ್ಮ ನುಡಿಯಲ್ಲಿ ಬಂದು ಸೇರಿಕೊಳ್ಳುತ್ತಿರುತ್ತವೆ. ಈ ನಾಮಪದಗಳಲ್ಲಿ ಹೆಸರುಗಳದ್ದು ಒಂದು ಬಗೆ. ಹೆಸರುಗಳಲ್ಲೂ ಹಲವು ಬಗೆಗಳಿರುತ್ತವೆ. ಈ ಟಿಪ್ಪಣಿಯ ನಿಟ್ಟಿನಲ್ಲಿ ಗುಂಪು ನಾಮಗಳನ್ನು ಕುರಿತಷ್ಟೆ ಇಲ್ಲಿ ಚರ್ಚಿಸಲಾಗುತ್ತದೆ. ಹಲವು ವ್ಯಕ್ತಿಗಳನ್ನು ಒಂದೇ ಹೆಸರಿನಿಂದ ಗುರುತಿಸುವುದು ಈ ಗುಂಪು ನಾಮಗಳ ಕೆಲಸ. ಉದಾ. ರಾಜಕಾರಣಿ, ದಲ್ಲಾಳಿ, ಆತಂಕವಾದಿ, ಉಗ್ರವಾದಿ, ಭ್ರಷ್ಟ, ದೇಶಪ್ರೇಮಿ ಇತ್ಯಾದಿ. ಈ ಎಲ್ಲ ನಾಮಪದಗಳಿಗೂ ಬಹುವಚನ ರೂಪಗಳಿವೆ. ಇವುಗಳಲ್ಲಿ ಕೆಲವು ವ್ಯಕ್ತಿಗಳನ್ನು ಗುರುತಿಸಲು ಬಳಕೆಯಾಗುವಂತಿದ್ದರೆ, ಮತ್ತೆ ಕೆಲವು ವ್ಯಕ್ತಿಗಳ ಗುಣಸ್ವಭಾವವನ್ನು ನಿರೂಪಿಸಲು ಬಳಕೆಯಾಗುತ್ತವೆ.

ಭಾಷಾ ಸಮುದಾಯಗಳು ಈ ಗುಂಪು ನಾಮಗಳನ್ನು ಬಳಸುವ ವಿಧಾನವನ್ನು ಎಚ್ಚರಿಕೆಯಿಂದ ಗಮನಿಸುವ ಅಗತ್ಯವಿದೆ. ವ್ಯಕ್ತಿಯನ್ನು ಗುರುತಿಸಲು ಅಥವಾ ಬಣ್ಣಿಸಲು ಈ ನಾಮಪದಗಳನ್ನು ನಾವು ಬಳಸುತ್ತೇವೆ. ಗುರುತಿಸುವಾಗ ಆ ವ್ಯಕ್ತಿಯ ಚಹರೆಗಳಷ್ಟೇ ನಮಗೆ ಮುಖ್ಯವಾಗಿದ್ದರೆ, ಬಣ್ಣಿಸುವಾಗ ಆ ವ್ಯಕ್ತಿಯ ಬಗೆಗೆ ನಮಗೆ ಇರುವ ಅಭಿಪ್ರಾಯಗಳನ್ನು ಕೂಡ ಸೂಚಿಸುತ್ತಿರುತ್ತೇವೆ. ಈಚೆಗೆ ನಡೆದ ಘಟನೆಯೊಂದನ್ನು ಉದಾಹರಣೆಯನ್ನಾಗಿ ಗಮನಿಸಿ ಈ ಅಂಶವನ್ನು ಅರಿತುಕೊಳ್ಳಬಹುದು. ಬ್ರಿಟನ್‌ನ ಗ್ಲಾಸ್ಗೋನಲ್ಲಿ ನಡೆದ ಸ್ಫೋಟಯತ್ನವನ್ನು ವರದಿ ಮಾಡುತ್ತಿದ್ದ ಪತ್ರಿಕೆಗಳು, ಮತ್ತಿತರ ಮಾಧ್ಯಮಗಳು ಆ ಘಟನೆ ನಡೆದ ಜಾಗದಲ್ಲಿದ್ದವರ ಹೇಳಿಕೆಗಳನ್ನು ಪಡೆದುಕೊಳ್ಳತೊಡಗಿದ್ದವು. ಅಂತಹ ಹೇಳಿಕೆಗಳಲ್ಲಿ ಈ ಕೃತ್ಯಕ್ಕೆ ಕಾರಣರಾದ ವ್ಯಕ್ತಿಗಳನ್ನು ಕುರಿತು ಹೇಳುವಾಗ ಅವರು 'ಏಸಿಯನ್' ರೀತಿ ಕಾಣುತ್ತಿದ್ದರೆಂಬ ಮಾತುಗಳು ಹೆಚ್ಚಾಗಿ ಕೇಳಿ ಬರುತ್ತಿದ್ದವು. ಇಲ್ಲಿ 'ಏಸಿಯನ್' ಎಂಬ ಮಾತು ಕೇವಲ ಗುರುತಾಗಿ ಮಾತ್ರ ಬಳಕೆಯಾಗಿಲ್ಲ. ಜೊತೆಗೆ ಆ ವ್ಯಕ್ತಿಗಳ ಬಗೆಗೆ ನಿರೂಪಕರಲ್ಲಿ ಇರುವ ಅಭಿಪ್ರಾಯ, ಧೋರಣೆಗಳನ್ನೂ ಸೂಚಿಸುತ್ತಿರುವುದು ಸ್ಪಷ್ಟವಾಗಿದೆ. ಭಯೋತ್ಪಾದನೆಗೂ ಏಸಿಯಾ

ಖಂಡದ ಜನತೆಗೂ ನೇರವಾದ ಸಂಬಂಧವಿಲ್ಲದಿದ್ದರೂ, ಇಂತಹ ಬಳಕೆಗಳಲ್ಲಿ ಆ ಸಂಬಂಧ ತಾನೇ ತಾನಾಗಿ ನೆಲೆಗೊಂಡಿರುತ್ತದೆ.

ಗುಂಪು ನಾಮಪದಗಳು ಸಂಸ್ಕೃತಿಯಲ್ಲಿರುವ ವೈಸಾದೃಶ್ಯಗಳನ್ನು ಪ್ರಕಟಿಸುತ್ತವೆ. ಹರಿಜನ ಮತ್ತು ದಲಿತ ಎಂಬ ಎರಡು ಗುಂಪು ನಾಮಪದಗಳನ್ನು ಗಮನಿಸಿ. ಇವೆರಡರ ಚರಿತ್ರೆಯೂ ಕುತೂಹಲಕಾರಿಯಾಗಿದೆ. ಆದರೆ ಇವುಗಳ ಬಳಕೆಯಲ್ಲಿರುವ ವ್ಯತ್ಯಾಸ ಮಾತ್ರ ನಮ್ಮ ಸಾಮಾಜಿಕ ನೆಲೆಯಲ್ಲಿ ಆಗಿರುವ ಪಲ್ಲಟಗಳನ್ನು ಸ್ಪಷ್ಟವಾಗಿ ತೋರಿಸಿಕೊಡುತ್ತದೆ. ಈ ವ್ಯತ್ಯಾಸ ಎಲ್ಲಿಯವರೆಗೆ ಪ್ರಕಟಗೊಂಡಿದೆಯೆಂದರೆ ದಲಿತರನ್ನು ಹರಿಜನರೆಂದು ಕರೆಯುವುದು ಅಥವಾ ಹಾಗೆ ಗುರುತಿಸುವುದು ಕೆಲವೊಮ್ಮೆ ಗುರುತರವಾದ ಅಪರಾಧವೂ ಆಗಬಹುದು. ಇವುಗಳಲ್ಲಿ ಹರಿಜನ ಎಂಬುದು 'ಹೊರಗಿನವರ' ನಾಮಪದವಾದರೆ, ದಲಿತ ಎನ್ನುವುದು 'ಒಳಗಿನವರ' ನಾಮಪದವಾಗುತ್ತದೆ. ಹೀಗೆ ಈ ಗುಂಪು ನಾಮಪದಗಳಿಗಿರುವ ಬಣ್ಣಿಸುವ ನೆಲೆಯ ಲಕ್ಷಣಗಳನ್ನು ಕಿತ್ತುಹಾಕಲು ಕೆಲವು ಸಂಸ್ಕೃತಿಗಳು ಎಚ್ಚರದ ಹೆಜ್ಜೆಗಳನ್ನು ಇಡುವುದುಂಟು. ಉದಾಹರಣೆಗೆ ಅಮೆರಿಕದಲ್ಲಿ ನೀಗ್ರೋ (ಅಥವಾ ನಿಗ್ಗರ್) ಎಂಬ ಪದದ ಬದಲಿಗೆ ಬ್ಲ್ಯಾಕ್ ಎಂಬ ಪದ ಬಳಕೆಗೆ ಬಂದು, ಅದೂ ಸರಿಯಲ್ಲವೆಂದು ಅದರ ಬದಲಿಗೆ ಆಫ್ರಿಕನ್-ಅಮೆರಿಕನ್ ಎಂಬ ಪದ ಈಗ ಬಳಕೆಗೆ ಬಂದಿದೆ. ಇವೆಲ್ಲವೂ ಆಯಾ ಪದಗಳಿಗಿರುವ ಬಣ್ಣಿಸುವ ಗುಣವನ್ನು ಕಿತ್ತುಹಾಕಲು ನಡೆಸುವ ಪ್ರಯತ್ನಗಳಾಗಿವೆ. ಈ ಬದಲಾವಣೆಗಳಿಂದ ಸಮಾಜದಲ್ಲಿ ಅಂತಸ್ಥವಾಗಿರುವ ವೈರುಧ್ಯಗಳು ಇಲ್ಲವಾಗುತ್ತವೆಯೋ ಇಲ್ಲವೋ ಎಂಬುದು ಬೇರೆಯೇ ಪ್ರಶ್ನೆ.

ಗುಂಪು ನಾಮಗಳು ಯಾವಾಗಲೂ ಸೃಷ್ಟಿಯಾಗುತ್ತಿರುತ್ತವೆ. ಹೊಸ ಹೊಸ ಗುಂಪು ನಾಮಗಳನ್ನು ಒಂದು ಭಾಷಾ ಸಮುದಾಯ ರೂಪಿಸಿಕೊಂಡು ಬಳಕೆಗೆ ತಂದುಕೊಳ್ಳುತ್ತಿರುತ್ತದೆ. ಈ ಹೊಸ ಗುಂಪು ನಾಮಪದಗಳ ಹುಟ್ಟಿಗೆ ಭಾಷಿಕ ಕಾರಣಗಳಿಗಿಂತ ಸಾಮಾಜಿಕ ಕಾರಣಗಳೇ ಮುಖ್ಯವಾಗಿರುತ್ತವೆ. ಉಗ್ರ(ರು) ಎಂಬ ಗುಂಪು ನಾಮಪದವನ್ನೇ ನೋಡೋಣ. ಈ ನಾಮಪದ ಯಾರನ್ನು ಪ್ರತಿನಿಧಿಸುತ್ತದೆಂದು ಸ್ಪಷ್ಟ ಮಾತುಗಳಲ್ಲಿ ಹೇಳಲು ಸಾಧ್ಯವಿಲ್ಲ. ಒಂದು ಸಾಮಾಜಿಕ ಕೃತ್ಯವನ್ನು ಗಮನಿಸಿ ಅದಕ್ಕೆ ಕಾರಣರಾದವರನ್ನು ಉಗ್ರ(ರು) ಎಂದು ಸಾಮಾನ್ಯವಾಗಿ ಹೇಳಿ ಬಿಡುತ್ತೇವೆ ಅಥವಾ ಹಾಗೆ ಹೇಳುವುದನ್ನು ನಂಬುತ್ತೇವೆ. ಕಾರ್ಯ ಮತ್ತು ಕರ್ತೃಗಳ ನಡುವೆ ಬಿಡಿಸಲಾರದ ಸಂಬಂಧವಿದೆಯೆಂದು ಭಾವಿಸುತ್ತೇವೆ. ಏಕೆಂದರೆ ಇಂತಹ ಗುಂಪು ನಾಮಪದಗಳಿಗೆ ಇಂತಹ ಸಾಧ್ಯತೆ ಭಾಷಿಕವಾಗಿ ಲಭಿಸಿರುತ್ತದೆ. ಒಂದು ಸರಳ ಉದಾಹರಣೆಯನ್ನು ನೋಡಿ. ಕಳ್ಳ(ರು) ಎಂಬ ಗುಂಪು ನಾಮಪದ ಯಾರನ್ನು ಸೂಚಿಸುತ್ತದೋ ಆ ವ್ಯಕ್ತಿಯು(ಗಳು) ಈವರೆಗೆ ಮಾಡಿರುವ ಕೃತ್ಯಗಳ ಬಗೆಗೆ ಸೂಚನೆ ನೀಡುವ ಜೊತೆಗೆ ಆ ವ್ಯಕ್ತಿ(ಗಳು) ಮುಂದೆ ಮಾಡಲಿರುವ ಮತ್ತು ಮಾಡಬಹುದಾದ

ಕೆಲಸಗಳನ್ನು ಕುರಿತೂ ಕೂಡ ಸೂಚನೆ ನೀಡುತ್ತದೆ. ಅಂದರೆ ಕಳ್ಳ(ರು) ಎಂಬ ನಾಮಪದಕ್ಕೆ ಅರ್ಥ ಒದಗುವುದು ಭಾಷೆಯ ಮೂಲಕವೇ ಹೊರತು ಸಾಮಾಜಿಕ ನೆಲೆಯಲ್ಲಿ ಅಲ್ಲ.

ಗುಂಪು ನಾಮಪದಗಳ ಅರ್ಥ ಭಾಷಿಕವಾಗಿರುತ್ತದೆಯೇ ಹೊರತು ಅದಕ್ಕೆ ಲೋಕ ಸಂವಾದಿತ್ವವಿರುವುದಿಲ್ಲ ಎಂಬುದು ಬಹು ಮುಖ್ಯವಾದ ಸಂಗತಿ. ತೃತೀಯ ಜಗತ್ತಿನ ದೇಶ ಎನ್ನುವ ಗುಂಪು ನಾಮಪದವನ್ನೇ ಗಮನಿಸಿರಿ. ಯಾವ ದೇಶವೂ ತೃತೀಯ ಎಂಬ ಪಟ್ಟಿಗೆ ತಂತಾನೆ ಸೇರುವುದಿಲ್ಲ. ನಮ್ಮ ಸಂಕಥನಗಳಲ್ಲಿ ಅಂತಹ ದೇಶಗಳನ್ನು ನಾವು ಗುರುತಿಸಿ ಬಣ್ಣಿಸತೊಡಗುತ್ತೇವೆ. ಅಥವಾ ಆ ಬಗೆಯ ಸಂಕಥನಗಳನ್ನು ಪ್ರಶ್ನಾತೀತವೆಂಬಂತೆ ಒಪ್ಪಿಕೊಂಡು ವ್ಯವಹರಿಸುತ್ತೇವೆ. ನಕ್ಸಲ(ರು) ಎಂಬ ಇನ್ನೊಂದು ಗುಂಪು ನಾಮಪದವನ್ನು ಕೂಡ ಇದೇ ನೆಲೆಯಲ್ಲಿ ಗಮನಿಸಬಹುದು. ವಾಸ್ತವವಾಗಿ ಇರುವವರು ವ್ಯಕ್ತಿಗಳೇ ಆದರೂ ಅವರನ್ನು ಬಣ್ಣಿಸಲು ಹೊರ ಜಗತ್ತು ರೂಪಿಸಿಕೊಂಡಿರುವ ಗುಂಪು ನಾಮಪದವಿದು. ಆ ನಾಮಪದಕ್ಕೆ ತನ್ನದೇ ಆದ ಸಂಕಥನವನ್ನು ರೂಪಿಸಿಕೊಳ್ಳಲಾಗಿದೆ. ಮಾಧ್ಯಮಗಳು, ರಾಜ್ಯಶಕ್ತಿ ಈ ಸಂಕಥನದ ವ್ಯಾಪ್ತಿಯಲ್ಲಿ ಈ ನಾಮಪದವನ್ನು ಬಳಸುತ್ತಲೇ ಹೋಗುತ್ತದೆ. ವಾಸ್ತವದ ವ್ಯಕ್ತಿಗಳು ಅಪ್ರಸ್ತುತವಾಗುತ್ತಾರೆ ಅಥವಾ ಸಮಾಜದ ವ್ಯಕ್ತಮಧ್ಯಕ್ಕೆ ಅವರು ಎಂದೂ ದಕ್ಕುವುದೇ ಇಲ್ಲ.

ಭಾಷೆಯ ಲಕ್ಷಣಗಳನ್ನು ವಿವರಿಸುವವರು ಸಾಮಾನ್ಯವಾಗಿ ಭಾಷೆಯಲ್ಲಿರುವ ಪದಗಳಿಗೂ ಅವುಗಳ ಶಾಬ್ದಿಕ ರೂಪಗಳಿಗೂ ನೇರ ಸಂಬಂಧವಿಲ್ಲ ಎನ್ನುವುದನ್ನು ಗುರುತಿಸುತ್ತಾರೆ. ಮರ ಎಂಬ ಪದದಲ್ಲಿರುವ ಮ್ ಅ ರ್ ಅ ಎಂಬ ನಾಲ್ಕು ಧ್ವನಿಗಳಿಗೂ, ಆ ಧ್ವನಿಗಳ ಅನುಕ್ರಮಕ್ಕೂ ಆ ಪದ ಲೋಕದಲ್ಲಿ ಸೂಚಿಸುವ ಅರ್ಥಕ್ಕೂ ಯಾವ ನೇರ ಸಂಬಂಧವೂ ಇಲ್ಲ. ಅಲ್ಲದೆ ಆ ಧ್ವನಿಗಳು ನಾವು ಲೋಕದಲ್ಲಿ ಮರ ಎಂದು ಗುರುತಿಸುವ ವಸ್ತುವಿನ ಯಾವ ಅಂಶವನ್ನಾಗಲೀ ಅಂಗವನ್ನಾಗಲೀ ಸ್ವತಂತ್ರವಾಗಿ ಸೂಚಿಸಲಾರವು. ಅಂದರೆ ಮ್ ಎಂದರೆ ಬೇರು, ಅ ಎಂದರೆ ಕಾಂಡ, ರ್ ಎಂದರೆ ಕೊಂಬೆ ಎಂಬಿತ್ಯಾದಿಯಾಗಿ ಹೇಳಲು ಬರುವುದಿಲ್ಲ. ಆದರೆ ಈ ತರ್ಕ ಗುಂಪು ನಾಮಪದಗಳ ವಿಷಯಕ್ಕೆ ಬಂದಾಗ ನಿಲ್ಲುವುದಿಲ್ಲ. ಏಕೆಂದರೆ ಆ ಪದಗಳು ಲೋಕದಲ್ಲಿರುವ 'ಬೇರೆನನ್ನೋ' ಸೂಚಿಸುತ್ತಿರುವುದಿಲ್ಲ. 'ತಮ್ಮನ್ನು ತಾವೇ' ಸೂಚಿಸಿಕೊಳ್ಳುತ್ತಿರುತ್ತವೆ. ಆ ಪದಗಳಿಗೂ ಅವು ಸೂಚಿಸುವ ಅಥವಾ ಅವು ಸೂಚಿಸುತ್ತವೆ ಎಂದು ನಾವು ತಿಳಿದಿರುವ ಅರ್ಥಕ್ಕೂ ಬಿಡಿಸಲಾಗದ ಬಂಧವಿರುತ್ತದೆ. ಈ ನಿಟ್ಟಿನಲ್ಲಿ ಗಮನಿಸಿದಾಗ ಈ ಗುಂಪು ನಾಮಪದಗಳ 'ಮಂತ್ರ ಶಕ್ತಿ' (ಮಂತ್ರ ಹೇಗೆ ಬೇರೇನನ್ನೋ ಸೂಚಿಸದೆ ತನ್ನನ್ನು ಮಾತ್ರ ತಾನು ಸೂಚಿಸುತ್ತಿರುತ್ತದೋ ಹಾಗೆ) ಗೋಚರಿಸುತ್ತದೆ. ಭಾಷೆಯನ್ನು ಬಳಸುವವರು ತಮ್ಮ ನುಡಿಯ ಈ ಸಾಧ್ಯತೆಯ ಬಗೆಗೆ ಬಹುಮಟ್ಟಿಗೆ ಅರಿವನ್ನು ಪಡೆದಿರುವುದಿಲ್ಲ. ಹಾಗಾಗಿಯೇ ಅವರನ್ನು ವಿವಿಧ ಸಂಕಥನಗಳ ಜಾಲದಲ್ಲಿ ಸಿಲುಕಿಸುವುದು ಸುಲಭ. ಗುಂಪು ನಾಮಪದಗಳ ಈ ಜಾಲ ಸೋಜಿಗ, ಬಗೆದಷ್ಟೂ ಮುಗಿಯದು.

# ಪಾರಿಭಾಷಿಕ ಪದಗಳು

ಪ್ರತಿಯೊಂದು ತಜ್ಞವಲಯಕ್ಕೂ ಅದರದ್ದೇ ಆದ ಪಾರಿಭಾಷಿಕ ಪದಕೋಶವಿರುತ್ತದೆ. ಈ ಪದಗಳು ಸಾಮಾನ್ಯವಾಗಿ ಆ ವಲಯಕ್ಕೆ ಸಂಬಂಧಿಸಿದ ಬರೆಹ ಇಲ್ಲವೇ ಇನ್ನಿತರ ಸಂಕಥನಗಳಲ್ಲಿ ಬಳಕೆಯಾಗುತ್ತವೆ. ಆದರೆ ಕೆಲವೊಮ್ಮೆ ಒಂದು ವಲಯದ ಪಾರಿಭಾಷಿಕ ಪದಗಳು ಸಾಮಾನ್ಯ ಪದಕೋಶದೊಳಗೆ ಸರಿದು ಬರಲೂಬಹುದು. ಇಂಥ ಸಂಭವಗಳಿಗೆ ಭಾಷೆಯ ಬೆಳವಣಿಗೆಯಲ್ಲಿ ನಿದರ್ಶನಗಳು ದೊರಕುತ್ತವೆ. ಹೀಗೆ ಇನ್ನೊಂದು ವಲಯಕ್ಕೆ ದಾಟಿ ಬಂದಾಗ ಅವು ತಮ್ಮ ಮೂಲಾರ್ಥದ ಜತೆಗೆ ಇನ್ನಷ್ಟು ಅರ್ಥಚ್ಛಾಯೆಗಳನ್ನು ಪಡೆದುಕೊಂಡಿರುತ್ತವೆ.

ಕಂಪ್ಯೂಟರ್‌ಗಳಿಗೆ ಸಂಬಂಧಿಸಿದಂತೆ ಈಚೆಗೆ ಬಳಸಲಾಗುತ್ತಿರುವ ವೈರಸ್ ಎಂಬ ಪದವನ್ನೇ ನೋಡಿ. ವೈದ್ಯಕೀಯ ಕ್ಷೇತ್ರದಿಂದ ಈ ಪದ ಇಲ್ಲಿಗೆ ಬರುವಾಗ ತನ್ನ ಜತೆಗೆ ಇನ್ನೂ ಹತ್ತಾರು ಪದಗಳನ್ನು ಎಳೆದು ಎಂದಿದೆ. ಆ ಸಂಬಂಧದಲ್ಲಿ ಒಬ್ಬ ಕಂಪ್ಯೂಟರ್ ತಜ್ಞನ ಮಾತುಕತೆಯನ್ನು ಗಮನಿಸಿದರೆ ಆತ ಒಬ್ಬ ವೈದ್ಯನ ಪರಿಭಾಷೆಯನ್ನೇ ಬಳಸುತ್ತಿರುತ್ತಾನೆ. ಬಗೆಬಗೆಯ ವೈರಸ್ಸುಗಳು, ಅವುಗಳ ಕುಟುಂಬಗಳು, ಲಕ್ಷಣಗಳು, ನಿವಾರಣೋಪಾಯಗಳು, ಸಮರ್ಥ ಔಷಧಿಗಳು ಹೀಗೆ ಹತ್ತಾರು ಬಗೆಯಲ್ಲಿ ಇದೇ ಪರಿಭಾಷೆಯನ್ನು ಬಳಸಲಾಗುತ್ತದೆ.

ಹಾಗೆ ನೋಡಿದರೆ ಯಾವುದೇ ವ್ಯವಸ್ಥೆಯ ರೋಗಗ್ರಸ್ಥ ಸ್ಥಿತಿಯನ್ನು ಹೇಳಲು ವೈದ್ಯಕೀಯ ಪರಿಭಾಷೆಯನ್ನು ಬಳಸುವುದನ್ನು ಗಮನಿಸಬಹುದು. ಶಸ್ತ್ರಚಿಕಿತ್ಸೆ, ಜ್ವರ, ನಿಶ್ಯಕ್ತಿ, ರಕ್ತಹೀನತೆ, ಕ್ಯಾನ್ಸರ್, ಕ್ಷಯ, ಕುಂಠಿತ ಬೆಳವಣಿಗೆ, ರಕ್ತದಾನ ಹೀಗೆ ಇನ್ನೂ ಹಲವಾರು ರೂಪಗಳನ್ನು ಪಟ್ಟಿ ಮಾಡಬಹುದು.

ಮೇಲೆ ನೀಡಿದ ಚಿಕ್ಕ ನಿದರ್ಶನದಿಂದ ತಿಳಿಯುವ ಸಂಗತಿಗಳು ಇಷ್ಟು: 1. ನಾವು ಪರಿಭಾಷೆಯನ್ನು, ಪಾರಿಭಾಷಿಕ ಪದಗಳನ್ನು ರೂಪಿಸುವಾಗ ಹೊಸ ಪದಗಳನ್ನು ರೂಪಿಸುತ್ತಿರುವುದಿಲ್ಲ. ಬದಲಿಗೆ ಪ್ರಚಲಿತ ಪದಗಳಿಗೆ ಹೊಸ ಅರ್ಥ ಸಾಹಚರ್ಯವನ್ನು ನೀಡುತ್ತಿರುತ್ತೇವೆ. ಹೊಸ ಸಮಾಸಗಳನ್ನು ರಚಿಸಿ ಅವಶ್ಯವಿರುವ ಅರ್ಥವನ್ನು ಪಡೆಯುತ್ತಿರುತ್ತೇವೆ. 2. ಇದಕ್ಕಾಗಿ ನಾವು ಒಂದು ಜ್ಞಾನವಲಯದ ಪದಗಳನ್ನು ಇನ್ನೊಂದು ಜ್ಞಾನವಲಯಕ್ಕೆ ವರ್ಗಾಯಿಸಿಕೊಳ್ಳುತ್ತಿರುತ್ತೇವೆ. ಭಾಷಾಶಾಸ್ತ್ರದ ಪದಗಳನ್ನು ಸಾಹಿತ್ಯ ವಿಮರ್ಶೆಗೆ, ತತ್ವಶಾಸ್ತ್ರದ ಪದಗಳನ್ನು ಭೌತಶಾಸ್ತ್ರಕ್ಕೆ, ಜೀವಶಾಸ್ತ್ರದ ಪದಗಳನ್ನು

ಅರ್ಥಶಾಸ್ತ್ರಕ್ಕೆ, ಹೀಗೆ ಹಲವು ರೀತಿಯ ವರ್ಗಾವಣೆಗಳು ನಡೆಯುತ್ತಿರುತ್ತವೆ. ಇಂಥ ವರ್ಗಾವಣೆಗಳನ್ನು ಪರಿಕಲ್ಪನೆಗಳನ್ನು. ಎರವಲು ಪಡೆಯುವುದು ಎಂದು ಕರೆಯುವುದುಂಟು. ವಾಸ್ತವದಲ್ಲಿ ಸಂಭವಿಸುವುದು ಮೇಲೆ ಹೇಳಿದ ಪ್ರಕ್ರಿಯೆ. ಏಕೆಂದರೆ ಹೊಸ ಪರಿಸರದಲ್ಲಿ ವರ್ಗಾವಣೆಗೊಂಡ ಪದಕ್ಕೆ ಅವಶ್ಯವಿರುವ ಅರ್ಥವನ್ನು ನಾವೇ ಒದಗಿಸುತ್ತಿರುತ್ತೇವೆ. 3. ತಜ್ಞವಲಯದ ಪದಗಳನ್ನು ಸಾಮಾನ್ಯ ಪದಕೋಶಕ್ಕೆ ದಾಟಿಸುವುದು. ಇಂಥ ಸಂದರ್ಭಗಳಲ್ಲಿ ತಜ್ಞವಲಯದಲ್ಲಿ ಆ ಪದಕ್ಕೆ ವಾಚ್ಯ ಅರ್ಥ ಮಾತ್ರ ಇರುತ್ತದೆ. ಆದರೆ ಸಾಮಾನ್ಯ ಪದಕೋಶಕ್ಕೆ ಬಂದಾಗ ಆ ಪದಕ್ಕೆ ವಾಚ್ಯ ಅರ್ಥ ಮುಖ್ಯವಾಗುವುದಿಲ್ಲ. ಅದಕ್ಕೊಂದು ಲಕ್ಷಣಾರ್ಥ ಪ್ರಾಪ್ತವಾಗುತ್ತದೆ. ಅಂದರೆ ಆ ಪದ ತನ್ನ ಪಾರಿಭಾಷಿಕತೆಯನ್ನು ಕಳೆದುಕೊಳ್ಳುತ್ತದೆ. ಕ್ಯಾನ್ಸರ್ ಎಂಬ ಪದವನ್ನು ವೈದ್ಯನೊಬ್ಬ ಬಳಸಿದಾಗ ಅದಕ್ಕೆ ಒಂದು ನಿರ್ದಿಷ್ಟ ಗುಣಲಕ್ಷಣಗಳನ್ನುಳ್ಳ ರೋಗವೆಂಬ ಅರ್ಥ ಮುಖ್ಯವಾಗುತ್ತದೆ. ಆದರೆ ಬೇರೆ ಸಂಕಥನಗಳಲ್ಲಿ ಈ ಪದವನ್ನು ಬಳಸಿದಾಗ ಯಾವುದೇ ಅಪಾಯಕಾರಿಯಾದ, ಪರಿಹಾರವಿಲ್ಲದ ಬೆಳವಣಿಗೆ ಎಂಬ ಅರ್ಥ ಮಾತ್ರ ಬರುತ್ತದೆ. ಅಂದರೆ ಸಾಮಾನ್ಯ ಸಂಕಥನಗಳಿಗೆ ದಾಟಿದಾಗ ಆ ಪದದ ಪಾರಿಭಾಷಿಕತೆ ಲುಪ್ತವಾಗುತ್ತದೆ. ಪಾರಿಭಾಷಿಕ ಪದಗಳ ಈ ಚಲನಶೀಲತೆಯನ್ನು, ಅದರ ವಿಧಾನಗಳನ್ನು ಅಧ್ಯಯನ ಮಾಡುವುದು ಅವಶ್ಯಕ. ಏಕೆಂದರೆ ಒಂದು ಭಾಷೆಯ ಬೆಳವಣಿಗೆಯ ದಿಕ್ಕುಗಳು ಹಾಗೂ ಪ್ರವೃತ್ತಿಗಳು ಇದರಿಂದ ಗೋಚರವಾಗುತ್ತವೆ. ಸಾಂಸ್ಕೃತಿಕ ಪಲ್ಲಟಗಳನ್ನು ಈ ಅಧ್ಯಯನದಿಂದ ಅರಿತುಕೊಳ್ಳುವುದು ಸಾಧ್ಯವಾಗುತ್ತದೆ. ಯಾವುದೇ ತಜ್ಞವಲಯ ತನ್ನ ಪರಿಭಾಷೆಗಾಗಿ ಇನ್ನೊಂದು ತಜ್ಞವಲಯವನ್ನು ಆಶ್ರಯಿಸುವುದು ಏಕೆ? ಎರಡೂ ಶಿಸ್ತುಗಳ ಗ್ರಹಿಕೆಯ ವಿಧಾನದಲ್ಲಿ ಸಮಾನತೆ ಇರುವುದರಿಂದ ಹೀಗಾಗುತ್ತದೆ ಎನ್ನಬಹುದೆ? ಅದರಲ್ಲೂ ತತ್ವಶಾಸ್ತ್ರದ ಪರಿಭಾಷೆ ಇತರ ವೈಚಾರಿಕ ಸಂಕಥನಗಳನ್ನು ಪ್ರವೇಶಿಸಿರುವ ಕ್ರಮವನ್ನು ಗಮನಿಸಿದರೆ ಈ ಗ್ರಹಿಕೆಯ ಸಮಾನತೆಯ ಸಾಧ್ಯತೆಯನ್ನು ಅಲ್ಲಗಳೆಯುವುದಾಗದು. ಆದರೆ ಹೆಚ್ಚು ಕುತೂಹಲಕಾರಿಯಾದ ವರ್ಗಾವಣೆಯೆಂದರೆ ಸಾಮಾನ್ಯ ಪದಕೋಶದೊಳಗೆ ತಜ್ಞಪರಿಭಾಷೆ ಬಂದು ಸೇರುವುದು. ವಚನ ಚಳುವಳಿಯ ಸಂದರ್ಭದಲ್ಲಿ ಕನ್ನಡನಾಡಿನ ಹಲವು ವೃತ್ತಿಗಳಿಗೆ ಸೇರಿದ ಹಲವರು ವಚನಗಳನ್ನು ರಚಿಸುವಾಗ ತಮ್ಮ ವೃತ್ತಿಯ ಹಿನ್ನೆಲೆಯ ಪರಿಭಾಷೆಯನ್ನು ಸಾಮಾನ್ಯ ಪದಕೋಶದ ಭಾಗವನ್ನಾಗಿ ಮಾಡಿದ್ದಾರೆ. ಆ ಪದಗಳಿಗೆ ಅನ್ಯಾರ್ಥ ಸಾಧ್ಯತೆಗಳನ್ನು ತಂದಿದ್ದಾರೆ. ಇಲ್ಲೆಲ್ಲ ಲೋಕಗ್ರಹಿಕೆಗಾಗಿ ವೃತ್ತಿಯ ಪದಗಳ ಅರ್ಥ ಸಾಹಚರ್ಯವನ್ನು ಬಳಸಿಕೊಂಡಿರುವುದನ್ನು ಗಮನಿಸಬಹುದಾಗಿದೆ.

ಇಲ್ಲಿಯೂ ಕನ್ನಡದಲ್ಲಿ ಒಂದು ವಿಚಿತ್ರ ಪ್ರವೃತ್ತಿ ಇದೆ. ವೃತ್ತಿಗೆ ಸಂಬಂಧಿಸಿದ ಅರ್ಥವನ್ನು ಅಪೇಕ್ಷಿಸುವಾಗ ಕನ್ನಡದ ಪದಗಳನ್ನು ಬಳಸುತ್ತಾ, ವೃತ್ತಿಯ ಆಚೆಗೆ ಸಾಮಾನ್ಯ ಪದಕೋಶಕ್ಕೆ ದಾಟಿಸುವಾಗ ಅದೇ ಪದದ ಸಂಸ್ಕೃತ ರೂಪವನ್ನು ಬಳಸುವುದು ಈ ವಿಶಿಷ್ಟ ಪ್ರವೃತ್ತಿ. ಇದು ಎಲ್ಲ ಕಡೆಯೂ ಕಂಡುಬರುತ್ತದೆ ಎನ್ನಲಾಗದು. ಆದರೂ ಹಲವು ನಿದರ್ಶನಗಳನ್ನು ನೀಡುವುದು ಸಾಧ್ಯ.

# ಪದಗಳು ನೋಟುಗಳಂತೆ

ಭಾಷೆಯನ್ನು ಕುರಿತು ಚರ್ಚಿಸುವಾಗ ಬಳಕೆಯಾಗುವ ಎಷ್ಟೋ ಪದಗಳು ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿರುವುದು ಆಕಸ್ಮಿಕವಾಗಿರಲಾರದು. ಅದರಲ್ಲೂ ಪದಗಳನ್ನು ಕುರಿತು ಮಾತಾಡುವಾಗ ಈ ಬಗೆಯ ಪದಗಳು ಹೆಚ್ಚಾಗಿ ಕಾಣಸಿಗುತ್ತವೆ. ಪದಗಳು ಚಲಾವಣೆಗೆ ಬರುತ್ತವೆ ಅಥವಾ 'ಚಲಾವಣೆ'ಯಿಂದ ಮಾಯವಾಗುತ್ತವೆ. ಹೊಸಪದಗಳನ್ನು 'ಟಂಕಿಸು'ತ್ತಾರೆ. ಪದಗಳಿಗೆ ಒಂದು 'ಕೋಶ'ವಿರುತ್ತದೆ. ಅವುಗಳಿಗೆ 'ಅರ್ಥ'ವಿರುತ್ತದೆ. ತಪ್ಪು ಬಳಕೆಯಿಂದ ಪದಗಳ 'ಮೌಲ್ಯ' ಕುಗ್ಗುತ್ತದೆ. ಬೇರೆ ಭಾಷೆಗಳಿಂದ ಪದಗಳನ್ನು 'ಎರವಲು' ಪಡೆಯುತ್ತೇವೆ. ಲೇಖಕರಲ್ಲಿ 'ಪದಸಂಪತ್ತು' ಇರುವುದು. ಅಗತ್ಯ 'ಪದದಾರಿದ್ರ್ಯ'ದಿಂದ ಕೆಲವು ಬರೆಹಗಾರರು ನರಳುತ್ತಾರೆ. ಅವರ ಬರವಣಿಗೆಯಲ್ಲಿ ಪದಗಳನ್ನು 'ಪೋಲು' ಮಾಡುವುದು ಕಾಣುತ್ತದೆ. ಭಾಷೆಯ ಮೇಲಿನ ಪ್ರಭುತ್ವವನ್ನು ಅವರು 'ಗಳಿಸಿ'ಕೊಂಡಿದ್ದಾರೆ. ಪದಗಳ 'ದುಂದುಬಳಕೆ'ಯನ್ನು ಕುರಿತು ಮಾತನಾಡುತ್ತೇವೆ.

ಈ ಮೇಲಿನ ವಾಕ್ಯಗಳಲ್ಲಿ ಹಣಕಾಸು ವ್ಯವಹಾರಕ್ಕೆ ಸಂಬಂಧಿಸಿದ ಪದಗಳು ಭಾಷೆಯ ಬಳಕೆಯ ಸಂದರ್ಭದಲ್ಲಿ ಬಳಕೆಯಾಗಿರುವುದು ಆಕಸ್ಮಿಕವಲ್ಲ. ಹಿಂದೆ ರಾಜರುಗಳು ತಮ್ಮದೇ ಆದ ನಾಣ್ಯಪದ್ಧತಿಗಳನ್ನು ತಮ್ಮ ಮೊಹರುಗಳೊಡನೆ ಜಾರಿಗೆ ನೀಡುವಾಗ ಜೊತೆಯಲ್ಲಿ ತಮ್ಮ ಆಸ್ಥಾನವು ಮನ್ನಿಸುವ ಪ್ರಮಾಣ ಭಾಷೆಯನ್ನು ನಿರೂಪಿಸುವ ವೈಯಾಕರಣರನ್ನು ಆಸ್ಥಾನದಲ್ಲೇ ಇರಿಸಿಕೊಳ್ಳುತ್ತಿದ್ದರು. ನಡುಗನ್ನಡದ ಹಲವು ಕವಿಗಳು ದೇಶ ವರ್ಣನೆ ಮಾಡುವಾಗ ಆ ದೇಶದ ಜನರು ಭಾಷೆಯನ್ನು ಹೇಗೆ ಬಳಸುತ್ತಿದ್ದರು ಎಂಬುದನ್ನು ಸೂಚಿಸಲು ಬಹುಮಟ್ಟಿಗೆ ಒಂದೇ ಮಾದರಿಯ ಪದ್ಯಗಳನ್ನು ಬರೆದಿದ್ದಾರೆ. ಅಂತಹ ಒಂದು ಪದ್ಯದಲ್ಲಿ 'ಕೊಡೆ', 'ಜಡಿ', 'ಮಡಿ' ಮುಂತಾದ ಪದಗಳನ್ನು 'ಛತ್ರಿ', 'ಮಳೆ; 'ಶುಭ್ರತೆ' ಎಂಬ ಅರ್ಥದಲ್ಲಿ ಬಳಸುತ್ತಿದ್ದರೇ ಹೊರತು 'ಕೊಡುವುದಿಲ್ಲ', 'ಹೊಡೆ', 'ಸಾಯಿ' ಎಂಬ ಅರ್ಥದಲ್ಲಿ ಬಳಸುತ್ತಿರಲಿಲ್ಲ ಎಂದು ಹೇಳುತ್ತಾರೆ. ಇಲ್ಲಿನ ಜಾಣ್ಮೆ ಮಾತು ಹಾಗಿರಲಿ. ನಾಣ್ಯಗಳ ಮೌಲ್ಯವನ್ನು ರಾಜ ನಿಗದಿ ಮಾಡುವಂತೆ ಪದಗಳ ಅರ್ಥ ಮತ್ತು 'ಬಳಕೆಯ ಸಾಧ್ಯತೆ ಕೂಡ ಆತನ ರಾಜ್ಯಾಡಳಿತದಲ್ಲಿ ನಿಗದಿಯಾಗುತ್ತಿತ್ತು ಎನ್ನುವ ಸೂಚನೆ ಮಾತ್ರ ನಮಗೆ ಇಲ್ಲಿ ಮುಖ್ಯವಾಗುತ್ತದೆ.

ಕಾಗದದ ನೋಟುಗಳಿಗೂ ಭಾಷೆಯ ಪದಗಳಿಗೂ ಕೆಲವು ಸಮಾನ ಲಕ್ಷಣಗಳಿವೆ. ನೋಟುಗಳಿಗೆ ಏನು ಬೆಲೆ? ಅದರ ಮೇಲೆ ನೂರು ರೂಪಾಯಿ ಎಂದು ಬರೆದಿದ್ದರೆ

ಅದು ನೂರು ರೂಪಾಯಿ ಬೆಲೆಯುಳ್ಳದ್ದು ಎಂದುಕೊಳ್ಳುತ್ತೇವೆ. ಇದು ಸಾಂಕೇತಿಕ. ಆ ನೋಟಿನ ಬೆಲೆಗೆ ಸಾಟಿಯಾಗುವ ಯಾವ ಸಂಗತಿಯೂ ಆ ಕಾಗದದ ತುಂಡಿನಲ್ಲಿ ಇಲ್ಲ. (ಕುಸುಮಬಾಲೆಯಲ್ಲಿ ಟೀ ಕಾಯಿಸಿಕೊಳ್ಳಲು ರಾಣಿ ನೋಟುಗಳನ್ನು ಸುಡುವುದನ್ನು ನೆನಪಿಸಿಕೊಳ್ಳಿ) ಪದಗಳೂ ಹಾಗೆಯೇ. ಅವು ಪ್ರತಿನಿಧಿಸುವ ಅರ್ಥಕ್ಕೂ ಅ ಪದದಲ್ಲಿರುವ ಧ್ವನಿಗಳಿಗೂ ಯಾವ ಸಂಬಂಧವೂ ಇರುವುದಿಲ್ಲ. ಹಾಗೆ ಇದೆಯೆಂದು ನಾವು ನಂಬಿರುತ್ತೇವೆ. ನೋಟುಗಳಿಗೆ ಇರುವ ಮೌಲ್ಯ ವ್ಯಾವಹಾರಿಕವಾಗಿ ನಿಗದಿಗೊಂಡಂತೆ ತೋರಿದರೂ ಜೀವನಕ್ರಮದಲ್ಲಿ ಹಾಗಿರುವುದಿಲ್ಲ. ನೂರು ರೂಪಾಯಿ ನೋಟಿಗೆ ಒಬ್ಬ ವ್ಯಕ್ತಿ ಎಂಟು ಗಂಟೆ ದುಡಿಯಬೇಕಾಗಿ ಬಂದರೆ ಮತ್ತೊಬ್ಬ ವ್ಯಕ್ತಿ ಸುಮ್ಮನೆ ಒಂದು ಸಹಿ ಹಾಕಿದರೆ ಸಾಕಾಗಬಹುದು. ಅದರಿಂದ ಏನು ಕೊಳ್ಳಬಹುದು? ಒಬ್ಬ ವ್ಯಕ್ತಿ ವಾರಕ್ಕಾಗುವ ದಿನಸಿಯನ್ನು ಕೊಂಡರೆ ಮತ್ತೊಬ್ಬ ವ್ಯಕ್ತಿ ಬೆಳಗಿನ ಉಪಹಾರಕ್ಕೆ ಅದನ್ನು ಬಳಸಬಹುದು. ಪದಗಳೂ ಹೀಗೆಯೇ. ನಾವು ತಿಳಿದಂತೆ ಅವು ಎಲ್ಲರಿಗೂ ಎಲ್ಲ ಸಂದರ್ಭದಲ್ಲಿಯೂ ಒಂದೇ ಸಮನಾದ ಅರ್ಥವ್ಯವಸ್ಥೆಯನ್ನು ಕಾಯ್ದಿರಿಸಿಕೊಳ್ಳುವುದಿಲ್ಲ. ನಾವು ಪದಗಳನ್ನು ಏನನ್ನಾದರೂ ಹೇಳಲು ಬಳಸುವಂತೆ, ಕೇಳುವಾಗಲೂ ಬಳಸುತ್ತೇವೆ. ನೋಟುಗಳು ಹೀಗೆಯೇ. ವ್ಯಾರಿದಾಗ ನಮ್ಮ ಬಳಿ ಬರುತ್ತದೆ. ಅಥವಾ ನಮ್ಮಲ್ಲಿಲ್ಲದಿರುವುದನ್ನು ಪಡೆಯಬೇಕಾದರೆ ನಮ್ಮನ್ನು ಬಿಟ್ಟು ಹೋಗುತ್ತವೆ.

ನಮ್ಮ ಆಧುನಿಕ ಹಣಕಾಸಿನ ವ್ಯವಸ್ಥೆಯಲ್ಲಿ ಒಂದಕ್ಕಿಂತ ಹೆಚ್ಚು ಹಣಕಾಸು ಮಾದರಿಗಳು ಜೊತೆಜೊತೆಯಾಗಿ ಇರುತ್ತವೆ. ಈಗ ರೂಪಾಯಿ ವ್ಯವಸ್ಥೆಯೊಡನೆ ಡಾಲರ್ ಎಂಬ ನೋಟಿನ ವ್ಯವಸ್ಥೆ ಕೂಡ ಜಾರಿಯಲ್ಲಿದೆ. ಜಾಗತೀಕರಣದಿಂದಾಗಿ ನೀವು ನಿಮ್ಮ ರೂಪಾಯಿಗಳನ್ನು ಡಾಲರ್‌ಗಳನ್ನಾಗಿ ಮತ್ತು ಡಾಲರ್‌ಗಳನ್ನು ರೂಪಾಯಿಗಳನ್ನಾಗಿ ಬದಲಾಯಿಸಿಕೊಳ್ಳಬಹುದು. ಆದರೂ ರುಪಾಯಿಯ ಬೆಲೆಯನ್ನು ಡಾಲರ್ ಜೊತೆಗೆ ಹೋಲಿಸುವ ನಿರಂತರ ಕೆಲಸ ನಡೆಯುತ್ತಲೇ ಇರುತ್ತದೆ. ಇದು ನಮ್ಮ ಜೊತೆಗಿರುವ ಕನ್ನಡ ಮತ್ತು ಇಂಗ್ಲಿಶ್ ಪದಗಳ ಸಂಬಂಧಗಳಲ್ಲೂ ಕಾಣಿಸುತ್ತದೆ. (ಪ್ರಾಸಂಗಿಕವಾಗಿ ಗಮನಿಸಬೇಕಾದ ಸಂಗತಿಯೆಂದರೆ ಈಗ ಕಳೆದ ಶತಮಾನದ ನಡುಗಾಲದಿಂದ ಈಚೆಗೆ ನಮಗೆ ಬ್ರಿಟಿಶ್ ಇಂಗ್ಲಿಶ್‌ಗಿಂತ ಅಮೆರಿಕನ್ ಇಂಗ್ಲಿಶ್ ಮಾದರಿಯಾಗಿದೆ ಎನ್ನುವುದು ಗಮನಿಸಬೇಕು) ಕನ್ನಡ ಮಾತನಾಡುವಾಗ ಇಂಗ್ಲಿಶ್ ಪದಗಳನ್ನು ಬಳಸುವುದು ಕೇವಲ ಆಧುನಿಕತೆಯ ಸೂಚನೆ ಮಾತ್ರವಲ್ಲ; ಅದು ನಮ್ಮ ಅರ್ಥವ್ಯವಸ್ಥೆಯ ಆಯ್ಕೆ ಕೂಡಾ ಆಗಿದೆ. ಸುವರ್ಣ ವರಹಗಳನ್ನು ಬಳಸುತ್ತಿದ್ದಾಗ ಸಂಸ್ಕೃತಕ್ಕೂ, ಅಶ್ರಫಿಗಳನ್ನು ಬಳಸುತ್ತಿದ್ದಾಗ ಪರ್ಶಿಯನ್‌ಗೂ ಒಲುವೆ ತೋರಿಸಿದ ಕನ್ನಡ, ನೋಟುಗಳ ಈ ಕಾಲದಲ್ಲಿ ಇಂಗ್ಲಿಶಿನತ್ತ ಒಲಿದರೆ ಅಚ್ಚರಿಯೇನಿಲ್ಲ ಅಲ್ಲವೇ? ಮತ್ತೂ ನೋಡಿ. ನಮ್ಮ ದೇಶದ ಹಣಕಾಸಿನ ವ್ಯವಹಾರದ ಉನ್ನತ ಸ್ತರಕ್ಕೆ ಹೋದಂತೆಲ್ಲ ಅಲ್ಲಿ ಎಲ್ಲ ಲೆಕ್ಕಗಳನ್ನೂ ಡಾಲರ್‌ಗಳಲ್ಲಿ ಸೂಚಿಸುತ್ತಾರೆ. ನಮ್ಮ ಗ್ರಹಿಕೆಗಾಗಿ ಮಾಧ್ಯಮಗಳು ರೂಪಾಯಿಗೆ ಪರಿವರ್ತಿಸಿ ಕೊಡುತ್ತವೆ. ಇಂಗ್ಲಿಶಿನಿಂದ ಕನ್ನಡಕ್ಕೆ ಅಥವಾ ದೇಶೀಯ ಭಾಷೆಗಳಿಗೆ ಎಲ್ಲ ಮಾಹಿತಿಯನ್ನು ಅನುವಾದಿಸಿಕೊಡುವಂತೆ. (ಪ್ರಸಂಗವಶಾತ್ ನಮ್ಮ ದೇಶದ ಬಡವರನ್ನು ವ್ಯಾಖ್ಯಾನಿಸಲು ಡಾಲರ್ ಅನ್ನೇ ಬಳಸುತ್ತಾರೆ. ದಿನಕ್ಕೆ ಒಂದು

ಡಾಲರ್ ಕೂಡ ಸಂಪಾದಿಸಲು, ವೆಚ್ಚ ಮಾಡಲು ಅಲ್ಲ ಸಾಧ್ಯವಿಲ್ಲದವರು ಬಡವರು) ಇದೆಲ್ಲವೂ ಕನ್ನಡ ಮತ್ತು ಇಂಗ್ಲಿಶ್ ಭಾಷೆಗಳ ಸಂಬಂಧವನ್ನು ನೋಡಲು ಬೇರೊಂದು ಬಗೆಯ ಪರಿಕರಗಳನ್ನು ಒದಗಿಸುತ್ತವೆ.

ನೋಟಿನ ಮೇಲೆ ಮುದ್ರಿತವಾದ ಅದರ ಬೆಲೆ ಬದಲಾಗುವುದಿಲ್ಲವಾದರೂ ಅದರ ಸಾಮರ್ಥ್ಯ ಮಾತ್ರ ಯಾವಾಗಲೂ ಒಂದೇ ಆಗಿರುವುದಿಲ್ಲ. ಹಳೆಕಾಲದ ಜನರು ಗೊಣಗುವುದನ್ನು ಕೇಳಿದ್ದೇವೆ. ಆಗ ಕೈ ಚೀಲದಲ್ಲಿ ಹಣ ಒಯ್ದು ಗಾಡಿ ತುಂಬ ಸಾಮಗ್ರಿ ತರುತ್ತಿದ್ದೆ. ಈಗ ಗಾಡಿ ತುಂಬ ಹಣ ಒಯ್ದು ಕೈಚೀಲದಲ್ಲಿ ಸಾಮಗ್ರಿ ತರುವಂತಾಗಿದೆ ಎಂದು ಹಲುಬುತ್ತಾರೆ. ಭಾಷೆಯ ವಿಷಯದಲ್ಲೂ ಈ ಮಾತು ನಿಜ. ಸಂಪತ್ತನ್ನು ಯುದ್ಧದಲ್ಲಿ ನಾಶಮಾಡುವ ರಾಜನನ್ನು ಹೊಗಳುವ ಕಾವ್ಯದಲ್ಲಿ ಬಳಸುವ ಅಲಂಕಾರಿಕ ನೆಲೆಯ ವರ್ಣನೆಯಲ್ಲೂ ಪದಗಳು ನಿರರ್ಥಕವಾಗುತ್ತಿರುತ್ತವೆ. ಆದರೆ ಶಾಸನಗಳಲ್ಲಿ ಮತ್ತೆ ಮತ್ತೆ ಆವರ್ತವಾಗುವ ಒಂದೇ ಬಗೆಯ ವಿವರಗಳಲ್ಲಿ ಭಾಷೆಯ ಪದಗಳು ಕೇವಲ ಆಚರಣೆಗಳಾಗಿಬಿಡುತ್ತವೆ. ಈ ಮಾತು ಎಲ್ಲ ಕಾಲಕ್ಕೂ ನಿಜ. ಆಯಾ ಕಾಲದ ಅರ್ಥವ್ಯವಸ್ಥೆಯ ಸ್ವರೂಪ ಆಯಾಕಾಲದ ಭಾಷೆಯ ಸ್ವರೂಪವನ್ನು ಪ್ರಭಾವಿಸುತ್ತಿರುತ್ತದೆ. ಲೋಹದ ನಾಣ್ಯಗಳ ಬದಲು ಚರ್ಮದ ನಾಣ್ಯಗಳನ್ನು ತರಲು ಯೋಜಿಸಿದ ತುಘಲಕ್‌ನ ಪ್ರಯೋಗ ಗಮನಾರ್ಹ. ರಾಜರ ಇಂತಹ ಯತ್ನಗಳು ಭಾಷೆಯ ಪದಪದಾರ್ಥಗಳ ಸಂಬಂಧವನ್ನು ಮರು ರೂಪಿಸುತ್ತಿರುತ್ತವೆ. ಕಲ್ಯಾಣದಂತಹ ಮಹಾನಗರದ ಅರ್ಥವ್ಯವಸ್ಥೆಗೂ ಕಾಯಕ-ಜಂಗಮ-ದಾಸೋಹದಂತಹ ಪರಿಕಲ್ಪನೆಗಳಿಗೂ, ವಚನಗಳ ಭಾಷೆಗೂ ಇರುವ ಸಂಬಂಧವನ್ನು ನಾವು ಶೋಧಿಸಬೇಕಾಗಿದೆ. ಹಾಗೆ ನೋಡಿದರೆ ಕನ್ನಡ ಭಾಷೆಯ ಚರಿತ್ರೆಯನ್ನೇ ಈ ನಿಟ್ಟಿನಿಂದ ಪುನಾರಚಿಸಲು ಅವಕಾಶಗಳಿವೆ.

ಸದ್ಯದ ಸಂದರ್ಭವನ್ನು ನೋಡೋಣ. ಜಾಗತೀಕರಣದಿಂದಾಗಿ ದೇಶಿಯ ಭಾಷೆಗಳು ಆತಂಕವನ್ನು ಅನುಭವಿಸುತ್ತಿವೆ ಎಂಬ ಮಾತನ್ನು ದಿನವೂ ಕೇಳುತ್ತಿದ್ದೇವೆ. ಈ ಆತಂಕದ ಸ್ವರೂಪವೇನು? ಇದರ ಎಲ್ಲ ನೆಲೆಗಳನ್ನೂ ಇಲ್ಲಿ ಚರ್ಚಿಸಲು ಅವಕಾಶಗಳಿಲ್ಲ. ಆದರೆ ಕನ್ನಡದ ಬಳಕೆಗೂ ಜಾಗತಿಕ ಅರ್ಥವ್ಯವಸ್ಥೆಗೂ ಇರುವ ಒಂದೆರಡು ಸಂಬಂಧಗಳತ್ತ ಗಮನಹರಿಸಬಹುದು. ನೋಟುಗಳ ಕೊಳ್ಳುವ ಸಾಮರ್ಥ್ಯ ಕಡಿಮೆಯಾಗುತ್ತಾ ಹೋದಂತೆ ನಮ್ಮ ಭಾಷೆಯ ಬಳಕೆಯಲ್ಲಿ ಪದಗಳ ದುಂದು ಹೆಚ್ಚುತ್ತದೆ. ಅಥವಾ ಪದ-ಪದಾರ್ಥಗಳ ನಡುವೆ ತಾಳಮೇಳ ತಪ್ಪುತ್ತದೆ. ಜಾರ್ಜ್ ಆರ್ವೆಲ್ ಭಾಷೆಯ ಈ ಸಮಸ್ಯೆಯನ್ನು ಬೇರೊಂದು ಸಂದರ್ಭದಲ್ಲಿ ಗುರುತಿಸುತ್ತಾನೆ. ನೂರು ಮಾತಾಡಿದರೂ ಒಂದು ಮಾತಿನ ಕಿಮ್ಮತ್ತೂ ಅದಕ್ಕೆ ಸಿಗದಂತಿರುವುದೇ ಆ ಸಮಸ್ಯೆ. ಅಥವಾ ಉಗುರಲ್ಲಿ ಹೋಗುವುದಕ್ಕೆ ಕೊಡಲಿ ತೆಗೆದುಕೊಂಡಂತೆ ಅನಗತ್ಯವಾಗಿ ಪದಗಳನ್ನು ಬಳಸತೊಡಗುತ್ತೇವೆ. ನಮ್ಮ ಮಾಧ್ಯಮಗಳು ದಿನವೂ ನಮ್ಮೆದುರು ಮುದ್ರಣದಲ್ಲಿ, ಮಾತಿನಲ್ಲಿ ಸುರಿಯುವ ಮಾತುಗಳನ್ನು ಕಂಡಾಗ ಈ ಸಂಗತಿ ನಮಗೆ

ಸ್ಪಷ್ಟವಾಗುತ್ತದೆ. ಮಾತುಮಾತು, ಆದರೆ ಅದರ ತಿರುಳು ಮಾತ್ರ ಅಸ್ಪಷ್ಟ ಅಥವಾ ಹಾಗಿರಬೇಕೆಂಬುದೇ, ಅಂದರೆ ಹೇಳಬೇಕಿರುವುದನ್ನು ಗೊತ್ತಾಗದಂತೆ ಮುಚ್ಚಿಡುವುದೇ ಭಾಷೆಯ ಬಳಕೆಯ ಗುರಿಯಾಗಿಬಿಡುತ್ತದೆ.

ವಿಚಿತ್ರವೆಂದರೆ ಇಂತಹ ಸಂದರ್ಭಗಳಲ್ಲಿ ಹೀಗೆ ಭಾಷೆಯನ್ನು ಬಳಸುವವರು ಅದರ ಕೊರತೆಗಳನ್ನು ತಿಳಿದವರಾಗಿರುತ್ತಾರೆ. ಅದರಿಂದ ಹೊರಬರಲು ಬೇರೆಯ ಹುನ್ನಾರಗಳನ್ನು ಬಳಸುತ್ತಾರೆ. ಈ ಹುನ್ನಾರ ಕೂಡ ನಮಗೆ ಹಣಕಾಸಿನ ಪ್ರಪಂಚದಿಂದಲೇ ದೊರೆತದ್ದು. ಹಣದ ನೆರವಿನಿಂದ ಒಂದು ಭ್ರಾಮಕ ಜಗತ್ತನ್ನು ಸೃಷ್ಟಿಸಲು ಸಾಧ್ಯ. ಶೇರು ಮಾರುಕಟ್ಟೆ ಅಂತಹುದೊಂದು ಭ್ರಾಮಕ ಜಗತ್ತು. ಅಲ್ಲಿ ಒಂದೇ ದಿನ ಸಾವಿರಾರು ಕೋಟಿ ರೂಪಾಯಿಗಳು ಲಾಭ ನಷ್ಟ ಆಗಿರುವ ಮಾತನ್ನಾಡುತ್ತಾರೆ. ಆದರೆ ವಾಸ್ತವದಲ್ಲಿ ಯಾರಿಗೂ ಏನೂ ಆಗಿರುವುದಿಲ್ಲ (ಒಂದು ಕಾರ್ಖಾನೆಗೆ ಇಲ್ಲವೇ ಬಣವೆಗೆ ಬೆಂಕಿಬಿದ್ದಾಗ ಆಗುವ ನಷ್ಟದಂತೆ ಅಲ್ಲೇನೂ ಆಗಿರುವುದಿಲ್ಲ) ಅದು ಹಣದಿಂದಲೇ ಕಟ್ಟಿದ ಹಣದ ಜಗತ್ತು. ಭಾಷೆಯೂ ಇಂತಹುದೊಂದು ಬಳಕೆಗೆ ಈ ಕಾಲದಲ್ಲಿ ಸಿದ್ಧವಾಗುತ್ತದೆ. ಇದೇ ತಂತ್ರವನ್ನು ಬಳಸುತ್ತದೆ. ಪದಗಳು ಅರ್ಥದ ಕಡೆಗೆ ಕೇಳುಗ–ಓದುಗರನ್ನು ಸೆಳೆಯದೇ ತಮ್ಮ ಶಬ್ದಸ್ತರದ ಕಡೆಗೆ ಅವರ ಗಮನ ಸೆಳೆಯುತ್ತವೆ. ಇದು ಶಬ್ದಾಲಂಕಾರಗಳ ಕಾಲವಾಗಿಬಿಡುತ್ತದೆ. ಜಾಗತೀಕರಣದ ಕಾಲದಲ್ಲಿ ಭಾಷೆಗಳು ತಮ್ಮ ಅಂತಸ್ಥ ಮೌಲ್ಯವನ್ನು ಕುಗ್ಗಿಸಿಕೊಳ್ಳುವುದು ಅನಿವಾರ್ಯವೋ ಅಥವಾ ಅದನ್ನು ನಿವಾರಿಸಿಕೊಂಡು ಹೊಸ ಸಾಧ್ಯತೆಯತ್ತ ಪಯಣ ಹೊರಡುವ ಅವಕಾಶಗಳಿವೆಯೋ ಎಂಬುದನ್ನು ಪರಿಶೀಲಿಸಲು ಇದು ಸೂಕ್ತಕಾಲವಾಗಿದೆ.

# ಕನ್ನಡ ನುಡಿವ ಬಗೆ

ಕನ್ನಡ ಬರೆವಣಿಗೆಯನ್ನು ಕುರಿತು ಮಾತನಾಡುವವರು ಸಾಮಾನ್ಯವಾಗಿ 'ನಾವು ಆಡಿದಂತೆ ಬರೆಯುವವರು. ಇಂಗ್ಲಿಶ್‌ನವರಂತೆ 'ಆಡುವುದೊಂದು ಬರೆಯುವುದೊಂದು ಎಂಬಂತಲ್ಲ' ಎಂದು ಹೆಮ್ಮೆಯಿಂದ ಹೇಳಿಕೊಳ್ಳುವುದುಂಟು. ಇಂಗ್ಲಿಶಿನ ಸ್ಪೆಲ್ಲಿಂಗ್ ವ್ಯವಸ್ಥೆಯ ಬಗ್ಗೆ ಹಲವಾರು ಜೋಕುಗಳೂ ಚಾಲ್ತಿಯಲ್ಲಿವೆ. ಆ ಬಗ್ಗೆ ಅನ್ಯ ಭಾಷಿಕರಿರಲಿ ಇಂಗ್ಲಿಶ್ ಭಾಷಿಕರೇ ಹತ್ತಾರು ಜೋಕುಗಳನ್ನು ಪ್ರಚಾರಕ್ಕೆ ತಂದಿದ್ದಾರೆ. ಅದು ಹಾಗಿರಲಿ, ನಾವು ಕನ್ನಡಿಗರು ಆಡಿದಂತೆ ಬರೆಯುವವರೋ ಅಲ್ಲವೋ ಎಂಬುದು ನಮ್ಮನ್ನು ಹೆಚ್ಚು ಕಾಡಿಸುವ ಪ್ರಶ್ನೆಯಾಗಿಲ್ಲ. ಆದರೆ ಉಚ್ಚಾರಣೆಯ ದೋಷಗಳನ್ನು ಕುರಿತು ಮಾತನಾಡುವಾಗ ಪರೋಕ್ಷವಾಗಿ ಈ ಪ್ರಶ್ನೆ ಮುಂಚೂಣಿಗೆ ಬರುತ್ತದೆ. ಮಯೂರ ಓದುಗರಾದ ಕಾಸರಗೋಡಿನ ಡಾ. ನರೇಶ್ ಒಂದು ಪ್ರಶ್ನೆಯನ್ನು ಕೇಳಿದ್ದಾರೆ. 'ನವಿರು' ಮತ್ತು 'ನವುರು' ಎಂಬ ಪದಗಳಲ್ಲಿ ಯಾವುದನ್ನು 'ಮೆದು, ಸೂಕ್ಷ್ಮ, ತೆಳು' ಎಂಬ ಅರ್ಥದಲ್ಲಿ ಬಳಸಬೇಕು ಎಂಬುದು ಅವರ ಸಮಸ್ಯೆ. 'ನವುರು' ಎಂದೇ ಬರೆಯಬೇಕು (ಹಾಗೇ ಉಚ್ಚರಿಸಬೇಕು) ಎನ್ನುವುದು ಅವರ ಅಭಿಪ್ರಾಯ ಕೂಡ. ಅವರ ತರ್ಕ ಮತ್ತು ತೀರ್ಮಾನಗಳು ಸರಿ. ಆದರೆ ಸಮಸ್ಯೆ ಇಲ್ಲಿಗೆ ಮುಗಿಯಲಿಲ್ಲ. ಏಕೆಂದರೆ ನವಿರು ಎಂಬ ಪದಕ್ಕೆ 'ರೋಮ, ಕೂದಲು' ಎಂಬ ಅರ್ಥಗಳಿವೆಯೆಂಬುದು ನಿಜ. ಆದರೆ ನವುರು ಎಂಬ ಪದವನ್ನು ಕನ್ನಡಿಗರು ನವಿರು ಎಂದು ಉಚ್ಚರಿಸುತ್ತಾರೆ ಎಂಬುದೂ ಅಷ್ಟೇ ನಿಜ. ಕಿಟೆಲ್ ತನ್ನ ನಿಘಂಟಿನಲ್ಲಿ ಈ ಅಂಶವನ್ನು ದಾಖಲಿಸಿದ್ದಾನೆ. ಅಂದರೆ ಜನರು ತಾವು ನವಿರು (ಮೆದು, ಸೂಕ್ಷ್ಮ ಎಂಬ ಅರ್ಥದಲ್ಲಿ) ಎಂದು ಉಚ್ಚರಿಸುವ ಪದವನ್ನು ಹಾಗೆಯೇ ಬರೆಯುವುದು ಸರಿಯೋ ತಪ್ಪೋ?

ನಮ್ಮ ಉಚ್ಚಾರಣೆಗಳು ಬೇರೆ ಬೇರೆ ರೀತಿಯಲ್ಲಿ ಇದ್ದು ಅವುಗಳಲ್ಲಿ ಒಂದು ರೂಪವನ್ನು ಮಾತ್ರ ಬರೆವಣಿಗೆಯಲ್ಲಿ ಸರಿಯಾದುದು ಎಂದು ಪರಿಗಣಿಸುವ ವಿಧಾನಕ್ಕೆ ನಾವು ಕಟ್ಟು ಬಿದ್ದಿದ್ದೇವೆ. ಇದರಿಂದ ಹಲವು ಗೊಂದಲಗಳು ದಿನದಿನದ ಭಾಷಾ ಬಳಕೆಯಲ್ಲಿ ತಲೆದೋರುತ್ತಿವೆ. ಇನ್ನೂ ಕೆಲವು ಉದಾಹರಣೆಗಳನ್ನು ನೋಡೋಣ; ನಾಲಗೆ/ನಾಲಿಗೆ, ಉಸಿರು/ಉಸುರು, ಹಸಿರು/ಹಸುರು, ಜೊತೆ/ಜತೆ, ಕಡಮೆ/ಕಡಿಮೆ, ಬರಹ/ಬರೆಹ, ತಿಳಿವಳಿಕೆ/ತಿಳುವಳಿಕೆ, ನಡಾವಳಿ/ನಡವಳಿ (ಈ ಎರಡು ಪದಗಳಿಗೆ ಕೆಲವರು ಅರ್ಥ ವ್ಯತ್ಯಾಸವನ್ನು ಕಲ್ಪಿಸಿದರೂ ಹಲವರಲ್ಲಿ ಇವೆರಡೂ ಒಂದೇ ಆಗಿವೆ). ಶ್ಯಾಮ/ಶಾಮ.. ಪಟ್ಟಿ ಉದ್ದವಾಗಬಲ್ಲುದು. ಇಲ್ಲೆಲ್ಲಾ ನಾವು ಬೇರೆ ಬೇರೆಯಾಗಿ

ಉಚ್ಛರಿಸುವ ಹಾಗೆ ಬರೆಯುವುದಿಲ್ಲ ಅಥವಾ ಹಾಗೆ ಬರೆಯುವುದನ್ನು ಒಪ್ಪುವುದಿಲ್ಲ ಎಂಬುದನ್ನು ಗಮನಿಸಬೇಕು.

ಇದಲ್ಲದೆ ನಾವು ಉಚ್ಛರಿಸುವ ರೀತಿಯಲ್ಲೇ ಬರೆಯುವುದಿಲ್ಲ ಎನ್ನುವುದಕ್ಕೆ ಹಲವು ಉದಾಹರಣೆಗಳನ್ನು ನೀಡಬಹುದು. ಬರೆವಣಿಗೆಯಲ್ಲಿ ಮಾತ್ರ ನಾವು ಶ ಮತ್ತು ಷ ಗಳ ವ್ಯತ್ಯಾಸವನ್ನು ಉಳಿಸಿಕೊಂಡಿದ್ದೇವೆ. ಬಹುಪಾಲು ಕನ್ನಡಿಗರು ಇವೆರಡು ಧ್ವನಿಗಳನ್ನು ಒಂದೇ ರೀತಿ ಉಚ್ಛರಿಸುತ್ತಾರೆ. ಆದರೆ ಬರೆಯುವಾಗ ಮಾತ್ರ ನಿಷ್ಠೆಯಿಂದ ಆಯಾ ಧ್ವನಿ ಚಿಹ್ನೆಗಳನ್ನೇ ಬರೆಯಬೇಕೆಂಬ ಒತ್ತಾಯವಿರುತ್ತದೆ. ಪರ್ಶಿಯನ್ ಮತ್ತು ಅರಾಬಿಕ್ ಮೂಲದಿಂದ ಇಲ್ಲವೇ ಇಂಗ್ಲಿಶಿನಿಂದ ಪಡೆದುಕೊಂಡ ಕೆಲವು ಪದಗಳನ್ನು ನಾವು ಬರೆಯುವುದನ್ನು ಗಮನಿಸಿ. ಶರತ್ತು/ಷರತ್ತು. ಶೇಕ್/ ಷೇಕ್, ನೇಶನ್/ನೇಷನ್, ಭೇಶ್/ಭೇಷ್ ಇತ್ಯಾದಿ ಜೋಡಿಗಳಲ್ಲಿ ಯಾವುದು ಸರಿ? ವಾಸ್ತವವಾಗಿ ಮೂಲ ಪದಗಳಿಗೆ ನಾವು ನೀಡಿರುವ ಅಕ್ಷರಗಳಿವು. ಇದರಿಂದ ನಮ್ಮ ಬರೆಹದ ಆಯ್ಕೆಗೂ ಉಚ್ಚಾರದ ಆಯ್ಕೆಗೂ ನೇರ ಸಂಬಂಧವಿಲ್ಲ. ಹೀಗೆ ಬೇರೆ ಭಾಷೆಗಳಿಂದ ಪಡೆದುಕೊಂಡ ಪದಗಳನ್ನು ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ಉಚ್ಚರಿಸುವ ರೀತಿ ಮತ್ತು ಬರೆಯುವ ರೀತಿಗಳಲ್ಲಿ ವ್ಯತ್ಯಾಸಗಳಿವೆ. ಉತ್ತರ ಕರ್ನಾಟಕದವರು ವ್ಯಂಜನಾಂತ ಪದಗಳನ್ನು ಸ್ವರಾಂತವಾಗಿ ಬರೆಯುವುದನ್ನು (ಉದಾ"ಕಾಲೇಜ, ಹೋಟೆಲ, ವರ್ಕ್ಷ ಇತ್ಯಾದಿ) ಹಳೆಯ ಮೈಸೂರಿನವರು ಗೇಲಿ ಮಾಡುತ್ತಾರೆ. ಆದರೆ ವರು ಹಾಗೆ ಸ್ವರಾಂತವಾಗಿ ಬರೆದರೂ ಓದುವಾಗ ಆ ಪದಗಳನ್ನು ವ್ಯಂಜನಾಂತವಾಗಿ ಉಚ್ಛರಿಸುತ್ತಾರೆ ಎಂಬುದು ಬಹಳ ಜನರಿಗೆ ಗೊತ್ತಿಲ್ಲ. ಅಂದರೆ ಬರೆದಂತೆ ಉಚ್ಛರಿಸುವುದಿಲ್ಲ. ಅಥವಾ ಉಚ್ಛರಿಸುವಂತೆ ಬರೆಯುವುದಿಲ್ಲ.

ಹಳೆಯ ಮೈಸೂರಿನವರಿಗೆ ತಾವೇ ಹಾಗೆ ಒಂದು ರೀತಿ ಬರೆದು ಇನ್ನೊಂದು ರೀತಿ ಉಚ್ಛರಿಸುತ್ತಿರುವುದು ಗೊತ್ತಾಗುತ್ತಿಲ್ಲ. ಉದಾ. ಗೆ ಇಲ್ಲಿನ ಪತ್ರಿಕೆಗಳು ಮನಮೋಹನ್ ಸಿಂಗ್ ಎಂದು ಮುದ್ರಿಸಿದರೂ ನಾವು ಮನ್‌ಮೋಹನ್ ಸಿಂಗ್ ಎಂದೇ ಓದಿಕೊಳ್ಳುತ್ತೇವಲ್ಲವೇ?

ಇಂಗ್ಲಿಶಿನಲ್ಲಿ 'ಒ' ಅಕ್ಷರದಿಂದ ಮೊದಲಾಗುವ ಕೆಲವು ಪದಗಳನ್ನು ಕರಾವಳಿಯ ದಕ್ಷಿಣ ಭಾಗದವರು 'ಒ' ಧ್ವನಿಯೊಡನೆ ಉಚ್ಚರಿಸುತ್ತಾರೆ. ಉದಾ. ಒಕ್ಸೈಡ್. ಹಾಗೆಯೇ ಬರೆಯುವುದೂ ಉಂಟು. ಆದರೆ ಕರ್ನಾಟಕದ ಇತರ ಪ್ರದೇಶಗಳಲ್ಲಿ ಅಂತಹ ಪದಗಳನ್ನು 'ಆ; ಧ್ವನಿಯಿಂದ ಮೊದಲು ಮಾಡಿ ಬರೆಯುವ ವಾಡಿಕೆ ಇದೆ. ಇದೆಲ್ಲ ವಿವರಗಳನ್ನು ಹೇಳಿದ್ದರ ಉದ್ದೇಶವಿಷ್ಟೆ. ಕನ್ನಡದಲ್ಲೂ ಉಚ್ಚರಿಸುವುದು ಮತ್ತು ಬರೆಯುವುದು ಯಾವಾಗಲೂ ತಾಳೆಯಾಗುತ್ತಿರುವುದಿಲ್ಲ ಎಂಬುದನ್ನು ಸೂಚಿಸುವುದು. ಇದು ಕನ್ನಡದ ದೋಷ ಎಂದು ಹೇಳುತ್ತಿಲ್ಲ. ಬರೆವಣಿಗೆಯುಳ್ಳ ಎಲ್ಲ ಭಾಷೆಗಳಲ್ಲೂ ಇದೇ ಬಗೆಯ ಅಂತರ ಇರುತ್ತದೆ. ಕನ್ನಡವೂ ಇದಕ್ಕೆ ಹೊರತಾಗಿಲ್ಲ.

ಹೀಗಲ್ಲದೆ ಕೆಲವು ಪದಗಳಿಗೆ ಬೇರೆ ಬೇರೆ ರೂಪಗಳೂ ಬಳಕೆಯಲ್ಲಿ ಇರುವುದುಂಟು. ಇದು ಉಚ್ಚಾರಣೆ ಮತ್ತು ಬರೆವಣಿಗೆಯ ಅಂತರದ ಪ್ರಶ್ನೆಯಲ್ಲ. ಭಿನ್ನ ರೂಪಗಳು ಸಮಾನ ಅರ್ಥದಲ್ಲಿ ಬಳಕೆಯಾಗುತ್ತಿರುವ ಸಂದರ್ಭಗಳು ಹಲವಾರಿವೆ. ಡಾ. ನರೇಶ್ ಅವರೇ ಕೇಳುವಂತೆ 'ಆದ್ದರಿಂದ' ಮತ್ತು 'ಆದುದರಿಂದ' ಎಂಬ ರೂಪಗಳಲ್ಲಿ ಯಾವುದು ಸರಿ? ಇಲ್ಲಿ ಸರಿ ತಪ್ಪುಗಳನ್ನು ಗುರುತಿಸುವುದು ಮುಖ್ಯವಲ್ಲ. ಶಾಲಾ ಪುಸ್ತಕಗಳಲ್ಲಿ ಇವುಗಳಲ್ಲಿ ಯಾವುದು ಸರಿಯೋ ಆ ರೂಪಗಳನ್ನೇ ಬಳಸಬೇಕೆಂದು ಒತ್ತಾಯಿಸುವುದು ವಾಡಿಕೆಯಲ್ಲಿದೆ. ಆದರೆ ಇಂತಹ ಹತ್ತಾರು ನಿದರ್ಶನಗಳು ಕನ್ನಡದಲ್ಲಿ ಬದಲಾಗದೇ ಉಳಿಯುತ್ತವೆಂದೇ ತೋರುತ್ತವೆ. ಉದಾ. ಅನಂತರ/ನಂತರ, ಸದ್ಯ/ಸಧ್ಯ, ಅದಕ್ಕಾಗಿ/ಅದಕ್ಕೋಸ್ಕರ, ಮಧ್ಯಾಂತರ/ಮಧ್ಯಂತರ, ಕೋಟ್ಯಂತರ/ಕೋಟ್ಯಾಂತರ. ಕೌಶಲ/ಕೌಶಲ್ಯ. ಪ್ರಾಮುಖ್ಯ/ಪ್ರಾಮುಖ್ಯತೆ. ಏಕತೆ/ಐಕ್ಯತೆ, ಅಂತಹ/ಅಂಥ ಇತ್ಯಾದಿ. ಇವುಗಳಲ್ಲಿ ಕೆಲವು ತಪ್ಪು ರೂಪಗಳು ಎಂದು ತೋರಿಸುವುದು ಸುಲಭ. ಆದರೆ ಅವುಗಳನ್ನು ಬಳಕೆಯಿಂದ ಹೊರಹಾಕುವುದು ಅಷ್ಟು ಸುಲಭವಲ್ಲ.

ದಿನದಿನವೂ ಈ ಬಗೆಯ ಹೊಸ ಹೊಸ ಸಮಸ್ಯೆಗಳನ್ನು ಕನ್ನಡ ಬರೆವಣಿಗೆ ಎದುರಿಸುತ್ತಲೇ ಇದೆ. ಕೆಲವೊಮ್ಮೆ ಹೊಸ ನಾಮಪದಗಳನ್ನು ಅನ್ಯ ಭಾಷಾ ಮೂಲದಲ್ಲಿ ಓದಿದ್ದನ್ನು ಬರೆಯ ಬೇಕಾದಾಗ ಬೇರೆಬೇರೆಯವರು ಬೇರೆ ಬೇರೆ ರೀತಿಯಲ್ಲಿ ಬರೆಯುವುದುಂಟು. ಪತ್ರಿಕೆಗಳಲ್ಲಿ ಇದನ್ನು ಗಮನಿಸಬಹುದು. ಧರಂ ಸಿಂಗ್, ಧರ್ಮಸಿಂಗ್. ಬುಶ್/ಬುಷ್. ಶರಪೋವಾ/ಶರ್ಪೋೀವಾ. ಅನಾ/ಅನ್ಯಾ, ಮುಶ್ರಫ್/ಮುಶರಫ್. ಚೀನಾ/ಚೈನಾ (ಕೆಲವು ವರ್ಷಗಳ ಹಿಂದೆ ಚೀಣಾ ರೂಪ ಕೂಡ ಬಳಕೆಯಲ್ಲಿತ್ತು) ಇವೆಲ್ಲ ಈ ಬಗೆಯ ಬಳಕೆಗಳು. ಇವುಗಳಲ್ಲಿ ಎಷ್ಟೋ ಪದಗಳನ್ನು ಮೂಲಭಾಷೆಯಲ್ಲಿ ಹೇಗೆ ಉಚ್ಚರಿಸುತ್ತಾರೆ ಎಂಬುದನ್ನು ಕೇಳುವುದು ಕೂಡ ನಮಗೆ ಸಾಧ್ಯವಿರುವುದಿಲ್ಲ. ಹಾಗಾಗಿ ನಮ್ಮ ಭಾಷೆಯ ಬರೆಹ ರೂಪಗಳಲ್ಲಿ ವಿಕಲ್ಪಗಳು ಕಾಣತೊಡಗುತ್ತವೆ. ನಾವು ಇವೆಲ್ಲವನ್ನು ಒಪ್ಪಿಯೇ ನಮ್ಮ ಭಾಷೆಯನ್ನು ಬಳಸುವುದು ಅನಿವಾರ್ಯ ಮತ್ತು ಅಗತ್ಯವೆಂದು ತೋರುತ್ತದೆ.

ಕೊನೆಗೊಂದು ಮಾತು: ಮಾತಿನ ರೀತಿಯ ಮೇಲೆ ವ್ಯಕ್ತಿಯ ಸ್ಥಾನಮಾನಗಳನ್ನು ಗುರುತಿಸುವ ಪ್ರವೃತ್ತಿ ನಮ್ಮಲ್ಲಿ ಇನ್ನೂ ಎಷ್ಟು ಗಾಢವಾಗಿ ಬೇರು ಬಿಟ್ಟಿದೆ ಎನ್ನುವುದಕ್ಕೆ ಈಚಿನ ಒಂದು ನಿದರ್ಶನ ಇಲ್ಲಿದೆ. ಕ್ರಿಕೆಟ್ ಆಡಳಿತಗಾರ ಡಾಲ್ಮಿಯಾ ಅವರ ಬಗ್ಗೆ ಅವರ ವಿರೋಧಿ ಆಡಳಿತಗಾರರ ಟಿಪ್ಪಣಿ ಹೀಗಿದೆ. 'ಅವರು (ಡಾಲ್ಮಿಯಾ) ಕ್ರಿಕೆಟ್ ಎಂಬ ಪದವನ್ನು ಕಿರ್ಕೆಟ್ ಅಥವಾ ಕ್ರಿಕೇಟ್ ಎಂದು ಉಚ್ಚರಿಸುವವರು. ಇನ್ನು ಅದರ ಸ್ಪೆಲಿಂಗ್ ಅನ್ನು ಅವರಲ್ಲಿ ನಾನು ಕೇಳಿಲ್ಲ.' ಈ ಟಿಪ್ಪಣಿಯ ಹಿಂದಿರುವ ಧೋರಣೆಯನ್ನು ನಾವು ಸುಲಭವಾಗಿ ಸಂಗ್ರಹಿಸಬಹುದಾಗಿದೆ. 'ಸರಿಯಾಗಿ' ಉಚ್ಚರಿಸುವ ವ್ಯಕ್ತಿ 'ಸರಿಯಾಗಿ' 'ಯೋಚಿಸಬಲ್ಲರು' ಎಂಬುದೇ ನಮ್ಮಲ್ಲಿ ಪ್ರಚಲಿತವಾಗಿರುವ ಚಿಂತನೆಯಾಗಿದೆ. ಈ ಕುರಿತು ನಾವು ಇನ್ನಷ್ಟು ಚಿಂತಿಸುವ ಅಗತ್ಯವಿದೆ. ಈಚೆಗೆ

ಮುಖ್ಯಮಂತ್ರಿ ಧರ್ಮಸಿಂಗ್ ಅವರ ಕನ್ನಡವನ್ನು ಕುರಿತು ಪತ್ರಕರ್ತರೊಬ್ಬರು ಇದೇ ಬಗೆಯ ಟಿಪ್ಪಣಿ ಮಂಡಿಸಿದರು. 'ಹೀಗೆ (ಧರ್ಮಸಿಂಗ್ ಅವರಂತೆ) ಕನ್ನಡವನ್ನು ಮಾತನಾಡುವವರಿಂದ ಕನ್ನಡದ ಉದ್ಧಾರವನ್ನು ಹೇಗೆ ನಿರೀಕ್ಷಿಸುವುದು' ಎಂಬುದು ಅವರ ಚಿಂತೆಯಾಗಿತ್ತು. ಇಲ್ಲಿಯೂ 'ಸರಿಯಾಗಿ' ಕನ್ನಡವನ್ನು ಮಾತನಾಡುವವರು ಮಾತ್ರ ಕನ್ನಡಕ್ಕೆ 'ಸರಿಯಾದ ದಾರಿಯನ್ನು ತೋರಿಸಬಲ್ಲರು' ಎಂಬ ಚಿಂತನೆಯು ಬೇರುಬಿಟ್ಟಿದೆ. 'ಸರಿಯಾದ' ಎಂಬುದಕ್ಕೆ ಆಡುಮಾತಿನಲ್ಲಿ ಬೇರೆಂಯೇ ಅರ್ಥವಿದೆಯಲ್ಲವೇ?

## ಪದ–ಪದಾರ್ಥಗಳ ನಂಟು

ನಾವು ಯಾರೊಂದಿಗಾದರೂ ಮಾತಾಡುತ್ತಿದ್ದೇವೆ ಎಂದುಕೊಳ್ಳಿ. ಅವರಿಗೆ ನಾವು ಕಂಡದ್ದನ್ನೇನೋ ಹೇಳಬೇಕಿದೆ. ಆಗ 'ನಾವು ಕಂಡದ್ದನ್ನು' ತಿಳಿಸುವ ಬಗೆಯನ್ನು ನೋಡೋಣ. ನೀವು ಯಾರನ್ನೋ ನೋಡಿದ್ದೀರಿ. ಅವರು ಹೇಗಿದ್ದರೆಂಬುದನ್ನು ಹೇಳುವಾಗ ಅವರ ಎತ್ತರ, ಕೂದಲಿನ ಬಣ್ಣ, ತೊಗಲಿನ ಬಣ್ಣ, ನಡೆಯುವ ಬಗೆ ಹೀಗೆ ಅವರಿಗೆ 'ಸಂಬಂಧಪಟ್ಟ' ಒಂದು ಸಂಗತಿಯನ್ನು ಎತ್ತಿಕೊಂಡು ತಿಳಿಸುವುದು ಒಂದು ದಾರಿ. ಹಾಗೆ ಮಾಡುವ ಮೂಲಕ ನಾವು ಬಣ್ಣಿಸುತ್ತಿರುವ ಚಿತ್ರವನ್ನು ನಾವು ನಮ್ಮಲ್ಲೇ ಮತ್ತೆ ಕಟ್ಟಿಕೊಳ್ಳುತ್ತಿರುತ್ತೇವೆ. ಇದಲ್ಲದೆ ಇನ್ನೊಂದು ಹಾದಿಯನ್ನೂ ನಾವು ಹಿಡಿಯಬಹುದು. ಆಗ ನಾವು, ಆ ವ್ಯಕ್ತಿಯ ಚಹರೆಗಳನ್ನು ಬೇರೆ ಯಾವುದಕ್ಕೋ ಹೋಲಿಸತೊಡಗುತ್ತೇವೆ. ನಾವು ನೀಡುವ ಹೋಲಿಕೆಗಳನ್ನು ನಮ್ಮ ಬೇರೆ ಯಾವುದೋ ಅನುಭವದಿಂದ ಪಡೆದುಕೊಂಡಿರುತ್ತೇವೆ. ಉದಾಹರಣೆಗೆ ಅವರು ಕೂದಲನ್ನು ಬಿಟ್ಟಿರುವ ರೀತಿಯನ್ನು ಬೇರೆ ಯಾರೋ ಕೂದಲು ಬಿಟ್ಟಿರುವ ರೀತಿಯಂತಿದೆ ಎನ್ನಬಹುದು. ತೊಟ್ಟ ಉಡುಗೆಯ ಬಣ್ಣವನ್ನು ಹೇಳುವಾಗ, ಬೇರೆ ವಸ್ತುವಿನ ಬಣ್ಣದ ಹೋಲಿಕೆಯನ್ನು ಕೊಡಬಹುದು. ನೀಲಿ ಬಣ್ಣದ ಸೀರೆಯನ್ನು ಉಟ್ಟಿದ್ದರೆ 'ಆಕಾಶ ನೀಲಿ' ಎನ್ನಬಹುದು. ಈ ಬಗೆಯಲ್ಲಿ ನಾವು 'ಹೋಲಿಕೆ'ಗಳನ್ನು ಹುಡುಕಿ ಆ ಮೂಲಕ ನಾವು ಬಣ್ಣಿಸುತ್ತಿರುವ ವ್ಯಕ್ತಿಯ ಚಿತ್ರವನ್ನು ಮತ್ತೆ ಕಟ್ಟಿಕೊಡುತ್ತಿರುತ್ತೇವೆ. ಈ ಎರಡು ದಾರಿಗಳೂ ಬೇರೆ ಬೇರೆ. ಮೊದಲನೆಯದು ಮೂಲಸಂಗತಿಯೊಂದಿಗೆ 'ನಂಟನ್ನು ಹೊಂದಿರುವ' ವಿವರಗಳನ್ನು ನೆಮ್ಮಿದರೆ, ಎರಡನೆಯದು ಮೂಲ ಸಂಗತಿಯೊಂದಿಗೆ 'ಹೋಲಿಕೆಯನ್ನು ಹೊಂದಿರುವ' ವಿವರಗಳನ್ನು ನೆಮ್ಮುತ್ತದೆ.

ಈ ಎರಡು ಬಗೆಗಳು ನಾವು ಭಾಷೆಯ ಮೂಲಕ ಅನುಭವಲೋಕವನ್ನು ತೆರದಿಡುವ ಎರಡು ದಿಕ್ಕುಗಳನ್ನು ಹೇಳುತ್ತವೆ. ಒಂದು ಚಿಕ್ಕ ಪ್ರಯೋಗವನ್ನು ಮಾಡೋಣ. ಈ ಪ್ರಯೋಗವನ್ನು ಬೇರೆಬೇರೆ ಕಾರಣಗಳಿಗಾಗಿ ಮನಶ್ಶಾಸ್ತ್ರಜ್ಞರು ಬಳಸುತ್ತಾರೆ. ನಿಮ್ಮೆದುರು ಕುಳಿತು ಯಾರಾದರೂ 'ಮರ' ಎಂಬ ಪದವನ್ನು ಹೇಳಿದರು ಎಂದುಕೊಳ್ಳಿ. ಆಗ ನಿಮ್ಮ ಮನಸ್ಸಿನಲ್ಲಿ ಮೂಡುವ ಬೇರೆ ಪದಗಳ ಪಟ್ಟಿಯನ್ನು ಮಾಡಿ. ಈ ಪಟ್ಟಿಯಲ್ಲಿ ಎಲೆ, ಬೇರು, ಹಣ್ಣು, ನೆರಳು, ಕಾಯಿ, ಹಕ್ಕಿ, ಗೂಡು, ಸೌದೆ ಮುಂತಾದ ಪದಗಳಿರಬಹುದು. ಇವೆಲ್ಲವೂ ಒಂದಲ್ಲ ಒಂದು ಬಗೆಯಲ್ಲಿ 'ಮರ'ದೊಡನೆ **ನಂಟನ್ನು ಹೊಂದಿರುವ** ಪದಗಳೇ ಆಗಿವೆ. ಕೆಲವರ ಪಟ್ಟಿಯಲ್ಲಿ ನರ, ತರ, ಹರ, ಬರ,

ಪುರ ಮುಂತಾದ ಪದಗಳು ಇದ್ದಾವು. ಈ ಪದಗಳು 'ಮರ' ಪದದೊಡನೆ ನಂಟು ಹೊಂದಿವೆ. ಈ ನಂಟು ಮರ ಎಂಬ ಪದದ ದನಿ ರಚನೆಯ ನೆಲೆಯದ್ದು; ಮರ ಎಂಬ ಲೋಕದ ವಸ್ತುವಿಗೂ ಈ ಪದಗಳಿಗೂ ನಂಟಿಲ್ಲ. ಎಲ್ಲ ಪದಗಳಿಗೂ ಎರಡು ನೆಲೆಗಳಿರುತ್ತವೆ. ಒಂದು ದನಿಯ ನೆಲೆ, ಇನ್ನೊಂದು ತಿರುಳಿನ ನೆಲೆ. ಮರ ಪದ ಎಂಬುದು ಮ್, ಅ, ರ್ ಮತ್ತು ಅ ಎಂಬ ದನಿಗಳ ಗುಂಪು. ಹಾಗಾಗಿ ಅದು ದನಿಯ ನೆಲೆ. ಇದಲ್ಲದೆ ಮರ ಪದಕ್ಕೆ ಲೋಕದ ಯಾವುದೋ ಒಂದು ವಸ್ತುವನ್ನು ಇಲ್ಲವೇ ವಸ್ತು ಸಮೂಹವನ್ನು ಹೇಳುವ ತಿರುಳಿನ ನೆಲೆಯೂ ಇರುತ್ತದೆ. ನಾವು ಗಮನಿಸಿದ ಮೊದಲನೇ ಪಟ್ಟಿಯ ಪದಗಳು ತಿರುಳಿನ ನೆಲೆಯ ನಂಟನ್ನು ಹೇಳಿದರೆ, ಎರಡನೆಯ ಪಟ್ಟಿಯ ಪದಗಳು ದನಿಯ ನೆಲೆಯ ನಂಟನ್ನು ಹೇಳುತ್ತವೆ. ಹೇಗಿದ್ದರೂ ಇವೆರಡೂ ಮರದೊಡನೆ ನಂಟನ್ನು ಹೊಂದಿರುವ ಪದಗಳೇ ಆಗಿವೆ.

ಮರ ಪದದ ಬದಲು 'ಹಕ್ಕಿ' ಎಂಬ ಪದ ಹೇಳಿದಾಗ ನೆನಪಿಗೆ ಬರುವ ಪದಗಳ ಪಟ್ಟಿಯಲ್ಲಿ ರೆಕ್ಕೆ, ಪುಕ್ಕ, ಕೊಕ್ಕು,  ಗೂಡು ಇವು ಇರುವಂತೆ, ವಿಮಾನ, ತಾಯಿ, ಹಾಡು ಮುಂತಾದ ಪದಗಳು ಇರುತ್ತವೆ ಎಂದುಕೊಳ್ಳಿ. ರೆಕ್ಕೆ, ಗೂಡು ಇವೆಲ್ಲವೂ ಹಕ್ಕಿಯೊಡನೆ ನಂಟನ್ನು ಹೊಂದಿರುವ ಪದಗಳು. ಆದರೆ ವಿಮಾನ. ತಾಯಿ ಇವುಗಳಿಗೂ ಹಕ್ಕಿಗೂ ಇರುವ ಸಂಬಂಧ ಹೋಲಿಕೆಯ ನೆಲೆಯವು. ಅಂದರೆ ಹಾರುವಿಕೆ, ಮರಿಗಳನ್ನು ಸಾಕುವಿಕೆ ಮುಂತಾದ ಗುಣಗಳನ್ನು ಸಮಾನವಾಗಿ ಹೊಂದಿರುವುದನ್ನು ಅವಲಂಬಿಸಿ ಹಕ್ಕಿ/ವಿಮಾನ, ಹಕ್ಕಿ/ತಾಯಿ  ಈ ಜೋಡಿಗಳು ಮೈತಳೆಯುತ್ತವೆ. ಅಂದರೆ ಇವು ಹೋಲಿಕೆಯನ್ನು ನೆಮ್ಮಿಕೊಂಡಿವೆ.

ಭಾಷೆಯ ಮೂಲಕ ಲೋಕವನ್ನು ನೋಡುವ ಇಲ್ಲವೇ ಹೇಳುವ ಬಗೆಯಲ್ಲಿ ಇರುವ ಈ ಎರಡು ಹಾದಿಗಳು ಸಾಹಿತ್ಯದಲ್ಲಿ ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತವೆ. ಸಾಹಿತ್ಯದ ಭಾಷೆಯನ್ನು ಈ ನಿಟ್ಟಿನಿಂದ ನೋಡಿದಾಗ ಅದರಲ್ಲಿನ ಬಣ್ಣನೆಗಳು ಹೀಗೆ ನಂಟು ಇಲ್ಲವೇ ಹೋಲಿಕೆಯನ್ನು ತಳಹದಿಯನ್ನಾಗಿ ಪಡೆದಿರುತ್ತವೆ  ಎಂಬುದನ್ನು ಗುರುತಿಸಲಾಗಿದೆ. 'ಶ್ರೀವಧುವಿನಂಬಕ ಚಕೋರಕಂ ಪೊರೆಯೆ ಭಕ್ತಾವಳಿಯ ಹೃತ್ಕುಮುದ ಕೋರಕಂ ಬಿರಿಯೆ ..' ಎಂದು ಮೊದಲಾಗುವ ಲಕ್ಷ್ಮೀಶನ ಬಣ್ಣನೆಯನ್ನು ನೋಡಿ. ಅಂಬಕ(=ಕಣ್ಣು)ವನ್ನು ಚಕೋರ ಪಕ್ಷಿಗೆ ಮತ್ತು ಹೃದಯವನ್ನು ಕುಮುದಕ್ಕೆ ಹೋಲಿಸಲಾಗಿದೆ. ಆದರೆ ಚಕೋರಕ ಮತ್ತು ಕೋರಕ ಪದಗಳನ್ನು ಜೋಡಿಸುವಾಗ ಆ ಪದಗಳ ದನಿನೆಲೆಯ ನಂಟಿನ ಸಂಬಂಧವನ್ನು ಕವಿ ಗುರುತಿಸಿದ್ದಾನೆ. ಇಲ್ಲಿ ಎರಡೂ ನೆಲೆಯ ಜೋಡಣೆಗಳು ಬಳಕೆಯಾಗಿವೆ. ಇರುಳು ಕಾಳಗದಲ್ಲಿ ಬಂದ ರಕ್ಕಸನ ಬಾಗಿದ ಕೋರೆದಾಡೆಗಳು 'ಕಾರಿರುಳ ಪಟ್ಟಣಕ್ಕೆ ಬಿಗಿದು ಕಟ್ಟಿದ ಚಂದ್ರತೋರಣ'ದಂತಿತ್ತು ಎಂದು ಕುಮಾರವ್ಯಾಸ ಬಣ್ಣಿಸಿದ್ದಾನೆ. ಇಲ್ಲಂತು ಹೋಲಿಕೆಯ ಸಂಬಂಧವೇ ಮೇಲುಗೈ ಪಡೆದಿದೆ. ಇಲ್ಲವಾದರೆ ಬಿಳಿಯ ಬಣ್ಣದ ಬಾಗಿದ ಕೋರೆದಾಡೆಗಳಿಗೂ ಚಂದ್ರನಿಗೂ ಸಂಬಂಧ ಎಲ್ಲಿಯದು?

ನಂಟಿನ ಸಂಬಂಧವನ್ನು ಹುಡುಕುವ ಬಗೆಯನ್ನು ಹೆಣ್ಣು ನೆಲೆಯೆಂದೂ, ಹೋಲಿಕೆಯ ಸಂಬಂಧವನ್ನು ಹುಡುಕುವ ಬಗೆಯನ್ನು ಗಂಡು ನೆಲೆಯೆಂದೂ ಹೇಳುವುದುಂಟು. ಈ ಮಾತನ್ನು ಎಚ್ಚರಿಕೆಯಿಂದ ನೋಡಬೇಕು. ಇಲ್ಲದಿದ್ದರೆ ತಪ್ಪು ತಿಳುವಳಿಕೆಯಾಗಬಹುದು. ಭಾಷೆಯಲ್ಲಿ ಹೆಣ್ಣು ಮತ್ತು ಗಂಡು ಎಂಬ ನೆಲೆಗಳಿವೆ ಎನ್ನುವುದನ್ನು ಮೊದಲು ಒಪ್ಪಬೇಕು. ಅಂದರೆ ಲೋಕಗ್ರಹಿಕೆಯಲ್ಲಿ ಇರುವ ಬೇರೆಬೇರೆ ಬಗೆಗಳನ್ನು ಹೀಗೆ ಹೆಣ್ಣು ಮತ್ತು ಗಂಡು ಎಂದು ಬೇರೆ ಮಾಡಿ ನೋಡುವುದುಂಟು. ಆದರೆ ಇದು ಹೆಂಗಸು ಮತ್ತು ಗಂಡಸು ಎಂಬ ನೆಲೆಯ ವಿಭಜನೆಯಲ್ಲ. ಹೆಣ್ಣುನೆಲೆಯ ಗ್ರಹಿಕೆ ಹೆಂಗಸು ಮತ್ತು ಗಂಡಸು ಇವರಿಬ್ಬರ ಭಾಷೆಯಲ್ಲೂ ಕಾಣಿಸಿಕೊಳ್ಳಬಹುದು. ಹಾಗೆಯೇ ಗಂಡುನೆಲೆಯ ಗ್ರಹಿಕೆಗಳು ಕೂಡ ಈ ಇಬ್ಬರ ಭಾಷೆಯಲ್ಲಿ ಇರುವುದು ಸಾಧ್ಯ. ಹೆಣ್ಣುನೆಲೆಯ ಭಾಷೆಯಲ್ಲಿ ಬಣ್ಣನೆಗಳು ಹೆಚ್ಚಾಗಿ ನಂಟನ್ನು ನೆಮ್ಮಿಕೊಂಡಿರುತ್ತವೆ. ಗಂಡುನೆಲೆಯ ಭಾಷೆಯಲ್ಲಿ ಬಣ್ಣನೆಗಳು ಹೆಚ್ಚಾಗಿ ಹೋಲಿಕೆಯನ್ನು ನೆಮ್ಮಿಕೊಂಡಿರುತ್ತವೆ.

ಒಂದು ಪ್ರಸಂಗವನ್ನು ಬಣ್ಣಿಸುವಾಗ ಆ ಪ್ರಸಂಗದ ನೆನೆಪು ಹಾರದಂತೆ ಅದಕ್ಕೆ ಸಂಬಂಧಿಸಿದ ಬೇರೆಬೇರೆ ಮಾಹಿತಿಗಳನ್ನು ಮಂಡಿಸುತ್ತ ಹೋಗುವ ಮಾದರಿಯನ್ನು ಗಮನಿಸಿ. ಇದು ಚುಕ್ಕಿಗಳನ್ನು ಇರಿಸಿ ರಂಗೋಲಿಯ ಗೆರೆಗಳನ್ನು ಎಳೆಯುತ್ತ ಹೋದಂತೆ. ಚುಕ್ಕಿಗಳನ್ನು ಇಡುವಾಗಲೇ, ಬಿಡಿಸಬೇಕಾದ ರಂಗೋಲಿಯ ಗೆರೆ ಹಾಗೂ ಅದರ ಆಕಾರ ಬಿಡಿಸುವವರ ಎದುರು ಇರುತ್ತದೆ. ಆ ಚಿತ್ರಕ್ಕೆ ಕುಂದಾಗದಂತೆ ಎಲ್ಲ ಗೆರೆಗಳನ್ನು ಬಿಡಿಸುತ್ತ, ಕಣ್ಮರೆಯಲ್ಲಿದ್ದ ಚಿತ್ತಾರ ಕಣ್ಣೆದುರು ಬರುವಂತೆ ಮಾಡಲಾಗುತ್ತದೆ. ಹೀಗಾಗಿ ಇದನ್ನು ಹೆಣ್ಣುನೆಲೆಯೆಂದು ಕರೆಯಲಾಗಿದೆ.

ಬದಲಿಗೆ ಒಂದು ಪ್ರಸಂಗವನ್ನು ಬಣ್ಣಿಸುವಾಗ ಆ ಪ್ರಸಂಗವನ್ನು ಎಲ್ಲಿಯೂ ನೇರವಾಗಿ ಹೇಳದೆ ಬೇರೆ ಏನನ್ನೋ ಹೇಳುತ್ತ, ಹಾಗೆ ಹೇಳುತ್ತಿರುವುದಕ್ಕೂ ಮತ್ತು ಹೇಳಬೇಕಾಗಿರುವುದಕ್ಕೂ ಇರುವ ಹೋಲಿಕೆಯನ್ನು ಮಾತ್ರ ನಾವು ಗಮನಿಸುವಂತೆ ಮಾಡುವುದು ಇನ್ನೊಂದು ಬಗೆ. ರೂಪಕಗಳನ್ನು ಕಟ್ಟುವವರು ಈ ಹಾದಿಯಲ್ಲಿರುತ್ತಾರೆ. ಇವರು ಒಂದರ ಬದಲು ಇನ್ನೊಂದನ್ನು ಹೇಳುವ ಮೂಲಕ, ಒಂದರ ಮೂಲಕ ಇನ್ನೊಂದನ್ನು ನೋಡಲು ಹೇಳುತ್ತಾರೆ. ಇದು ಯಾವಾಗಲೂ ಇಬ್ಬಗೆಯಲ್ಲಿ ಕೆಲಸ ಮಾಡುತ್ತದೆ. 'ದಿಗುತಟದಲ್ಲಿ ಕಣ್ತೆರೆಯುತ್ತಿತ್ತು ಹಗಲಿನಕ್ಕಿ' ಎನ್ನುವ ಸಾಲನ್ನು ನೋಡಿ. ಇದು ಸೂರ್ಯೋದಯದ ಬಣ್ಣನೆ ಎನ್ನೋಣ. ಹಗಲಾದದ್ದು ಹಕ್ಕಿ ನಿದ್ರೆಯಿಂದ ಕಣ್ತೆರೆದ ಹಾಗೆ ಇತ್ತು ಎನ್ನೋಣವೇ, ಇಲ್ಲವೇ ಪಕ್ಷಿ ಕಣ್ತೆರೆದದ್ದು ಹಗಲಾದಂತೆ ಎನ್ನೋಣವೇ? ಅಕ್ಷಿ ಮತ್ತು ಪಕ್ಷಿ ಪದಗಳ ದನಿನೆಲೆಯ ಸಂಬಂಧವನ್ನು ನೋಡಿ. ದಾಸರು ತಮ್ಮ ಕೀರ್ತನೆಗಳಲ್ಲಿ ಕೃಷ್ಣನ ಬಾಲ್ಯದ ಬಣ್ಣನೆಗಳನ್ನು ಮಾಡುತ್ತಾರಷ್ಟೆ. ಇಲ್ಲೆಲ್ಲಾ ಕೃಷ್ಣನಲ್ಲಿರುವ ಲೋಕಸಹಜ ಬಾಲಕನನ್ನು ಕಂಡರೋ ಅಥವಾ ಲೋಕ ಸಹಜ ಬಾಲಕರಲ್ಲಿರುವ ಕೃಷ್ಣನನ್ನು ಕಂಡರೋ? ರೂಪಕಗಳ ಜಗತ್ತು ಹೀಗೆ ಇಬ್ಬದಿಯ ತುಯ್ತಕ್ಕೆ ಒಳಗಾಗುತ್ತದೆ. ಈ ಬಗೆಯ ನುಡಿಬಳಕೆಯನ್ನು ಗಂಡುನೆಲೆಯೆಂದು ಗುರುತಿಸಲಾಗಿದೆ. ಏನೇ ಇರಲಿ ಈ ಎರಡು ಬಗೆಗಳು ನಮ್ಮನ್ನು ಮತ್ತಷ್ಟು ಹತ್ತಿರದಿಂದ ನುಡಿಯ ಬಳಕೆಯ ಲೋಕವನ್ನು ನೋಡಲು ಒತ್ತಾಯಿಸುತ್ತಿವೆ.

# ಪದ: ಅರ್ಥ ಮತ್ತು ಬಳಕೆ

ಒಂದೇ ಅರ್ಥವನ್ನುಳ್ಳ ಪದಗಳನ್ನು ಶಾಲಾ ವ್ಯಾಕರಣಗಳು ಸಮಾನಾರ್ಥಕ ಪದಗಳು ಎಂದು ಹೇಳುತ್ತವೆ. ಮಕ್ಕಳಿಗೆ ಭಾಷೆಯನ್ನು ಕಲಿಸುವಾಗ ಸಮಾನಾರ್ಥಕ ಪದಗಳನ್ನು ಹೇಳಿಕೊಡುವ ಪದ್ಧತಿ ಇದೆ. ಸಂಸ್ಕೃತ ಭಾಷೆಯಲ್ಲಿ ಹೀಗೆ ನಾಮಪದಗಳಿಗೆ ಸಮಾನಾರ್ಥಕ ಪದಗಳ ಪಟ್ಟಿಯನ್ನು ನೀಡುವ ಕೋಶವಿದೆಯಷ್ಟೆ. ಇದನ್ನು ಅಮರಕೋಶವೆನ್ನುತ್ತಾರೆ. ಅದನ್ನು ಬಾಯಿಪಾಠ ಮಾಡುವುದು ಸಂಸ್ಕೃತ ಭಾಷಾ ಕಲಿಕೆಯ ಭಾಗವಾಗಿತ್ತು. ಅದರಲ್ಲಿ ಒಂದು ನಾಮಪದಕ್ಕೆ ಸಮಾನವೆಂದು ಗುರುತಿಸಲಾದ ಪದಗಳನ್ನು ಪಟ್ಟಿ ಮಾಡಲಾಗಿದೆ. ಉದಾ.ಗೆ ಸೂರ್ಯ ಎಂಬ ಪದಕ್ಕೆ ಸಮಾನವಾಗಿ ರವಿ,ಭಾನು,ಆದಿತ್ಯ,ಮಾರ್ತಾಂಡ,ತರಣಿ ಹೀಗೆ ಹಲವು. ಕನ್ನಡದಲ್ಲೂ ಹೀಗೆ ನಾಮಪದಗಳಿಗೆ ಸಮಾನಾರ್ಥಕ ಪದಗಳನ್ನು ಗುರುತಿಸುವುದುಂಟು. ಆದರೆ ಇತರ ಪದವರ್ಗದ ಪದಗಳಿಗೆ ಹೀಗೆ ಸಮಾನಾರ್ಥಕ ಪದಗಳನ್ನು ಗುರುತಿಸಲು ಸಾಧ್ಯವೇ? ಉದಾ.ಗೆ ಗುಣಪದಗಳನ್ನು ನೋಡೋಣ. ಕೊಂಚ ಎಂಬ ಅರ್ಥ ನೀಡುವ ಹಲವಾರು ಪದಗಳನ್ನು ಕನ್ನಡಿಗರು ಬಳಸುತ್ತಾರೆ. ತುಸು, ಸ್ವಲ್ಪ, ಇಂಕರ, ರವಷ್ಟು, ಹನಿ, ತಟಕು, ವಸಿ, ಚೂರು, ತೊಟ್ಟು, ಚಿಟ್ಟು, ಚಿಟುಕು ಇತ್ಯಾದಿ. ಈ ಪದ ಪಟ್ಟಿಯನ್ನು ಓದುತ್ತಿರುವವರಲ್ಲಿ ಹಲವರು ಈಗಾಗಲೇ ಇವೆಲ್ಲವೂ ಸಮಾನಾರ್ಥಕಗಳಲ್ಲವೆಂದು ತಗಾದೆ ತೆಗೆಯುತ್ತಿರಬಹುದು. ಇವುಗಳಲ್ಲಿ ಕೆಲವು ಒಂದೊಂದು ಪ್ರದೇಶದಲ್ಲಿ ಬಳಕೆಯಾಗುತ್ತವೆ. ಆ ಪದ ಇನ್ನೊಂದು ಕಡೆಯ ಕನ್ನಡಿಗರಿಗೆ ತಿಳಿಯದೇ ಇರುವ ಸಾಧ್ಯತೆ ಇದೆ.

ಕ್ರಿಯಾಪದಗಳಲ್ಲಿ ಹೀಗೆ ಸಮಾನಾರ್ಥಕ ಪದಗಳು ಇರಬಹುದೇ? ಒಂದೇ ಕ್ರಿಯೆಯನ್ನು ವಿವರಿಸಲು ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳನ್ನು ನಾವು ಬಳಸುತ್ತೇವೆಯೇ? 'ಊಟ ಬಡಿಸು' ಎಂಬ ವಾಕ್ಯದಲ್ಲಿ ಇರುವ ಕ್ರಿಯಾಪದವನ್ನು ನೋಡಿ. ಇದಕ್ಕೆ ಬದಲಾಗಿ ಇಕ್ಕು,ನೀಡು,ಇಡು,ಹಾಕು,ಕೊಡು ಮುಂತಾದ ಪದಗಳನ್ನು ಬಳಸಬಹುದು. ಇವುಗಳಿಗೆ ಬೇರೆ ಬೇರೆ ಸಂದರ್ಭದ ಬಳಕೆಯಿದೆ. ಅಂದರೆ ಅವುಗಳ ನಡುವೆ ಸೂಕ್ಷ್ಮವಾದ ವ್ಯತ್ಯಾಸಗಳಿವೆ. ಅಲ್ಲದೆ ಕೆಲವು ಪದಗಳನ್ನು ಎಲ್ಲಕಡೆಯೂ ಬಳಸುವುದಿಲ್ಲ. ಹಾಗೆ ನೋಡಿದರೆ ಸಮಾನಾರ್ಥಕ ಪದಗಳೆಂಬ ಪರಿಕಲ್ಪನೆಯೇ ಸರಿಯಿಲ್ಲವೇನೋ. ಏಕೆಂದರೆ ಒಂದು ಅರ್ಥವನ್ನುಳ್ಳ ಎರಡು ಪದಗಳನ್ನು ಅಥವಾ ಒಂದಕ್ಕಿಂತ ಹೆಚ್ಚು

ಪದಗಳನ್ನು ಭಾಷೆ ಹೊಂದಲು ಕಾರಣಗಳೇನು? ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆಬೇರೆ ಪದಗಳು ಬಳಕೆಯಾಗುತ್ತಿರುವುದು ಒಂದು ಕಾರಣ. 'ಚೆಂಡನ್ನು ಎಸೆ(ಎಸಿ)' ಎಂದು ಕೆಲವು ಕಡೆ ಹೇಳಿದರೆ, ಮತ್ತೆ ಕೆಲವು ಕಡೆ 'ಚೆಂಡನ್ನು ಒಸಿ' ಎನ್ನುತ್ತಾರೆ. ಮತ್ತೆ ಕೆಲವು ಕಡೆ 'ಚೆಂಡನ್ನು ಒಗೆ(ಒಗಿ)' ಎನ್ನುತ್ತಿರಬಹುದು. ಮತ್ತೆ ಕೆಲವು ಕಡೆ 'ತೂರು' ಎಂದು ಹೇಳುವರು. ಆದರೆ ಒಂದೇ ಪ್ರದೇಶದಲ್ಲಿ ಒಂದೇ ಸಾಮಾಜಿಕ ವರ್ಗದಲ್ಲಿ ಒಂದೇ ಅರ್ಥವನ್ನು ನೀಡುವ ಎರಡು ಪದಗಳನ್ನು ಬಳಸುತ್ತಿದ್ದರೆ, ಅವುಗಳಲ್ಲಿ ಕೆಲವು ಬೇರೆ ಭಾಷೆಯಿಂದ ಬಂದು ಸೇರಿಕೊಂಡಿರುವ ಸಾಧ್ಯತೆಗಳು ಹೆಚ್ಚು.

ನಾವೀಗ ಇಂತಹ ಇನ್ನೊಂದು ಬಗೆಯ ಪದವರ್ಗದಲ್ಲಿರುವ ಸಮಾನಾರ್ಥಕ ಪದಗಳನ್ನು ಗಮನಿಸೋಣ. ಈ ಮುಂದಿನ ಪದಗಳನ್ನು ನೋಡಿ: ಜತೆ(ಗೆ), ಜೊತೆ(ಗೆ), ಜತಿ, ಸಂಗಡ, ಒಡನೆ, ಒಂದಿಗೆ, ಒಟ್ಟಿಗೆ, ಕೂಡ(ಕುಟೆ), ಜೋಡಿ, ಇತ್ಯಾದಿ. ಇವುಗಳೆಲ್ಲವನ್ನು ಸಾಮಾನ್ಯವಾಗಿ ಅವ್ಯಯಗಳೆಂದು ಕರೆಯುವ ಪರಿಪಾಠವಿದೆ. ಇವುಗಳ ಬಳಕೆಯನ್ನು ಗಮನಿಸಿದರೆ ಇವೆಲ್ಲವೂ ಒಂದರ ಬದಲು ಇನ್ನೊಂದು ಬಳಕೆಯಾಗಬಹುದು ಎನಿಸಿದರೂ, ಇವುಗಳು ಕನ್ನಡದಲ್ಲಿ ನೆಲೆಗೊಂಡ ಕ್ರಮದಲ್ಲೇ ಹಲವು ಏರುಪೇರುಗಳಿವೆ. 'ಜೊತೆ' ಎಂಬ ಪದವನ್ನೇ ನೋಡಿ. ಇದು ಪರಿಷತ್ತಿನ ಕನ್ನಡ–ಕನ್ನಡ ನಿಘಂಟಿನ ದಾಖಲೆಯಂತೆ ಸಂಸ್ಕೃತದ 'ಯುತ' ಎಂಬ ಪದದಿಂದ ರೂಪುಗೊಂಡಿದೆ. ನಿಘಂಟು ಹೀಗೆ ಹೇಳಲು ಇರುವ ಕಾರಣಗಳು ತಿಳಿಯುತ್ತಿಲ್ಲ. ಇದನ್ನು ತದ್ಭವ ಎಂದೇನೂ ಹೇಳುತ್ತಿಲ್ಲ. ಆದರೆ 'ಯುತ' ಎಂಬುದು 'ಜೊತೆ'ಯಾದುದು ಯಾವಾಗ? ಇಪ್ಪತ್ತನೆಯ ಶತಮಾನಕ್ಕೆ ಹಿಂದೆ ಈ ಪದ ಬಳಕೆಯಾಗಿರುವುದಕ್ಕೆ ನಿದರ್ಶನಗಳಿಲ್ಲವೆಂದೇ ನಿಘಂಟು ತಿಳಿಸುತ್ತದೆ. ಹಾಗೆಯೇ 'ಜೋಡಿ' ಪದ ಮರಾಠಿ ಭಾಷೆಯ 'ಜುಡಾ'ದಿಂದ ಬಂದಿದೆ ಎಂದು ದಾಖಲಿಸಲಾಗಿದೆ. ಜೋಡಿ ಮತ್ತು ಜೊತೆಗಳು ನಾಮಪದಗಳಾಗಿಯೂ ಕೆಲಸ ಮಾಡುತ್ತವೆ. ಇದೆಲ್ಲ ಕಾರಣದಿಂದ ಈ ಪದಗಳ ಬಳಕೆಯಲ್ಲಿ ಸಮಾನತೆ ಇರುವಷ್ಟೇ ವ್ಯತ್ಯಾಸಗಳೂ ಇವೆ.

ಇನ್ನೊಂದು ಇಂತಹ ಪದಪಟ್ಟಿಯನ್ನು ನೋಡಿ: ಅಲ್ಲಿ, ಒಳಗೆ, ಬಳಿ, ಹತ್ತಿರ ಇವುಗಳಲ್ಲಿ ಕೆಲವು ಒಂದೊಂದು ಸಂದರ್ಭದಲ್ಲಿ ಇನ್ನೊಂದು ಪದದೊಡನೆ ಸಮಾನಾರ್ಥವನ್ನು (ಅಥವಾ ಸಮಾನ ನಿಯೋಗವನ್ನು) ಹೊಂದಿರುವಂತೆ ತೋರುತ್ತದೆ.' 'ರೈತರಲ್ಲಿ ಚಿಕ್ಕಾಸೂ ಇಲ್ಲ' ಎಂಬ ವಾಕ್ಯವನ್ನು ಗಮನಿಸಿ. ಈ ವಾಕ್ಯದಲ್ಲಿ 'ಅಲ್ಲಿ' ಬದಲು 'ಬಳಿ' ಇಲ್ಲವೇ 'ಹತ್ತಿರ' ಪದಗಳನ್ನು ಬಳಸಬಹುದು. ಆದರೆ 'ಒಳಗೆ' ಪದವನ್ನು ಬಳಸಲು ಬರುವುದಿಲ್ಲ. ಆದರೆ 'ಕಣ್ಣುಮಿಟುಕಿಸುವುದರೊಳಗೆ ಎಲ್ಲ ನಡೆದು ಹೋಯಿತು' ಎನ್ನುವ ವಾಕ್ಯದಲ್ಲಿ 'ಒಳಗೆ' ಬದಲು 'ಅಲ್ಲಿ' ಬಳಸಲು ಸಾಧ್ಯ. ಆದರೆ ಈ ವಾಕ್ಯದಲ್ಲಿ 'ಬಳಿ' ಮತ್ತು 'ಹತ್ತಿರ' ಪದಗಳಿಗೆ ಜಾಗವಿಲ್ಲ. 'ತಲೆಯಲ್ಲಿ ಕೂದಲಿಲ್ಲ' ಎಂಬ ವಾಕ್ಯದಲ್ಲಿ 'ಅಲ್ಲಿ' ಬದಲು ಉಳಿದ ಮೂರು ಪದಗಳಲ್ಲಿ ಯಾವುದನ್ನೂ ಬಳಸಲು ಸಾಧ್ಯವಾಗುವುದಿಲ್ಲ. ಹಾಗೆ ಬಳಸಿದರೆ ಅರ್ಥವೇ ಬದಲಾಗಿಬಿಡುತ್ತದೆ. 'ನಾನು ಹೋಗುವುದರೊಳಗೆ ಬಸ್ಸು

ಹೊರಟುಹೋಗಿತ್ತು' ಎಂಬ ವಾಕ್ಯದಲ್ಲಿ 'ಒಳಗೆ' ಬದಲು ಈಗಿರುವಂತೆಯೇ (ಅಂದರೆ ವಾಕ್ಯದ ಸ್ವರೂಪವನ್ನು ಬದಲಾಯಿಸದೆ) 'ಅಲ್ಲಿ' ಪದವನ್ನು ಬಳಸುವುದು ಸಾಧ್ಯವಿಲ್ಲ. ಈ ವಿವರಣೆಗಳನ್ನು ಗಮನಿಸಿದರೆ ಮೇಲುನೋಟಕ್ಕೆ ಒಂದೇ ಅರ್ಥವನ್ನು ಹೊಂದಿರುವಂತೆ ತೋರುವ ಪದಗಳು ಬಳಕೆಯಲ್ಲಿ ಹಲವು ವ್ಯತ್ಯಾಸಗಳನ್ನು ಹೊಂದಿರುತ್ತವೆಂಬುದು ಗೊತ್ತಾಗುತ್ತದೆ. ಹಾಗಾಗಿ ಒಂದು ಪದಕ್ಕೆ ಅರ್ಥವೇನು ಎಂಬ ಪ್ರಶ್ನೆಗಿಂತ ಅದು ಭಾಷೆಯಲ್ಲಿ ಏನು ಕೆಲಸ ಮಾಡುತ್ತದೆ ಮತ್ತು ಇತರ ಪದಗಳೊಡನೆ ಅದು ಬಳಕೆಯ ಸಂದರ್ಭದಲ್ಲಿ ಹೊಂದಿರುವ ಸಂಬಂಧ ಏನು ಎಂಬುದು ಮುಖ್ಯವಾಗುತ್ತದೆ.

ಮೇಲಿನ ಕಂಡಿಕೆಯಲ್ಲಿ ಪಟ್ಟಿಮಾಡಿದ ಪದಗಳಲ್ಲಿ 'ಅಲ್ಲಿ' ಎಂಬುದಕ್ಕೆ ಹಲವು ಬಗೆಯ ಬಳಕೆ ಇರುವುದು ಗಮನಿಸಬೇಕಾದ ಸಂಗತಿ. ಇದು ದೂರಸೂಚಕ ಸರ್ವನಾಮವಾಗಿ ಬಳಕೆಯಾಗುತ್ತದೆ. ಆಗದು ಸ್ವತಂತ್ರ ಪದ. ಪ್ರತ್ಯಯ ಇಲ್ಲವೇ ಪದೋತ್ತರಿಯಾಗಿ ಬಳಕೆಯಾಗಲು ಮೊದಲಾದದ್ದು ಹೊಸಗನ್ನಡದಲ್ಲಿ. ನಡುಗನ್ನಡದಲ್ಲೂ 'ಅಲಿ' ಮತ್ತು 'ಒಳು' ಎಂಬ ಪದಗಳು ಕ್ರಮವಾಗಿ 'ಅಲ್ಲಿ' ಮತ್ತು 'ಒಳಗೆ' ಪದಗಳಿಗೆ ಬದಲಾಗಿ ಬಳಕೆಯಾಗುತ್ತಿದ್ದವು. ಈ 'ಒಳ್,ಉಳ್,ಒಳು' ಗಳಿಗೆ ಯಾವಾಗ '–ಗೆ' ಪ್ರತ್ಯಯ ಬಂದು ಸೇರಿತು ಮತ್ತು ಅದಕ್ಕೆ ಇರುವ ಕಾರಣಗಳೇನು ಎನ್ನುವುದೇ ಇನ್ನೊಂದು ಚರ್ಚೆಗೆ ಕಾರಣವಾಗುವ ಸಂಗತಿ. 'ಒಳಗೆ' ಎಂಬುದರಲ್ಲಿ ಇರುವ '–ಗೆ' ಎಂಬ ಪ್ರತ್ಯಯಕ್ಕೆ ಸಮಾನವಾದ '–ಕ್ಕೆ' ಎಂಬ ಪ್ರತ್ಯಯವನ್ನು ಬಳಸಿ 'ಒಳಕ್ಕೆ' ಎಂಬ ಪದರೂಪವನ್ನು ಪಡೆದುಕೊಂಡೆವೆಂದುಕೊಳ್ಳಿ. ಆದರೆ ಇವೆರಡೂ ಯಾವಾಗಲೂ ಒಂದೇ ಬಗೆಯ ಕೆಲಸ ಮಾಡುವುದಿಲ್ಲ. 'ಮನೆಯೊಳಗೆ ಹೋಗು' ಎಂಬಲ್ಲಿ 'ಒಳಕ್ಕೆ' ಎಂಬ ಪದ ಬಳಸಬಹುದು. ಆದರೆ 'ಮನೆಯೊಳಗೆ ಇಲಿಯಿದೆ' ಎಂಬ ವಾಕ್ಯದಲ್ಲಿ 'ಒಳಕ್ಕೆ' ಬಳಸಲು ಸಾಧ್ಯವಿಲ್ಲ.

'ಅಲ್ಲಿ' ಪ್ರತ್ಯಯವಾಗಿ ಬಳಕೆಯಾದಾಗ ಅದನ್ನು ಸಪ್ತಮೀ ವಿಭಕ್ತಿ ಸೂಚಕವೆಂದು ವ್ಯಾಕರಣಗಳು ಹೇಳುತ್ತವೆ. ಆದರೆ ಈ ಪದರೂಪಕ್ಕೆ ಹಲವಾರು ಬಗೆಯ ಕೆಲಸಗಳಿರುವಂತೆ ತೋರುತ್ತದೆ. ಅದು ಎಷ್ಟೋ ಸಂದರ್ಭಗಳಲ್ಲಿ ಇನ್ನೊಂದು ಸಪ್ತಮೀ ವಿಭಕ್ತಿ ಸೂಚಕವಾದ 'ಒಳಗೆ'ಪದರೂಪಕ್ಕಿಂತ ಬೇರೆಯಾಗಿಯೇ ವರ್ತಿಸುತ್ತದೆ. 'ಅವರು ಚುನಾವಣೆಗೆ ನಿಂತಲ್ಲಿ ಗೆಲ್ಲುವುದು ಖಚಿತ' ಎನ್ನುವ ವಾಕ್ಯದಲ್ಲಿ ಇರುವ 'ಅಲ್ಲಿ' ಸಪ್ತಮೀ ವಿಭಕ್ತಿ ಸೂಚಕವಲ್ಲ; ಅದು ಸಂಭವನಾರ್ಥವನ್ನು (ನಿಂತರೆ ಎನ್ನುವ ಅರ್ಥದಲ್ಲಿ) ಸೂಚಿಸುತ್ತದೆ. ಈ ಬಗೆಯ ಬಳಕೆ ಈಗೀಗ ಕಡಿಮೆಯಾಗುತ್ತಿರುವಂತೆ ತೋರುತ್ತದೆ ಅಥವಾ ಬರೆವಣಿಗೆಗೆ ಮಾತ್ರ ಸೀಮಿತಗೊಳ್ಳುತ್ತಿದೆ, ಮಾತಿನಲ್ಲಿ ಮರೆಯಾಗುತ್ತಿರುವಂತಿದೆ.

ಈ ಟಿಪ್ಪಣಿಯ ಉದ್ದೇಶವಿಷ್ಟೆ: ನಾವು ಪದಗಳ ಅರ್ಥದ ಬಗೆಗೆ ಹೆಚ್ಚು ಎಚ್ಚರವಹಿಸುತ್ತೇವೆ. ಆದರೆ ಅವುಗಳ ಅರ್ಥವೆಂಬುದು ನಿಗದಿತವಾಗಿರುವುದಿಲ್ಲ. ಅದರಲ್ಲೂ ನಾಮಪದ ಮತ್ತು ಕೆಲವೊಮ್ಮೆ ಕ್ರಿಯಾಪದಗಳು ಹೆಚ್ಚು ಖಚಿತವಾದ ಅರ್ಥವನ್ನು

ಹೊಂದಿವೆ ಎಂದು ನಮಗೆ ತೋರಬಹುದು. ಆದರೆ ಭಾಷೆಯಲ್ಲಿ ಇರುವ ಸಾವಿರಾರು ಇತರ ಪದವರ್ಗದ ಪದರೂಪಗಳಿಗೆ ಹೀಗೆ ಅರ್ಥವೆಂಬುದನ್ನು ನಿಗದಿಯಾಗಿ ಹೇಳುವಂತಿರುವುದಿಲ್ಲ. ಅವು ಬಳಕೆಯಲ್ಲಿ ಪಡೆದುಕೊಳ್ಳುವ 'ವಾಕ್ಯಾತ್ಮಕ ಸಂಬಂಧ'ವನ್ನು ನಾವು ಗುರುತಿಸಬೇಕಾಗುತ್ತದೆ. ಆಗ ಮಾತ್ರ ಅವುಗಳ ನಿಜಸ್ವರೂಪ ನಮಗೆ ತಿಳಿಯಲು ಸಾಧ್ಯವಾಗುತ್ತದೆ. ಹೊಸಗನ್ನಡದಲ್ಲಿ ಹೀಗೆ ಪದರೂಪಗಳ ಬಳಕೆಯನ್ನು ಆಧರಿಸಿದ ವ್ಯಾಕರಣವನ್ನು ಜರೂರಾಗಿ ರಚಿಸುವ ಅಗತ್ಯವಿದೆ. ಅಲ್ಲದೆ ಈ ನಿಟ್ಟಿನಲ್ಲಿ ಹತ್ತೊಂಬತ್ತನೆಯ ಶತಮಾನದವರೆಗೆ ರಚನೆಯಾದ ವ್ಯಾಕರಣಗಳು ನಮ್ಮ ಉಪಯೋಗಕ್ಕೆ ಸಾಲವು. ಹೊಸಗನ್ನಡದ ಬಳಕೆಯ ಚಹರೆಗಳೇ ಬದಲಾಗಿಬಿಟ್ಟಿವೆ. ಆದ್ದರಿಂದ ಇಂದಿನ ಕನ್ನಡವನ್ನು ಗಮನಿಸಿಯೇ ನಮ್ಮ ಹೊಸ ವ್ಯಾಕರಣ ರಚನೆಯಾಗುವ ಅಗತ್ಯವಿದೆ.

# ಪದಗಳ ಸಾಮಾಜಿಕ ನೆಲೆಗಳು

ಕಳೆದ ಒಂದೆರಡು ವರ್ಷಗಳ ಹಿಂದೆ ಕರ್ನಾಟಕ ಸರ್ಕಾರದ ಮಂತ್ರಿಯೊಬ್ಬರು ವರದಿಗಾರರೊಡನೆ ಮಾತನಾಡುತ್ತಾ 'ವೀರಪ್ಪನ್ ಅವರು ಕಳಿಸಿದ ಕ್ಯಾಸೆಟ್ ನಮ್ಮ ಕೈಗೆ ಇನ್ನೂ ಸೇರಿಲ್ಲ' ಎಂದೇನೋ ಹೇಳಿದರು. ಮುಂದಿನ ಕೆಲವು ದಿನಗಳಲ್ಲಿ ಸಚಿವರು ವೀರಪ್ಪನ್ ಹೆಸರಿನ ಮುಂದೆ ಗೌರವ ಸೂಚಕ ಬಹುವಚನವನ್ನು ಬಳಸಿದ್ದರ ಬಗ್ಗೆ ವಿವಾದವೊಂದು ಸೃಷ್ಟಿಯಾಯಿತು. ಯಾರನ್ನು ಕುರಿತು ಮಾತನಾಡುವಾಗ ಗೌರವ ಸೂಚಕ ಬಹುವಚನವನ್ನು ಬಳಸಬೇಕು ಅಥವಾ ಬಳಸಬಾರದು ಎಂಬ ಬಗ್ಗೆ ಒಂದು ಅಲಿಖಿತ ನಿಯಮವನ್ನು ಒಂದು ಕಾಲದ ಭಾಷಾಸಮುದಾಯ ಬೆಳೆಸಿಕೊಂಡಿರುತ್ತದೆ. ಆ ನಿಯಮಗಳನ್ನು ಪಾಲಿಸಲು ಒತ್ತಾಯವೂ ಇರುತ್ತದೆ. ಉಲ್ಲಂಘನೆಯನ್ನು ಗಂಭೀರವಾಗಿ ಪರಿಗಣಿಸಲಾಗುತ್ತದೆ. ಏಕವಚನದ ಸೂಚನೆ ಇರುವ ಮಾತನ್ನು ಎಲ್ಲಿ ಬಳಸಬೇಕು ಎಂಬ ಬಗ್ಗೆಯೂ ನಿಯಮಗಳಿವೆ. ಈ ನಿಯಮವನ್ನು ಎಲ್ಲಿ ಪಾಲಿಸಬೇಕು ಎಲ್ಲಿ ಮೀರಬಹುದು ಎಂಬುದೂ ಕೂಡ ಒಂದು ಶರತ್ತಾಗಿ ಚಾಲ್ತಿಯಲ್ಲಿದೆ. ಬರವಣಿಗೆಯಲ್ಲಿ ಬಹುವಚನ ಬಳಸಿದರೂ ಅನೌಪಚಾರಿಕವಾಗಿ ಮಾತಾಡುವಾಗ ಆ ನಿಯಮವನ್ನು ಮೀರುವುದು ತಪ್ಪೆನಿಸುವುದಿಲ್ಲ. ಆದರೆ ಬರವಣಿಗೆಯಲ್ಲಿ ಅದರಲ್ಲೂ ಸಾಮುದಾಯಿಕ ಬರವಣಿಗೆಯಲ್ಲಿ ಅದು ತಪ್ಪೆಂದು ತಿಳಿಯಲಾಗುತ್ತದೆ. ಮಾತಾಡುವಾಗಲೂ ಸಾಮಾಜಿಕ ಶಿಷ್ಟಾಚಾರವನ್ನು ಪಾಲಿಸುವ ನಿಟ್ಟಿನಲ್ಲಿ ಹೀಗೆ ಗೌರವಸೂಚಕ ಪದದ ಬಳಕೆಯನ್ನು ನಿರೀಕ್ಷಿಸಲಾಗುತ್ತದೆ. ಈ ನಿರೀಕ್ಷೆಯನ್ನು ಮೀರಿದರೆ ಆಗ ಭಿನ್ನಾಭಿಪ್ರಾಯಗಳಿಗೆ, ವಾಗ್ವಾದಗಳಿಗೆ ಕಾರಣವಾಗುವುದು ಸಹಜ. ಈಚೆಗೆ ಕರ್ನಾಟಕ ವಿಧಾನಮಂಡಲದಲ್ಲಿ ಸಚಿವರು ಮತ್ತು ಸದಸ್ಯರೊಬ್ಬರ ನಡುವಿನ ಈ ಏಕವಚನ ಬಳಕೆಯ ವಿವಾದವನ್ನು ಈ ಹಿನ್ನೆಲೆಯಲ್ಲಿ ಗಮನಿಸಬೇಕು. ಅಂದರೆ ಪದಗಳನ್ನು ಬಳಸುವಾಗ ಅವುಗಳಿಗೆ ಇರುವ ಅರ್ಥದ ಜೊತೆಗೆ ಸಾಮಾಜಿಕ ಅಲಿಖಿತ ಒಪ್ಪಂದಗಳನ್ನೂ ನಾವು ಪಾಲಿಸುವುದು ಅಗತ್ಯ. ಕೊನೆಯ ಪಕ್ಷ ಆ ಬಗೆಯ ಒತ್ತಾಯಗಳು ಭಾಷೆಯ ಬಳಕೆಯನ್ನು ನಿರ್ಬಂಧಿಸುತ್ತಿರುತ್ತವೆ.

ನಕ್ಸಲೀಯತೆ ಎಂಬ ಪದವನ್ನೂ ಈಚೆಗೆ ಒಂದು ಟಿವಿ ಚಾನೆಲ್ ಬಳಸಿತು. ರಾಷ್ಟ್ರೀಯತೆ ಮಾದರಿಯಲ್ಲಿ ಈ ಪದರಚನೆ ಆಗಿರಬೇಕು. ರಾಷ್ಟ್ರೀಯ ಮತ್ತು ನಕ್ಸಲೀಯ ಎಂಬ ಪದಗಳ ಹೋಲಿಕೆಯಿಂದ ಹೀಗೆ ನಕ್ಸಲೀಯತೆ ಎಂಬ ಪದವನ್ನು ರೂಪಿಸಿದಂತೆ ತೋರುತ್ತದೆ. ಆದರೆ ನಕ್ಸಲೀಯ ಎನ್ನುವುದು ಕನ್ನಡದಲ್ಲಿ ವ್ಯಕ್ತಿಸೂಚಕವಾಗಿ

ಬಳಕೆಯಾಗುತ್ತದೆ. ಹೀಗೆ ರಾಷ್ಟ್ರೀಯ ಎಂಬ ಪದವನ್ನು ವ್ಯಕ್ತಿ ಸೂಚಕವಾಗಿ ನಾವು ಬಳಸುವುದಿಲ್ಲ. ಆ ಅರ್ಥದಲ್ಲಿ ರಾಷ್ಟ್ರಕ ಎಂಬೊಂದು ಪದವನ್ನು ಬಹು ಹಿಂದೆ ಡಿ.ವಿ.ಜಿ ಬಳಸಿದ್ದುಂಟು. ಈಗ ಅದು ಬಳಕೆಯಲ್ಲಿ ಇದ್ದಂತಿಲ್ಲ. ನಕ್ಸಲ್‌ವಾದ, ನಕ್ಸಲೀಯರು, ನಕ್ಸಲೈಟ್ಸ್, ನಕ್ಸಲಿಸಂ, ನಕ್ಸಲೀಯ ಇವು ಮಾಧ್ಯಮಗಳಲ್ಲಿ ಬಳಕೆಯಾಗುತ್ತಿರುವ ಇತರ ಪದಗಳು. ನಲವತ್ತು ವರ್ಷಗಳ ಹಿಂದೆ ಪಶ್ಚಿಮ ಬಂಗಾಳದ ನಕ್ಸಲ್‌ಬಾರಿ ಎಂಬ ಊರಿನ ಜತೆ ಸಂಬಂಧವಿರಿಸಿಕೊಂಡ ಕ್ರಾಂತಿಕಾರಿ ಚಳುವಳಿಯ ಉಲ್ಲೇಖ ನೀಡುವಾಗ ಬಳಕೆಗೆ ಬಂದ ಪದಗಳಿವು. ಬಾರಿ ಎನ್ನುವುದು ವಾಡಿ ಎಂಬುದರ ಬಂಗಾಲಿ ಉಚ್ಚಾರಣೆ. ವಾಡಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ಬಳಕೆಯಲ್ಲಿರುವ ಸ್ಥಳನಾಮ ಸೂಚಕ ಪದವಾಗಿದೆ. ಅದೇನೇ ಇರಲಿ. ನಾವೀಗ ಆ ಪದದಲ್ಲಿ ಇರುವ ಊರಿನ ಉಲ್ಲೇಖವನ್ನು ಮರೆತಿದ್ದೇವೆ.

ಪದಗಳೆಂದರೆ ಧ್ವನಿಗಳ ಸರಣಿ ಎಂದು ತಿಳಿಯುವಂತಿಲ್ಲ. ಅವುಗಳಿಗೂ ಜೀವವಿದೆ. ಅರ್ಥ ಸೂಚನೆಯನ್ನು ಮಾಡುವ ಜೊತೆಗೆ ಅವು ಬೇರೆಬೇರೆ ಸಂದರ್ಭಗಳಲ್ಲಿ ಸಿಡಿಗುಂಡುಗಳಾಗಿಯೂ ಬದಲಾಗಬಲ್ಲವು. ದಿನವೂ ನಾವು ಬಳಸುವ ಪದಗಳು ನಮ್ಮ ಮನಸ್ಸಿನಲ್ಲಿರುವ ಅರ್ಥಗಳನ್ನು ಮಾತ್ರ ತಿಳಿಸುತ್ತವೆ ಎಂದು ನಾವು ಭಾವಿಸುವುದು ಸಾಧ್ಯವಿಲ್ಲ. ಅದರಾಚೆಗೂ ಹೆಚ್ಚಿನ ಕೆಲಸವನ್ನು ಮಾಡುವ ಸಾಧ್ಯತೆ ಪದಗಳಿಗೆ ಇರುತ್ತದೆ. ನಮ್ಮ ಸಾಮಾಜಿಕ ತಿಳುವಳಿಕೆಗಳು, ನಂಬಿಕೆಗಳು, ಸಾರ್ವಜನಿಕ ಅಭಿಪ್ರಾಯಗಳು ಈ ಪದಗಳಲ್ಲಿ ಅಡಕಗೊಂಡಿರುತ್ತವೆ. ಉದಾ.ಗೆ ಉಗ್ರಗಾಮಿ ಎಂಬ ಪದವನ್ನು ನೋಡಿ. ಇದರ ಅರ್ಥವೇನು ಎಂಬುದು ದಿನವೂ ನಾವು ತಲೆಕೆಡಿಸಿಕೊಳ್ಳುವ ಪ್ರಶ್ನೆಯಾಗಿಲ್ಲ. ಒಂದು ನಿಯತವಾದ ಅರ್ಥವನ್ನು ನಾವು ಹೊಂದಿದ್ದೇವೆ. ಜೊತೆಗೆ ಉಗ್ರಗಾಮಿಯು ಸಾಮಾಜಿಕವಾಗಿ ಅಪಾಯಕಾರಿ ಎನ್ನುವ ಸ್ವೀಕೃತ ಅರ್ಥ ಎಲ್ಲರಲ್ಲೂ ಇರುವಂತೆ ಮಾಧ್ಯಮಗಳು ಬಿಂಬಿಸುತ್ತವೆ. ಹಾಗಾಗಿ ಅವರಿಗೆ ಏಕವಚನದ ಬಳಕೆ. ಕ್ರಾಂತಿಕಾರಿ ಎಂಬುದು ಹಿಂದೆ ಉಗ್ರಗಾಮಿಗಳಿಗೆ ಪರ್ಯಾಯವಾಗಿ ಬಳಸುತ್ತಿದ್ದ ಪದ. ಇದು ಈಗ ಬಳಕೆಯಲ್ಲಿ ಕಾಣುವಂತಿಲ್ಲ. ನಕ್ಸಲ್ಬಾರಿ ಹೋರಾಟಗಾರರನ್ನು ಕ್ರಾಂತಿಕಾರಿಗಳು, ಸಾಯುಧ ಹೋರಾಟಗಾರರು ಎಂದೆಲ್ಲ ಹೇಳುತ್ತಿದ್ದ ಕಾಲವೊಂದಿತ್ತು. ಸಾಮಾಜಿಕ ದೃಷ್ಟಿ ಬದಲಾಗುತ್ತಿದ್ದಂತೆ ಅವರನ್ನು ಕುರಿತು ಬಳಸುವ ಪದಗಳಲ್ಲೂ ಬದಲಾವಣೆಗಳಾಗುತ್ತಿವೆ. ತೀವ್ರಗಾಮಿ, ಆತಂಕವಾದಿ ಎಂಬುದು ಬೇರೆ ಸಂದರ್ಭಗಳಲ್ಲಿ ಬಳಕೆಯಾಗುತ್ತಿರುವ ಪರ್ಯಾಯ ಪದಗಳು. ತೀವ್ರಗಾಮಿ ಎಂಬುದು ಸ್ವಾತಂತ್ರ್ಯ ಹೋರಾಟ ಕಾಲದ ಸಶಸ್ತ್ರ ಹೋರಾಟಗಾರರಿಗೆ, ಬ್ರಿಟಿಶರೊಡನೆ ಸಂಧಾನದ ಮಾತುಗಳನ್ನು ವಿರೋಧಿಸುತ್ತಿರುವವರಿಗೆ ಬಳಕೆಯಾಗುತ್ತಿದ್ದ ಪದ. ಈಗ ಉಗ್ರವಾದಿ, ಉಗ್ರ ಎಂಬುವು ನೆಲೆನಿಂತಿವೆ. ಉಗ್ರ ಎನ್ನುವುದು ಸ್ವಭಾವಸೂಚಕ ಪದ. ಸೌಮ್ಯದ ವಿರುದ್ಧಾರ್ಥವನ್ನು ಹೊಂದಿದೆ. ಇದು ಮುಖ್ಯವಾಗಿ ಕಣ್ಣಿನ ಅನುಭವವನ್ನು ಸೂಚಿಸುತ್ತದೆ. ಕಣ್ಣಿಗೆ ಕಾಣದವರನ್ನು ಉಗ್ರರೆಂದು ವರ್ಣಿಸುವುದು ಮತ್ತು ಹಾಗೆ ನಂಬುವುದು ಸುಲಭ. ಅದಕ್ಕೇ ಅವರು ಗುಂಡಿಗೆ ಬಲಿಯಾಗಿ ಕ್ಯಾಮೆರಾಕ್ಕೆ ಸಿಕ್ಕಿದಾಗ ನಾವು 'ತಿಳಿದಂತೆ' ಉಗ್ರರಲ್ಲ ಎನ್ನುವುದು ಗೊತ್ತಾಗಿ ಜನರಿಗೆ ಕರುಳು ಚುರುಕ್ ಎನ್ನುತ್ತದೆ. ಉಗ್ರಗಾಮಿಗಳನ್ನು

'ಭಯೋತ್ಪಾದಕರು' ಎಂದು ಬಣ್ಣಿಸುವುದು ವಾಡಿಕೆಯಲ್ಲಿತ್ತು. ಈಗ ಅದು ಹೆಚ್ಚಿಗೆ ಬಳಕೆಯಲ್ಲಿಲ್ಲ. 'ಭಯೋತ್ಪಾದನೆ' ಎಂಬ ಪದವಿದ್ದರೂ, ಅದರಲ್ಲಿ ತೊಡಗಿದವರನ್ನು 'ಭಯೋತ್ಪಾದಕ'ರೆಂದು ಈಗ ಸೂಚಿಸುವಂತೆ ತೋರುತ್ತಿಲ್ಲ. 'ಭೂಗತ ದೊರೆ', 'ಬಾಡಿಗೆ ಭಂಟ',' ಸುಪಾರಿ ಕೊಲೆಗಾರ' ಎಂಬ ಪದಗಳೂ ಈಗ ಬಳಕೆಯಲ್ಲಿವೆ. ಇವರೂ ಕಣ್ಣಿಗೆ ಕಾಣದವರು. ಇವರ ವರ್ಣನೆಯಲ್ಲಿ "ಉಗ್ರತೆ'ಯ ಉಲ್ಲೇಖವಿಲ್ಲ. ಅವರ ಚಟುವಟಿಕೆಯ ಬಣ್ಣನೆ ಮಾತ್ರವಿದೆ. ನುಸುಳುಕೋರ, ನೆಲಬಾಂಬು, ನೆಲಸ್ಫೋಟಕ, ಅಡಗುದಾಣ, ಗುಪ್ತಸ್ಥಳ, ಗುಂಡಿನಚಕಮಕಿ, ಆತ್ಮಹತ್ಯಾದಳ, ಮರಸುಹೋರಾಟ, ಸರಣಿಸ್ಫೋಟ ಮುಂತಾದ ಪದಗಳು ಈ ಸಂಬಂಧದಲ್ಲಿ ನಮ್ಮ ಈ ಹೊತ್ತಿನ ಪದಕೋಶದ ಭಾಗವಾಗಿಬಿಟ್ಟಿವೆ. ಈ ಎಲ್ಲ ಅಸಾಮಾಜಿಕ ಪದಗಳಿಂದ ಸೂಚಿತವಾದವರೊಡನೆ ಹೋರಾಡುವವರನ್ನು 'ಭದ್ರತಾ ಸಿಬ್ಬಂದಿ' ಎನ್ನಲಾಗುತ್ತಿದೆ. ಈ ಪದವೇ ಅವರು ರಕ್ಷಣೆಯಲ್ಲಿ ತೊಡಗಿರುವವರು, ಹೋರಾಟದಲ್ಲಲ್ಲ ಎಂಬ ಸೂಚನೆಯನ್ನು ನೀಡುತ್ತದೆ. ಇದು ಭಾಷೆ ನಮಗೆ ಕಟ್ಟಿಕೊಡುವ ಸತ್ಯ.

**ಕೊನೆಗೊಂದು ಮಾತು:** ಈಚೆಗೆ ಯುರೋಪಿನ ಆಲೂಗೆಡ್ಡೆ ಬೆಳೆಗಾರರು ಇಂಗ್ಲಿಶ್ ನಿಘಂಟು ಕಛೇರಿ ಮುಂದೆ ಪ್ರತಿಭಟನೆ ನಡೆಸಿದರು. ಇಂಗ್ಲಿಶ್ ನಿಘಂಟಿನಿಂದ 'ಕೌಚ್ ಪೊಟಾಟೋ' ಎಂಬ ಪದವನ್ನು ತೆಗೆದು ಹಾಕಬೇಕೆಂಬುದು ಅವರ ಬೇಡಿಕೆ. ಯಾವಾಗಲೂ ಕೆಲಸವಿಲ್ಲದೆ ಟೆಲಿವಿಶನ್ ಮುಂದೆ ಕೂರುವವರನ್ನು 'ಕೌಚ್ ಪೊಟಾಟೊ'ಗಳೆಂದು ಕರೆಯುವುದು ವಾಡಿಕೆ. ಇದು 'ಪೊಟಾಟೋ'(ಆಲೂಗಡ್ಡೆ)ಗೆ ಆಗುತ್ತಿರುವ ಅವಹೇಳನವೆಂಬುದು ಅವರ ಆರೋಪ. ಅದರಿಂದ ಅವರ ಬೆಳೆಯ ಮಾರಾಟಕ್ಕೆ ಧಕ್ಕೆ ಒದಗಿದೆ ಎಂಬುದೂ ಅವರ ಆತಂಕ. ಹಾಗಾಗಿ ಆ ಪದವನ್ನು ಬಳಸಬಾರದೆಂದು, ನಿಘಂಟಿನಿಂದ ತೆಗೆದು ಹಾಕಬೇಕೆಂದು ಬದಲಿಗೆ 'ಕೌಚ್ ಸ್ಲೋತ್'(ಸೋಫಾ ಸೋಂಬೇರಿ) ಎಂಬ ಪದವನ್ನು ಬೇಕಾದರೆ ಬಳಸಬಹುದೆಂದು ಸೂಚಿಸಿದ್ದಾರೆ. ಭಾಷೆಯು ಲೋಕದ ಬಿಂಬವೋ ಅಥವಾ ಲೋಕವೇ ಭಾಷೆಯ ಬಿಂಬವೋ ಎಂಬ ಪ್ರಶ್ನೆಗೆ ಉತ್ತರ ಹುಡುಕುವ ಸರದಿ ಈಗ ನಮ್ಮದು. ಬಯಲು ಆಲಯಗಳ ಸಂಬಂಧದ ಹಳೆಯ ಪ್ರಶ್ನೆಯಂತಿದೆಯಲ್ಲವೇ ಇದು?

## ಪದಕೋಶದಲ್ಲಿ ಒಳಚಲನೆ

ವಚನಕಾರರು ಹಲವಾರು ವಿವಿಧ ವೃತ್ತಿಗಳ, ಕುಲಕಸುಬುಗಳ ಹಿನ್ನೆಲೆಯಿಂದ ಬಂದವರು. ಅವರ ಹೆಸರುಗಳಲ್ಲೇ ಅವರ ಈ ಹಿನ್ನೆಲೆ ಸೂಚಿತವಾಗುವುದು. ಈ ವಚನಕಾರರ ವಚನಗಳಲ್ಲಿ ಅವರ ವೃತ್ತಿಗಳ ಹಿನ್ನೆಲೆಯ ಪ್ರಭಾವವೇನಿದೆಯೆಂದು ಪರಿಶೀಲಿಸಿದರೆ ಅವರ ವೃತ್ತಿಗೆ ಸಂಬಂಧಿಸಿದ ಪದಕೋಶದ ಕೆಲವು ಪದಗಳು ವಚನಗಳಲ್ಲಿ ಬೇರೆ ಅರ್ಥಪರಿವೇಷದಲ್ಲಿ ಕಾಣುವುದನ್ನು ಗುರುತಿಸಬಹುದು. ಅಂದರೆ ವೃತ್ತಿಯ ಒಂದು ನಿರ್ದಿಷ್ಟ ಕ್ರಿಯೆಗೆ, ವೃತ್ತಿಸಮುದಾಯಕ್ಕೆ ಸೀಮಿತವಾಗಿದ್ದ ಪದಗಳು ಹೊಸ ಅರ್ಥಗಳೊಡನೆ ವಚನಗಳಲ್ಲಿ ಬಳಕೆಯಾಗಿವೆ. ಮೊದಲಿದ್ದ ಅಭಿಧಾರ್ಥದ ಜೊತೆಗೆ ಆ ಪದಗಳಿಗೆ ಲಕ್ಷಣಾರ್ಥಗಳು ಲಭಿಸುತ್ತದೆ. ಪದಕೋಶದಲ್ಲಿ ಒಂದು ನಿರ್ದಿಷ್ಟ ಅರ್ಥವನ್ನು ಪ್ರತೀತಿಗೊಳಿಸುವ ಪದಗಳು ಈಗ ಆ ಅರ್ಥದ ಜತೆಗೆ ಇನ್ನೊಂದು ಅರ್ಥವನ್ನು ಪ್ರಕಟಿಸತೊಡಗುತ್ತವೆ. ಇಂಥ ಬದಲಾವಣೆಗಳನ್ನು ಪದಕೋಶದಲ್ಲಿ ನಡೆಯುವ ಒಳಚಲನೆಗಳು ಎನ್ನಲು ಸಾಧ್ಯ. ಕೃಷಿಗೆ ಸಂಬಂಧಿಸಿದ ಈ ಕೆಳಗಿನ ಪದಗಳನ್ನು ನೋಡಿ.

ಉಳು, ಉಳುಮೆ, ಬೇಸಾಯ, ಹೊಲ, ಬೆಳೆ, ಕಳೆ, ನೊಗ, ತೆನೆ, ಗೊಬ್ಬರ, ಹುಲುಸು, ಕುಯ್ಲು, ತೂರು, ಕೇರು, ಒಟ್ಟು, ಬಿತ್ತು ಈ ಪದಗಳು ಕೃಷಿ ಸಂಬಂಧಿಯಾದ ಸಂಗತಿಗಳನ್ನು ಅಥವಾ ಕ್ರಿಯೆಗಳನ್ನು ಸೂಚಿಸುತ್ತವೆ. ಜೊತೆಗೆ ಸಾಮಾನ್ಯ ಬಳಕೆಯಲ್ಲಿಯೂ ಕೃಷಿಗೆ ನೇರವಾಗಿ ಸಂಬಂಧಪಡದ ಸಂದರ್ಭಗಳಲ್ಲಿ- ಲಕ್ಷಣಾರ್ಥಗಳೊಡನೆ ಬಳಕೆಯಾಗುತ್ತವೆ. ನೋಡಿ:

1. ದಾಸ್ಯದ ನೊಗವನ್ನು ಕಿತ್ತೊಗೆದರು.
2. ಸಂಗೀತ ಕ್ಷೇತ್ರದಲ್ಲಿಯೂ ಅವರು ಕೃಷಿ ಮಾಡಿದ್ದಾರೆ.
3. ಬಿತ್ತಿದನು ರವಿಸುತನ ಕಿವಿಯಲ್ಲಿ ಭಯವ.
4. ಮುಖದ ಮೇಲೆ ಗಡ್ಡ ಹುಲುಸಾಗಿ ಬೆಳೆದಿತ್ತು.

ಹೀಗೆ ಅಭಿಧಾರ್ಥವಲಯದಿಂದ ಲಕ್ಷಣಾರ್ಥವಲಯಕ್ಕೆ ಪದಗಳು ಚಲಿಸತೊಡಗಿರುವ ಸಾವಿರಾರು ನಿದರ್ಶನಗಳಿವೆ. ವೃತ್ತಿಗಳು ಖಿಲಗೊಂಡು, ಅವುಗಳ ವೃತ್ತಿ ಪದಗಳು ಅಭಿಧಾರ್ಥದಲ್ಲಿ ಬಳಕೆಯಾಗುವುದು ನಿಂತರೂ ಸಾಮಾನ್ಯ ಪದಕೋಶದಲ್ಲಿ ಉಳಿದುಕೊಂಡಿರುತ್ತವೆ. ಸಾಮಾನ್ಯವಾಗಿ ವೃತ್ತಿಗಳು

ಬದಲಾವಣೆಯಿಂದಾಗಿ ಅಭದ್ರಗೊಳ್ಳತೊಡಗಿದಾಗ ಹೀಗೆ ಪದಕೋಶದ ಪದಗಳ ಒಳಚಲನೆ ಮೊದಲಾಗುತ್ತವೆಂದು ತೋರುತ್ತದೆ. ವೃತ್ತಿಗಳು ಖಿಲಗೊಳ್ಳುವುದರಿಂದಲೇ ಈ ಪದಗಳ ಒಳಚಲನೆ ನಡೆಯುತ್ತದೆಂದಲ್ಲ. ಅದು ಒಂದು ಸಾಧ್ಯತೆ. ಎಷ್ಟೋ ವೇಳೆ ವೃತ್ತಿಗಳ ಬಗ್ಗೆ ಇರುವ ಸಾಮಾಜಿಕ ದೃಷ್ಟಿಕೋನಗಳಿಂದಲೂ ಈ ಬಗೆಯ ಪದಗಳ ಒಳಚಲನೆ ಸಾಧ್ಯ. ಅದರಲ್ಲೂ ವೃತ್ತಿಯನ್ನು ಹೀನಾಯವಾಗಿ ನೋಡುವುದು-ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ-ಇದ್ದರಂತೂ ವೃತ್ತಿಪದಗಳು ಹೇರಳವಾಗಿ ಚಲಿಸಿ ಹೀನಾರ್ಥದಲ್ಲಿ ಬಳಕೆಯಾಗುತ್ತವೆ. ನೋಡಿ: ಬೋಳಿಸು, ಕೆರೆ, ನುಣ್ಣಗೆ ಮಾಡು(ಕ್ಷೌರಿಕ ವೃತ್ತಿ), ಇದಲ್ಲದೆ ಬಲೆಬೀಸು, ಒರೆಹಚ್ಚು, ಹಾಸುಹೊಕ್ಕು, ಬಣ್ಣಕಟ್ಟು ಈ ಮಾದರಿಯ ರಚನೆಗಳೂ ವೃತ್ತಿಯಾಚೆಗೆ ಬಳಕೆಯಲ್ಲಿವೆ.

ಪದಗಳ ಈ ಒಳಚಲನೆಗೆ ಸಂಪೂರ್ಣವಾಗಿ ಭಿನ್ನವಾಗಿಯಲ್ಲವಾದರೂ ಸಾಕಷ್ಟು ಬೇರೆಯಾಗಿರುವ ಇನ್ನೊಂದು ಬಗೆಯ ಚಲನೆಯಿದೆ. ವೃತ್ತಿಯೊಂದು ಹೆಚ್ಚು ಪ್ರಭಾವಶಾಲಿಯಾಗುವಾಗ ತನಗೆ ಬೇಕಾದ ಹೊಸಪದಗಳನ್ನು ರೂಪಿಸಿಕೊಳ್ಳುತ್ತದೆ. ಜೊತೆಗೆ ಅನ್ಯ ವಲಯಗಳಿಂದಲೂ ಪದಗಳನ್ನು ಹೀರಿಕೊಂಡು ಅವುಗಳಿಗೆ ತನ್ನದೇ ಆದ ಅರ್ಥವನ್ನು ನೀಡಿಬಿಡುತ್ತದೆ. ಅಲ್ಲಿಯವರೆಗೆ ಆ ಪದಗಳಿಗೆ ಆಯಾ ವಲಯಗಳಲ್ಲಿ ಅಥವಾ ಸಾಮಾನ್ಯ ಪದಕೋಶದಲ್ಲಿ ಇರುವ ಅರ್ಥದ ಜತೆಗೆ/ಕೆಲವೊಮ್ಮೆ ಅದಕ್ಕೆ ಬದಲಾಗಿ ಬೇರೆಯ ಅರ್ಥಗಳು ಈ ಹೊಸ ವಲಯದಲ್ಲಿ ಒದಗುತ್ತವೆ. ಗಣಕಗಳನ್ನು ಬಳಸುವವರ ಪದಕೋಶದಲ್ಲಿರುವ ಈ ಕೆಳಗಿನ ಪದಗಳನ್ನು ಗಮನಿಸಿ.

1. ವೈರಸ್, 2. ವಿಂಡೋ, 3. ಮೆನು, 4. ಪ್ಯಾಲೆಟ್, 5. ನ್ಯಾವಿಗೇಷನ್, 6. ಸೈಟ್, 7. ಸರ್ಫ್, 8. ಫೈಲ್, 9. ಡೈರೆಕ್ಟರಿ, 10. ಚಿಪ್, 11. ಮೌಸ್, 12. ಡ್ರೈವ್, ಇತ್ಯಾದಿ. ಈ ಎಲ್ಲವೂ ಇಂಗ್ಲಿಶ್ ಭಾಷೆಯ ಸಾಮಾನ್ಯ ಪದಕೋಶದಲ್ಲಿ ಬಳಕೆಯಲ್ಲಿರುವಂಥವೇ. ಆದರೆ ಗಣಕ ವಿಜ್ಞಾನವು ಈ ಪದಗಳನ್ನು ತನ್ನ ತೆಕ್ಕೆಗೆ ಎಳೆದುಕೊಂಡಿದೆ. ಈ ಪದಗಳಿಗೆ ಗಣಕಗಳಿಗೆ ಸಂಬಂಧಿಸಿದ ವಿಶೇಷ ಅರ್ಥಗಳು ಲಭಿಸಿವೆ. ಅವುಗಳ ಸಾಮಾನ್ಯ ಅರ್ಥದ ಛಾಯೆಯನ್ನು ಅನುಸರಿಸಿಯೇ ಈ ಹೊಸ ಅರ್ಥಗಳು ಬೆಳೆದುನಿಂತಿವೆ. ಉದಾ. ಮೆನು ಎನ್ನುವ ಪದ ಸಾಮಾನ್ಯವಾಗಿ ಉಪಹಾರ ಗೃಹಗಳಲ್ಲಿ ಬಳಕೆಯಾಗುತ್ತದೆ. ಲಭ್ಯವಿರುವ ತಿನಿಸುಗಳ ಪಟ್ಟಿ ಎಂಬುದು ಅರ್ಥ. ಗಣಕದಲ್ಲಿ ನಿರ್ದಿಷ್ಟ ಕಾರ್ಯವಾಹಿಯಲ್ಲಿ ಲಭ್ಯವಿರುವ ಸೌಲಭ್ಯಗಳು ಎನ್ನುವ ಅರ್ಥದಲ್ಲಿ ಈ ಪದ ಬಳಕೆಯಾಗುವುದು.

ಪದಕೋಶದಲ್ಲಿ ನಡೆಯುವ ಈ ಎರಡೂ ಬಗೆಯ ಒಳಚಲನೆಯಲ್ಲಿ ಒಟ್ಟಾರೆ ಪದಗಳ ಸಂಖ್ಯೆಯಲ್ಲಿ ಹೆಚ್ಚಳವಾಗದಿದ್ದರೂ ಅರ್ಥಸಂಬಂಧಗಳಲ್ಲಿ ವ್ಯತ್ಯಾಸಗಳಾಗುತ್ತವೆ. ಭಾಷಿಕರು ಈ ವ್ಯತ್ಯಾಸಗಳಿಗೆ ಅವಶ್ಯವಾದ ಬಳಕೆಯ ಹೊಂದಾಣಿಕೆಗಳಿಗೆ ಸಿದ್ಧರಾಗಿರಬೇಕಾಗುತ್ತದೆ.

## ಕನ್ನಡ ಬಳಕೆ :ಪದಾಂತ್ಯದ ಬಿಂದುವಿನ ಉಚ್ಚಾರಣೆ ಹೇಗೆ?

1. ಪದಾಂತ್ಯದಲ್ಲಿ ಬಿಂದುವಿರುವಲ್ಲಿ ಅದನ್ನು ಯಾವ ಧ್ವನಿಯೆಂದು ಪರಿಗಣಿಸಬೇಕು? ಸಾಮಾನ್ಯವಾಗಿ ಪದಾಂತ್ಯ ಬಿಂದುವನ್ನು 'ಮ್' ಎಂದು ಉಚ್ಚರಿಸುತ್ತೇವೆ. ಅಲ್ಲದೆ 'ಮ್' ಕಾರದಿಂದ ಕೊನೆಗೊಳ್ಳುವ ಪದಗಳನ್ನು ಬರೆಯುವಾಗ 'ಮ್'ಗೆ ಬದಲಾಗಿ ಬಿಂದುವನ್ನು ಬರೆಯುತ್ತೇವೆ.

   ಸುಖರಾಮ್>ಸುಖರಾಂ
   ರಾಮ್ ವಿಲಾಸ್ ಪಾಸ್ವಾನ್>ರಾಂ ವಿಲಾಸ್ ಪಾಸ್ವಾನ್
   ಟೆಲಿಕಾಮ್>ಟೆಲಿಕಾಂ, ಟೀಮ್>ಟೀಂ
   ಕ್ರೀಮ್>ಕ್ರೀಂ

2. ಎಷ್ಟೋ ವೇಳೆ ಬಿಂದುವಿನಿಂದ ಅಂತ್ಯಗೊಳ್ಳುವ (ಮಕಾರಾಂತ) ರೂಪಗಳಿಗೂ ಮುಂದಿನ ಪದಗಳಿಗೂ ಸಂಧಿಯಾಗುವಂತಿದ್ದರೂ ಬಿಂದುಯುಕ್ತ ರೂಪವನ್ನೇ ಉಳಿಸಿಕೊಳ್ಳುವುದುಂಟು.

   ಟೀಂಗೆ ಸೋಲು – ಟೀಮಿಗೆ ಸೋಲು
   ಕ್ರೀಂ ಅನ್ನು ಬಳಸಿರಿ–ಕ್ರೀಮನ್ನು ಬಳಸಿರಿ
   ಬಿಂದುವು ಪರ್ಯಾಯ ಬರೆವಣಿಗೆ ರೂಪದಲ್ಲಿ ಮಕಾರಾಗುವುದನ್ನು ಗಮನಿಸಿ.

3. ಬಿಂದುವಿನ ಅಂತಸ್ಥರೂಪ 'ನ್' ಆಗಿರುವುದು ಸಾಧ್ಯ. ಹಳಗನ್ನಡದ ಪುರುಷ ವಾಚಿ ಆಕಾರಾಂತ ನಾಮರೂಪಗಳ ಕೊನೆಯಲ್ಲಿ ಬರುವುದು 'ನ್' ಕಾರ

   ರಾಮನ್, ಚಂದಿರನ್, ಇಂದ್ರನ್

ಈ ರೂಪಗಳನ್ನು ಬಿಂದು ಬಳಸಿ ಬರೆಯುವುದುಂಟು. (ರಾಮಂ, ಚಂದಿರಂ, ಇಂದ್ರಂ)ಮುಂದೆ ಚತುರ್ಥಿ ವಿಭಕ್ತಿ ಪ್ರತ್ಯಯ ಹಚ್ಚಿದಾಗಲೂ ಬಿಂದು ಹಾಗೇ ಉಳಿಯುತ್ತದೆ. ಚಂದ್ರಂಗೆ, ರಾಮಂಗೆ, ಇಂದ್ರಂಗೆ

ಈ ಪ್ರಸಂಗದಲ್ಲಿ ಬಿಂದು 'ನ್' ಕಾರದ ಪ್ರತಿನಿಧಿಯೆಂದು ತಿಳಿಯುವುದು ಸುಲಭ. ಈ ನಾಮಪದಗಳಿಗೆ ಇತರ ಪದಗಳು, ಪ್ರತ್ಯಯಗಳು ಸೇರಿದಾಗ ನಕಾರವೇ ಹೊರಬರುವುದು. ಹಳಗನ್ನಡದ ಈ ರೂಪಗಳಿಗೆ ನಡುಗನ್ನಡ, ಹೊಸಗನ್ನಡದಲ್ಲಿ

ಬಿಂದುವಿನಿಂದ ಕೊನೆಗೊಳ್ಳುವ ಬರೆಹ ರೂಪವಿಲ್ಲದಿದ್ದರೂ 'ನ್' ಕಾರ ನಂಟು ಹಾಗೇ ಇದೆ. ಎಲ್ಲ ವಿಭಕ್ತಿ ಪ್ರತ್ಯಯಗಳು ಸೇರಿದಾಗಲೂ 'ನ್' ಕಾರ ಆದೇಶವಾಗುತ್ತದೆಯಷ್ಟೆ (ರಾಮನು, ರಾಮನನ್ನು, ರಾಮನಿಂದ....)ಈ ನಕಾರ ಅಂತಸ್ಥವೇ ಸರಿ.

4. ಆದರೆ ಎಲ್ಲಿ 'ನ್' ಕಾರ ಉಚ್ಚಾರಗೊಳ್ಳಬೇಕೋ ಅಲ್ಲಿ ಅದನ್ನು 'ಮ್' ಎಂದು ಉಚ್ಚರಿಸುವ ಪರಿಪಾಠವಿದೆ. ಹಳಗನ್ನಡ ಪಠ್ಯಗಳನ್ನು ಓದುವಾಗ ಬಿಂದುವಿನಿಂದ ಕೊನೆಯಾಗುವ ರೂಪಗಳನ್ನು 'ಮ್' ಕಾರಾಂತವಾಗಿಯೇ ಓದುವ ತಪ್ಪು ವಿಧಾನವಿದೆ. ಪಂಪಂ ಎಂಬುದನ್ನು ಪಂಪಮ್ ಎನ್ನಬೇಕೋ ಅಥವಾ ಪಂಪನ್ ಎನ್ನಬೇಕೋ? ಬಹುಪಾಲು ಜನರು ಮೊದಲ ಸಾಧ್ಯತೆಯನ್ನೇ ಒಪ್ಪುತ್ತಾರೆ. ಆದರೆ ಎರಡನೆಯ ಸಾಧ್ಯತೆಯೇ ಸರಿ.

5. ಸಂಸ್ಕೃತದಿಂದ ಎರವಲು ಬಂದ ಪದಗಳನ್ನು ಬರೆಯುವಾಗಲೂ 'ಮ್'ಕಾರದ ಬದಲು ಬಿಂದುವನ್ನೇ ಬರೆಯುವುದುಂಟು. ಕೇಶವಂ, ತೋಯಂ, ಆಕಾಶಂ, ಶಶಿವರ್ಣಂ.

ಇಂಥಲ್ಲಿ 'ಮ್' ಕಾರದ ಉಚ್ಚಾರಣೆ ಅನಿವಾರ್ಯ(ಇದು 'ಮ್' ಕಾರವೋ ಅನುಸ್ವಾರವೋ ಎಂಬ ಚರ್ಚೆ ಇಲ್ಲಿ ಬೇಡ. ಕನ್ನಡದ ಮಟ್ಟಿಗಂತೂ ಅದು 'ಮ್' ಕಾರ)

ಈ ಪದಗಳು ಮತ್ತು ಕನ್ನಡದ ನಾಮರೂಪಗಳು (ಅಕಾರಾಂತ ಪುರುಷವಾಚಿ)ಒಂದೇ ಮಾದರಿಯಲ್ಲಿರುವುದರಿಂದ ಎಲ್ಲ ಕಡೆಯೂ 'ಮ್' ಕಾರವನ್ನೇ ಉಚ್ಚರಿಸುವುದು ಬೆಳೆದು ಬಂದಿದೆ.

6. ಬರೆವಣಿಗೆಯಲ್ಲಿ ಗೊಂದಲಗಳಿಲ್ಲ. ಈಗ 'ನ್' ಕಾರಾಂತ ಪದಗಳನ್ನು ಬಿಂದುಯುಕ್ತವಾಗಿ ಬರೆಯುವುದಿಲ್ಲ.

# ಕನ್ನಡ ಪದಕೋಶ – 1

**ಪದಕೋಶ ಬೆಳವಣಿಗೆ**

ಕನ್ನಡ ಪದಕೋಶದ ಲಕ್ಷಣವನ್ನು ಗುರುತಿಸುವ ಯತ್ನವನ್ನು ಮಾಡಿದ ಪ್ರಾಚೀನರು ದೇಶ್ಯ ಮತ್ತು ಅನ್ಯದೇಶ್ಯಗಳೆಂಬ ಗುಂಪುಗಳನ್ನು ಆ ಪದಕೋಶದಲ್ಲಿ ಮಾಡಿದರು. ಅನ್ಯದೇಶ್ಯವೆಂಬ ಗುಂಪಿನಲ್ಲಿ ತತ್ಸಮಗಳು ಸಮಸಂಸ್ಕೃತಗಳು ಇದ್ದವು. ಧ್ವನಿ ನಿಯಮಗಳಿಗೆ ಅನುಗುಣವಾಗಿ ಹೊಂದಿಕೊಂಡ ತದ್ಭವಗಳಿದ್ದವು. ಈ ತದ್ಭವಗಳಲ್ಲಿ ಕನ್ನಡವೇ ರೂಪಿಸಿಕೊಂಡಂಥವು ಕೆಲವಾದರೆ ಪ್ರಾಕೃತಗಳ ಮೂಲಕ ಕನ್ನಡಕ್ಕೆ ಬಂದ ಪದಗಳೂ ಕೆಲವಿದ್ದವು.

ಶತಮಾನಗಳು ಕಳೆದಂತೆ ಅನ್ಯದೇಶ್ಯ ಪದಕೋಶದ ಸ್ವರೂಪ ಕೂಡ ಬದಲಾಗುತ್ತ ಬಂದಿದೆ. ಪರ್ಸೋ-ಅರಾಬಿಕ್ ಮೂಲದ ಪದಗಳು ನೇರವಾಗಿ ಅಥವಾ ಇನ್ನಿತರ ಭಾಷೆಗಳ ಮೂಲಕ ಬಂದು ಸೇರಿವೆ. ನೆರೆಯ ದ್ರಾವಿಡ ಭಾಷೆಗಳಿಂದ, ಮಧ್ಯ ಯುಗದಲ್ಲಿ ರೂಪುಗೊಂಡ ಇನ್ನಿತರ ಇಂಡೋ-ಆರ್ಯನ್ ಭಾಷೆಗಳಿಂದ –ಮುಖ್ಯವಾಗಿ ಹಿಂದಿಯಿಂದ– ಪೋರ್ಚುಗೀಸ್, ಟರ್ಕಿಶ್ ಭಾಷೆಗಳಿಂದ ಪದಗಳು ಬಂದು ಸೇರಿಕೊಂಡಿವೆ.

ಹೀಗೆ ಅನ್ಯದೇಶ್ಯ ಪದಕೋಶ ಹಿಗ್ಗುತ್ತ ಹೋದಂತೆ ದೇಶ್ಯ ಪದಕೋಶದ ವ್ಯಾಪ್ತಿ ಕಡಿಮೆಯಾಗುತ್ತ ಬಂತು. ಈ ಪ್ರಕ್ರಿಯೆಗೆ ಕಾರಣಗಳನ್ನು ಪ್ರತ್ಯೇಕವಾಗಿ ಚರ್ಚಿಸುವುದು ಅವಶ್ಯಕ. ಏಕೆ ಒಂದು ಭಾಷೆಯ ಪದಕೋಶಕ್ಕೆ ಇನ್ನೊಂದು ಭಾಷೆಯಿಂದ ಪದಗಳು ಬಂದು ಸೇರುತ್ತವೆ? ಈ ಪ್ರಶ್ನೆಗೆ ಹಲವು ಉತ್ತರಗಳಿವೆ. ಪಡೆಯುವ ಭಾಷೆಯ ಪದಕೋಶದಲ್ಲಿರುವ ಕೊರತೆಗಳನ್ನು ತುಂಬಲು ನೀಡುವ ಭಾಷೆಯಿಂದ ಪದಗಳನ್ನು ಎರವಲು ಪಡೆಯಲಾಗುತ್ತದೆನ್ನುವ ಸಾಮಾನ್ಯ ನಿರ್ಣಯವನ್ನು ಭಾಷಾಶಾಸ್ತ್ರಜ್ಞರು ಮಾಡಿದ್ದಾರೆ. ಆದರೆ ಎಲ್ಲ ಎರವಲುಗಳೂ ಒಳ ಬಂದಿರುವುದು ಯಾವಾಗಲೂ ಕೊರತೆಯನ್ನು ತುಂಬುವುದಕ್ಕಾಗಿ ಮಾತ್ರ ಅಲ್ಲ. ಇದಕ್ಕೆ ಸಾವಿರಾರು ನಿದರ್ಶನಗಳಿವೆ. 'ಮೈ' ಪದವಿದ್ದೂ 'ದೇಹ' ಬಂದು ಸೇರುತ್ತದೆ. 'ಗಂಡು, ಹೆಣ್ಣು' ಪದಗಳಿದ್ದೂ 'ವಧೂ, ವರ' ಪದಗಳು ಸೇರುತ್ತವೆ. 'ಮದುವೆ' ಪದವಿದ್ದೂ ವಿವಾಹ ಬಂದು ಸೇರುತ್ತದೆ. ಇಂಥ ಸೇರುವಿಕೆಗೂ ಕಾರಣಗಳಿವೆ. ಆದರೆ ಹೀಗೆ ಇರುವ ಪದದ ಜೊತೆಗೆ ಇನ್ನೊಂದು ಪದವು ಬಂದು ಸೇರಿದಾಗ ಮೊದಲು ಇದ್ದದ್ದರ ಅರ್ಥವ್ಯಾಪ್ತಿ

ಹಾಗೂ ಬಳಕೆಯ ವಿಧಾನಗಳು ಬದಲಾಗುತ್ತದೆ. ರಸ್ತೆ, ರೋಡು, ಬೀದಿ(<ವೀಥಿ)ಗಳು ಬಂದಾಗ 'ಹಾದಿ', 'ದಾರಿ'ಗಳು ಸೀಮಿತ ವಲಯದಲ್ಲಿ ಬಳಕೆಯಾಗತೊಡಗುತ್ತವೆ. ಅಂದರೆ ಅನ್ಯದೇಶ್ಯ ಪದಕೋಶದ ವಿಸ್ತಾರ, ಪಡೆಯುವ ಭಾಷೆಯ ಸಾಮರ್ಥ್ಯವನ್ನು ಪೂರ್ಣಗೊಳಿಸಲು ಮಾತ್ರ ನಡೆಯುತ್ತದೆ ಎನ್ನುವಂತಿಲ್ಲ; ಅದರ ಸಮತೋಲನವನ್ನು ಪಲ್ಲಟಗೊಳಿಸುವ ಕ್ರಿಯೆಯೂ ಈ ಎರವಲು ಪಡೆಯುವಿಕೆಯ ಪರಿಣಾಮವಾಗಿರುತ್ತದೆ.

ಪದಕೋಶದ ಜತೆಗೆ ಭಾಷೆಗೆ ಪದರಚನೆಯ ನಿಯಮಗಳೂ ಇರುತ್ತವಷ್ಟೆ. ಈ ನಿಯಮಗಳನ್ನು ಬಳಸಿಯೇ ಭಾಷೆಯಲ್ಲಿ ಆಕೃತಿಗಳನ್ನು ಬಳಸಿ ಪದಗಳನ್ನು ರಚಿಸಲಾಗುತ್ತದೆ. ಬಡ ಮತ್ತು ತನ ಎಂಬ ಆಕೃತಿಗಳಿಂದ ಬಡತನ ಎಂಬ ಪದವನ್ನು ಪಡೆಯಲು ಕನ್ನಡದ ಪದರಚನೆಯ ನಿಯಮಗಳನ್ನು ಬಳಸಲಾಗಿದೆ.

**(ಎ)+ತನ=ಎ ಗುಣವುಳ್ಳ**: ಲಕ್ಷಣವುಳ್ಳ ಸ್ಥಿತಿ ಎಂಬುದಾಗಿ ಈ ನಿಯಮವನ್ನು ನಿರೂಪಿಸೋಣ. ಎ ಎಂಬ ಆಕೃತಿಯ ಜಾಗದಲ್ಲಿ ಬಡ, ದೊಡ್ಡ, ಸಣ್ಣ, ಒಳ್ಳೆಯ, ಹಿರಿ, ದುಡುಕು, ಜಿಪುಣ ಮುಂತಾದ ಆಕೃತಿಗಳು ಬರಬಲ್ಲವು. ಯಾವುದೇ ಲಭ್ಯ ಆಕೃತಿಯನ್ನಾಗಲೀ ಬಳಸಿ ಮತ್ತು ನಿಯಮದಿಂದ ಒಂದು ಪದವನ್ನು ಪಡೆಯಲಾಗುವುದಿಲ್ಲ. ಕಣ್ಣುತನ ಎಂಬ ಪದ ಅಸಾಧ್ಯ. ಅಂದರೆ 'ಎ'ಯ ವ್ಯಾಪ್ತಿಗೆ ಬರುವ ಆಕೃತಿಗಳ ಸಂಖ್ಯೆ ಸೀಮಿತವಾಗಿರುತ್ತವೆ. ಇಂಥ ನಿಯಮಗಳು ಭಾಷೆಯಲ್ಲಿ ಹಲವಾರಿರುತ್ತವೆ.

ಈ ನಿಯಮಗಳಲ್ಲಿ ಮುಖ್ಯವಾಗಿ ಎರಡು ವಿಧಗಳು: 1. ಆಂತರಿಕ, 2. ಬಾಹ್ಯ, ಈ ವರ್ಗಗಳಿಗೆ ನೀಡಿರುವ ಹೆಸರು ಅಷ್ಟೇನೂ ಯುಕ್ತವಾದವಲ್ಲ, ಇರಲಿ. ಆಂತರಿಕ ನಿಯಮಗಳೆಂದರೆ ಅವು ಭಾಷಿಕರ ಪದಕೋಶದ ಒಟ್ಟು ರಚನೆಯಲ್ಲೇ ಅಂತರ್ಗತವಾಗಿರುತ್ತವೆ. ಅಂದರೆ ಅವುಗಳನ್ನು ಬಳಸಿ ರೂಪಿಸಿದ ಪದಗಳು ಪದಕೋಶದ ಭಾಗವಾಗಿ ಬಿಟ್ಟಿರುತ್ತವೆ. ಅಂಥ ನಿಯಮಗಳನ್ನು ಬಳಸುತ್ತಿರುವ ಬಗ್ಗೆ ಭಾಷಿಕರು ಜಾಗ್ರತರಾಗಿರುವುದಿಲ್ಲ.

ಆಡು, ನೋಡು, ಊಡು, ಕೂಡು, ಮುಂತಾದ ಕ್ರಿಯಾಧಾತುಗಳಿಂದ ಕ್ರಮವಾಗಿ ಆಟ, ನೋಟ, ಊಟ ಮತ್ತು ಕೂಟ ಎಂಬ ಪದಗಳು ರೂಪುಗೊಂಡಿವೆ. ಈ ಪದಗಳು ರೂಪುಗೊಂಡ ನಿಯಮಗಳು ಕನ್ನಡಿಗರ ಅರಿವಿನ ಪರಿಧಿಯಲ್ಲಿ ಬರುವುದಿಲ್ಲ. ಆದ್ದರಿಂದ ಇಂತ ಆಂತರಿಕ ನಿಯಮಗಳನ್ನು ಪದಕೋಶ ರಚಕರ ಮಟ್ಟಿಗೆ ಹೊರತಂದು ತಿಳಿಯಬೇಕು. ಕನ್ನಡಿಗರ ಪದಕೋಶದಲ್ಲಿ ಆಡು, ನೋಡು, ಊಡು, ಕೂಡು ಆಕೃತಿಗಳಂತೆ ಆಟ, ನೋಟ, ಊಟ, ಕೂಟ ಪದಗಳು ಬೇರೆ ಬೇರೆಯಾಗಿಯೇ ಇರುತ್ತವೆ. ಅಂದರೆ ಕನ್ನಡಿಗರ ಮಟ್ಟಿಗೆ ಇಂಥ ನಿಯಮಗಳು ಇದ್ದೂ ಇಲ್ಲದಂತೆಯೇ ಸರಿ.

ಬಾಹ್ಯ ನಿಯಮಗಳು ಹೀಗಲ್ಲ: ಇವುಗಳನ್ನು ಬಳಸಿ ಭಾಷಿಕರು ತಾವೇ ಪದಗಳನ್ನು ರಚಿಸುತ್ತಾರೆ. ಹೀಗೆ ರಚಿಸಿದ ಪದಗಳು 'ಕಲಿತಪದ' ಗಳಾಗಿರುವುದಿಲ್ಲ. ಬಳಕೆಯ ಸಂದರ್ಭದಲ್ಲಿ ಈ ಪರನಿಗಳನ್ನು ಉಪಯೋಗಿಸಿದ ರಚನೆಗಳಾಗಿರುತ್ತವೆ. ಈ ಅಂಶ

ಮೇಲುನೋಟಕ್ಕೆ ವಿಚಿತ್ರವಾಗಿ ಕಾಣುತ್ತದೆ. ಏಕೆಂದರೆ ಭಾಷಿಕರನ್ನು ಕೇಳಿದರೆ ಅವರು ತಾವು ಯಾವ ಪರನಿಯನ್ನು ಬಳಸುತ್ತಿದ್ದೇವೆ ಎಂಬುದು ಗೊತ್ತಿಲ್ಲವೆಂದೇ ಹೇಳುತ್ತಾರೆ. ಅವರು ಹೇಳುವುದು ನಿಜ. ಆ ನಿಯಮವನ್ನು ಬಳಸುತ್ತಿದ್ದೇವೆಂದು ತಿಳಿಯದೆಯೂ ಅವರು ಅದನ್ನು ಬಳಸುತ್ತಿರುತ್ತಾರೆ. ಇದನ್ನು ಸಾಧಿಸಿ ತೋರಿಸುವುದು ಸುಲಭ, ಭಾಷಿಕರು ತಾವು ಇದುವರೆಗೂ ಬಳಸದಿರುವ ಎಷ್ಟೋ ರಚನೆಗಳನ್ನು, ಅಂದರೆ ಪದಕೋಶದ ಭಾಗವಾಗಿ 'ಕಲಿತಿರದ' ರಚನೆಗಳನ್ನು ತಮ್ಮ ಭಾಷಾಪ್ರಯೋಗದಲ್ಲಿ ರೂಪಿಸುತ್ತಿರುತ್ತಾರೆ. ತಾವೇ ಇಂಥ ಹೊಸ ರಚನೆಗಳನ್ನು ರೂಪಿಸಬಹುದು, ಅಥವಾ ಬೇರೆಯವರು ರೂಪಿಸಿದ ರಚನೆಗಳನ್ನು ಸಹಜವೆಂಬಂತೆ ಒಪ್ಪುತ್ತಲೂ ಇರಬಹುದು.

(ಬಿ)+(ಇ)ಗ ಎಂದರೆ (ಬಿ)ಕೆಲಸವನ್ನು ಮಾಡುವವನು ಎಂಬ ಪರನಿ ಕನ್ನಡದಲ್ಲಿದೆ. (ಬಿ) ಹಲವಾರು ಕ್ರಿಯಾಧಾತುಗಳನ್ನು ಹೊಂದಬಲ್ಲುದು. ಅದಕ್ಕೆ ಸೇರುವ ಪ್ರತ್ಯಯ ಇಗ ಇಲ್ಲವೇ ಗ, ಇವುಗಳಲ್ಲಿ ಯಾವುದನ್ನು ಆಯ್ಕೆ ಮಾಡಬೇಕೆಂಬುದು (ಬಿ)ಯ ಕೊನೆಯ ಸ್ವನವನ್ನು ಅವಲಂಬಿಸಿರುತ್ತದೆ. ಅದು ಬೇರೆಯೇ ಸಂಧಿನಿಯಮ. ಪರನಿಯನ್ನು ಬಳಸಿ ಓದುಗ, ನೋಡುಗ, ಹೇಳುಗ ಎಂಬ ರೂಪಗಳನ್ನು ರಚಿಸಿ ಬಳಸುತ್ತಿದ್ದೇವೆ. ಆದರೆ ಈ ನಿಯಮ ಇಂಥ ಇನ್ನೂ ಹಲವು ರೂಪಗಳನ್ನು ರಚಿಸಲು ಅವಕಾಶ ಕಲ್ಪಿಸಿಕೊಟ್ಟಿದೆ. ಈಚಿನ ದಿನಗಳಲ್ಲಿ ದಿನಪತ್ರಿಕೆಯೊಂದು ಕ್ರಿಕೆಟ್ ಆಟದ ವರದಿಯ ಸಂದರ್ಭದಲ್ಲಿ 'ಸ್ಪಿನ್ನಿಗ' ಎಂಬ ಪದವನ್ನು ಬಳಸಿತ್ತು. ಈ ರೂಪಸಿದ್ಧಿ ಮೇಲೆ ಹೇಳಿದ ಪರನಿಯಿಂದ ಸಾಧ್ಯ. ಈ ಪದವನ್ನು ರಚಿಸಿದ್ದು ಒಬ್ಬ ಕನ್ನಡಿಗರಾದರೂ ಅದನ್ನು ಓದಿದವರೆಲ್ಲ ಅದರ ಅರ್ಥವನ್ನು ಗ್ರಹಿಸಿದ್ದಾರೆ. ಅಂದರೆ ರೂಪಿಸಿದ ಹಾಗೂ ಓದಿದ ಎಲ್ಲರಲ್ಲೂ ಈ ನಿಯಮ ಪ್ರವೃತ್ತವಾಗಿದೆ ಎಂದರ್ಥ. ಈ ರೂಪವನ್ನು ಒಪ್ಪಲು ತಗಾದೆ ಮಾಡುವ ಮಾತು ಬೇರೆ. ಅಂಥ ತಗಾದೆ, ಪದದ ಹೊಸತನವನ್ನು ಕುರಿತು ಇರುತ್ತದೆಯೇ ಹೊರತು ಅದರ ನಿಯಮಬದ್ಧತೆ ಹಾಗೂ ಸಾಧುತ್ವವನ್ನು ಪ್ರಶ್ನಿಸುವುದಿಲ್ಲ. ಇದೇ ಪರನಿಯನ್ನು ಬಳಸಿ ಓಡುಗ, ಬೇಡುಗ, ತಿನ್ನುಗ, ಮಾರುಗ ಎಂಬ ರೂಪಗಳನ್ನು ಸೃಷ್ಟಿಸಬಹುದು. ಈ ರೂಪಗಳು ಬಳಕೆಯಲ್ಲಿ ಉಳಿಯುತ್ತವೋ ಇಲ್ಲವೋ ಎಂಬುದು ಮುಖ್ಯವಲ್ಲ. ಇವು ನಿಯಮಬದ್ಧವಾಗಿವೆ. ಅಂದರೆ ಮೇಲೆ ಹೇಳಿದ ಪರನಿಯ ಸಾಧ್ಯತೆಗಳಿವು.

ಆಂತರಿಕ ನಿಯಮಗಳು ಒಂದರ್ಥದಲ್ಲಿ ಸ್ಥಗಿತಗೊಂಡವು. ಬಾಹ್ಯ ನಿಯಮಗಳು ಚಲನಶೀಲ. ಭಾಷೆಯ ಪದಕೋಶದ ಪರನಿಗಳು ಕಾಲದಿಂದ ಕಾಲಕ್ಕೆ ತಮ್ಮ ಸ್ವರೂಪದಲ್ಲಿ ಬದಲಾವಣೆ ಮಾಡಿಕೊಳ್ಳುತ್ತಿರುತ್ತವೆ. ಬಾಹ್ಯ ನಿಯಮಗಳು ತಮ್ಮ ಚಲನಶೀಲತೆಯನ್ನು ಕಳೆದುಕೊಂಡು ಆಂತರಿಕವಾಗುತ್ತಾ ನಡೆದ ಉದಾಹರಣೆಗಳೂ ಸಿಗುತ್ತವೆ.

ಕನ್ನಡದ ಪ್ರಾಚೀನ ರೂಪದಲ್ಲಿ ಮಾಟ್ಕೆ, ಪೇಟ್ಕೆ, ತೋಜ್ಕೆ, ಕಾಣ್ಕೆ ಮುಂತಾದ ಪದಗಳನ್ನು ಕಾಣುತ್ತೇವೆ. ಈ ರೂಪಗಳ ಹಿಂದಿನ ಪರನಿ ಹೀಗಿದೆ.

(y)+ಕೆ=(y)ನ ನಾಮರೂಪ.

ಆದರೆ ಇಂದಿನ ಕನ್ನಡದಲ್ಲಿ ಈ ಪರನಿ ತನ್ನ ಲಕ್ಷಣವನ್ನು ಬದಲಾಯಿಸಿಕೊಂಡಿದೆ.

1. ಬಹು ಹಿಂದೆಯೇ ಪದಮಧ್ಯದ ವ್ಯಂಜನ ದ್ವಿತ್ವದ ನಡುವೆ ಸ್ವರಭಕ್ತಿಯ ಕಾರಣದಿಂದ 'ಇ' ಕಾರಾಗಮವಾಯಿತು.

ಹೇಳಿಕೆ, ತೋರಿಕೆ, ಕಾಣಿಕೆ ಮುಂತಾಗಿ ಬದಲಾದ ರೂಪಗಳು ಬರತೊಡಗಿದವು. ಆದರೆ ಈ ಪರನಿ ತನ್ನ ಚಲನಶೀಲತೆಯನ್ನು ಕಳೆದುಕೊಂಡಿದೆ. ಈಗ ಅದನ್ನು ಬಳಸಿ ಹೊಸರೂಪಗಳನ್ನು ಸಿದ್ಧಪಡಿಸುವುದು ಸಾಧ್ಯವಾಗುತ್ತಿಲ್ಲ.

ಇನ್ನೊಂದು ಹೊಸ ಪರನಿ ಅದರ ಜಾಗವನ್ನು ಆಕ್ರಮಿಸಿದೆ, ಇದರ ಪ್ರಕಾರ

(y)+ಇಕೆ=(y)ನ ಕ್ರಿಯಾನಾಮ,
(y) ಎಂಬುದು ಅಪೂರ್ಣ ಕೃದಂತ ಕ್ರಿಯಾರೂಪ,

ಹೇಳು–ಹೇಳುವ–ಹೇಳುವಿಕೆ
ನೋಡು–ನೋಡುವ–ನೋಡುವಿಕೆ
ಕೊಡು–ಕೊಡುವ–ಕೊಡುವಿಕೆ
ತೋರಿಸು–ತೋರಿಸುವ–ತೋರಿಸುವಿಕೆ

ಹೀಗೆ ಈ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಈ ರೂಪಾವಳಿಗೆ ವಿನಾಯಿತಿಯೇ ಇಲ್ಲ. ಸಂಸ್ಕೃತದಿಂದ ಪಡೆದ ನಾಮರೂಪಗಳಿಂದ ಸಾಧಿತವಾದ ಕ್ರಿಯಾರೂಪಗಳಿಗೂ ಈ ಪರನಿ ಅನ್ವಯಿಸುತ್ತದೆ. ಉದಾ: ಸ್ವೀಕರಿಸುವಿಕೆ, ಜನಿಸುವಿಕೆ, ಸುಖಿಸುವಿಕೆ ಇತ್ಯಾದಿ.

ಪದಕೋಶದ ಬೆಳವಣಿಗೆಯಲ್ಲಿ ಹೀಗೆ ಪರನಿಗಳಲ್ಲಿ ಆಗುವ ಬದಲಾವಣೆ ಕೂಡ ಗಮನಾರ್ಹ. ಕನ್ನಡ ಅನ್ಯದೇಶ್ಯ ಪದಕೋಶವನ್ನು ಮಾತ್ರ ಎರವಲು ಪಡೆದಿಲ್ಲ. ಅದರ ಪರನಿಗಳಲ್ಲಿ ಕೆಲವನ್ನಾದರೂ ಪಡೆದಿರುವುದು ಗಮನಾರ್ಹ.

ಸಂಸ್ಕೃತ ಪರನಿಯೊಂದರಿಂದ ಆ ಭಾಷೆಯಲ್ಲಿ ರಾಷ್ಟ್ರೀಕರಣ, ಸ್ವೀಕರಣ, ದೀರ್ಘೀಕರಣ ಮುಂತಾದ ರೂಪಗಳನ್ನು ಪಡೆಯಬಹುದು. ಆಧುನಿಕ ಕನ್ನಡದಲ್ಲಿ ಈ ರೂಪಗಳೊಡನೆ ನಗದೀಕರಣ, ಕೈಗಾರೀಕರಣ ಎಂಬ ರೂಪಗಳೂ ಸಿದ್ಧವಾಗಿವೆ. ಈ ರೂಪಗಳ ರಚನೆಗೆ ಸಂಸ್ಕೃತದ ಪರನಿಯೇ ಕಾರಣ. ಏಕೆಂದರೆ ಈ ರಚನೆಗಳ ಪೂರ್ವಪದಗಳು ಕ್ರಮವಾಗಿ 'ನಗದು' ಮತ್ತು 'ಕೈಗಾರಿಕೆ'ಗಳಾಗಿವೆ. ಇವುಗಳಲ್ಲಿ ಮೊದಲನೆಯದು ಪರ್ಸೋ-ಅರಾಬಿಕ್ ಮೂಲದ ಪದವಾಗಿದ್ದು, ಎರಡನೆಯದು ಕನ್ನಡದ ದೇಶ್ಯಶಬ್ದವಾಗಿದೆ. ಅಂದರೆ ಈ ಪರನಿಯನ್ನೇ ಕನ್ನಡ ತನ್ನದೆಂಬಂತೆ ಬಳಸಿದೆ.

ಭಾಷೆಯ ಪದಕೋಶದ ಬೆಳವಣಿಗೆಯಿಂದ ಅದರ ಸಮತೋಲನದಲ್ಲಿ ಆಗುವ ಏರುಪೇರುಗಳು ಹಾಗೂ ಅದರ ಪರನಿಗಳಲ್ಲಿ ಆಗುವ ಪಲ್ಲಟಗಳು ಕುತೂಹಲಕಾರಿ. ಭಾಷೆಯ ಚರಿತ್ರೆಯನ್ನು ಬರೆಯುವವರಿಗೆ ಇದು ಅತ್ಯಂತ ಮಹತ್ತ್ವದ ಒಳನೋಟಗಳನ್ನು ಕೊಡಬಲ್ಲುದು.

ಪದಕೋಶಕ್ಕೆ ಚರಿತ್ರೆ ಇರುವಂತೆ ಒಂದು ವಾಸ್ತವವೂ ಇರುತ್ತದೆ. ಅಂದರೆ ಒಂದು ನಿರ್ದಿಷ್ಟ ಕಾಲಮಾನದಲ್ಲಿ ಭಾಷೆಯ ಪದಕೋಶ ಹೀಗಿರುತ್ತದೆ ಎಂಬುದನ್ನೂ ಗಮನಿಸಬೇಕಾಗುತ್ತದೆ. ಆದರೆ ನಿರ್ದಿಷ್ಟ ಕಾಲಮಾನದ ಪದಕೋಶದಲ್ಲೂ ಪರಿವರ್ತನೆಯ ಸೂಚನೆಗಳು ಕಾಣಸಿಗುತ್ತವೆ. ಈ ಸೂಚನೆಗಳು ಭಾಷಿಕವಾಗಿ ತೋರಿದರೂ ಅವುಗಳ ಕಾರಣಗಳು ಭಾಷೇತರವೂ ಆಗಿರುವುವು.

ಕನ್ನಡದ ಪದಕೋಶ ಈ ಹೊಸ ರೂಪಗಳಿಗಾಗಿ ಮುಖ್ಯವಾಗಿ ಇಂಗ್ಲಿಶ್ ಮತ್ತು ಸಂಸ್ಕೃತ ಭಾಷೆಗಳನ್ನು ಅವಲಂಬಿಸಿದೆ. ಈ ಅವಲಂಬನೆಯ ಸ್ವರೂಪವನ್ನು ನಾವು ವಿವರವಾಗಿ ಗಮನಿಸಬೇಕಾಗಿದೆ. ಪದಕೋಶಕ್ಕೆ ಇನ್ನೊಂದು ಭಾಷೆಯ ಪದಗಳಾಗಲೀ ಪರನಿಗಳಾಗಲೀ ಬರುವುದು ಭಾಷಾಸಂಪರ್ಕ ಸ್ಥಿತಿಯಿಂದಾಗಿ. ಭಾಷಾಸಂಪರ್ಕದಲ್ಲಿ ಹಲವು ಬಗೆಗಳಿವೆ. ಹಾಗೂ ಭಾಷಾಸಂಪರ್ಕದ ಹಲವು ಪರಿಣಾಮಗಳಲ್ಲಿ ಪದಕೋಶದ ವ್ಯತ್ಯಾಸ ಒಂದು ಮಾತ್ರ. ಈಗ ಕನ್ನಡ ಮತ್ತು ಸಂಸ್ಕೃತಗಳ ಸಂಬಂಧವನ್ನು ಭಾಷಾಸಂಪರ್ಕವೆಂದು ವ್ಯಾಖ್ಯಾನಿಸಲು ಬರುವುದಿಲ್ಲ. ಸಾವಿರಾರು ವರ್ಷಗಳ ಹಿಂದಿನ ಪರಿಸ್ಥಿತಿ ಈಗ ಇಲ್ಲ. ಸಂಸ್ಕೃತ ಭಾಷಿಕರಾಗಲಿ, ಸಂಸ್ಕೃತವನ್ನು ರಾಜಕೀಯ ಮಾಧ್ಯಮವನ್ನಾಗಿ ಮಾಡಿದ ಅಧಿಕಾರ ಕೇಂದ್ರಗಳಾಗಲೀ, ಧಾರ್ಮಿಕ ಸಂಸ್ಥೆಗಳಾಗಲೀ ಈಗ ಇಲ್ಲ. ಹಾಗಿದ್ದರೂ ಕನ್ನಡವು ಸಂಸ್ಕೃತ ಪದಗಳನ್ನೇ ಹೆಚ್ಚಾಗಿ ರೂಪಿಸುತ್ತಿದೆ. ತನ್ನ ಪದಕೋಶವನ್ನು ವೃದ್ಧಿಗೊಳಿಸಿಕೊಳ್ಳುತ್ತಿದೆ. ಅಂದರೆ ಕನ್ನಡ–ಸಂಸ್ಕೃತಗಳ ನಡುವೆ ವ್ಯವಸ್ಥಿತ ಭಾಷಾಸಂಪರ್ಕ ಇರದ ಈ ಹೊತ್ತಿನಲ್ಲೂ ಹೀಗೆ ಸಂಸ್ಕೃತ ಭಾಷೆಯ ಪದಗಳು ಕನ್ನಡ ಪದಕೋಶದಲ್ಲಿ ಸೇರುತ್ತಿವೆಯಲ್ಲ ಇದು ಹೇಗೆ? ವಾಸ್ತವವಾಗಿ ಕನ್ನಡ ಈಗ ಸಂಸ್ಕೃತದಿಂದ ಪದಗಳನ್ನು ಸ್ವೀಕರಿಸುತ್ತಿಲ್ಲ. ಈಗಾಗಲೇ ಸ್ವೀಕರಿಸಿದ ಪದರೂಪಗಳು ಹಾಗೂ ಪರನಿಗಳನ್ನು ಬಳಸಿ ತಾನೇ ಹೊಸ ರೂಪಗಳನ್ನು ರಚಿಸಿಕೊಳ್ಳುತ್ತಿದೆ. ಈ ರೂಪಗಳು ಹೆಸರಿಗೆ ಸಂಸ್ಕೃತದವು; ಆದರೆ ಅವುಗಳ ರಚನೆ ಹಾಗೂ ಬಳಕೆಯ ಹೊಣೆ ಕನ್ನಡದ್ದು.

ಕನ್ನಡ ತಾನೇ ರೂಪಿಸಿಕೊಳ್ಳುತ್ತಿರುವ ಸಂಸ್ಕೃತಗಂಧೀ ರೂಪಗಳ ಜತೆಗೆ ಅನ್ಯಭಾಷೆಗಳ ಮೂಲಕವೂ ಸಂಸ್ಕೃತ ರೂಪಗಳನ್ನು ಪಡೆದುಕೊಳ್ಳುತ್ತಿದೆ. ಅದರಲ್ಲೂ ಹಿಂದಿಯಿಂದ ಇಂಥ ಪದರಾಶಿ ಕನ್ನಡಕ್ಕೆ ಧಾಳಿಯಿಡುತ್ತಿದೆ 'ವಿಪಕ್ಷ' ವೆಂಬ ಈಚಿನ ಪದವನ್ನೇ ಗಮನಿಸಿ, ಇದರ ಆಕರ ಸಂಸ್ಕೃತವಾದರೂ ಕನ್ನಡವು ಹಿಂದಿಯ ಮೂಲಕ ಅದನ್ನು ಪಡೆದಿದೆ. ವಿರೋಧಪಕ್ಷವೆಂಬ ಅರ್ಥ ಕೂಡ ಹಿಂದಿಯಿಂದಲೇ ಬಂದದ್ದು. ಹೀಗೆ ಸಂಸ್ಕೃತ ರೂಪಗಳನ್ನು ಅನ್ಯಭಾಷೆಗಳ ಮೂಲಕ ಪಡೆಯುವ, ಹಾಗೆ ಪಡೆದ ಪದಗಳನ್ನು ಅಧಿಕೃತವಾಗಿ ಬಳಸತೊಡಗುವ ಪ್ರಕ್ರಿಯೆ ಕನ್ನಡ ಪದಕೋಶದಲ್ಲಿ ಜತೆಜತೆಯಾಗಿಯೇ ನಡೆಯುತ್ತಿದ್ದು ಇದರ ಪರಿಣಾಮಗಳನ್ನು ಅಧ್ಯಯನ ಮಾಡಬೇಕಾಗಿದೆ.

ಸೆಕ್ರೆಟರಿ ಪದದ ಜತೆಗೆ ಕನ್ನಡವು ರೂಪಿಸಿಕೊಂಡ ಕಾರ್ಯದರ್ಶಿ(ಸಂ) ಪದವಿದೆ. ಮಿನಿಸ್ಟರ್ ಪದದ ಜತೆಗೆ ಕನ್ನಡವು ರೂಪಿಸಿಕೊಂಡ ಸಚಿವ ಮತ್ತು ಮಂತ್ರಿ ಪದಗಳಿವೆ. ಈಚೆಗೆ ಸೆಕ್ರೆಟರಿ ಎಂಬ ಅರ್ಥದಲ್ಲಿ ಸಚಿವ ಪದವನ್ನೇ ಹಿಂದಿ ರೂಪಿಸಿಕೊಂಡಿದ್ದು ಕನ್ನಡಕ್ಕೆ ಪ್ರವೇಶ ಪಡೆಯತೊಡಗಿದೆ. ಇದು ಕೇವಲ ಅರ್ಥದ ಗೊಂದಲದ ಪ್ರಶ್ನೆಯಲ್ಲ. ಪದಕೋಶದಲ್ಲಿ ಜಾರಿಯಲ್ಲಿರುವ ಪದರೂಪಗಳ ಹಾಗೂ ಅವುಗಳು ರೂಪುಗೊಂಡ ಪ್ರಕ್ರಿಯೆಗಳ ಅಧಿಕೃತತೆಯ ಪ್ರಶ್ನೆ. ಸಂಪರ್ಕ ಮಾಧ್ಯಮ ಹಾಗೂ ಆಡಳಿತ ವಿಧಾನದ ಮೂಲಕ ಹಿಂದಿಯಲ್ಲಿ ರೂಪುಗೊಂಡ ಸಂಸ್ಕೃತ ರಚನೆಗಳು ಕನ್ನಡಕ್ಕೆ ಬರುತ್ತಿರುವ ಪ್ರಕ್ರಿಯೆ ಹಾಗೂ ಈಗಾಗಲೇ ಕನ್ನಡದಲ್ಲಿ ಬಳಕೆಯಲ್ಲಿದ್ದ ಸಂಸ್ಕೃತ ಪರನಿಗಳನ್ನು ಬಳಸಿ ಕನ್ನಡವೇ ಪದಗಳನ್ನು ರೂಪಿಸುವ ಪ್ರಕ್ರಿಯೆ ಇವೆರಡೂ ಮುಖಾಮುಖಿಯಾಗಿವೆ. ಕನ್ನಡ ಪದಕೋಶಕ್ಕೆ ಇಂಗ್ಲಿಶ್ ಪದಗಳು ಬಂದು ಸೇರುತ್ತಿರುವ ಬಗೆಯೇ ಬೇರೆ. ಇದು ವ್ಯವಸ್ಥಿತ ಭಾಷಾಸಂಪರ್ಕದ ಪರಿಣಾಮ. ಇಂಗ್ಲಿಶ್ ಮೂಲಕ ಪದಗಳನ್ನು ಕನ್ನಡ ಸಂಕಥನಗಳಲ್ಲಿ ಯಥಾವತ್ತಾಗಿ ಬಳಸುವ ವಿಧಾನವು ಭಾಷಾಬಳಕೆಯ ಹಲವಾರು ವಲಯಗಳಲ್ಲಿ ತೀವ್ರಗತಿಯಲ್ಲಿ ಬಳಕೆಯಾಗುತ್ತಿದೆ. ಈ ಕಾರಣದಿಂದ ಕನ್ನಡ ಆ ಪದಗಳನ್ನು ತನ್ನ ಪದಕೋಶದೊಳಗೆ ಇರಿಸಿಕೊಳ್ಳುತ್ತಿದೆ.

ಇಂಗ್ಲಿಶ್ ಪದಗಳು ಕನ್ನಡಕ್ಕೆ ಸೇರುವಾಗ, ಇಂಗ್ಲಿಶಿನ ಯಾವ ಪರನಿಗಳು ಆ ಪದಗಳನ್ನು ಸಂಕಥನದಲ್ಲಿ ಬಳಸಲು ಅನುವು ಮಾಡಿಕೊಡುತ್ತವೆ ಎಂಬ ಬಗ್ಗೆ ಸಾಕಷ್ಟು ಗೊಂದಲಗಳು ಇವೆ. ಉದಾಃ ನುಡಿಬೆರಕೆಯ ಒಂದು ಸಂದರ್ಭವನ್ನು ಗಮನಿಸಿ:

1. ಅವನು ಕಾರ್ ಡ್ರೈವ್ ಮಾಡಬಲ್ಲ

2. ಅವನು ಕಾರ್ ಡ್ರೈವಿಂಗ್ ಮಾಡಬಲ್ಲ.

ಈ ವಾಕ್ಯಗಳಲ್ಲಿ ಎರಡೂ ನುಡಿಬೆರಕೆಯಿಂದ ಕೂಡಿವೆ. ಎರಡೂ ಕನ್ನಡದಲ್ಲಿ ಬಳಕೆಯಾಗಬಲ್ಲವು. ಎರಡರ ಬಳಕೆಯ ಪ್ರಮಾಣದಲ್ಲಿ ವ್ಯತ್ಯಾಸ ಇರಬಹುದು. ಅದು ಮುಖ್ಯವಲ್ಲ, ಈ ವಾಕ್ಯಗಳಲ್ಲಿ ಡ್ರೈವ್ ಎಂಬ ಪದವನ್ನು ಕ್ರಿಯಾರ್ಥದಲ್ಲಿ ಪ್ರಯೋಗಿಸಲು 'ಮಾಡು' ಎಂಬ ಸಹಕ್ರಿಯಾಪದವನ್ನೇ ಬಳಸಲಾಗಿದೆ. ಆದರೆ ಎರಡನೆಯ ವಾಕ್ಯದಲ್ಲಿ ಡ್ರೈವ್ ಪದದ ಕ್ರಿಯಾನಾಮ ರೂಪ ಡ್ರೈವಿಂಗ್ ಅನ್ನು ಆಯ್ಕೆ ಮಾಡಿ ಅದಕ್ಕೂ ಮಾಡು ಸಹಕ್ರಿಯಾಪದವನ್ನೇ ಬಳಸಲಾಗಿದೆ. ಇವೆರಡರಲ್ಲಿ ಯಾವುದು ಸರಿ ಎಂಬ ಪ್ರಶ್ನೆಗಿಂತ ಇವೆರಡನ್ನೂ ಬಳಸಲು ಅವಕಾಶ ನೀಡಿದ ಸಂದರ್ಭ ನಮಗೆ ಮುಖ್ಯ. ಇಂಗ್ಲಿಶ್‌ನಿಂದ ಪದಗಳನ್ನು ಎರವಲು ಪಡೆದರೂ ಆ ಪದಗಳಿಗೆ ಸಂಬಂಧಿಸಿದ ಪರನಿಗಳ ಬಗೆಗೆ ನಮಗಿನ್ನೂ ಗೊಂದಲಗಳು ಹಾಗೇ ಉಳಿದಿವೆ.

ಸಾಮಾನ್ಯವಾಗಿ ಕನ್ನಡದ ಆಧುನೀಕರಣದ ಬಗೆಗೆ ಮಾತನಾಡುವ ಬಹುಪಾಲು ಜನ ಪದಕೋಶವು ವಿಸ್ತಾರಗೊಳ್ಳುವ ಕ್ರಮವನ್ನು ಚರ್ಚಿಸಿದ್ದಾರೆ. ಹಾಗೆ ಚರ್ಚಿಸುವಾಗ 'ಸೌಲಭ್ಯ'ವನ್ನು ಮುಖ್ಯ ಮಾನದಂಡವನ್ನಾಗಿ ಬಳಸಲು ಹೇಳುತ್ತಾರೆ. ಅಂದರೆ ಒಂದು

ಪದ ದೇಶ್ಯವೋ ಅನ್ಯದೇಶ್ಯವೋ ಎಂಬುದು ಅಷ್ಟು ಮುಖ್ಯವಲ್ಲ. ಸಂವಹನಶೀಲತೆಗೆ ಅನುವಾಗುವಂತಿದ್ದರೆ ಯಾವುದೇ ಪದವಾಗಿದ್ದರೂ ಅದು ಸೂಕ್ತವೆಂದು ತಿಳಿಯಲು ಸೂಚಿಸುತ್ತಾರೆ. ಈವರೆಗೆ ವಿವರಿಸಿದ ಸಂಕೀರ್ಣ ಸಂದರ್ಭವನ್ನು ಗಮನಿಸಿದಾಗ ಈ ಪರಿಹಾರ ತಿಳಿದಷ್ಟು ಸರಳವಲ್ಲವೆಂಬ ಇಂಗಿತ ಸ್ಪಷ್ಟವಾಗುತ್ತದೆ. ಏಕೆಂದರೆ 'ಸಂವಹನ'ಕ್ಕೆ ಸೂಕ್ತವಾಗುವಿಕೆಯನ್ನು ವ್ಯಾಖ್ಯಾನಿಸುವುದು ಹೇಗೆ?

ಆಕ್ಸಿಜನ್, ಆಮ್ಲಜನಕ, ಪ್ರಾಣವಾಯು ಈ ಮೂರರಲ್ಲಿ ಆಯ್ಕೆ ಹೇಗೆ? ಡ್ರಿಪ್ ಇರಿಗೇಷನ್, ಹನಿ ನೀರಾವರಿ, ಜಿನುಗು ನೀರಾವರಿಗಳನ್ನು ಸಮ ಪ್ರಧಾನ್ಯವುಳ್ಳ ರಚನೆಗಳೆನ್ನಬೇಕೆ? ಹೈಬ್ರಿಡ್_ತಳಿಯೋ? ಮಿಶ್ರತಳಿಯೋ? ರಸಗೊಬ್ಬರ, ಸೀಮೆಗೊಬ್ಬರ, ರಾಸಾಯನಿಕ ಗೊಬ್ಬರ ಇವುಗಳಲ್ಲಿ ಸೂಕ್ತವಾದುದನ್ನು ಗುರುತಿಸುವುದು ಹೇಗೆ? ಇಂಥ ನಿದರ್ಶನಗಳು ಹಲವಾರು. ಈ ಗೊಂದಲಕ್ಕೆ ಪ್ರಮಾಣೀಕರಣವೊಂದೇ ಉತ್ತರವೆಂದು ತಿಳಿಯುವುದುಂಟು ಸರಿ. ಪ್ರಮಾಣೀಕರಣದ ವಿಧಾನಗಳನ್ನು ಗುರುತಿಸುವುದು ಮಾತ್ರ ಇನ್ನೂ ಆಗಿಲ್ಲ.

ಪದಕೋಶದ ಬೆಳವಣಿಗೆಯನ್ನಷ್ಟೇ ಗಮನಿಸಿದರೆ ಕನ್ನಡದಲ್ಲಿ ಆಧುನೀಕರಣವು ವೈವಿಧ್ಯವನ್ನೂ, ಪ್ರಮಾಣೀಕರಣವು ಏಕರೂಪತೆಯನ್ನೂ ಸೃಷ್ಟಿಸುತ್ತಿದೆಯೆಂದು ತಿಳಿಯುತ್ತದೆ. ವೈವಿಧ್ಯದಿಂದಾಗಿ ಹಲವು ಸಮಾನ ನಿಯೋಗಿ ಪದಗಳು ರೂಪುಗೊಂಡರೆ ಪ್ರಮಾಣೀಕರಣದಿಂದಾಗಿ ಅರ್ಥಬಾಹುಳ್ಯವಿರದ ರೂಪುಗಳು ಚಲಾವಣೆಗೆ ಬರುತ್ತವೆ. ಹೀಗಾಗಿ ಇದೊಂದು ಪರಸ್ಪರ ವೈಸಾದೃಶ್ಯವುಳ್ಳ ಪ್ರಕ್ರಿಯಾಗ್ರಂಥಿ. ಕನ್ನಡ ಪದಕೋಶವು ಆಧುನೀಕರಣಕ್ಕೆ ಇಂಗ್ಲಿಶ್‌ನ್ನು, ಪ್ರಮಾಣೀಕರಣಕ್ಕೆ ಸಂಸ್ಕೃತವನ್ನು ಆಶ್ರಯಿಸುತ್ತಿರುವ ಕ್ರಮದ ಹಿಂದಿನ ತರ್ಕ ಕೂಡ ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ.

ಭಾಷಾಸಂಪರ್ಕ ಹಾಗೂ ಆಧುನಿಕ ತಂತ್ರಜ್ಞಾನಗಳೇ ಮುಖ್ಯಕಾರಣವಾಗಿ ಇಂಗ್ಲಿಶ್ ಕನ್ನಡ ಪದಕೋಶದ ಆಧುನೀಕರಣ ಪ್ರಕ್ರಿಯೆಗೆ ಅನುವಾಗುವ ರಚನೆಗಳನ್ನು ನೀಡುತ್ತಿದೆ. ಈ ರೂಪಗಳ ಬಳಕೆಯ ಸ್ವರೂಪದ ಬಗೆಗೆ ಇನ್ನೂ ಖಚಿತವಾಗಿ ಹೇಳುವುದು ಸಾಧ್ಯವಾಗುತ್ತಿಲ್ಲ. ಏಕೆಂದರೆ ಒಂದೇ ಸಮನೆ ಹರಿದು ಬರುತ್ತಿರುವ ಸಂಗತಿ–ಮಾಹಿತಿಗಳನ್ನು ಕನ್ನಡದಲ್ಲಿ ಹೇಳಲು ಯತ್ನಿಸುವ ಪ್ರಕ್ರಿಯೆ ನಡೆಯುತ್ತಿರುವಾಗಲೇ ಹಲವಾರು ಸಾಂದರ್ಭಿಕ ಸಮಸ್ಯೆಗಳು ಉದ್ಭವವಾಗುತ್ತವೆ. ತಂತ್ರಜ್ಞಾನವನ್ನು ಮಾಧ್ಯಮಗಳು ಕೇವಲ ಮಾಹಿತಿಯನ್ನಾಗಿ ಬಳಸುತ್ತವೆ. ಹಾಗಾಗಿ ಪದಗಳು ಚಲಾವಣೆಗೆ ಬಂದರೂ ಅವುಗಳ ಹಿಂದಿನ ಅರ್ಥವಲಯ ಮಾತ್ರ ನಿಲುಕದೇ ಹೋಗುತ್ತದೆ. ಉದಾ:ಗೆ 'ಕಂಪ್ಯೂಟರ್' ಎಂಬ ಪದವನ್ನೇ ಗಮನಿಸೋಣ. ಬಹುಮಟ್ಟಿಗೆ ಕಲಿತ ಕನ್ನಡಿಗರ ಪದಕೋಶದಲ್ಲಿ ಈ ಪದ ಸೇರಿಹೋಗಿದೆ. ಅದರ, ಅಂದರೆ ಆ ವಸ್ತುವಿನ, ನಾನಾ ಬಳಕೆಗಳ ಮೂಲಕ ಅದನ್ನು ಜನರು ಗ್ರಹಿಸಬಲ್ಲರೇ ಹೊರತು ವಾಸ್ತವವಾಗಿ ಆ ವಸ್ತುವಿನ ಸ್ವರೂಪವನ್ನಲ್ಲ. ಅಮೂರ್ತ ವಿಚಾರಗಳನ್ನು ಹೇಳಲು ಬಯಸುವ ಪದಗಳಂತೂ ಇನ್ನೂ ಮೇಲ್ಪದರದಲ್ಲೇ ಉಳಿದು ಬಿಡುತ್ತವೆ.

ಅಂದರೆ ಕನ್ನಡ ಪದಕೋಶವು ಸಮೃದ್ಧವಾಗುತ್ತಿದೆಯೆಂದು ನಾವು ಭಾವಿಸಿದರೂ ಕನ್ನಡದ ಜ್ಞಾನಮಾತ್ರ ಬೆಳೆಯುತ್ತಿಲ್ಲ. ಎಂದೂ ಬಳಸದ ನಾಣ್ಯಗಳನ್ನು ಕೂಡಿಟ್ಟುಕೊಂಡ ಜಿಪುಣನಂತೆ ಅಥವಾ ಗಬಗಬನೆ ಎಲ್ಲ ತಿಂದು ಜೀರ್ಣಸಿಕೊಳ್ಳಲಾಗದ ಹೊಟ್ಟೆಬಾಕನಂತೆ ಕನ್ನಡ ಪದಕೋಶ ಕಾಣತೊಡಗಿದರೆ ಆಶ್ಚರ್ಯವಿಲ್ಲ. ಪದರೂಪಗಳು ಬಳಕೆಯಾಗುತ್ತ ಹೋದಂತೆ ಸಹಜವಾಗುತ್ತವೆಯೆಂದು ಹಲವರು ಹೇಳುವುದುಂಟು. ವಾಸ್ತವವಾಗಿ ಹಾಗೆ ಬಳಕೆಯಾಗಲು ಅತ್ಯವಶ್ಯವಾದ ಸಂದರ್ಭವನ್ನು ಹೇಗೆ ಸೃಷ್ಟಿಸುವುದು ಎಂಬುದೇ ಸಮಸ್ಯೆಯಾಗಿದೆ.

ಕನ್ನಡದ ಮೂಲ ಪದಕೋಶದಲ್ಲಿ ಆಗಿರುವ ಬದಲಾವಣೆಗಳಿಂದಾಗಿ ಬಳಕೆ ತಪ್ಪಿದ ರೂಪಗಳು ಹಾಗೂ ಪರನಿಗಳು ಸಾಕಷ್ಟಿವೆ. ಅವುಗಳನ್ನು ಮರಳಿ ಬಳಕೆಗೆ ತರುವ ಬಗೆಗೆ ಯೋಚಿಸಲು ಡಿ.ಎಲ್. ನರಸಿಂಹಾಚಾರ್ ಅವರು ಸೂಚಿಸಿದ್ದುಂಟು. ಕನ್ನಡದಲ್ಲಿ ಏನಿಲ್ಲವೆಂಬ ಹುಂಬತನದಿಂದ ಅವರು ಈ ಮಾತನ್ನು ಹೇಳಲಿಲ್ಲ. ಭಾಷೆಯ ಆಂತರಿಕ ಸಾಧ್ಯತೆಗಳನ್ನು ಕುರಿತು ಜಾಗ್ರತಗೊಳ್ಳಲು ಸೂಚಿಸಿದ ಹಾಗಿದೆ ಅವರ ಮಾತು. ಆದರೆ ಸಮಸ್ಯೆಯ ಬೇರು ಬೇರೆ ಕಡೆಗಿದೆ.

ಇಂಗ್ಲಿಶ್ ಪದಗಳನ್ನು ಕನ್ನಡೀಕರಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ದೇಶ್ಯಮೂಲದ ಪದಗಳನ್ನು ಬಳಸಲು ಇರುವ ಇಕ್ಕಟ್ಟು ವ್ಯಾಕರಣದ್ದು. ಉದಾ:ಗೆ ನೇಷನ್ ಎಂಬ ಇಂಗ್ಲಿಶ್ ಪದಕ್ಕೆ 'ನಾಡು' ಎಂದು ಹೇಳಿಬಿಟ್ಟರೆ ಸಾಲದು. ನೇಷನ್ ಪದದಿಂದ ಸಾಧಿತವಾದ ನೇಷನಲ್, ನೇಷನಲಿಸಂ, ನೇಷನಿಸಂ, ಮುಂತಾದ ಪದಗಳಿವೆ. ಇವನ್ನು 'ನಾಡು' ಪದದಿಂದ ಸಾಧಿಸುವುದು ಹೇಗೆ? ವಿವರಣಾತ್ಮಕ ನೆಲೆಗೆ ಹೋಗುವುದೊಂದೇ ದಾರಿ. ಸುಲಭದ ಇನ್ನೊಂದು ಮಾರ್ಗವೆಂದರೆ ಸಂಸ್ಕೃತ ಪರನಿಗಳನ್ನು ಬಳಸಿ ಸಮಸ್ಯೆಯನ್ನು ಪರಿಹರಿಸಿಕೊಳ್ಳುವುದು. ಕನ್ನಡ ಆಯ್ದುಕೊಂಡಿರುವ ಮಾರ್ಗವೂ ಇದೇ ಆಗಿದೆ. ದಿನನಿತ್ಯವೂ ಇಂಥ ರೂಪಗಳನ್ನು ಕನ್ನಡ ಭಾಷೆಯ ವಿವಿಧ ಬಳಕೆಯ ವಲಯಗಳಲ್ಲಿ ನಾವು ಕಾಣುತ್ತೇವೆ. ಈ ಮೊದಲೇ ಹೇಳಿದಂತೆ ಇಂಥ ರೂಪಗಳಲ್ಲಿ ಎಷ್ಟೋ ಕನ್ನಡವೇ ನೇರವಾಗಿ ರೂಪಿಸಿಕೊಂಡಂಥವು; ಮತ್ತೆ ಕೆಲವು ಅನ್ಯ ಭಾರತೀಯ ಭಾಷೆಗಳಲ್ಲಿ ರೂಪುಗೊಂಡು ಕನ್ನಡಕ್ಕೆ ಅನಂತರ ಎರವಲು ಬಂದಂಥವು.

ಹೊಸ ಶಾಸ್ತ್ರಗಳು ನಮ್ಮ ಜೀವನದಲ್ಲಿ ಪ್ರವೇಶ ಪಡೆದ ಮೇಲೆ ಅವುಗಳಿಗೆ ಸಂಬಂಧಿಸಿದ ಬರೆಹಗಳು ಎದುರಿಸಿದ ಪಾರಿಭಾಷಿಕ ಪದಕೋಶ ಹಾಗೂ ಪರಿಭಾಷೆಯ ಸಮಸ್ಯೆಯನ್ನು ಹೇಗೋ ನಿಭಾಯಿಸಲಾಗುತ್ತಿದೆ. ಅಲ್ಲಿ ಎಲ್ಲ ಸಮಸ್ಯೆಗಳೂ ಪರಿಹಾರವಾಗಿವೆ ಎನ್ನುವಂತಿಲ್ಲ. ಆ ಶಾಸ್ತ್ರಗಳನ್ನು ನಾವು ಇಡಿಯಾಗಿ ಮೈಗೂಡಿಸಿಕೊಂಡ ಹೊರತು ಸಮಸ್ಯೆಗಳು ಪರಿಹಾರವಾಗುವುದೂ ಸಾಧ್ಯವಿಲ್ಲ. ತಜ್ಞರು ತಮಗೆ ಅವಶ್ಯವಿದ್ದಷ್ಟು ಪರಿಹಾರ ಕಂಡುಕೊಂಡು ಹೇಗೋ ಮುಂದುವರಿಯುತ್ತಿದ್ದಾರೆ. ಅಥವಾ ತಜ್ಞ ಹಾಗೂ ಉನ್ನತ ಸ್ತರದ ಬರವಣಿಗೆಗೆ ಇಂಗ್ಲಿಶ್ ಅನ್ನು ಬಳಸುತ್ತಾರೆ. ರಾಷ್ಟ್ರೀಯ ಮಹತ್ತ್ವದ ವಿಚಾರಗೋಷ್ಠಿಗಳಲ್ಲಿ, ಪತ್ರಿಕೆಗಳಲ್ಲಿ ಇಂಥ ಬರೆಹಗಳು ಇಂಗ್ಲಿಶಿನಲ್ಲಿ ಪ್ರಕಟಗೊಳ್ಳುತ್ತಿರುವುದು

ಇಂಗ್ಲಿಶ್ ಅನ್ನು ಸಂಪರ್ಕ ಭಾಷೆಯನ್ನಾಗಿ ಪರಿಗಣಿಸಿದ್ದಕ್ಕಾಗಿ ಮಾತ್ರ ಅಲ್ಲ. ಅದಕ್ಕೂ ಮಿಗಿಲಾಗಿ ಭಾರತೀಯ ಭಾಷೆಗಳನ್ನು ಅಂಥ ಬರವಣಿಗೆಗಳಿಗೆ ಯುಕ್ತವೆಂದು ಪರಿಗಣಿಸುವುದು ನಮಗಿನ್ನೂ ಸಾಧ್ಯವಾಗಿಲ್ಲ. ಆದರೆ ಜನಪ್ರಿಯ ಹಾಗೂ ಸರಳ ಸಂವಹನ ಬಯಸುವ ಬರವಣಿಗೆಗೆ ಈ ಶಾಸ್ತ್ರವಿಷಯದ ತಜ್ಞರು ದೇಶೀಯ ಭಾಷೆಗಳನ್ನು ಅವಲಂಬಿಸುತ್ತಿದ್ದಾರೆ. ಹಾಗಾಗಿ ಯುಕ್ತ ಪರಿಭಾಷೆ ಹಾಗೂ ಪಾರಿಭಾಷಿಕ ಪದಕೋಶವನ್ನು ರೂಪಿಸಿಕೊಳ್ಳುವುದು ಅವಶ್ಯವಾಗಿದೆ. ಹೀಗಾಗಿ ಈ ಶಾಸ್ತ್ರಗಳು ಒಂದು ಬಗೆಯ ಡೈಗ್ಲಾಸಿಯಾ ಸ್ಥಿತಿಯಲ್ಲಿದೆ. ಅಂದರೆ ಕನ್ನಡ ಮತ್ತು ಇಂಗ್ಲಿಶ್‌ಗಳ ಬಳಕೆಯಲ್ಲಿ ಒಂದು ನಿರ್ದಿಷ್ಟ ಆಯ್ಕೆ ಕಂಡುಬರುವಂತಿದೆ. ಈ ಆಯ್ಕೆಯ ಮೂಲಕ ಸಮಸ್ಯೆಯ ಪರಿಹಾರವನ್ನು ಮುಂದೂಡಿದ್ದು ಮಾತ್ರವಲ್ಲ. ಹೊಸ ಸಮಸ್ಯೆಗಳೂ ರೂಪುಗೊಳ್ಳತೊಡಗಿವೆ.

ಕನ್ನಡದ ಪದಕೋಶ ಆಧುನಿಕ ಶಾಸ್ತ್ರವಿಷಯಗಳನ್ನು ಒಳಗೊಳ್ಳುವಲ್ಲಿ ಅನುಸರಿಸುತ್ತಿರುವ ತಂತ್ರವನ್ನು ಈವರೆಗೆ ಗಮನಿಸಿದ್ದೇವೆ. ಈ ಸಮಸ್ಯೆಗೆ ಇನ್ನೆರಡು ಆಯಾಮಗಳಿವೆ. ಜನಜೀವನದ ಭಾಗವಾಗಿ ಬೆಳೆದು ಬಂದಿರುವ 'ಶಾಸ್ತ್ರ'ಗಳ ಪದಕೋಶಕ್ಕೆ ಸಂಬಂಧಿಸಿದಂತೆ ಈ ಆಯಾಮಗಳನ್ನು ಗ್ರಹಿಸಬೇಕಾಗಿದೆ. 1.ಇಂಥ ಶಾಸ್ತ್ರಗಳು ನಿಧಾನವಾಗಿ ನಮ್ಮ ಸಾಂಸ್ಕೃತಿಕ ನೆನಪಿನ ಭಾಗವಾಗುತ್ತ ನಡೆದು ವಾಸ್ತವದಲ್ಲಿ ಅವು ನಿರುಪಯುಕ್ತವಾಗುತ್ತಿರುವುದರಿಂದ ಉಂಟಾಗಿರುವ ಸಮಸ್ಯೆಯೊಂದಿದೆ. ಉದಾ:ಗೆ ಕುಂಬಾರಿಕೆಯ ಶಾಸ್ತ್ರ, ಮಡಕೆಗಳ ಜಾಗವನ್ನು ಇತರ ಲೋಹಸಾಮಗ್ರಿಗಳು ಹಿಡಿಯುತ್ತ ಹೋದಂತೆ ಕುಂಬಾರಿಕೆ ಮೂಲೆಗುಂಪಾಗಿ, ಅದಕ್ಕೆ ಸಂಬಂಧಿಸಿದ ಪರಿಭಾಷೆ ಕನ್ನಡದಲ್ಲಿ ನಿರುಪಯುಕ್ತವಾಗುತ್ತ ಹೋಗುತ್ತವೆ. 2. ಕೆಲವು ಶಾಸ್ತ್ರಗಳು ತಮ್ಮ ಪಾರಂಪರಿಕ ಲಕ್ಷಣಗಳೊಡನೆ ಆಧುನಿಕತೆಯನ್ನು ಮೈಗೂಡಿಸಿಕೊಳ್ಳಬೇಕಾಗಿ ಬಂದಾಗ ಎದುರಾಗುವ ಸಮಸ್ಯೆಗಳು, ಉದಾ: ಕೃಷಿ ಬೇಸಾಯ ನೂರಾರು ತಲೆಮಾರುಗಳಿಂದ ಜನಜೀವನದ ಭಾಗವಾಗಿ ಬೆಳೆದು ತನ್ನದೇ ಆದ ಶಾಸ್ತ್ರವನ್ನು ಹೊಂದಿದೆ. ಈ ಶಾಸ್ತ್ರ ತತ್ತ್ವ ಮತ್ತು ಪ್ರಯೋಗಗಳ ವಿಘಟನೆಯಿಂದ ಹುಟ್ಟಿದ್ದಲ್ಲ. ಅವೆರಡರ ಸಹಯೋಗದ ಹಿನ್ನೆಲೆಗೆ ಇರುವಂಥದು. ಹೀಗೆ ಹೇಳೋಣ. ಭಾಷೆಗೊಂದು ವ್ಯಾಕರಣವಿದೆ. ಅದೇ ಅದರ ಶಾಸ್ತ್ರ. ಈ ವ್ಯಾಕರಣವನ್ನು ಆ ಭಾಷೆಯನ್ನು ಬಳಸುವವರು ಬಲ್ಲರು. ಅಂದರೆ ಅವರು ಯುಕ್ತ ವಾಕ್ಯಸರಣಿಗಳನ್ನು ರೂಪಿಸಬಲ್ಲರು. ಆದರೆ ಅವರು ತಮ್ಮ ಬಳಕೆಯ ಪ್ರಯೋಗವನ್ನು ಹೊರತುಪಡಿಸಿದ ವ್ಯಾಕರಣ(ತತ್ತ್ವ)ವನ್ನು ಪ್ರತ್ಯೇಕವಾಗಿ ನಿರೂಪಿಸಲಾರರು. ಕೃಷಿಕರ ಕೃಷಿಯೂ ಒಂದು ಭಾಷೆಯಂತೆ, ಅದನ್ನವರು ಬಲ್ಲರು, ಪ್ರಯೋಗಿಸಬಲ್ಲರು, ಅರಿಯಬಲ್ಲರು. ಆದರೆ ಕೃಷಿ ಕ್ರಿಯೆಯಿಂದ ಬೇರ್ಪಡಿಸಿದ ಸ್ಥಿತಿಯಲ್ಲಿ ಅದನ್ನು ಗ್ರಹಿಸಲಾರರು.

ಆದರೆ ಆಧುನಿಕತೆಯ ಪರಿಣಾಮವಾಗಿ ಈ ಶಾಸ್ತ್ರದ ಸ್ವರೂಪವೇ ಬದಲಾಗಿದೆ. ತತ್ತ್ವ ಮತ್ತು ಪ್ರಯೋಗಗಳು ವಿಘಟನೆಗೊಂಡಿವೆ. ಪಾರಂಪರಿಕ ಸ್ಥಿತಿಯ ಪದಕೋಶ ತನ್ನ ಚಹರೆಯನ್ನು ಉಳಿಸಿಕೊಂಡಿರುವಾಗಲೇ ಆಧುನಿಕ ಪದಕೋಶ ಅದನ್ನು ಆವರಿಸಿದೆ. ಇಂಥ ಪರಿಸ್ಥಿತಿಯಲ್ಲಿ ಈ ವೃತ್ತಿಯ ಪದಕೋಶದ ಒಳಗೆ ನಡೆಯುತ್ತಿರುವ ಪರಿವರ್ತನೆಯ ಆಂತರಿಕ ಚಲನಶೀಲತೆ ಗಮನಾರ್ಹವೆನಿಸುತ್ತದೆ.

## ವೃತ್ತಿ ಪದಕೋಶ

ಪಾರಂಪರಿಕ ಸಮಾಜಗಳಲ್ಲಿ ವೃತ್ತಿಗಳ ಸ್ವರೂಪವನ್ನು ಗಮನಿಸಿದರೆ ಅವು ಆಧುನೀಕರಣಗೊಳ್ಳುವ ಕಾಲದ ತಮ್ಮ ಸ್ವರೂಪಕ್ಕಿಂತ ಭಿನ್ನವಾಗಿರುವುದು ತಿಳಿಯುತ್ತದೆ. ಅಂಥ ಭಿನ್ನತೆಗಳು ಹಲವು ಇವೆಯಾದರೂ ಮುಖ್ಯವಾದ ಕೆಲವು ಹೀಗಿವೆ. 1. ಪಾರಂಪರಿಕ ಸಮಾಜದಲ್ಲಿ ವೃತ್ತಿಗಳಲ್ಲಿ ಉಪಕರಣಗಳು ವೃತ್ತಿಕಾರರ ಅಂಗಾಂಗಗಳ ವಿಸ್ತರಣೆಯಾಗಿರುತ್ತಿದ್ದವು. 2. ಉಪಕರಣಗಳಾಗಲೀ ವೃತ್ತಿಯ ವಿವಿಧ ಹಂತಗಳಾಗಲೀ ಪ್ರಮಾಣೀಕರಣಗೊಂಡಿರಲಿಲ್ಲ. ಹಾಗಾಗಿ ವಿಕಲ್ಪಗಳಿಗೆ ಅವಕಾಶಗಳು ಸಾಕಷ್ಟಿದ್ದವು. 3. ವೃತ್ತಿಕಾರರಲ್ಲೇ ವೃತ್ತಿಜ್ಞಾನವಿದ್ದು ಅದನ್ನು ಕ್ರಿಯಾತ್ಮಕವಾಗಿ ಮಾತ್ರ ರವಾನೆ ಮಾಡುವುದು ಸಾಧ್ಯವಾಗುತ್ತಿತ್ತು. ಅಂದರೆ ವೃತ್ತಿಕಾರರಲ್ಲದ ತಜ್ಞರೊಬ್ಬರು ಇರಲಿಲ್ಲ. ಹಾಗಾಗಿ ವೃತ್ತಿಯನ್ನು ಕುರಿತ ಜ್ಞಾನ ಕ್ರಿಯೆಯಿಂದ ಬೇರ್ಪಡುವಂತಿರಲಿಲ್ಲ.

ಆದರೆ ಆಧುನೀಕರಣ ಪ್ರಕ್ರಿಯೆಯಿಂದ ವೃತ್ತಿಗಳ ಉಪಕರಣಗಳು ಈಗ ವೃತ್ತಿಕಾರರ ಅಂಗಾಂಗಳ ಮುಂದುವರಿಕೆಯಾಗಿ ಮಾತ್ರ ಉಳಿದಿಲ್ಲ; ಬದಲಿಗೆ ಅವರಿಗೆ ಪರ್ಯಾಯವಾಗಬಲ್ಲವು. ಅವರನ್ನು ವಿಘಟಿಸಿ ಹಲವು ಜನರ ಕ್ರಿಯೆಗಳನ್ನು ಒಗ್ಗೂಡಿಸಬಲ್ಲವು. ಉಪಕರಣಗಳ ತಯಾರಿಕೆ ಯಾಂತ್ರೀಕರಣವಾಗುವ ಹಂತ ತಲುಪಿದಾಗ ವೃತ್ತಿಯಲ್ಲಿ ಪ್ರಮಾಣೀಕರಣ ಅಧಿಕಗೊಳ್ಳುತ್ತದೆ. ಅಲ್ಲದೆ ವೃತ್ತಿಯನ್ನು ಕುರಿತ ಜ್ಞಾನ ಪ್ರತ್ಯೇಕವಾಗಿ ಬೆಳೆದು ವೃತ್ತಿಕಾರರ ಕ್ರಿಯೆಗೂ ಅದಕ್ಕೂ ಅಂತರ ಏರ್ಪಡುತ್ತದೆ.

ಈ ಮೇಲಿನ ವಿವರಣೆ ವೃತ್ತಿಪದಕೋಶದ ಹಿನ್ನೆಲೆಯಲ್ಲಿ ಅತ್ಯವಶ್ಯ. ಏಕೆಂದರೆ ಒಂದು ವೃತ್ತಿ ಪಾರಂಪರಿಕ ಸಮಾಜದಲ್ಲಿ ಇದ್ದಾಗ ರೂಪುಗೊಂಡದ್ದು ಆಧುನೀಕರಣ ಪ್ರಕ್ರಿಯೆಗೆ ಒಳಗಾದಾಗ ಅದರ ಪದಕೋಶದಲ್ಲೂ ಬದಲಾವಣೆಯಾಗುತ್ತದೆ. ಅಂದರೆ ವೃತ್ತಿಯಲ್ಲಿ ಆಗುವ ಬದಲಾವಣೆಗಳು ಅದರ ಪದಕೋಶದಲ್ಲಿಯೂ ಬಿಂಬಿತವಾಗುತ್ತವೆ.

ವೃತ್ತಿಗೆ ಒಂದು ಪದಕೋಶವಿರುತ್ತದೆ ಎಂಬ ಮಾತಿನಲ್ಲಿ ವಿಶೇಷವೇನೂ ಇಲ್ಲ. ಭಾಷೆಯ ವಿಕಲ್ಪಗಳನ್ನು ಅಧ್ಯಯನ ಮಾಡುವ ಭಾಷಾಶಾಸ್ತ್ರಜ್ಞರು ಆ ವಿಕಲ್ಪಗಳಲ್ಲಿ ಮುಖ್ಯವಾಗಿ ಎರಡು ಬಗೆಗಳನ್ನು ಗುರುತಿಸುತ್ತಾರೆ. 1. ಆ ವಿಕಲ್ಪವನ್ನು ಯಾರು ಎಲ್ಲಿ (ಭೌಗೋಳಿಕ) ಬಳಸುತ್ತಾರೆ ಎಂಬ ನೆಲೆಯಿಂದ. 2. ಆ ವಿಕಲ್ಪವನ್ನುಯಾರು ಯಾವಾಗ (ಸಂದರ್ಭ) ಬಳಸುತ್ತಾರೆ ಎಂಬ ನೆಲೆಯಿಂದ. ವಕೀಲ, ವೈದ್ಯ, ರೈತ, ಅಧಿಕಾರಿ ಹೀಗೆ ಯಾರೇ ಆಗಿರಲಿ ಅವರು ತಮ್ಮ ವೃತ್ತಿ ಸಂದರ್ಭಗಳಲ್ಲಿ ಬಳಸುವ ಭಾಷೆಯ ವಿಕಲ್ಪವನ್ನು Registar ಎಂದು ಭಾಷಾಶಾಸ್ತ್ರಜ್ಞರು ಕರೆದಿದ್ದಾರೆ.

ಸದ್ಯ 'ಸಂದರ್ಭಭಾಷೆ' ಎಂದು ಅದನ್ನು ಕುರಿತು ವ್ಯವಹರಿಸೋಣ. ಸಂದರ್ಭಭಾಷೆಯ ಮುಖ್ಯ ವೈಶಿಷ್ಟ್ಯ ಅದರ ಪದಕೋಶವೇ ಸರಿ. ವಕೀಲರು ಬಳಸುವ ಪದಗಳನ್ನು ಗಮನಿಸಿದರೆ ಈ ಅಂಶ ಸ್ಪಷ್ಟಗೊಳ್ಳುತ್ತದೆ. ಪದಸಂಯೋಜನೆ, ವಾಕ್ಯರಚನೆ ಮುಂತಾದವುಗಳಲ್ಲೂ ಈ ಭಿನ್ನತೆ ಇರಬಹುದಾದರೂ ಮುಖ್ಯವಾಗಿ ಪದಕೋಶದ ನೆಲೆಯಲ್ಲಿ ಅದು ಎದ್ದುಕಾಣುತ್ತದೆ.

ವೃತ್ತಿಗಳು ಸಂದರ್ಭಭಾಷೆಯ ನಿರ್ಮಾಣಕ್ಕೆ ತಕ್ಕ ಕ್ಷೇತ್ರಗಳು. ಹಾಗಾಗಿ ಸಮಾಜದ ಹಲವು ವೃತ್ತಿಗಳಿಗೂ ವಿಶಿಷ್ಟ ಪದಕೋಶ ಇರುತ್ತದೆ. ಒಂದು ಭಾಷೆಯ ಸಾಮಾನ್ಯ ಪದಕೋಶಕ್ಕೂ ವೃತ್ತಿಪದಕ್ಕೂ ಇರುವ ಸಂಬಂಧಾಂತರಗಳನ್ನು ಮೊದಲು ಗಮನಿಸೋಣ. ವೃತ್ತಿ ಪದಕೋಶ ಸಾಮಾನ್ಯ ಪದಕೋಶದ ಒಂದು ಭಾಗವೆಂದು ಸಾಮಾನ್ಯವಾಗಿ ತಿಳಿಯಬಹುದು. ಆದರೆ ಅವುಗಳ ಸ್ವರೂಪ ಮತ್ತು ವ್ಯಾಪ್ತಿಯಲ್ಲಿ ಕೆಲವು ಭಿನ್ನತೆಗಳಿರುತ್ತವೆ.

# ಕನ್ನಡ ಪದಕೋಶ–2

ಭಾಷೆಯೊಂದಕ್ಕೆ ಪದಕೋಶ ಅಗತ್ಯ. ಈ ಪದಕೋಶವು ನಿರಂತರವಾಗಿ ಬದಲಾಗುತ್ತಿರುತ್ತದೆ. ಸೇರ್ಪಡೆ ಬೇರ್ಪಡೆಗಳು ನಡೆಯುತ್ತಲೇ ಇರುತ್ತವೆ. ಭಾಷಿಕರು ಎಳವೆಯಲ್ಲೇ ಭಾಷೆಯ ನಿಯಮ ವ್ಯವಸ್ಥೆಯನ್ನು ಪೂರ್ಣವಾಗಿ ಸ್ಥಾಪಿಸಿಕೊಂಡರೂ ಪದಕೋಶವನ್ನು ಮಾತ್ರ ನಿರಂತರವಾಗಿ ಕಲಿಯುತ್ತಲೇ ಇರಬೇಕಾಗುತ್ತದೆ. ವ್ಯಕ್ತಿಯ ನೆನಪಿನಲ್ಲಿರುವ ಈ ಪದಕೋಶ ಮೆದುಳಿನಲ್ಲಿ ಹೇಗೆ ವ್ಯವಸ್ಥಿತವಾಗುತ್ತದೆ ಎಂಬುದು ಕುತೂಹಲದ ವಿಷಯ. ಬೇಕೆಂದ ಪದ ಬೇಕಾದಾಗ ಆ ಪದವೇ ನಮಗೆ ನೆನಪಿಗೆ ಬರುವುದು ಹೇಗೆ, ನಾವು ಕೇಳಿದ ಪದವೊಂದನ್ನು ನಮ್ಮ ನೆನಪಿನಲ್ಲಿರುವ ಪದಕೋಶದಲ್ಲಿ ಇದೆಯೋ ಇಲ್ಲವೋ ಎಂಬುದನ್ನು ಗುರುತಿಸಿ ಅರ್ಥಮಾಡಿಕೊಳ್ಳುವುದು ಹೇಗೆ ಸಾಧ್ಯ, ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಬಲ್ಲವರು ಬೇರೆ ಬೇರೆ ಭಾಷೆಯ ಪದಕೋಶಗಳನ್ನು ಬೇರೆ ಬೇರೆಯಾಗಿಯೇ ಇರಿಸಿಕೊಳ್ಳುತ್ತಾರೆಯೇ, ಅಥವಾ ಆ ಪದಕೋಶಗಳ ನಿರ್ವಹಣೆಯನ್ನು ಹೇಗೆ ಮಾಡುತ್ತಾರೆ ಎಂಬ ಈ ಎಲ್ಲ ಪ್ರಶ್ನೆಗಳೂ ಗಹನವಾಗಿವೆ. ಕನ್ನಡ ಭಾಷಿಕರ ಪದಕೋಶವೊಂದು ವಾಸ್ತವವಾಗಿ ಎಲ್ಲೂ ಇಲ್ಲ. ಅಥವಾ ಎಲ್ಲರಲ್ಲೂ ಇದೆ. ನಾವು ಭೌತಿಕವಾಗಿ ನಿಘಂಟಿನ ರೂಪದಲ್ಲಿ ಸಿದ್ಧಮಾಡುವ ಪದಕೋಶ ಒಂದು ರಚನೆ. ಅದಕ್ಕೆ ವಾಸ್ತವತೆಯ ಬೆಂಬಲವಿಲ್ಲ. ಅದನ್ನು ಇಡಿಯಾಗಿ ಬಲ್ಲ ಕನ್ನಡಿಗರನ್ನು ನಾವು ಕಾಣುವುದು ಸಾಧ್ಯವಿಲ್ಲ. ಅಲ್ಲದೆ ಕನ್ನಡಿಗರಲ್ಲಿ ಇರುವ ಎಲ್ಲ ಪದಗಳನ್ನೂ ಹೀಗೆ ಹೊರತೆಗೆದು ಗುರುತಿಸಿ ಪಟ್ಟಿ ಮಾಡುವುದು ಸಾಧ್ಯವಿಲ್ಲ. ಆದರೂ ಅಭ್ಯಾಸದ ಕಾರಣಕ್ಕೆ ಕಲ್ಪಿಸಿಕೊಂಡ ಕನ್ನಡ ಪದಕೋಶದಲ್ಲಿ ಕನ್ನಡ ಭಾಷೆಯ ಪದಗಳು ಸೇರಿರುತ್ತವೆ. ಅವಲ್ಲದೆ ಅನ್ಯಮೂಲದ ಪದಗಳೂ ಅಲ್ಲಿರುತ್ತವೆ. ಕನ್ನಡಿಗರ ಬಳಕೆಗೆ ದೊರಕುತ್ತವೆ. ಆದ್ದರಿಂದ ಕನ್ನಡಿಗರ ಪದಕೋಶ ಎಂಬ ತೆರೆದ ಅರ್ಥದಲ್ಲಿ ನಾವು ವ್ಯವಹರಿಸುವುದು ಸೂಕ್ತ.

ಇಂತಹ ಪದಕೋಶದಲ್ಲಿ ಇರುವ ಪದಗಳನ್ನು ಹಲವು ರೀತಿಗಳಲ್ಲಿ ವರ್ಗೀಕರಿಸುತ್ತಾರೆ. ಈ ಪದಗಳು ಬಳಕೆಯಾದಾಗ ಪಡೆದುಕೊಳ್ಳುವ ವ್ಯಾಕರಣಾತ್ಮಕ ನೆಲೆಗಳನ್ನು ಆಧರಿಸಿ ವರ್ಗೀಕರಿಸಬಹುದು. ಆಗ ನಾಮಪದ, ಕ್ರಿಯಾಪದ, ಗುಣವಾಚಕ ಮುಂತಾದ ಗುಂಪುಗಳು ಸಿಗುತ್ತವೆ. ಹೀಗಲ್ಲದೆ ಈಗ ಬಳಸುತ್ತಿರುವ ಪದಗಳು, ಹಿಂದೆ ಯಾವಾಗಲೋ ಕನ್ನಡದಲ್ಲಿ ಬಳಕೆಯಾಗುತ್ತಿದ್ದ ಪದಗಳು ಎಂದೂ ವಿಭಜಿಸಬಹುದು. ಸಾಮಾನ್ಯವಾಗಿ ಈ ಎರಡು ರೀತಿಯ ಗುಂಪಿನ ಪದಗಳನ್ನು ಹೊಂದಿರುವವರ

ಸಂಖ್ಯೆ ಕಡಿಮೆ. ಭಾಷೆ ಮತ್ತು ಸಾಹಿತ್ಯಗಳನ್ನು ಓದುವವರು ಈ ಸಾಧ್ಯತೆಯ ಪದಕೋಶವನ್ನು ಹೊಂದಿರುತ್ತಾರೆ. ಇದಲ್ಲದೆ ಕನ್ನಡದ ಪದಗಳು ಮತ್ತು ಕನ್ನಡಕ್ಕೆ ಅನ್ಯಭಾಷೆಗಳಿಂದ ವಲಸೆ ಬಂದ ಪದಗಳು ಎಂದು ಗುಂಪು ಮಾಡಬಹುದು. ಇಂತಹ ವಿಭಜನೆಯನ್ನು ಹಿಂದಿನಿಂದಲೂ ಮಾಡಿಕೊಳ್ಳುತ್ತಾ ಬರಲಾಗಿದೆ. ವ್ಯಾಕರಣಕಾರ ಕೇಶಿರಾಜನೇ ದೇಶ್ಯ ಮತ್ತು ಅನ್ಯದೇಶ್ಯ ಎಂಬ ಗುಂಪುಗಳನ್ನು ಸೂಚಿಸುತ್ತಾನೆ.

ಕನ್ನಡಿಗರ ಪದಕೋಶ ಕಳೆದ ಐವತ್ತು ವರ್ಷಗಳಲ್ಲಿ ಏನೆಲ್ಲಾ ಪರಿವರ್ತನೆಗಳನ್ನು ಪಡೆದುಕೊಂಡಿದೆ ಎಂಬುದನ್ನು ಅಧ್ಯಯನ ಮಾಡುವುದು ಈ ಅಧ್ಯಾಯದ ಉದ್ದೇಶವಾಗಿದೆ. ಪದಕೋಶದ ಪದಗಳಿಗೆ ಆಡುರೂಪ ಮತ್ತು ಬರೆಹರೂಪ ಎಂಬ ಎರಡು ನೆಲೆಗಳಿರುತ್ತವೆ. ಹೆಚ್ಚಿನ ಪದಗಳಿಗೆ ಇವೆರಡೂ ಬೇರೆ ಬೇರೆ ಅಲ್ಲ ಅನ್ನಿಸಿದರೂ ಈ ವ್ಯತ್ಯಾಸವುಳ್ಳ ಪದಗಳ ಸಂಖ್ಯೆ ಸಾಕಷ್ಟಿದೆ. ಬರೆಹ ರೂಪದ ಪರಿಚಯವಿರದ ಕನ್ನಡಿಗರಲ್ಲಿ ಆಡುರೂಪಗಳು ಮಾತ್ರ ಇರುತ್ತವೆ. ಬರೆಹ ತಿಳಿದ ಕನ್ನಡಿಗರು ಈ ಎರಡು ರೂಪಗಳನ್ನು ಸೂಕ್ತ ರೀತಿಯಲ್ಲಿ ಬಳಸುತ್ತಾರೆ ಅಥವಾ ಬಳಸಬೇಕೆಂಬ ನಿಯಮವಿದೆ. ಇದಲ್ಲದೆ ಕೆಲವು ಪದಗಳು ಆಡುರೂಪದಲ್ಲಿ ಮಾತ್ರ ಇದ್ದು ಅವುಗಳಿಗೆ ಬರೆಹರೂಪದ ಮಾನ್ಯತೆ ಇರುವುದಿಲ್ಲ. ಮತ್ತು ಕೆಲವೊಮ್ಮೆ ಅಂತಹ ರೂಪಗಳನ್ನು ಬರೆಯಲು ಸಮ್ಮತಿ ಇರುವುದಿಲ್ಲ. ಹೀಗಾಗಿ ಪದಕೋಶವೊಂದು ಸಂಕೀರ್ಣ ರಚನೆಯಾಗಿದೆ. ಅದು ಸ್ಥಿರವಾಗಿ ಇರುತ್ತದೆ ಎಂಬುದಕ್ಕಿಂತ ಬಳಕೆಯಲ್ಲಿ ಅದರ ಚಲನಶೀಲತೆ ಹೆಚ್ಚು ಸಂಕೀರ್ಣತೆಯ ನೆಲೆಗಳಿಗೆ ಸಾಗುತ್ತದೆ ಎಂಬುದನ್ನು ಗಮನಿಸಬೇಕು.

ಕನ್ನಡ ಆಡುಮಾತಿನ ಧ್ವನಿರಚನೆಯಲ್ಲಿ ಮಹಾಪ್ರಾಣಗಳಿಗೆ ಅವಕಾಶವಿಲ್ಲ. ಎಂದರೆ ಕನ್ನಡಿಗರು ಮಹಾಪ್ರಾಣಗಳನ್ನು ಉಚ್ಚರಿಸಲಾರರು ಎಂದಲ್ಲ. ಆದರೆ ಹಾಗೆ ಉಚ್ಚರಿಸುವ ಅಗತ್ಯ ಒಂದೊಂದು ಪ್ರದೇಶಕ್ಕೂ ಬದಲಾಗುತ್ತಾ ಹೋಗುತ್ತದೆ. ಆದ್ದರಿಂದ ಪದಕೋಶದ ಆಡುರೂಪದಲ್ಲಿ ಕಾಣಬರುವ ಮಹಾಪ್ರಾಣಗಳ ಪ್ರಸಾರವಿನ್ಯಾಸ ಮತ್ತು ಪದಗಳ ಬರೆಹರೂಪದಲ್ಲಿ ಕಾಣಬರುವ ಮಹಾಪ್ರಾಣಗಳ ಪ್ರಸಾರವಿನ್ಯಾಸ ಒಂದೇ ರೀತಿಯಲ್ಲಿ ಇರುವುದಿಲ್ಲ. ಕೆಲವು ಪ್ರದೇಶಗಳಲ್ಲಿ ಉಚ್ಚಾರಣೆಯಲ್ಲಿ ಮಹಾಪ್ರಾಣಗಳು ಇಲ್ಲದಿದ್ದರೂ ಬರೆಹದಲ್ಲಿ ನಿಗದಿತ ಮಹಾಪ್ರಾಣಗಳು ಕಾಣಿಸಿಕೊಳ್ಳಬೇಕೆಂಬ ನಿಯಮವಿದೆ. ಮತ್ತೆ ಕೆಲವು ಪ್ರದೇಶ ಮತ್ತು ಸಮುದಾಯಗಳಲ್ಲಿ ಉಚ್ಚಾರಣೆಯಲ್ಲಿ ಕಾಣಸಿಗುವ ಮಹಾಪ್ರಾಣವುಳ್ಳ ಪದಗಳನ್ನು ಬರೆಯುವಾಗ ಹಾಗೆ ಮಹಾಪ್ರಾಣ ಸಹಿತ ಬರೆಯದೆ ಅಲ್ಪಪ್ರಾಣ ಬಳಸಿ ಬರೆಯಬೇಕೆಂಬ ನಿಯಮವಿದೆ. ಅಕ್ಷರಸ್ಥ ಕನ್ನಡಿಗರು ಈ ವಿರುದ್ಧ ತುಯ್ತದಲ್ಲಿ ಸಿಲುಕಿದ್ದಾರೆ. ಪ್ರಮಾಣಭಾಷೆಯಲ್ಲಿ ಲಿಖಿತ ರೂಪಕ್ಕೆ ನಿಗದಿಪಡಿಸಿದ ಮಾದರಿಯನ್ನು ಯಥಾವತ್ತಾಗಿ ಪಾಲಿಸಲು ಸೂಚಿಸಲಾಗುತ್ತದೆ. ಆದರೆ ಜನರ ದಿನಬಳಕೆಯ ಮಾತು ಬರೆಹಗಳಲ್ಲಿ ಈ ಮಾದರಿಯ ಯಥಾನುಕರಣೆ ಆಗುತ್ತಿಲ್ಲ. ಈ ಐದು ದಶಕಗಳಲ್ಲಿ, ಭಾಷಾಕಲಿಕೆಯ ಅತಿ ತೀವ್ರವಾದ ಬಿಕ್ಕಟ್ಟು ಈ ವಲಯದಲ್ಲಿ ಕಂಡುಬಂದಿದೆ.

ಈ ಸಮಸ್ಯೆಯನ್ನು ಇನ್ನಷ್ಟು ವಿವರವಾಗಿ ಪರಿಶೀಲಿಸೋಣ. ಬಹು ಹಿಂದಿನಿಂದಲೂ ಒಪ್ಪಿತವಾದ ನಿಲುವು ಏನೆಂದರೆ ಮಹಾಪ್ರಾಣಯುಕ್ತ ಪದಗಳು ಕನ್ನಡ ಪದಕೋಶಕ್ಕೆ ಸಂಸ್ಕೃತ ಅಥವಾ ಅನ್ಯಮೂಲಗಳಿಂದ ಬಂದು ಸೇರಿವೆ ಎಂಬುದು. ಇವುಗಳಲ್ಲಿ ಎಷ್ಟೋ ಪದಗಳು ಬರೆಹ ರೂಪದಲ್ಲಿ ಮತ್ತು ಸೀಮಿತ ಸಂಕಥನಗಳಲ್ಲಿ ಮಾತ್ರ ಕಾಣಸಿಗುವಂಥವು. ಜನರ ಆಡುಮಾತಿನಲ್ಲಿ ಅವು ಜಾಗ ಪಡೆದಿರುವ ಪ್ರಸಂಗ ಕಡಿಮೆ. ಹಾಗೆ ಒಳಗೆ ಸೇರಿಕೊಂಡರೂ ತದ್ಭವ ರೂಪಗಳಲ್ಲಿ ಉಳಿದುಕೊಂಡಿವೆ. ಅಲ್ಲಿ ಮಹಾಪ್ರಾಣಕ್ಕೆ ಅವಕಾಶವಿಲ್ಲ. ಇಂತಹ ಸಂದರ್ಭದಲ್ಲಿ ಶಿಕ್ಷಣದ ವ್ಯಾಪಕತೆ ಹೆಚ್ಚುತ್ತಾ ಬಂದಂತೆ ಆಡುಮಾತಿನ ರೂಪಗಳನ್ನು ಬರೆಹದಲ್ಲಿ ಬಳಸದೆ, ಬರಹದಲ್ಲಿ ಈಗಾಗಲೇ ಸ್ಥಿರಗೊಂಡ ರೂಪಗಳನ್ನು ಕಲಿತು ಬಳಸಬೇಕೆಂಬ ಒತ್ತಡ ಹೆಚ್ಚುತ್ತಿದೆ. ಇದರಿಂದಾಗಿ ಕನ್ನಡ ಬರೆವಣಿಗೆಯಲ್ಲಿ ಮೊದಲ ತಲೆಮಾರಿನ ವಿದ್ಯಾವಂತರು ಇಕ್ಕಟ್ಟುಗಳನ್ನು ಅನುಭವಿಸುತ್ತಿದ್ದಾರೆ. ಅವರ ಬರೆಹಗಳಲ್ಲಿ ನಿಗದಿತ ನಿಯಮಗಳ ಪಾಲನೆ ಆಗುತ್ತಿಲ್ಲ ಎಂಬುದು ಒಂದು ಮೌಲ್ಯಾತ್ಮಕ ಕೊರತೆ ಎಂದು ತೀರ್ಮಾನಿಸಲಾಗಿದೆ. ಕನ್ನಡ ಚೆನ್ನಾಗಿ ಮಾತಾಡಬಲ್ಲವರು ಕೂಡ ಸರಿಯಾಗಿ ಬರೆಯಲಾರರು ಎಂದು ಶಿಕ್ಷಣ ತಜ್ಞರು, ಸಾಮಾಜಿಕ ಚಿಂತಕರು ಮೇಲಿಂದ ಮೇಲೆ ಹೇಳುತ್ತಿರುವುದುಂಟು.

ಇದಕ್ಕೆ ವಿರುದ್ಧವಾದ ಮತ್ತೊಂದು ಪ್ರಸಂಗವಿದೆ. ಕರ್ನಾಟಕದ ಉತ್ತರ ಭಾಗದ ಕೆಲವು ಪ್ರದೇಶಗಳಲ್ಲಿ ಕೆಲವು ಸಮುದಾಯದ ಕನ್ನಡಿಗರು ತಮ್ಮ ಆಡುಮಾತಿನಲ್ಲಿ ಮಹಾಪ್ರಾಣಗಳನ್ನು ಬಳಸುತ್ತಾರೆ. ಅವರು ಯಾವ ಪದಗಳಲ್ಲಿ ಮಹಾಪ್ರಾಣಗಳನ್ನು ಉಚ್ಚರಿಸುತ್ತಾರೋ ಅವುಗಳ ಲಿಖಿತ ರೂಪದಲ್ಲಿ ಅಲ್ಪಪ್ರಾಣಗಳನ್ನು ಮಾತ್ರ ನಿರೀಕ್ಷಿಸಲಾಗುತ್ತದೆ. ಜನರ ಉಚ್ಚಾರಣೆಯಲ್ಲಿ ಮಹಾಪ್ರಾಣಗಳು ಸೇರಿಕೊಳ್ಳಲು ಅನ್ಯಭಾಷಾ ಪ್ರಭಾವ ಕಾರಣ. ಅದರಲ್ಲೂ ಮರಾಠಿಯ ಪ್ರಭಾವ ಈ ಪ್ರದೇಶಗಳಲ್ಲಿ ಇರುವುದನ್ನು ಗುರುತಿಸಬಹುದು. ಜನರ ಉಚ್ಚಾರಣೆಯ ರೂಪಗಳು ಇಲ್ಲಿಯೂ ನಿರಾಕರಣೆಗೊಳ್ಳುತ್ತವೆ. ಅಂದರೆ ಮಹಾಪ್ರಾಣಗಳು ಉಚ್ಚಾರಣೆಯಲ್ಲಾಗಲೀ ಬರೆಹದಲ್ಲಾಗಲೀ ಎಲ್ಲಿ ಇರಬೇಕು ಮತ್ತು ಎಲ್ಲಿ ಇರಕೂಡದು ಎಂಬ ನಿರ್ಧಾರ, ಬರೆಹದ ಭಾಷೆಯಿಂದ ಆಗುತ್ತಿದೆಯೇ ಹೊರತು ಜನರ ಸಹಜ ಬಳಕೆಯ ಮಾತಿನಿಂದಲ್ಲ. ಈ ಸಂಘರ್ಷ ತೀವ್ರಗೊಳ್ಳುತ್ತಿದೆ.

ಈ ಪರಿಸ್ಥಿತಿಯನ್ನು ಮತ್ತಷ್ಟು ಗೋಜಲು ಮಾಡುವ ಸಂಗತಿ ಮತ್ತೊಂದಿದೆ. ಅದೆಂದರೆ ಕನ್ನಡಕ್ಕೆ ಅನ್ಯಭಾಷೆಗಳಿಂದ ಹೊಸದಾಗಿ ಬಂದು ಸೇರುವ ಪದಗಳನ್ನು ಕನ್ನಡ ಲಿಪಿಯಲ್ಲಿ ಮೊದಲ ಬಾರಿಗೆ ಬರೆಯಲು ತೊಡಗಿದಾಗ ಉಂಟಾಗುವ ಸಮಸ್ಯೆ ಇದು. ಅದರಲ್ಲೂ ಪರ್ಶಿಯನ್–ಅರಾಬಿಕ್ ಮತ್ತು ಇಂಗ್ಲಿಶ್ ಪದಗಳಿಗೆ ಸಂಬಂಧಿಸಿದಂತೆ ಸಮಸ್ಯೆ ಜಟಿಲವಾಗುವುದು. ಈ ಎರಡು ಭಾಷೆಗಳಲ್ಲಿ ಮಹಾಪ್ರಾಣಗಳೆಂಬ ಧ್ವನಿಗಳಿಲ್ಲ. ಅದರಲ್ಲೂ ಸ್ಪರ್ಶಧ್ವನಿಗಳ ಮಹಾಪ್ರಾಣತ್ವ ಲಕ್ಷಣ ಈ ಭಾಷೆಗಳಿಗೆ ದೂರ. ಆದರೆ ಆ ಭಾಷೆಯ ಕೆಲವು ಪದಗಳಲ್ಲಿ ಇರುವ ಘರ್ಷ ಧ್ವನಿಗಳನ್ನು ಕನ್ನಡ ಬರವಣಿಗೆಯಲ್ಲಿ ಮಹಾಪ್ರಾಣಗಳನ್ನಾಗಿ ಬರೆಯಲಾಗುತ್ತಿದೆ. ಹಾಗೆ ಬರೆಯಲು ಯಾವುದೇ ತಾರ್ಕಿಕ ಕಾರಣಗಳಿಲ್ಲ. ಆ ಪದಗಳನ್ನು ಕನ್ನಡಿಗರು ತಮ್ಮ

ಆಡುಮಾತಿನಲ್ಲಿ ಉಚ್ಚರಿಸುವಾಗ ಹೀಗೆ ಮಹಾಪ್ರಾಣಗಳನ್ನು ಆಹ್ವಾನಿಸಿಕೊಳ್ಳುತ್ತಾರೋ ಅಥವಾ ತಮ್ಮದೇ ಆದ ರೀತಿಯಲ್ಲಿ ಧ್ವನಿ ಹೊಂದಾಣಿಕೆಯನ್ನು ಮಾಡಿಕೊಳ್ಳುತ್ತಾರೋ ಎಂಬುದನ್ನು ನಾವಿನ್ನೂ ವಿವರವಾಗಿ ಅಧ್ಯಯನ ಮಾಡಿಲ್ಲ. ಆದರೆ ಇದಕ್ಕೆ ಕೆಲವು ಪೂರ್ವನಿದರ್ಶನಗಳನ್ನು ನಾವು ಪರಿಗಣಿಸಬಹುದು. ಮರಾಠಿಯ ಮೂಲಕ ಬಂದ ನೂರಾರು ಪರ್ಸೋ–ಅರಾಬಿಕ್ ಪದಗಳನ್ನು ಕನ್ನಡ ಬರೆವಣಿಗೆ ಅಳವಡಿಸಿಕೊಂಡಿದೆ. ಹಾಗೆ ಅಳವಡಿಸಿಕೊಳ್ಳುವಾಗ ಮೂಲದ ಘರ್ಷಧ್ವನಿಗಳನ್ನು ಮಹಾಪ್ರಾಣಗಳನ್ನಾಗಿ ಬರೆದಿರುವ ಉದಾಹರಣೆಗಳು ಮಧ್ಯಕಾಲೀನ ಕನ್ನಡ ಸಾಹಿತ್ಯದಲ್ಲಿ ಕಾಣಸಿಗುತ್ತವೆ. ಕುಮಾರವ್ಯಾಸನೇ ಮೊದಲಾಗಿ ಅನಂತರದ ಎಷ್ಟೋ ಕವಿಕೃತಿಗಳಲ್ಲಿ ಇದಕ್ಕೆ ನಿದರ್ಶನಗಳಿವೆ. ಈ ಹೊಂದಾಣಿಕೆಯ ಮಾದರಿಗೆ ಪ್ರಾಕೃತ ಭಾಷೆಗಳ ಪ್ರಭಾವವು ಕಾರಣವಾಗಿರಬಹುದು. ಎಷ್ಟೋ ಕಡೆಗಳಲ್ಲಿ ಪ್ರಾಕೃತ ರೂಪಗಳು ಹೀಗೆ ಮಹಾಪ್ರಾಣ ರೂಪಗಳನ್ನು ಹೊಂದಿರುತ್ತವೆ. ಕನ್ನಡ ಕವಿಗಳು ಈ ಎಲ್ಲಾ ಪ್ರಭಾವಗಳಿಗೆ ಒಳಗಾಗಿ ತಮ್ಮ ಬರೆವಣಿಗೆಯ ರೂಪಗಳನ್ನು ನಿರ್ಧರಿಸಿಕೊಂಡಿರಬಹುದು.

ಇಂಗ್ಲಿಶ್ ಮೂಲದ ಪದಗಳನ್ನು ಪ್ರತಿದಿನವೂ ನಾವು ಇಂಗ್ಲಿಶಿನಲ್ಲೇ ಓದುತ್ತೇವೆ ಇಲ್ಲವೇ ಕೇಳುತ್ತೇವೆ. ಅವುಗಳ ಉಚ್ಚಾರಣೆಯನ್ನು ನಮ್ಮ ಭಾಷೆಯ ಉಚ್ಚಾರಣೆಗೆ ಹೊಂದಿಸಿಕೊಳ್ಳುತ್ತೇವೆ. ಹಾಗೆಯೇ ಬರೆವಣಿಗೆಯಲ್ಲೂ ಇಂತಹದೇ ಹೊಂದಾಣಿಕೆ ರೂಪಗೊಂಡಿದೆ. ಮಹಾಪ್ರಾಣಗಳು ಹೀಗಾಗಿ ಕನ್ನಡ ಮಾತಿನ ಮತ್ತು ಬರೆಹದ ರೂಪಗಳಲ್ಲಿ ಅಳವಡಿಕೆಯ ಮತ್ತು ಹೊಂದಾಣಿಕೆಯ ನೆಲೆಯಲ್ಲಿ ಈಗ ಬಳಕೆಯಾಗುತ್ತಿವೆ. ಹೀಗಿರುವಾಗ ಅವುಗಳ ಉಚ್ಚಾರಣೆ ಮತ್ತು ಬರೆಹ ರೂಪಗಳ ಬಗೆಗೆ ಒಂದು ಮೌಲ್ಯಾತ್ಮಕ ನೆಲೆಯ ನಿರ್ಣಯ ಎಷ್ಟು ಸಾಧುವಾಗಿದೆ ಎಂಬ ಪ್ರಶ್ನೆ ಈಗ ಮುಂಚೂಣಿಗೆ ಬಂದಿದೆ.

ಕನ್ನಡಿಗರ ಪದಕೋಶ ಎಲ್ಲಾ ಭಾಷಿಕರ ಪದಕೋಶದಂತೆ ಚಲನಶೀಲ. ಇದರಲ್ಲಿ ನಮ್ಮ ಮಾತಿನಲ್ಲಿ ಬಳಸುವ ಪದಗಳ ಸಂಖ್ಯೆಗಿಂತ ಕೇಳಿ ಅರಿತುಕೊಳ್ಳುವ ಪದಗಳ ಸಂಖ್ಯೆ ಹೆಚ್ಚಿರುತ್ತದೆ. ಈ ಸಂಗತಿ ಬರೆವಣಿಗೆ ಮತ್ತು ಓದು ಇವೆರಡಕ್ಕೂ ಹೊಂದಿಕೊಳ್ಳುತ್ತದೆ. ಎಂದರೆ ನಾವು ನಮ್ಮ ಮಾತಿನಲ್ಲಿ ಬಳಸುವ ಪದಗಳ ಸಂಖ್ಯೆ ಕಡಿಮೆ. ಆದರೆ ಅದಕ್ಕಿಂತ ಹೆಚ್ಚು ಸಂಖ್ಯೆಯ ಪದಗಳನ್ನು ಕೇಳಿ ಅರಿತುಕೊಳ್ಳಬಲ್ಲೆವು. ಈ ವ್ಯತ್ಯಾಸ ಗಮನಾರ್ಹವಾದುದು. ನಾವು ಅಭ್ಯಾಸಕ್ಕಾಗಿ ಮಾತಿನ ಪದಕೋಶದ ಪದಗಳನ್ನು ಬಳಕೆಯ ಪದಗಳೆಂದೂ ಮತ್ತು ಕೇಳಿ ಅರಿತುಕೊಳ್ಳುವ ಪದಗಳನ್ನು ಗ್ರಹಿಕೆಯ ಪದಗಳು ಎಂದೂ ಸೂಚಿಸಿಕೊಳ್ಳೋಣ. ಕನ್ನಡಿಗರ ಬಳಕೆಯ ಪದಕೋಶ ವೃದ್ಧಿಯಾಗುವ ವೇಗಕ್ಕಿಂತಲೂ ಗ್ರಹಿಕೆಯ ಪದಕೋಶ ಹೆಚ್ಚಿನ ವೇಗದಲ್ಲಿ ವೃದ್ಧಿಯಾಗುತ್ತಿರುತ್ತದೆ. ಬೇರೆ ಬೇರೆ ವಲಯಗಳಲ್ಲಿ ನಾವು ಹೊಸದಾಗಿ ಮಾತನಾಡುವುದಕ್ಕಿಂತ, ಹೊಸ ವಲಯಗಳ ಮಾತುಗಳನ್ನು ಕೇಳಿಸಿಕೊಳ್ಳಬೇಕಾದ ಪ್ರಸಂಗಗಳು ಹೆಚ್ಚಿರುವುದೇ ಇದಕ್ಕೆ ಕಾರಣ. ಹೀಗೆ ಕೇಳುವ ಪದಗಳು ನಮ್ಮ ಗ್ರಹಿಕೆಯ ಪದಕೋಶದಲ್ಲಿ ನೆಲೆ ನಿಲ್ಲುತ್ತವೆ. ಆ ಪದಗಳನ್ನು ನಾವು ಮಾತಿನಲ್ಲಿ ಬಳಸದೆಯೇ ಇರಬಹುದು. ಈ ಮಾತು, ಬರೆಹರೂಪಕ್ಕೂ ಅನ್ವಯಿಸುತ್ತದೆ.

ಹಾಗೆ ನೋಡಿದರೆ ಬರೆಯುವ ಕನ್ನಡದ ವ್ಯಾಪ್ತಿ ಆಡುಕನ್ನಡದ ವ್ಯಾಪ್ತಿಗಿಂತ ಕಡಿಮೆ. ಕನ್ನಡಿಗರಲ್ಲಿ ಬರೆಯಲು ಕಲಿತವರು ಕೂಡ ಬರೆಯುವ ಅಥವಾ ಬರೆಯಬೇಕಾಗಿ ಬರುವ ಪ್ರಸಂಗ ಕಡಿಮೆ. ಆದರೆ ಅವರು ಓದುತ್ತಿರುತ್ತಾರೆ. ಇಲ್ಲವೇ ಕೇಳಿಸಿಕೊಳ್ಳುತ್ತಿರುತ್ತಾರೆ. ಇದರಿಂದಾಗಿ ಅವರ ಗ್ರಹಿಕೆಯ ಪದಕೋಶ ವೃದ್ಧಿಯಾಗುತ್ತಲೇ ಇರುತ್ತದೆ. ಹಾಗೆ ಬಂದು ಸೇರಿದ ಎಷ್ಟೋ ಪದಗಳನ್ನು ಮಾತಿನಲ್ಲಾಗಲೀ ಬರೆಹದಲ್ಲಾಗಲೀ ಕನ್ನಡಿಗರು ಎಂದೂ ಬಳಸದೆಯೇ ಇರಬಹುದು. ಹೀಗೆ ಗ್ರಹಿಕೆಯ ಪದಕೋಶಕ್ಕೆ ಬಂದು ಸೇರಿದ ಪದಗಳೆಲ್ಲವೂ ಅಲ್ಲೇ ನೆಲೆ ನಿಲ್ಲುತ್ತವೆಂದು ತಿಳಿಯಬೇಕಾಗಿಲ್ಲ. ಹೀಗೆ ಬಂದು ಸೇರಿದ ಎಷ್ಟೋ ಪದಗಳು ಬಲುಬೇಗನೆ ಮಾಸಿಹೋಗಬಹುದು. ಮತ್ತೆ ಕೆಲವು ದೀರ್ಘಕಾಲ ನೆಲೆ ನಿಲ್ಲಲೂ ಬಹುದು. ಸುಮ್ಮನೆ ನಿದರ್ಶನಕ್ಕಾಗಿ ಹೇಳುವುದಾದರೆ ಕಳೆದ ಶತಮಾನದ ಎಂಟನೇ ದಶಕದಲ್ಲಿ ಗ್ರಹಿಕೆಯ ಪದಕೋಶಕ್ಕೆ ಬಂದು ಸೇರಿರಬಹುದಾದ ಗ್ಲಾಸ್‌ನಟ್ ಮತ್ತು ಪೆರಿಸ್ಟ್ರೋಯಿಕಾ ಎಂಬ ಪದಗಳು ಈಗ ಇಲ್ಲವಾಗಿವೆ. ಹಾಗೆಯೇ ಜಾಗತೀಕರಣ, ಖಾಸಗೀಕರಣ, ಉದಾರೀಕರಣ, ಎಂಬಂಥ ಪದಗಳು ಇಪ್ಪತ್ತು ವರ್ಷಗಳ ಹಿಂದೆ ಕನ್ನಡಿಗರ ಗ್ರಹಿಕೆಯ ಪದಕೋಶದಲ್ಲಿ ಇರಲೇ ಇಲ್ಲ.

ಈ ಬಳಕೆಯ ಪದಕೋಶದ ಬಗೆಗೆ ನಾವು ಖಾತ್ರಿಯಾಗಿ ಮಾತಾಡಬಹುದಾದರೂ ಗ್ರಹಿಕೆಯ ಪದಕೋಶದ ಬಗೆಗೆ ಖಚಿತವಾಗಿ ಏನನ್ನೂ ಹೇಳಲಾಗದು. ಅದಕ್ಕೆ ಬದಲಾಗುತ್ತಿರುವ ಸಮಾಜವೇ ಕಾರಣ. ಕನ್ನಡಿಗರೊಬ್ಬರು ಯಾವ ಅನುಭವವಲಯದಲ್ಲಿ ಇದ್ದಾರೆ ಎಂಬುದನ್ನವಲಂಬಿಸಿ ಅವರ ಗ್ರಹಿಕೆಯ ಪದಕೋಶ ರೂಪಗೊಳ್ಳುತ್ತಿರುತ್ತದೆ. ವೈದ್ಯ, ವಕೀಲ, ಇಂಜಿನಿಯರ್, ಪ್ರಾಧ್ಯಾಪಕ ಹೀಗೆ ಹಲವು ವೃತ್ತಿಗಳಲ್ಲಿ ಇರುವವರು ಬೇರೆ ಬೇರೆ ರೀತಿಯ ಪದಕೋಶಗಳನ್ನು ಪಡೆದುಕೊಳ್ಳುತ್ತಲೇ ಇರುತ್ತಾರೆ. ಅವರ ಗ್ರಹಿಕೆಯ ಪದಕೋಶಗಳು ಒಂದಕ್ಕಿಂತ ಒಂದು ಸಂಪೂರ್ಣವಾಗಿ ಬೇರೆಯೇ ಆಗಿರುತ್ತವೆ. ಅವುಗಳ ನಡುವೆ ಸಂವಾದ ಅಸಾಧ್ಯವೇ ಆಗುತ್ತದೆ. ಕನ್ನಡದಂತಹ ಭಾಷೆಯನ್ನು ಮಾತಾಡುವವರ ಸಂದರ್ಭದಲ್ಲಿ ಈ ಗ್ರಹಿಕೆಯ ಪದಕೋಶವು ಬೆಳೆಯುವುದು ಕನ್ನಡ ಪದಗಳಿಂದಲ್ಲ. ಬೇರೆ ಭಾಷೆಯ ಪದಗಳಿಂದ ಅದು ಬೆಳೆಯುತ್ತಿದೆ ಎಂಬುದನ್ನು ಮುಖ್ಯವಾಗಿ ಗಮನಿಸಬೇಕು. ಕನ್ನಡಿಗರ ಪದಕೋಶದ ಅತ್ಯಂತ ಕ್ರಿಯಾಶೀಲವಲಯ ಈ ನೆಲೆಯಲ್ಲಿ ರೂಪಗೊಳ್ಳುತ್ತದೆ. ಹೀಗೆ ಪರ್ಯಾಯ ಪದಗಳನ್ನು ಏಕೆ ಸೃಷ್ಟಿಸಬೇಕು ಮತ್ತು ಹೇಗೆ ಸೃಷ್ಟಿಸಬೇಕು ಎಂಬ ಎರಡು ಪ್ರಶ್ನೆಗಳು ಮುಂಚೂಣಿಗೆ ಬಂದು ನಿಲ್ಲುತ್ತವೆ.

ಕಳೆದ ಐವತ್ತು ವರ್ಷಗಳಲ್ಲಿ ನಮ್ಮ ಪದಕೋಶದಲ್ಲಿ ಆಗಿರುವ, ಆಗುತ್ತಿರುವ ಪರಿವರ್ತನೆಗಳನ್ನು ಕುರಿತಂತೆ ಹಲವು ವಾಗ್ವಾದಗಳು ನಡೆದಿವೆ. ಅವುಗಳು ತೀವ್ರವಾದ ಅತಿರೇಕಗಳನ್ನು ಕೆಲವೊಮ್ಮೆ ಮುಟ್ಟಿರುವುದುಂಟು. ಅದರ ಕೆಲವು ಮಾದರಿಗಳನ್ನು ನಾವೀಗ ಗಮನಿಸಬಹುದು. ಹೊಸ ಪದವೊಂದು ನಮ್ಮ ಗ್ರಹಿಕೆಯ ಪದಕೋಶಕ್ಕೆ ಬಂದು ಸೇರಿತೆನ್ನೋಣ. ಅದನ್ನು ನಾವು ನಮ್ಮ ಬಳಕೆಯ ಕೋಶಕ್ಕೆ ತಂದುಕೊಂಡು ನಾವು ಬಳಸಬೇಕಾದ ಪ್ರಸಂಗ ಬಂದರೆ ಅದನ್ನು ಇರುವಂತೆಯೇ ಬದಲಾವಣೆ ಇಲ್ಲದೆ ಬಳಸುವುದೇ ಸರಿಯಾದ, ಸರಳವಾದ ಮತ್ತು ಸುಲಭವಾದ ದಾರಿ ಎಂಬುದು

ಒಂದು ವಾದ. ಇನ್ನೊಂದು ಕಡೆ ಹಾಗೆ ಮಾಡದೆ ಆ ಪದಗಳಿಗೆ ಸರಿಯಾದ ಪರ್ಯಾಯರೂಪಗಳನ್ನು ರಚಿಸಿಕೊಂಡು ಬಳಸಬೇಕು ಎಂಬುದು ಇನ್ನೊಂದು ವಾದ. ಪರ್ಯಾಯ ರೂಪಗಳನ್ನು ರೂಪಿಸಿಕೊಳ್ಳುವುದೇ ಆದರೆ ಹೊಸರಚನೆಯನ್ನು ಹೇಗೆ ಮಾಡಿಕೊಳ್ಳಬೇಕು ಎಂಬುದು ಇನ್ನೊಂದು ಪ್ರಶ್ನೆ. ಮೊದಲನೆಯ ಪರಿಹಾರವನ್ನು ಎಲ್ಲರೂ ಒಪ್ಪುತ್ತಿಲ್ಲ. ಕನ್ನಡ ಧ್ವನಿರಚನೆಯ ಅಗತ್ಯಗಳನ್ನು ಪೂರೈಸಿಕೊಂಡು ಹೊಸಪದಗಳನ್ನು ಸಾಧ್ಯವಿದ್ದಷ್ಟೂ ಅವು ಇರುವಂತೆಯೇ ಬಳಸಿಕೊಳ್ಳಬೇಕೆಂದು ಸೂಚಿಸಿದವರಲ್ಲಿ ಕುವೆಂಪು ಆದ್ಯರಾಗುತ್ತಾರೆ. ಆ ಹೊತ್ತಿಗೆ ಮೈಸೂರು ಪ್ರದೇಶದಲ್ಲಿ ಕನ್ನಡದಲ್ಲಿ ವಿಜ್ಞಾನ ಬರೆಹಗಳನ್ನು ಮಾಡುತ್ತಿದ್ದ ವಿದ್ವಾಂಸರ ಬರೆವಣಿಗೆಯನ್ನು ಗಮನಿಸಿ ಈ ಸಲಹೆಯನ್ನು ಅವರು ಮುಂದಿಟ್ಟರು. ಪ್ರಾಯೋಗಿಕ ನೆಲೆಯಲ್ಲಿ ಸೂಕ್ತವಾಗಿದ್ದ ಈ ಸಲಹೆ ಎಲ್ಲರ ಸಮರ್ಥನೆಯನ್ನೂ ಪಡೆದುಕೊಳ್ಳಲಿಲ್ಲ. ಒಪ್ಪಿಗೆ ನೀಡದಿರಲು ಕೆಲವರು ಮುಂದೊಡ್ಡಿದ ಕಾರಣಗಳು ಕೆಲವಿವೆ. ಅವರ ಪ್ರಕಾರ ಪರ್ಯಾಯಪದವನ್ನು ರೂಪಿಸುವುದು ನಮ್ಮ ಹಕ್ಕು. ಕನ್ನಡ ಭಾಷೆಯ ಸೃಜನಶೀಲತೆಯನ್ನು ಕಾಯ್ದುಕೊಳ್ಳಲು ಹೊಸ ರಚನೆಗಳನ್ನು ಮಾಡಲೇಬೇಕು ಎಂಬುದು ಅವರ ನಿಲುವು. ಇದಕ್ಕಾಗಿ ಜನ ಸಾಮಾನ್ಯರ ವಿವೇಕವನ್ನು ಬಳಸಿಕೊಳ್ಳಬೇಕೆಂದೂ, ಅಲ್ಲದೆ ಅವರ ಆಡುಮಾತಿನಲ್ಲಿರುವ ಪದರಚನೆಯ ಸಾಧ್ಯತೆಗಳನ್ನು ಯೋಗ್ಯರೀತಿಯಲ್ಲಿ ದುಡಿಸಿಕೊಳ್ಳಬೇಕೆಂದೂ ಇವರು ಸಲಹೆ ನೀಡುತ್ತಾರೆ. ಹೊಸ ಪದನಿರ್ಮಾಣಕ್ಕೆ ಸೂಚಿಸಿದ ಈ ದಾರಿ ಕಠಿಣವಾದುದು. ಅಸಾಧ್ಯವಲ್ಲದಿದ್ದರೂ ಹಲವು ಅಡೆತಡೆಗಳಿಂದ ಕೂಡಿತ್ತು. ಏಕೆಂದರೆ ಕನ್ನಡದ ಸಹಜರಚನೆಗಳನ್ನಾಗಿ ಪರಿವರ್ತಿಸಲು ಪೂರ್ವಭಾವಿಯಾದ ಅಧ್ಯಯನಗಳು ಅಗತ್ಯ ಮತ್ತು ಸಾಕಷ್ಟು ಸಮಯ ಅದಕ್ಕಾಗಿ ವಿನಿಯೋಗವಾಗಬೇಕಿತ್ತು. ಜನರ ದಿನದ ಭಾಷೆಯಲ್ಲಿ ಆಕಸ್ಮಿಕವಾಗಿ ಕಾಣಿಸಿಕೊಂಡ ಪರ್ಯಾಯ ಪದಗಳನ್ನು ನಿದರ್ಶನವಾಗಿ ನೀಡಿ ಅಷ್ಟರಿಂದಲೇ ಉತ್ಸಾಹಿತರಾಗುವುದು ಸಾಧ್ಯವಿರಲಿಲ್ಲ. ಪೂರ್ವಭಾವಿ ಅಧ್ಯಯನ ವಾಸ್ತವವಾಗಿ ಕನ್ನಡ ಭಾಷಾಅಧ್ಯಯನಕಾರರ ಜವಾಬ್ದಾರಿ. ಅಲ್ಲದೆ ಹೊಸ ಪದನಿರ್ಮಾಣಕ್ಕೆ ಈ ದಾರಿ ಹಿಡಿಯಲು ಕಾಲಾವಕಾಶವಿರಲಿಲ್ಲ. ಹೀಗಾಗಿ ನಡುವಣ ದಾರಿಯೊಂದನ್ನು ಆಯ್ಕೆ ಮಾಡಿಕೊಂಡಂತೆ ತೋರುತ್ತದೆ.

ಈಗಾಗಲೇ ಹೇಳಿದಂತೆ ಹೊಸ ಪದಗಳನ್ನು ರೂಪಿಸಲು ಕನ್ನಡವು ಆಯ್ಕೆ ಮಾಡಿಕೊಂಡ ಕೆಲವು ಪ್ರಧಾನ ವಿಧಾನಗಳು ಈ ಕೆಳಕಂಡಂತಿವೆ. ಒಂದು: ಮೂಲ ಪದವನ್ನು ಯಥಾವತ್ತಾಗಿ ಅಥವಾ ಕೆಲವು ಧ್ವನಿವ್ಯತ್ಯಾಸಗಳೊಡನೆ ಕನ್ನಡದಲ್ಲಿ ಬಳಸುವುದು. ಎರಡು: ಮೂಲ ಪದಕ್ಕೆ ಬದಲಾಗಿ ಕನ್ನಡದ ಹೊಸಪದವೊಂದನ್ನು ರೂಪಿಸುವುದು. ಇದರಲ್ಲಿ ಕನ್ನಡದ ಪದಗಳನ್ನು ಮಾತ್ರವಲ್ಲದೆ ಸಂಸ್ಕೃತದ ಪದಗಳನ್ನು ಕೂಡಾ ಬಳಸಲಾಗುತ್ತದೆ. ಮೂರು: ಕನ್ನಡದಲ್ಲಿ ಈಗಾಗಲೇ ಬಳಕೆಯಲ್ಲಿರುವ ಪದರಚನೆಯೊಂದನ್ನು ಇರುವ ಅರ್ಥದಲ್ಲಿ ಅಥವಾ ಹೊಸ ಅರ್ಥದಲ್ಲಿ ಬಳಸುವುದು. ಮೇಲೆ ಚರ್ಚಿಸಿದ ಗ್ರಹಿಕೆಯ ಪದಕೋಶದಲ್ಲಿ ಮೊದಲೆರಡು ಬಗೆಯ ಪದಗಳು ಅಧಿಕ ಪ್ರಮಾಣದಲ್ಲಿವೆ. ಮಾತಿನ ಇಲ್ಲವೇ ಬರೆಹದ ಪದಕೋಶದಲ್ಲಿ ಈ ಹೊಸಪದಗಳ ಸ್ವರೂಪ ಬೇರೆ ಬೇರೆ ರೀತಿಯಲ್ಲಿ ಇರುತ್ತವೆ. ಈ ಹೊಸ ಪದನಿರ್ಮಾಣದ ಪ್ರಕ್ರಿಯೆ

ಹಲವು ನೆಲೆಗಳಲ್ಲಿ ನಡೆಯುತ್ತಿರುತ್ತವೆ. ಸಮೂಹಮಾಧ್ಯಮಗಳಲ್ಲಿ ತತ್ಕಾಲೀನ ಆಸಕ್ತಿಯಿಂದ ಕೂಡಲೇ ಒಂದು ಹೊಸ ಪದದ ಅಗತ್ಯ ಕಂಡುಬಂದಾಗ ಹೆಚ್ಚು ತಾರ್ಕಿಕ ಕಾರಣಗಳನ್ನು ಮುಂದೊಡ್ಡದೆ ಒಂದು ಹೊಸ ಪದವನ್ನು ಬಳಸಿಬಿಡುವುದುಂಟು. ಹೀಗೆ ಬಳಸಿದ ಪದವು ಸೂಕ್ತವೋ ಅಲ್ಲವೋ ಎಂಬುದು ಎಷ್ಟೋ ವೇಳೆ ಪರಿಶೀಲನೆಗೆ ಒಳಗಾಗದೆ ಇರುವುದುಂಟು. ಇಂತಹ ಪದಗಳಲ್ಲಿ ಎಲ್ಲವೂ ಕನ್ನಡದ ಪದಕೋಶದ ಭಾಗವಾಗಿ ಉಳಿಯದೆ ಹೋಗಬಹುದು. ಆ ಹೊತ್ತಿನ ಅಗತ್ಯಗಳನ್ನು ಪೂರೈಸಿ ಬಳಕೆಯಿಂದ ಮಾಯವಾಗುವ ಸಾಧ್ಯತೆ ಹೆಚ್ಚು. ಮತ್ತೆ ಕೆಲವೊಮ್ಮೆ ಉಳಿದುಕೊಂಡ ಪದಗಳು ತಮ್ಮ ಬಳಕೆಯ ಅರ್ಥವನ್ನು ಬದಲಾಯಿಸಿಕೊಳ್ಳುತ್ತಾ ಹೋಗುವ ಸಾಧ್ಯತೆ ಇರುತ್ತದೆ.

ಕನ್ನಡದಲ್ಲಿ ದೇಶ್ಯ ಎಂದು ನಾವು ಗುರುತಿಸುವ ಎಲ್ಲ ಪದಗಳೂ ನಮ್ಮ ದಿನಬಳಕೆಯ ಪದಗಳಾಗಿ ಕಾಣಿಸಿಕೊಳ್ಳುವುದಿಲ್ಲ. ಆ ಪದಗಳಲ್ಲಿ ಕೆಲವು ಪದವರ್ಗದ ಪದಗಳು ಮಾತ್ರ ನಮಗೆ ದಿನವೂ ಉಪಯೋಗಕ್ಕೆ ಬರುತ್ತವೆ. ಉದಾ.ಗೆ ನಾಮಪದ-ಕ್ರಿಯಾಪದ ಮತ್ತು ಗುಣಪದಗಳಲ್ಲಿ, ಕ್ರಿಯಾಪದವರ್ಗ ಹೆಚ್ಚು ಮುಚ್ಚಿದಪದವರ್ಗ. ನಾಮಪದವರ್ಗವಂತೂ ಸಂಪೂರ್ಣವಾಗಿ ತೆರೆದಪದವರ್ಗವಾಗಿದ್ದು, ಅದಕ್ಕೆ ದಿನವೂ ಹೊಸ ಹೊಸ ಪದಗಳು ಬಂದು ಸೇರುತ್ತಿರುತ್ತವೆ. ದೇಶ್ಯಪದಗಳಲ್ಲಿ ಪದಗಳ ರೂಪ, ಅರ್ಥ ಮತ್ತು ಬಳಕೆಯ ನಿಯಮಗಳು ನಾವು ತಿಳಿದ ಹಾಗೆ ನಿಶ್ಚಿತವಾಗಿ ಇರುವುದಿಲ್ಲ. ಎಂದರೆ ಅವುಗಳನ್ನು ನಾವು ಬಳಸುವಾಗ ಅನುಕೂಲಕ್ಕೆ ತಕ್ಕ ಬದಲಾವಣೆಗಳನ್ನು ಮಾಡಿಕೊಳ್ಳುತ್ತೇವೆ. ಅದರಲ್ಲೂ ಅರ್ಥದ ನೆಲೆಯಲ್ಲಿ ಮತ್ತು ಬಳಕೆಯ ನೆಲೆಯಲ್ಲಿ ಈ ಬದಲಾವಣೆಗಳು ನಡೆಯುತ್ತಿರುತ್ತವೆ. ದೇಶ್ಯಪದಗಳಲ್ಲಿ ನಾಮಪದಗಳು ತಮ್ಮ ಮೂಲ ಅರ್ಥಗಳನ್ನು ಬಿಟ್ಟುಕೊಟ್ಟು ಬೇರೊಂದು ಅರ್ಥದಲ್ಲಿ ಬಳಕೆಯಾಗುವ ಸಾಧ್ಯತೆಗಳು ಇರುತ್ತವೆ. ಈ ಬದಲಾವಣೆಗೆ ಮುಖ್ಯ ಕಾರಣ ನಮ್ಮ ಜೀವನಕ್ರಮದಲ್ಲಿ ಆಗುತ್ತಿರುವ ಬದಲಾವಣೆಗಳು. ಇದಕ್ಕೆ ಕೆಲವು ನಿದರ್ಶನಗಳನ್ನು ನಾವು ನೋಡಬಹುದು. ವೃತ್ತಿ ಸಂಬಂಧಿಯಾದ ಪದಗಳು ಆಯಾ ವೃತ್ತಿಯ ನೆಲೆಯಲ್ಲಿ ವಾಚ್ಯಾರ್ಥವನ್ನು ಪಡೆದಿರುತ್ತವೆ. ಸಾಮಾಜಿಕ ಬದಲಾವಣೆಗಳಿಂದಾಗಿ ಆ ವೃತ್ತಿಯು ಪರಿವರ್ತನೆಗೆ ಒಳಗಾಗುತ್ತದೆ. ಆಗ ಅದರಲ್ಲಿ ಬಳಕೆಯಾಗುವ ಎಷ್ಟೋ ಪದಗಳು ಆ ವೃತ್ತಿಯ ಚೌಕಟ್ಟಿನಿಂದ ಹೊರಬಂದು ಸಾಮಾನ್ಯ ಪದಕೋಶಕ್ಕೆ ಬಂದು ಸೇರುತ್ತವೆ. ಕೃಷಿಗೆ ಸಂಬಂಧ ಪಟ್ಟ ಹತ್ತಾರು ಪದಗಳನ್ನು ಗಮನಿಸಿ. ಬೆಳೆ, ಕಳೆ, ಉಳು, ಹರಗು, ಹಸನು, ಸುಗ್ಗಿ, ತೂರು, ಕಣ, ಕೊಯ್ಲು, ಫಸಲು ಇವೇ ಮುಂತಾದ ಪದಗಳು ಆ ವೃತ್ತಿಯ ಪರಿಸರದಲ್ಲಿ ಹೊಂದಿರುವ ಅರ್ಥಗಳು ಒಂದು ಕಡೆ ಇದೆ. ಇವೇ ಪದಗಳನ್ನು ಆ ವೃತ್ತಿಯ ಆಚೆಗೆ ಸಾಮಾನ್ಯ ಬಳಕೆಯಲ್ಲಿ ಪ್ರಯೋಗಿಸಿದಾಗ ಮೂಲ ವಾಚ್ಯಾರ್ಥದ ಬದಲು ಲಕ್ಷಣಾರ್ಥಗಳು ಲಭಿಸಿಬಿಡುತ್ತವೆ. ಕಳೆದ ಐವತ್ತು ವರ್ಷಗಳಲ್ಲಿ ಕನ್ನಡದ ಪದಕೋಶ ಈ ಬಗೆಯ ಪರಿವರ್ತನೆಗೆ ಅಗಾಧ ಪ್ರಮಾಣದಲ್ಲಿ ಒಳಗಾಗಿರುವುದನ್ನು ಗಮನಿಸಬಹುದು.

ಈ ಮೇಲೆ ಹೇಳಿದ ಬದಲಾವಣೆಗಳ ಹಿಂದೆ ಕೆಲವು ಸಾಮಾಜಿಕ ಪರಿವರ್ತನೆಗಳು ಕೆಲಸ ಮಾಡುತ್ತಿರುತ್ತವೆ. ಎಂದು ಹೇಳಲಾಯಿತು. ಈ ಸಾಮಾಜಿಕ ವ್ಯತ್ಯಾಸಗಳು

ಕೇವಲ ಬಾಹ್ಯನೆಲೆಯ ವ್ಯತ್ಯಾಸವನ್ನು ಸೂಚಿಸುತ್ತವೆ. ಅಂದರೆ ಒಂದು ವೃತ್ತಿಗೂ, ಸಮಾಜಕ್ಕೂ ಇರುವ ಸಂಬಂಧ ಸಂಕೀರ್ಣ ನೆಲೆಯಲ್ಲಿ ಇರುತ್ತದೆ. ಆ ವೃತ್ತಿಯ ಬಗೆಗಿನ ದೃಷ್ಟಿಕೋನ ಸಾಮಾಜಿಕ ನೆಲೆಯಲ್ಲಿ ಬದಲಾಗುತ್ತಾ ಹೋದಂತೆ ಭಾಷೆಯ ಪದಕೋಶವು ತನ್ನಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತದೆ. ನಗರೀಕರಣದ ಪ್ರಭಾವದಿಂದ ಕೃಷಿಯ ಬಗೆಗೆ ಸಾಮಾಜಿಕವಾಗಿ ಇದ್ದ ಸಂಬಂಧದ ನೆಲೆಗಳು ಬದಲಾಗಿವೆ. ಕೃಷಿ ಈಗ ಸಮುದಾಯಕ್ಕೆ ಸದಾ ಅಗತ್ಯವಾದರೂ ಅದು ನಮ್ಮ ದಿನದಿನದ ವ್ಯವಹಾರದ ಭಾಗವಾಗಿರುವುದಿಲ್ಲ. ಆದರೆ ಕೃಷಿಯ ಪದಗಳು ಮಾತ್ರ ಕನ್ನಡ ಪದಕೋಶದಲ್ಲಿ ಹೊಸ ಜವಾಬ್ದಾರಿಯನ್ನು ನಿರ್ವಹಿಸಲು ಆರಂಭಿಸುತ್ತವೆ. ಇದನ್ನು ಪದಕೋಶದ ಒಳಚಲನೆ ಎಂದು ಗುರುತಿಸಬಹುದು. ಕನ್ನಡದಲ್ಲಿ ಇಂತಹ ಒಳಚಲನೆಯ ಪರಿಣಾಮ ಆಗಾಧ ಪ್ರಮಾಣದಲ್ಲಿ ನಡೆಯುತ್ತಿದೆ. ಇದನ್ನು ಗುರುತಿಸಿ ದಾಖಲಿಸುವುದು ಈಗ ಅಗತ್ಯವಾಗುತ್ತಿದೆ.

ದೇಶ್ಯಪದಗಳಲ್ಲಿ ಮತ್ತೂ ಒಂದು ಬಗೆಯ ವ್ಯತ್ಯಾಸಗಳು ನಡೆಯುತ್ತವೆ. ಪದಗಳು ಉಳಿದು ಪದಾರ್ಥಗಳು ಮಾಯವಾಗುವ ಪ್ರಕ್ರಿಯೆ ಸಾಮಾಜಿಕ ನೆಲೆಯಲ್ಲಿ ನಡೆಯುತ್ತಿರುತ್ತದೆ. ವಸ್ತುಜಗತ್ತಿನ ಪಲ್ಲಟಗಳು ಈ ಪದ ಪದಾರ್ಥಗಳ ವಿಘಟನೆಗೆ ಕಾರಣವಾಗುತ್ತವೆ. ಈ ವಿಘಟನೆಯ ಪರಿಣಾಮಗಳು ಪದಕೋಶದಲ್ಲಿ ಕಾಣಿಸಿಕೊಳ್ಳುವ ಕ್ರಮ ಹಲವು. ಒಂದು: ಪದ ಮತ್ತು ಪದಾರ್ಥಗಳೆರಡೂ ಬಳಕೆಯಿಂದ ದೂರ ಸರಿಯುವುದು. ಎರಡು: ಹೊಸ ಸಾಧ್ಯತೆಗಳೊಡನೆ ಪದದ ಬಳಕೆಯನ್ನು ಉಳಿಸಿಕೊಳ್ಳುವುದು. ಮೂರು: ಪದಾರ್ಥದ ಗೈರುಹಾಜರಿಯಲ್ಲಿ ಉಂಟಾದ ಶೂನ್ಯವನ್ನು ತುಂಬಲು ಬಂದ ಹೊಸ ಪದಾರ್ಥವನ್ನು ಸೂಚಿಸಲು ಇನ್ನೊಂದು ಹೊಸ ಪದವನ್ನು ಸೃಷ್ಟಿಸಿಕೊಳ್ಳುವುದು. ನಾಲ್ಕು: ಹಳೆಯ ಪದವನ್ನು ಬೇರೆಯ ಪರಿಸರದಲ್ಲಿ ಲಕ್ಷಣಾರ್ಥದೊಡನೆ ಬಳಸಲು ಮೊದಲು ಮಾಡುವುದು. ಈ ಎಲ್ಲಾ ಪ್ರಕ್ರಿಯೆಗಳೂ ಕನ್ನಡ ಪದಕೋಶವಲಯದಲ್ಲಿ ಅಗಾಧ ಪ್ರಮಾಣದಲ್ಲಿ ನಡೆಯುತ್ತಿವೆ. ಈ ಗತಿಶೀಲತೆಯನ್ನು ನಾವು ಇನ್ನೂ ಪೂರ್ಣವಾಗಿ ಅಭ್ಯಾಸ ಮಾಡುವುದು ಸಾಧ್ಯವಾಗಿಲ್ಲ. ಒಂದೆರಡು ನಿದರ್ಶನಗಳ ಮೂಲಕ ಈ ಸಂಕೀರ್ಣ ಪ್ರಕ್ರಿಯೆಯನ್ನು ಅರಿಯಲೆತ್ನಿಸಬಹುದು.

ಅಕ್ಕಿಯನ್ನು ಬೇಯಿಸಿ ಮಾಡಿದ ಪದಾರ್ಥ ಅನ್ನ. ಈ ಪದ ಕನ್ನಡಕ್ಕೆ ಸಂಸ್ಕೃತದಿಂದ ಬಂದಿದೆ. ಬಹು ಹಿಂದೆಯೇ ಈ ಅರ್ಥವನ್ನು ನೀಡುವ ಕೂಳು ಪದ ಬಳಕೆಯಿಂದ ಮಾಯವಾಯಿತು. ಅನ್ನ ಅದರ ಜಾಗದಲ್ಲಿ ಉಳಿಯಿತು. ಕೂಳು ಪದಕ್ಕೆ ತಾನು ಸೂಚಿಸುತ್ತಿದ್ದ ನಿರ್ದಿಷ್ಟ ಅರ್ಥದ ಬದಲಿಗೆ ಬೇರೆಯ ಅರ್ಥಗಳು ಬಂದು ಸೇರಿದವು. ಅದು ಸೀಮಿತ ಅರ್ಥದ ನೆಲೆಗೆ ಬಂದು ನಿಂತದ್ದು ಉಂಟು. ಶವದ ಮೆರವಣಿಗೆಯಲ್ಲಿ ಒಯ್ಯುವ ಅನ್ನವನ್ನು ಸೂಚಿಸಲು ಬಳಸುವ ತಲೆಗೂಳು ಎಂಬ ಪದವನ್ನು ಗಮನಿಸಿ. ಇದಲ್ಲದೆ ಹೊಟ್ಟೆಪಾಡಿಗೆ ತಿನ್ನುವ ಯಾವ ವಸ್ತುವನ್ನಾದರೂ ಅಥವಾ ಹೊಟ್ಟೆಪಾಡಿಗೆ ಮಾಡುವ ದುಡಿಮೆಗೆ ಸಿಗುವ ಯಾವ ಫಲವನ್ನಾದರೂ ಕೂಳು ಎಂದು ತಿರಸ್ಕಾರ

ರೂಪದಲ್ಲಿ ಬಳಸುವುದು ಕಾಣುತ್ತದೆ.(ಉದಾ.ಕೂಳಿಗೂ ಗತಿ ಇಲ್ಲದವರು) ಇವೆಲ್ಲವೂ ಹಿಂದೆಯೇ ಆದ ಬದಲಾವಣೆಗಳು. ಈಚಿನ ದಶಕಗಳಲ್ಲಿ ಅನ್ನ ಪದದ ಬದಲಿಗೆ ಇಂಗ್ಲಿಶ್‌ನಿಂದ ಪಡೆದ ರೈಸ್ ಪದವನ್ನು ವ್ಯಾಪಕವಾಗಿ ಬಳಸಲು ತೊಡಗಿದ್ದೇವೆ.(ಈ ರೈಸ್ ಎಂಬ ಪದವೇ ಇಂಗ್ಲಿಶಿಗೆ ಹೇಗೆ ಬಂದಿತು ಎಂಬ ಬಗ್ಗೆ ಬೇರೆಯೇ ಕತೆ ಇದೆ.) ಹೆಚ್ಚುಪಾಲು ಮನೆಯ ಆಚೆಗಿನ ವಾತಾವರಣದಲ್ಲಿ ಉದಾ.ಗೆ ಹೋಟೆಲ್, ಹಾಸ್ಟೆಲ್, ಬಸ್, ರೈಲು ನಿಲ್ದಾಣ, ಸಾರ್ವಜನಿಕ ಸಮಾರಂಭಗಳು ಇಂತಹ ಕಡೆಗಳಲ್ಲಿ 'ರೈಸ್' ಪದ ಬಂದು ನಿಂತಿದೆ. ಅನ್ನ ತನ್ನ ಬಳಕೆಯ ವ್ಯಾಪ್ತಿಯನ್ನು ಕಡಿಮೆ ಮಾಡಿಕೊಂಡಿದೆ.

ಸಂಬಂಧ ಸೂಚಕ ಪದಗಳು ಹಾಗೂ ಸಂಬೋಧನಾ ರೂಪದ ಪದಗಳು ಕೂಡ ಇದೇ ಬಗೆಯ ವ್ಯತ್ಯಾಸಗಳಿಗೆ ಒಳಗಾಗಿವೆ ಅತ್ತೆ, ಮಾವ ಮುಂತಾದ ಪದಗಳ ಬದಲು ಆಂಟಿ, ಅಂಕಲ್‌ಗಳು ಬಂದಿವೆ. ಇಂಗ್ಲಿಶ್‌ನ ಈ ಎರಡು ಪದಗಳು ಕನ್ನಡದ ಚಿಕ್ಕಮ್ಮ, ದೊಡ್ಡಮ್ಮ, ಚಿಕ್ಕಪ್ಪ, ದೊಡ್ಡಪ್ಪ ಪದಗಳ ಬಳಕೆಯನ್ನು ತಮ್ಮಲ್ಲೇ ಸೇರಿಸಿಕೊಂಡಿವೆ. ಇಂತಹ ನಿದರ್ಶನಗಳು ಸರಳವಾಗಿ ಕಂಡರೂ ನಮ್ಮ ಸಮಾಜದಲ್ಲಿ ಆಗುತ್ತಿರುವ ಬದಲಾವಣೆಗಳ ಸೂಚಕಗಳಾಗಿವೆ. ಭಾಷೆಯ ಪದಕೋಶ ತಾನೇ ಸಾಮಾಜಿಕ ಬದಲಾವಣೆಗೆ ಕಾರಣವಾಗದಿದ್ದರೂ ಆಗಿರುವ ಬದಲಾವಣೆಗಳು ಪದಕೋಶದಲ್ಲಿ ಸೂಚಿತವಾಗುತ್ತವೆ. ಆದ್ದರಿಂದ ಕನ್ನಡ ಸಮಾಜದಲ್ಲಿ ಆಗಿರುವ ವ್ಯತ್ಯಾಸಗಳನ್ನು ಈ ಪದಕೋಶ ಸೂಚಕಗಳ ಮೂಲಕ ಗ್ರಹಿಸುವುದು ಸಾಧ್ಯ. ದೇಶ್ಯಪದಗಳು ಬಳಕೆಯಿಂದ ತಪ್ಪಿ ಹೋಗುವ ಪ್ರಕ್ರಿಯೆಯ ಬಗೆಗೆ ಹಲವರು ಹಪಹಪಿಸುತ್ತಾರೆ. ಅವರ ಆತಂಕಕ್ಕೆ ಹಲವು ಕಾರಣಗಳಿವೆ. ಆದರೆ ಕೇವಲ ಆತಂಕ ವ್ಯಕ್ತಪಡಿಸುವುದರಿಂದ ಅಥವಾ ಅಂತಹ ಪದಗಳನ್ನು ಪ್ರಜ್ಞಾಪೂರ್ವಕವಾಗಿ ಎಚ್ಚರಿಕೆಯಿಂದ ಮರಳಿ ಬಳಸುವುದರಿಂದ ಸಮಸ್ಯೆ ಪರಿಹಾರವಾಗುವುದಿಲ್ಲ. ಆ ಪ್ರಯತ್ನಗಳು ಸಾಮಾಜಿಕ ಬದಲಾವಣೆಗಳ ಒತ್ತಾಸೆಯನ್ನು ಪಡೆದಿರಬೇಕಾಗುತ್ತದೆ. ಇದೊಂದು ಸಂಕೀರ್ಣ ಪ್ರಕ್ರಿಯೆ.

ನಮ್ಮ ಭಾಷೆಯ ಪದಕೋಶದಲ್ಲಿ ಅದರಲ್ಲೂ ಬಳಕೆಯ ಪದಕೋಶದಲ್ಲಿ ಈಚೆಗೆ ಆಗಿರುವ ಇನ್ನೊಂದು ಬಹುಮುಖ್ಯ ಬದಲಾವಣೆಯನ್ನು ನಾವು ಗಮನಿಸಬೇಕು. ಒಂದು ಭಾಷೆಯಲ್ಲಿ ಇರುವ ಪದಕೋಶ ಹಲವು ಪದರುಗಳನ್ನು ಪಡೆದಿರುತ್ತದೆ.ಉದಾ.ಗೆ ಕನ್ನಡದ ಪದಕೋಶದಲ್ಲಿ ಬರುವ ಜೋಡುನುಡಿಗಳನ್ನು ಗಮನಿಸೋಣ. ಇವು ಪ್ರತಿಧ್ವನಿ ಪದಗಳಿಗಿಂತ ಬೇರೆಯಾದವು. ಮನೆಮಠ ಎಂಬುದು ಜೋಡುನುಡಿಯಾದರೆ ಮನೆಗಿನೆ ಎಂಬುದು ಪ್ರತಿಧ್ವನಿ ಪದ. ಪ್ರತಿಧ್ವನಿ ಪದಗಳು ಜಗತ್ತಿನ ಎಲ್ಲ ಭಾಷೆಗಳಲ್ಲೂ ಕಾಣುವುದಿಲ್ಲ. ಕೆಲವು ನಿರ್ದಿಷ್ಟ ಭೂಪ್ರದೇಶದ ಭಾಷೆಗಳಲ್ಲಿ ಮಾತ್ರ ಇವೆ ಎಂದು ಭಾಷಾಶಾಸ್ತ್ರಜ್ಞರು ಗಮನಿಸಿದ್ದಾರೆ. ಇಂಥಾ ಪ್ರತಿಧ್ವನಿ ಪದಗಳನ್ನು ರೂಪಿಸಿಕೊಳ್ಳುವ ನಿಯಮಗಳು ಕೂಡ ಎಲ್ಲಾ ಭಾಷೆಗಳಲ್ಲೂ ಒಂದೇ ರೀತಿಯಲ್ಲಿ ಇರುವುದಿಲ್ಲ. ಕನ್ನಡದ ಪ್ರತಿಧ್ವನಿ ಪದಗಳು ಬಹುಮಟ್ಟಿಗೆ ಆಡುಮಾತಿಗೆ ಸೀಮಿತವಾಗಿವೆ. ಜೋಡುನುಡಿಗಳಲ್ಲಿ ಕನಿಷ್ಠ ಎರಡು ಪದಗಳಿದ್ದು ಎರಡು ಪದಗಳೂ ಸ್ವತಂತ್ರ ರಚನೆಗಳನ್ನು ಹೊಂದಿರುತ್ತವೆ. ಅವುಗಳಲ್ಲಿ ಮೊದಲನೇ ಪದವನ್ನು ಸ್ವತಂತ್ರವಾಗಿ ಬಳಸಲು ಸಾಧ್ಯ. ಎರಡನೆಯ ಪದ

ಎಲ್ಲಾ ಜೋಡುನುಡಿಗಳಲ್ಲಿ ಅಲ್ಲದಿದ್ದರೂ ಕೆಲವು ಕಡೆ ಮಾತ್ರ ಸ್ವತಂತ್ರವಾಗಿ ಬಳಕೆಯಾಗಬಲ್ಲದು. ಎರಡನೆಯ ಪದ ಹಿಂದೊಮ್ಮೆ ಸ್ವತಂತ್ರವಾಗಿದ್ದು ಈಗ ಈ ಜೋಡುನುಡಿಯಲ್ಲಿ ಮಾತ್ರ ಉಳಿದುಕೊಂಡಿರುವ ಸಾಧ್ಯತೆ ಇದೆ. ಕನ್ನಡದ ಕೆಲವು ಜೋಡುನುಡಿಗಳನ್ನು ನೋಡೋಣ. ಮನೆಮಠ, ಸಾಲಸೋಲ, ಹಣ್ಣುಹಂಪಲು, ಆಟಪಾಠ, ಮಕ್ಕಳುಮರಿ, ನಾಯಿನರಿ, ತೋಟತುಡಿಕೆ, ಕೆಲಸಕಾರ್ಯ ಮುಂತಾದವು.ಇವು ಸ್ವತಂತ್ರ ಪದಗಳಂತೆ ಬಳಕೆಯಾಗುತ್ತವೆ. ಮೊದಲ ಪದದ ಅರ್ಥವನ್ನು ವಿಸ್ತರಿಸುವ ಉದ್ದೇಶದಿಂದ ಹೀಗೆ ಜೋಡಿಪದಗಳನ್ನು ಬಳಸುತ್ತೇವೆ. ಪ್ರತಿಧ್ವನಿಪದದಲ್ಲಿ ಮೊದಲ ಪದದ ಅರ್ಥವನ್ನು ವಿಸ್ತರಿಸುವುದಕ್ಕಿಂತ ಅನಿರ್ದಿಷ್ಟಗೊಳಿಸುವ ಉದ್ದೇಶ ಇರುತ್ತದೆ. ಹಾಗಾಗಿ ಮನೆಮಠ ಮತ್ತು ಮನೆಗಿನೆ ಎಂಬ ಬಳಕೆಗಳಿಗೆ ಉದ್ದೇಶ ಬೇರೆ ಬೇರೆ. ಕನ್ನಡ ಪದಕೋಶದಲ್ಲಿ ಸಮೃದ್ಧವಾಗಿರುವ ಇಂತಹ ಜೋಡುನುಡಿಗಳು ಕಳೆದ ಐವತ್ತು ವರ್ಷಗಳಲ್ಲಿ ಬಳಕೆಯಿಂದ ದೂರವಾಗುತ್ತಿವೆ. ನಮ್ಮ ಸಂಕಥನಗಳಲ್ಲಿ ಈಗ ಹೊಸ ತಲೆಮಾರಿನವರು ಇಂತಹ ಪದಗಳನ್ನು ಬಳಸುವುದು ಕಡಿಮೆ. ಹಲವರ ಗ್ರಹಿಕೆಯ ಪದಕೋಶದಲ್ಲಿ ಇಂತಹ ಪದಗಳು ಇದ್ದರೂ ಬಳಕೆಯ ಪದಕೋಶದಲ್ಲಿ ಇವು ನಿಧಾನವಾಗಿ ಮಾಯವಾಗುತ್ತಿವೆ. ಪ್ರತಿಧ್ವನಿಪದಗಳು ಅಷ್ಟಿಷ್ಟು ಅಲ್ಲಲ್ಲಿ ಬಳಕೆಯಾದರೂ ಜೋಡುನುಡಿಗಳು ಬಹುಮಟ್ಟಿಗೆ ಕನ್ನಡದ ವ್ಯಾಪಕ ಬಳಕೆಯಿಂದ ಮಾಯವಾಗುತ್ತಿವೆ.

ಹೀಗೆ ನಮ್ಮ ಬಳಕೆಯ ಪದಕೋಶದಿಂದ ಕಳೆದು ಹೋಗುತ್ತಿರುವ ಇನ್ನೂ ಹಲವು ಪದರಚನೆಗಳಿವೆ. ವಾಗ್ರೂಢಿಗಳು ಅಥವಾ ನುಡಿಗಟ್ಟುಗಳು ಇಂತಹ ಪದರಚನೆಗಳು. ಹಾಗೆಯೇ ಗಾದೆಗಳು. ವಾಗ್ರೂಢಿಗಳು ಸಂಕಥನಗಳ ಉದ್ದೇಶವನ್ನು ಹೆಚ್ಚು ವ್ಯಾಪಕಗೊಳಿಸುವ ಅಪೇಕ್ಷೆಯನ್ನು ಪಡೆದಿರುತ್ತವೆ. ಗಾದೆಗಳಿಗೆ ಸಂಕಥನಗಳ ಲೋಕವ್ಯಾಪ್ತಿಯನ್ನು ಸಾರ್ವತ್ರೀಕರಿಸುವ ಗುರಿ ಇರುತ್ತದೆ. ಆದರೆ ಇವು ನಮ್ಮ ಮೂಲ ಪದಕೋಶದಿಂದ ಆಯಾ ಭಾಷಿಕರು ಬೇಕೆಂದಾಗ ಬೇಕಾದ ರೀತಿಯಲ್ಲಿ ಕಟ್ಟಿಕೊಳ್ಳಬಹುದಾದ ಪದರಚನೆಗಳಲ್ಲ. ಭಾಷೆಯಲ್ಲಿ ಪಾರಂಪರಿಕವಾಗಿ ಬಳಕೆಯಲ್ಲಿದ್ದು ಭಾಷಿಕರ ನೆನಪಿನಿಂದ ಮತ್ತೆಮತ್ತೆ ಬಳಕೆಯಾಗುತ್ತಿರುತ್ತವೆ. ಈ ಪ್ರಕ್ರಿಯೆಗೆ ಕೊಂಚ ವಿವರಣೆ ಅಗತ್ಯ. ತಲೆನೋವು ಎಂಬ ಪದರಚನೆ ತಲೆ ಮತ್ತು ನೋವು ಎಂಬ ಎರಡು ಪದಗಳಿಂದ ರೂಪುಗೊಂಡಿದೆ. ತಲೆನೋವು ಎಂಬ ಪದವನ್ನು ನಾವು ಹೊಸದಾಗಿ ಕಟ್ಟುತ್ತೇವೆ. ಹೊಟ್ಟೆನೋವು, ಎದೆನೋವು, ಕಿವಿನೋವು ಎಂಬಂತೆ. ಹಾಗೆಯೇ ತಲೆ ಎಂಬ ಪದವನ್ನು ಬಳಸಿ ತಲೆಗೂದಲು, ತಲೆಯಾಳು, ತಲೆಕಾಯಿ, ತಲೆಒಡೆ ಮುಂತಾದ ರಚನೆಗಳನ್ನು ಮಾಡುತ್ತೇವೆ. ಆದರೆ ವಾಗ್ರೂಢಿಗಳು, ಗಾದೆಮಾತುಗಳು ಹೀಗಲ್ಲ. ಅವು ಈಗಾಗಲೇ ಸಿದ್ಧಗೊಂಡು ಇಡಿಯಾಗಿ ಒಂದು ಘಟಕವಾಗಿ ಪದಕೋಶದಲ್ಲಿರುತ್ತವೆ ಇಂತಹ ರಚನೆಗಳನ್ನು ಭಾಷಿಕರು ಸ್ವತಂತ್ರವಾಗಿ ಕಲಿತುಕೊಳ್ಳಬೇಕಾಗುತ್ತದೆ.

ನಮ್ಮ ಬಳಕೆಯ ಪದಕೋಶದಿಂದ ಹೀಗೆ ಜೋಡುನುಡಿ, ಪ್ರತಿಧ್ವನಿ ಪದ, ವಾಗ್ರೂಢಿಗಳು, ಗಾದೆ, ಮುಂತಾದವು ಮಾಯವಾಗಲು ಕಾರಣಗಳು ಎರಡು. ಒಂದು:

ಇಂತಹ ರಚನೆಗಳನ್ನು ಬಳಸಲು ಅಗತ್ಯವಾದ ಸಂದರ್ಭಗಳೇ ಕಡಿಮೆಯಾಗುತ್ತಿವೆ. ಎರಡು: ಇಂತಹ ರಚನೆಗಳನ್ನು ಬಳಸಲು, ಪದಕೋಶಕ್ಕೆ ಸೇರಿಸಿಕೊಳ್ಳಲು ನೆರವಾಗುವ ಸಂದರ್ಭಗಳು ಕಡಿಮೆಯಾಗುತ್ತಿವೆ. ಎರಡನೆಯ ಕಾರಣವನ್ನು ನಮ್ಮ ಶಿಕ್ಷಣಕ್ರಮವನ್ನು ಗಮನಿಸಿ ಹೇಳಲಾಗಿದೆ. ಇಂತಹ ಪದಗಳನ್ನು ಕಲಿಯದೆ ಹೋದರೆ ಬಳಸುವುದು ಹೇಗೆ? ಕಲಿಸಲು ಅಗತ್ಯವಾದ ಅವಕಾಶವನ್ನು ಶಿಕ್ಷಣಕ್ರಮವು ಉಳಿಸಿಕೊಂಡಿಲ್ಲ. ನಮ್ಮ ಪಠ್ಯಪುಸ್ತಕಗಳಾಗಲೀ ಅಥವಾ ಮಕ್ಕಳು ಓದಲು ರಚಿತವಾಗುವ ಪುಸ್ತಕಗಳಲ್ಲಿಯಾಗಲೀ ಈ ಮಾದರಿಯ ಪದಗಳನ್ನು ಪರಿಚಯ ಮಾಡಬೇಕೆಂಬ ಯೋಜಿತ ಕ್ರಮಗಳನ್ನು ನಾವು ಕೈಗೊಂಡಿಲ್ಲ. ಕನ್ನಡಿಗರ ಗ್ರಹಿಕೆಯ ಪದಕೋಶದಲ್ಲಿ ಉಳಿದುಕೊಂಡಿರುವ ಈ ಅಗಾಧ ಪ್ರಮಾಣದ ಪದಗಳು ಕ್ರಮೇಣ ಬಳಕೆಯ ಪದಕೋಶದಿಂದ ಕರಗಿ ಹೋಗುವ ಸಂಭವ ಹೆಚ್ಚು.

ಈ ಪರಿಸ್ಥಿತಿ ಉಂಟಾಗಲು ಮತ್ತೊಂದು ಕಾರಣವನ್ನು ಇಲ್ಲಿ ಪ್ರಾಸಂಗಿಕವಾಗಿ ಸೂಚಿಸಬಹುದು. ಮಕ್ಕಳು ಭಾಷೆಯನ್ನು ಶಾಲಾಪುಸ್ತಕಗಳಲ್ಲಿ ಓದಿ ಕಲಿಯುವಾಗ ಅವರಿಗೆ ಬಹಳ ಸರಳವಾದ ರಚನೆಗಳನ್ನು ಮಾತ್ರ ಬಳಸಿ ಪಠ್ಯವನ್ನು ಒದಗಿಸಬೇಕು ಎಂಬ · ತರ್ಕವನ್ನು ನಾವು ಒಂದು ಅತಿರೇಕಕ್ಕೆ ಒಯ್ದಿದ್ದೇವೆ. ಮಕ್ಕಳು ಗ್ರಹಿಸುವ ವಿಧಾನದ ಬಗೆಗೆ ಇರುವ ತಪ್ಪುಕಲ್ಪನೆಯಿಂದ ಇಂಥಾ ಪರಿಸ್ಥಿತಿ ನಿರ್ಮಾಣವಾಗಿದೆ. ಓದುವಾಗ ಅಥವಾ ಕೇಳುವಾಗ ಮಕ್ಕಳು ಅರ್ಥಮಾಡಿಕೊಳ್ಳುವ ವಿಧಾನ ಯಾವುದು? ಅದು ಪದಗಳನ್ನು ಘಟಕಗಳಾಗಿ ಇರಿಸಿಕೊಂಡಿರುವುದಿಲ್ಲ. ಅಂದರೆ ಕೇಳಿದ ಅಥವಾ ಓದಿದ ಪ್ರತಿಯೊಂದು ಪದವನ್ನೂ ಅರ್ಥಮಾಡಿಕೊಂಡರೆ ಇಡೀ ಸಂಕಥನ ಅರ್ಥವಾಗಲು ಸಾಧ್ಯವೆಂದು ತಿಳಿಯುವುದಾಗಲೀ ಅಥವಾ ಪ್ರತಿಯೊಂದು ಪದದ ಅರ್ಥವೂ ಗೊತ್ತಾಗದಿದ್ದಲ್ಲಿ ಮಕ್ಕಳಿಗೆ ಕೇಳಿದ್ದು ಇಲ್ಲವೇ ಓದಿದ್ದು ಅರ್ಥವಾಗುವುದಿಲ್ಲ ಎಂದು ತಿಳಿಯುವುದಾಗಲೀ ಸರಿಯಲ್ಲ, ಈ ತಿಳುವಳಿಕೆಯಿಂದ ಕೇವಲ ವಾಚ್ಯಾರ್ಥ ಪ್ರಧಾನವಾದ ಸುಲಭಗ್ರಾಹ್ಯವಾದ ಪದಗಳನ್ನು ಮಾತ್ರ ಬಳಸುವ ಕ್ರಮಕ್ಕೆ ನಾವು ಓಲುವೆ ತೋರಿಸಿದ್ದೇವೆ. ಹೀಗಾಗಿ ಕನ್ನಡದ ಸೀಮಿತ ಪದಕೋಶದಲ್ಲೇ ಎಲ್ಲವನ್ನೂ ನಿರ್ವಹಿಸುತ್ತಿದ್ದೇವೆ. ಇನ್ನೂ ಒಂದು ಕಲ್ಪನೆ ನಮ್ಮ ಭಾಷಾಬಳಕೆಯನ್ನು ನಿಯಂತ್ರಿಸುತ್ತಿದೆ. ಮಕ್ಕಳು ಓದುವ ಇಲ್ಲವೇ ಕೇಳುವ ಭಾಷೆ ಹೆಚ್ಚು ಖಚಿತವಾಗಿರಬೇಕು ಎಂಬುದು ಒಂದು ತಿಳುವಳಿಕೆ. ಇದು ಸರಿ. ಆದರೆ ಖಚಿತತೆ ಎಂದಾಗ ಅದನ್ನು ಭಾಷೆಯ ಯಾವ ಘಟಕಕ್ಕೆ ಅನ್ವಯಿಸಬೇಕು? ಪದಗಳ ನೆಲೆಗೋ? ವಾಕ್ಯಗಳ ನೆಲೆಗೋ? ಅಥವಾ ಅರ್ಥವಿನ್ಯಾಸದ ನೆಲೆಗೋ? ಸಾಮಾನ್ಯವಾಗಿ ನಾವು ಬಳಸುವ ಪದಗಳು ಖಚಿತಾರ್ಥವನ್ನು ನೀಡದಿದ್ದಲ್ಲಿ ಅಥವಾ ಖಚಿತಾರ್ಥವನ್ನು ನೀಡುತ್ತಿಲ್ಲ ಎಂದು ನಾವು ಭಾವಿಸಿದಲ್ಲಿ ಅಂತಹ ಪದಗಳನ್ನು ನಾವು ಮಕ್ಕಳ ಸಂಕಥನದಿಂದ ಹೊರಗಿಡುತ್ತೇವೆ. ಇದು ಅವರು ಕನ್ನಡದ ಅನುಭವ ಜಗತ್ತಿಗೆ ತೆರೆದುಕೊಳ್ಳದಂತೆ ನಾವೇ ಮಾಡಿರುವ ಅಡೆತಡೆ. ಖಚಿತತೆ, ಶುದ್ಧತೆ, ಸರಳತೆ ಇವೆಲ್ಲವೂ ಸಾಪೇಕ್ಷ ಪರಿಕಲ್ಪನೆಗಳು. ಭಾಷೆಯ ಸಂಬಂಧವನ್ನು ನಾವು ಈ ಇಕ್ಕಟ್ಟುಗಳಲ್ಲಿ ಇರಿಸಿರುವುದರಿಂದ ನಿಧನಿಧಾನವಾಗಿ ಕನ್ನಡಿಗರ ಬಳಕೆಯ ಪದಕೋಶ ತೀರ ಬಡವಾಗುತ್ತಿದೆ; ಕುಬ್ಜವಾಗುತ್ತಿದೆ.

ಪದಕೋಶದ ಹೊಸ ಪದನಿರ್ಮಾಣ ಪ್ರಕ್ರಿಯೆಯಲ್ಲಿ ಈ ಹಿಂದೆ ಹೇಳಿದಂತೆ ಅಚ್ಚ ಕನ್ನಡದ ಪದಗಳನ್ನು ಹೊಸ ಅರ್ಥಗಳೊಡನೆ ಪ್ರಯೋಗಿಸುವುದು ಒಂದು ದಾರಿ. ಕನ್ನಡದಲ್ಲಿ ಇಂತಹ ಪ್ರಯೋಗಗಳು ಕಳೆದ ಶತಮಾನದ ಉದ್ದಕ್ಕೂ ಬೇರೆ ಬೇರೆ ಪ್ರಮಾಣದಲ್ಲಿ ನಡೆದದ್ದಿದೆ. ಆದರೆ ಕಳೆದ ಐವತ್ತು ವರ್ಷದಲ್ಲಿ ವೈಜ್ಞಾನಿಕ ಪಾರಿಭಾಷಿಕ ಪದಗಳನ್ನು ಹೀಗೆ ಕನ್ನಡದ ದೇಶ್ಯಪದಗಳಿಂದ ರೂಪಿಸುವ ಯತ್ನವನ್ನು ಡಾ. ಡಿ.ಎಸ್.ಶಿವಪ್ಪ ಅವರು ಮಾಡಿದ್ದಾರೆ. ವೈದ್ಯಕೀಯ ವಲಯದ ಪಾರಿಭಾಷಿಕ ಪದಗಳಿಗೆ ಕನ್ನಡದ ಪದಗಳಿಂದಲೇ ಹೊಸ ಪಾರಿಭಾಷಿಕ ಪದಗಳನ್ನು ಕಟ್ಟುವ ಅವರ ಪ್ರಯತ್ನ ಹೆಚ್ಚು ಜನ ಅನುಯಾಯಿಗಳನ್ನು ಪಡೆಯಲಿಲ್ಲ. ಅವರು ರೂಪಿಸಿಕೊಟ್ಟ ಪದಗಳನ್ನು ಈಗ ಬಳಸುತ್ತಿರುವವರಲ್ಲಿ ಡಾ.ಪಿ.ಎಸ್.ಶಂಕರ್ ಅವರನ್ನು ಹೆಸರಿಸಬಹುದು. ವೈದ್ಯಕೀಯ ಬರೆಹಗಳು ವೈದ್ಯರನ್ನು ಉದ್ದೇಶಿಸಿರುವುದಿಲ್ಲ. ಜನಾರೋಗ್ಯದ ವಲಯದಲ್ಲಿ ಅಕ್ಷರಸ್ಥ ಜನರಿಗೆ ತಿಳುವಳಿಕೆ ನೀಡಲೆಂದು ರಚನೆಯಾಗುತ್ತವೆ. ಅವರಿಗೆ ತಮ್ಮ ನಿತ್ಯದ ಭಾಷೆಯ ಪದಗಳನ್ನೇ ಬಳಸಿದ ಪಾರಿಭಾಷಿಕ ಪದಗಳು ಹೆಚ್ಚು ಸೂಕ್ತವಾಗುತ್ತವೆ ಎಂಬುದು ಇಂತಹ ಬಳಕೆಯ ಹಿಂದಿನ ತರ್ಕ. ಹೀಗೆ ಹೊಸ ಪದಗಳನ್ನು ಕನ್ನಡದ ಮೂಲಪದಗಳಿಂದಲೇ ರಚಿಸುವುದು ಅಷ್ಟು ಸುಲಭದ ಕೆಲಸವಲ್ಲ. ಅಲ್ಲದೆ ಅಂತಹ ಪದಗಳನ್ನು ಹುಡುಕಿ ತೆಗೆಯುವ ಜೊತೆಗೆ ನಿರ್ದಿಷ್ಟ ಅರ್ಥವನ್ನು ಅವು ಹೊಂದುವಂತೆ ನೋಡಿಕೊಳ್ಳುವುದು ಇನ್ನೂ ಕಷ್ಟ. ನಿದರ್ಶನಕ್ಕೆ ಒಂದು ಪದವನ್ನು ಚರ್ಚಿಸಬಹುದು. ಹಾರ್ಟ್ ಎಂಬ ಅಂಗವನ್ನು ಸೂಚಿಸಲು ಸಂಸ್ಕೃತದ 'ಹೃದಯ' ಎಂಬ ಪದವನ್ನು ಬಳಸುತ್ತೇವೆ. ಅದನ್ನು ಆಧರಿಸಿ ಹೃದಯರೋಗ, ಹೃದಯಸ್ತಂಭನ, ಹೃತ್ಕರ್ಣ, ಹೃತ್‌ಕುಕ್ಷಿ, ಹೃದಯನಾಳ ಮುಂತಾದ ಪದಗಳನ್ನು ರೂಪಿಸಿ ಬಿಡುತ್ತೇವೆ. ಬದಲಿಗೆ ಒಂದು ವೇಳೆ ಹಾರ್ಟ್‌ಗೆ ಸಂವಾದಿಯಾಗಿ ಕನ್ನಡದ ಗುಂಡಿಗೆ ಎಂಬ ಪದವನ್ನು ಬಳಸಿದೆವು ಎಂದುಕೊಳ್ಳೋಣ. ಈಗ ಈ ಗುಂಡಿಗೆ ಪದವನ್ನು ಆಧಾರವಾಗಿಟ್ಟುಕೊಂಡು ಬೇರೆ ಬೇರೆ ಪದಗಳನ್ನು ರೂಪಿಸಬೇಕಾಗುತ್ತದೆ. ಅದೂ ಅಲ್ಲದೆ ಕನ್ನಡದ ಗುಂಡಿಗೆ ಪದಕ್ಕೆ ದೇಹದ ಒಂದು ಭಾಗ ಎಂಬ ಅರ್ಥದ ಜೊತೆಗೆ ಧೈರ್ಯ, ಸಾಹಸ, ಮುಂತಾದ ಅರ್ಥಗಳೂ ಇವೆ. ಪಾರಿಭಾಷಿಕಪದವಾಗಿ ಅದನ್ನು ದೇಹದ ಒಂದು ಭಾಗ ಎಂದು ಬಳಸಿದ ಕೂಡಲೇ ಅದರ ಬೇರೆ ಅರ್ಥಗಳನ್ನು ನಿರಾಕರಿಸಬೇಕಾಗುತ್ತದೆ. ಇದು ಒಂದು ಸಮಸ್ಯೆ. ಈ ಪ್ರಕ್ರಿಯೆ ಎಷ್ಟು ಕಠಿಣ ಎಂದು ಹೇಳಲು ಈ ಉದಾಹರಣೆ ನೀಡಲಾಯಿತೇ ಹೊರತು ಹೀಗೆ ಕನ್ನಡದ ಪದಗಳನ್ನು ಆಧರಿಸಿ ಹೊಸಪದಗಳನ್ನು ನಿರ್ಮಾಣ ಮಾಡಬಾರದು ಎನ್ನುವುದು ಉದ್ದೇಶವಲ್ಲ. ಆದರೆ ಇಂತಹ ಪ್ರಯತ್ನಗಳು ಕನ್ನಡದಲ್ಲಿ ಹೆಚ್ಚು ಪ್ರಮಾಣದಲ್ಲಿ ಆಗಲಿಲ್ಲ ಎಂಬುದು ಗಮನಿಸಬೇಕಾದ ವಿಷಯ.

ಪಾರಿಭಾಷಿಕ ಪದಗಳನ್ನು ರೂಪಿಸುವಾಗ ಬರೆಹದ ಭಾಷೆಯಲ್ಲಿ ಸಂಸ್ಕೃತದ ಪದಗಳನ್ನು ಬಳಸುವುದು, ಅವುಗಳನ್ನು ಆಧರಿಸಿ ಹೊಸ ಹೊಸ ಪದಗಳನ್ನು ನಿರ್ಮಿಸುವುದು ಜಾರಿಯಲ್ಲಿರುವ ಒಂದು ಜನಪ್ರಿಯ ವಿಧಾನ. ಹೀಗೆ ಸಂಸ್ಕೃತವನ್ನು ಆಶ್ರಯಿಸುವವರು ಆ ಪದಗಳಿಂದ ಖಚಿತ ಅರ್ಥವನ್ನು ಪಡೆಯುವುದು ಸಾಧ್ಯವೆಂದು ನಂಬಿದ್ದಾರೆ. ಈ ನಂಬಿಕೆ ಎಲ್ಲ ಸಂದರ್ಭಗಳಲ್ಲೂ ನಿಜವಾಗದೇ ಹೋಗಬಹುದು.

ತೀರಾ ಈಚೆಗೆ ಡಾ.ಡಿ.ಎನ್.ಶಂಕರಭಟ್ಟರು ತಮ್ಮ 'ಕನ್ನಡ ಬರೆಹವನ್ನು ಸರಿಪಡಿಸೋಣ'(೨೦೦೫) ಎಂಬ ಕೃತಿಯಲ್ಲಿ ಈ ಕುರಿತು ಒಂದು ಚರ್ಚೆಯನ್ನು ಬೆಳಸಿದ್ದಾರೆ. ಕನ್ನಡ ಬರೆಹದಲ್ಲಿ ಸಂಸ್ಕೃತ ಪದಗಳ ಬಳಕೆ ಕೆಲವು ವಲಯಗಳಲ್ಲಂತೂ ತೀರಾ ಹೆಚ್ಚಾಗಿರುವುದನ್ನು ಗಮನಿಸಿ ಅವರು ಇದು ಖಚಿತತೆಯನ್ನು ಕಾಯ್ದುಕೊಳ್ಳುತ್ತದೋ ಇಲ್ಲವೋ ಎಂಬ ಬಗೆಗೆ ಚರ್ಚಿಸಿದ್ದಾರೆ. ಅವರ ಮುಖ್ಯ ನಿರ್ಣಯಗಳು ಎರಡು. ಒಂದು: ಸಂಸ್ಕೃತ ಪದಗಳ ಬಳಕೆಯಿಂದಾಗಿ ನಾವು ತಿಳಿದಂತೆ ಖಚಿತಾರ್ಥ ಒದಗುವುದಿಲ್ಲ.ಆದರೆ ಖಚಿತವಾಗಿದೆ ಎಂದು ನಾವು ನಂಬಿರುತ್ತೇವೆ. ಪರಿಶೀಲಿಸಿದರೆ ಅಲ್ಲಿರುವ ಗೊಂದಲಗಳು ಹೊರಬೀಳುತ್ತವೆ. ಎರಡು: ಕನ್ನಡದ ಪದಗಳನ್ನು ಬಳಸಿ ಹೊಸ ಪದಗಳನ್ನು ಕಟ್ಟುವುದು ಕಷ್ಟ. ಆದರೂ ಅಸಾಧ್ಯವಲ್ಲ. ಕನ್ನಡದ ಪ್ರಕೃತಿಗಳನ್ನು, ಧಾತುಗಳನ್ನು, ಪ್ರತ್ಯಯಗಳನ್ನು ಅಭ್ಯಾಸ ಮಾಡುವ ಮೂಲಕ ಹೊಸಪದಗಳನ್ನು ನಿರ್ಮಿಸಲು ಸಾಧ್ಯ ಎಂದಿದ್ದಾರೆ. ಡಾ.ಭಟ್ ಅವರ ಈ ಚಿಂತನೆ ಸಾಧುವಾಗಿದೆ. ಭಾಷಾಯೋಜಕರು ಈ ದಿಕ್ಕಿನಲ್ಲಿ ಪ್ರಯತ್ನಗಳನ್ನು ಮಾಡಬೇಕಾಗಿದೆ.

ಕನ್ನಡ ಬಳಕೆಯ ಪದಕೋಶದಲ್ಲಿ ಇರುವ ಇನ್ನೊಂದು ಸಮಸ್ಯೆಯೆಂದರೆ, ಸಾಧುರೂಪಗಳ ಕೊರತೆ. ಎಂದರೆ ಒಂದೇ ಪದವನ್ನು ಒಂದಕ್ಕಿಂತ ಹೆಚ್ಚು ರೂಪದಲ್ಲಿ ಉಚ್ಚರಿಸುವುದು ಮತ್ತು ಬರೆಯುವುದು. ಹೀಗೆ ಮಾಡುವುದು ಭಾಷಿಕರ ಎಚ್ಚರದ ಕೆಲಸವೇನಲ್ಲ ಮತ್ತು ಈ ಪರಿಸ್ಥಿತಿ ಅಸಹಜವೇನಲ್ಲ. ಭಾಷೆಗಳಲ್ಲಿ ಹೀಗೆ ರೂಪವೈವಿಧ್ಯ ಮತ್ತು ಕಾಗುಣಿತದ ಪರ್ಯಾಯಗಳು ಇರುತ್ತವೆ. ಆದರೆ ಕನ್ನಡದಲ್ಲಿ ಈ ಪರಿಸ್ಥಿತಿ ಇನ್ನೂ ಅಸ್ಪಷ್ಟ ಆಕಾರದಲ್ಲಿ ನೆಲೆಯೂರಿದೆ. ಕೆಲವು ನಿದರ್ಶನಗಳನ್ನು ನೋಡೋಣ. ಮೆದುಳು–ಮಿದುಳು, ನಿನ್ನೆ–ನೆನ್ನೆ, ಥಾಳಿ–ದಾಳಿ, ಗಂಟೆ–ಘಂಟೆ, ಧೂಳು–ದೂಳು, ಭತ್ತ–ಬತ್ತ, ಒಂಭತ್ತು–ಒಂಬತ್ತು, ಕಥೆ–ಕತೆ, ಚೆನ್ನ–ಚನ್ನ ಇಂತ ಪದಗಳನ್ನು ನಾವು ಪಟ್ಟಿ ಮಾಡುತ್ತಾ ಹೋಗಬಹುದು ಇವುಗಳ ಭಿನ್ನ ಉಚ್ಚಾರಣೆಯಿಂದ ಇಲ್ಲವೇ ಬರೆಹ ರೂಪಗಳಿಂದ ಸಂವಹನಕ್ಕೆ ಅಡ್ಡಿಯಾಗುತ್ತದೆ ಎನ್ನಲಾಗುವುದಿಲ್ಲ. ಆದರೆ ಎರಡು ವಲಯಗಳಲ್ಲಿ ಸಮಸ್ಯೆಗಳು ಉಂಟಾಗುತ್ತಿವೆ. ಒಂದು: ಭಾಷಾಕಲಿಕೆಯ ವಲಯ. ಎರಡು: ತಂತ್ರಜ್ಞಾನದ ವಲಯ. ಭಾಷಾಕಲಿಕೆಯ ವಲಯದಲ್ಲಿ ಕನ್ನಡವನ್ನು ಕಲಿಯುವ ಅನ್ಯಭಾಷಿಕರು ಈ ರೂಪವೈವಿಧ್ಯಗಳ ಗೊಂದಲಕ್ಕೆ ಒಳಗಾಗುತ್ತಾರೆ. ಅವರು ಸ್ವತಃ ಮಾಡುವ ತಪ್ಪುಗಳ ಜೊತೆಗೆ ಇವೂ ಸೇರಿಕೊಳ್ಳುತ್ತವೆ. ತಂತ್ರಜ್ಞಾನದ ವಲಯದಲ್ಲಿ ಕನ್ನಡವನ್ನು ಲಿಪೀಕರಿಸುತ್ತಿರುವ ಜನರಿಗೆ ಸೂಕ್ತ ಮಾರ್ಗದರ್ಶನ ಇಲ್ಲವಾಗಿದೆ. ಇವುಗಳಲ್ಲಿ ಯಾವುದಾದರೂ ಸರಿ ಎಂಬುದನ್ನು ಒಪ್ಪಬಹುದು. ಆದರೆ ಯಾವುದನ್ನು ಬಳಸಬೇಕು ಎಂಬ ನಿರ್ಣಯ ಮಾಡಲಾಗದೆ ತುಯ್ತವನ್ನು ಅನುಭವಿಸುತ್ತಿರುವುದು ಗಮನಾರ್ಹ. ಇದರಿಂದ ಮುಂದೆ ಕನ್ನಡಕ್ಕಾಗಿ ಸಿದ್ಧವಾಗಬೇಕಾದ ಬರೆಹ ಮತ್ತು ಮಾತುಗಳ ಯಾಂತ್ರೀಕೃತ ಅನುವಾದ ಮುಂತಾದ ಕಾರ್ಯವಾಹಿಗಳನ್ನು ಸಿದ್ಧ ಪಡಿಸಲು ಅಡೆತಡೆಗಳು ಉಂಟಾಗುತ್ತವೆ. ಇದಕ್ಕೆ ಪರಿಹಾರವೆಂದರೆ ಈ ರೂಪಗಳಲ್ಲಿ ಒಂದು ಸರಿ ಉಳಿದವು ತಪ್ಪು ಎಂದು ನಿರ್ಣಯಿಸುವುದರ ಬದಲು ಅವುಗಳಲ್ಲಿ ಒಂದನ್ನು ಸಾಧುರೂಪವೆಂದೂ ಉಳಿದವನ್ನು ವಿಕಲ್ಪಗಳೆಂದೂ ನಿರ್ಧಾರ ಮಾಡಬೇಕು. ಇದರಿಂದ

ಮೇಲೆ ಹೇಳಿದ ಸಮಸ್ಯೆಗಳು ಸ್ವಲ್ಪ ಮಟ್ಟಿಗೆ ಪರಿಹಾರವಾಗುವ ಸಾಧ್ಯತೆ ಇದೆ. ಇದು ಭಾಷಾಶುದ್ಧತೆಯ ಪ್ರಶ್ನೆಯಲ್ಲ. ಭಾಷಾ ನಿರ್ವಹಣೆಯ ತಂತ್ರ.

**ಕನ್ನಡದಲ್ಲಿ ತದ್ಭವಗಳು**

ತದ್ಭವ ಎಂಬ ಮಾತನ್ನು ಕನ್ನಡ ವ್ಯಾಕರಣಕಾರರು ಬಳಸಿದ್ದಾರೆ. ಮೂಲ ಭಾಷೆಯ ಪದವೊಂದನ್ನು ಇನ್ನೊಂದು ಭಾಷೆಗೆ ಸ್ವೀಕರಿಸಿದಾಗ ಈ ಸ್ವೀಕರಿಸುವ ಭಾಷೆ ಆ ಪದದ ರೂಪ ಮತ್ತು ಅರ್ಥಗಳನ್ನು ನಿಯಮಾನುಸಾರ ಬದಲಾಯಿಸಿಕೊಳ್ಳುತ್ತದೆ. ಯಥಾವತ್ತಾದ ಸ್ವೀಕರಣೆ ಕೂಡಾ ಸಾಧ್ಯ. ಎಂದರೆ ಯಾವ ಬದಲಾವಣೆಯನ್ನೂ ಮಾಡಿಕೊಳ್ಳದೆ ಮೂಲರೂಪವನ್ನು ಮತ್ತು ಅರ್ಥವನ್ನು ಹಾಗೆಯೇ ಉಳಿಸಿಕೊಳ್ಳುತ್ತೇವೆ. ಆದರೆ ಎಷ್ಟೋ ವೇಳೆ ಪದಗಳ ರೂಪದಲ್ಲಿ ಬದಲಾವಣೆಗಳನ್ನು ಮಾಡಿಕೊಳ್ಳುತ್ತೇವೆ. ಈ ಬದಲಾವಣೆಗಳು ಬೇಕಾಬಿಟ್ಟಿ ಇರುವುದಿಲ್ಲ. ಭಾಷೆಯ ಕೆಲವು ನಿಯಮಗಳನ್ನು ಪಾಲಿಸಬೇಕಾಗುತ್ತದೆ. ಇದೇ ಮಾತು ಅರ್ಥಕ್ಕೂ ಸಂಬಂಧಿಸುತ್ತವೆ. ಆದರೆ ತದ್ಭವ ಎಂಬ ಮಾತನ್ನು ಮೂಲಪದದ ರೂಪದಲ್ಲಿ ಮಾಡಿಕೊಂಡ ಬದಲಾವಣೆಗಳನ್ನು ಮಾತ್ರ ಗಮನಿಸಿ ಗುರುತಿಸಲಾಗುತ್ತದೆ. ಅರ್ಥವ್ಯತ್ಯಾಸದ ಸಂದರ್ಭದಲ್ಲಿ ತದ್ಭವ ಎಂಬ ಮಾತನ್ನು ಬಳಸುವುದು ಕಡಿಮೆ.

ತದ್ಭವಗಳು ಉಂಟಾಗಲು ಸ್ವೀಕರಿಸುವ ಭಾಷೆಯ ಧ್ವನಿನಿಯಮಗಳೇ ಕಾರಣ. ಉದಾ.ಗೆ ಕನ್ನಡದ ಪದಾದಿಯಲ್ಲಿ, ಸಾಮಾನ್ಯವಾಗಿ ಎರಡು ವ್ಯಂಜನಗಳು ಒಂದಾದ ಮೇಲೊಂದರಂತೆ ಬರುವುದಿಲ್ಲ. ಎರವಲು ನೀಡಿದ ಭಾಷೆಯಲ್ಲಿ ಈ ಸಾಧ್ಯತೆ ಇದ್ದರೆ ಆ ಬಗೆಯ ರಚನೆಯುಳ್ಳ ಪದಗಳು ಸಹಜವಾಗಿಯೇ ಆ ಭಾಷೆಯಲ್ಲಿ ಬಳಕೆಯಾಗುತ್ತಿರುವುದು ಸಾಧ್ಯ. ಅವು ಎರವಲಾಗಿಯೂ ಬರಬಹುದು. ಆಗ ಕನ್ನಡವು ತನ್ನ ಧ್ವನಿರಚನೆಗೆ ಅನುಗುಣವಾಗಿ ಈ ಎರಡು ವ್ಯಂಜನಗಳ ನಡುವೆ ಒಂದು ಸ್ವರವನ್ನು ಸೇರಿಸುವ ಸ್ವರಭಕ್ತಿ ಎಂಬ ಬದಲಾವಣೆಗೆ ಕಾರಣವಾಗುತ್ತವೆ. ತದ್ಭವಗಳ ರೂಪಣಕ್ರಿಯೆಗೆ ಇನ್ನೂ ಹಲವು ಕಾರಣಗಳಿರುತ್ತವೆ. ಅವು ನಮಗಿಲ್ಲಿ ಅಪ್ರಸ್ತುತ. ಆದರೆ ಇಂತಹ ತದ್ಭವಗಳನ್ನು ನಾವು ಹೇಗೆ ನಡೆಸಿಕೊಳ್ಳುತ್ತಿದ್ದೇವೆ ಎಂಬುದನ್ನು ಚರ್ಚಿಸುವುದು ಅಗತ್ಯ.

ಹದಿಮೂರನೇ ಶತಮಾನದ ಆಂಡಯ್ಯ ತನ್ನ ಕಾವ್ಯವನ್ನು ಪೂರ್ಣವಾಗಿ ಕನ್ನಡದಲ್ಲೇ ಬರೆಯುತ್ತೇನೆಂದು ಶಪಥ ಮಾಡಿದ. ಆ ಮೂಲಕ ಸಂಸ್ಕೃತವನ್ನು ಕಾವ್ಯದ ಭಾಷೆಯಿಂದ ಹೊರಗಿಡುವ ಯತ್ನವನ್ನು ಮಾಡಿದನು. ಆದರೆ ಅವನ ಕಾವ್ಯದ ಭಾಷೆಯನ್ನು ಕುರಿತು ಚರ್ಚಿಸುವಾಗ ವಿಮರ್ಶಕರು ಆಂಡಯ್ಯ ಸಂಸ್ಕೃತ ಪದಗಳ ಬದಲು ಅವುಗಳ ತದ್ಭವಗಳನ್ನು ಬಳಸಿ ತನ್ನ ಕಾವ್ಯಭಾಷೆಯ ಸೋಲಿಗೆ ಕಾರಣವಾಗಿದ್ದಾನೆ ಎನ್ನುತ್ತಾರೆ. ಆದರೆ ಆಂಡಯ್ಯನ ಈ ತಂತ್ರದ ಹಿಂದಿನ ಉಪಯುಕ್ತತೆ ಎಷ್ಟೆಂಬುದನ್ನು ನಾವು ಸರಿಯಾಗಿ ಗುರುತಿಸಿಲ್ಲ. ಸಂಸ್ಕೃತ ಪದಗಳನ್ನು ಬಳಸದಿರುವ ಮೂಲಕ ಆಂಡಯ್ಯ ಒಂದು ಮುಖ್ಯ ಆಯ್ಕೆಯನ್ನು ಮಾಡಿಕೊಂಡಿದ್ದಾನೆ. ಸಂಸ್ಕೃತದ

ಮೇಲರಿಮೆಯ ಭಾವದಿಂದ ಹೊರಬರಲು ಆ ಭಾಷೆಯ ಸ್ವೀಕೃತ ರೂಪಗಳ ತದ್ಭವಗಳನ್ನು ಬಳಸುವುದು ಸರಿ ಎನ್ನುವುದು ಅವನ ನಿಲುವು. ಇದರಿಂದ ಕನ್ನಡ ಭಾಷೆಗೆ ಅಂತರ್ಮುಖಿಯಾಗುವ ಶಕ್ತಿ ತಾನಾಗಿಯೇ ಒದಗಿಬರುತ್ತದೆ.

ಈಗ ಏಳು ಶತಮಾನಗಳ ಅನಂತರ ಪರಿಶೀಲಿಸಿದರೂ ಆ ಸಮಸ್ಯೆ ಹಾಗೆಯೇ ಉಳಿದಿದೆ. ತದ್ಭವಗಳು ಆಡುಮಾತಿನಲ್ಲಿ ರೂಪುಗೊಳ್ಳುತ್ತವೆ. ಅವುಗಳನ್ನು ಬರೆವಣಿಗೆಯ ರೂಪಕ್ಕೆ ತರಲು ಏಕೆ ಹಿಂಜರಿಯಬೇಕು ಎಂಬ ಪ್ರಶ್ನೆ ಹಾಗೆಯೇ ಉಳಿಯುತ್ತದೆ. ತದ್ಭವಗಳು ಇಂದಿಗೂ ಸೃಷ್ಟಿಯಾಗುತ್ತಿವೆ. ಇಂಗ್ಲಿಶ್ ಭಾಷೆಯ ಸ್ವೀಕೃತ ಪದಗಳನ್ನು ನಮ್ಮ ಭಾಷೆಯ ಧ್ವನಿನಿಯಮಗಳಿಗೆ ಅನುಸಾರವಾಗಿ ಬಳಸುತ್ತಲೇ ಇದ್ದೇವೆ. ಹಾಗೆಯೇ ಬದಲಾಯಿಸುತ್ತಲೂ ಇದ್ದೇವೆ. ಆದರೆ ಮಾತಿನಲ್ಲಿ ಯಾವ ಹಿಂಜರಿಕೆಯೂ ಇಲ್ಲದೆ ಬಳಕೆಯಾಗುವ ಈ ಪದಗಳನ್ನು ಲಿಖಿತರೂಪಕ್ಕೆ ತರಲು ಒಂದು ಬಗೆಯ ಹಿಂಜರಿಕೆ ಇದೆ. ನಮ್ಮ ಶಿಕ್ಷಣಕ್ರಮವು ಇಂತಹ ತದ್ಭವಗಳನ್ನು ಅಪಶಬ್ದಗಳೆಂದೂ, ಅವುಗಳನ್ನು ಬರೆವಣಿಗೆಯಲ್ಲಿ ಬಳಸಬಾರದೆಂದೂ ನಿಯಮವನ್ನು ಮಾಡಿಕೊಂಡಿದೆ. ಬರೆವಣಿಗೆಯ ಈ ಮಡಿವಂತಿಕೆಯನ್ನು ಸಮರ್ಥಿಸುವುದು ಕಷ್ಟ. ಏಕೆಂದರೆ ಇದು ಮಾತು ಮತ್ತು ಬರೆಹಗಳ ನಡುವೆ ಒಂದು ಅಗಾಧ ಕಂದರವನ್ನು ಸೃಷ್ಟಿಸುತ್ತದೆ. ನಮ್ಮ ಜನಸಾಮಾನ್ಯರು ತಾವು ಮಾತನಾಡುವ ಭಾಷೆಗೂ ತಾವು ಓದಬೇಕಾಗಿರುವ ಭಾಷೆಗೂ ಅಂತರವಿರುವುದನ್ನು ಗಮನಿಸುತ್ತಾರೆ. ಈ ಅಂತರ ಕೇವಲ ವ್ಯತ್ಯಾಸ ಮಾತ್ರವಲ್ಲ, ತಾರತಮ್ಯವೂ ಹೌದು. ಬರೆವಣಿಗೆ ಉತ್ತಮ; ಮಾತು ಅಧಮ ಎಂದು ಗ್ರಹಿಸಲಾಗಿದೆ. ಕನ್ನಡ ಭಾಷೆಯ ಒಳಗೆ ನೆಲೆಗೊಂಡ ಈ ಉತ್ತಮಿಕೆಯ ವ್ಯಸನ ಒಟ್ಟು ಭಾಷೆಯ ಬೆಳವಣಿಗೆಯ ದೃಷ್ಟಿಯಿಂದ ಅಪಾಯಕಾರಿಯಾಗಿದೆ. ಜನ ಅಕ್ಷರಸ್ಥರಾಗುತ್ತಾ, ಮುಂದೆ ಬರೆಯುವ ಮತ್ತು ಓದುವ ಕೌಶಲಗಳನ್ನು ಬೆಳೆಸಿಕೊಳ್ಳಬೇಕು. ಇದು ನಮ್ಮ ಅಪೇಕ್ಷೆ. ಆದರೆ ಇವೆರಡೂ ನೆರವೇರುವ ಸಾಧ್ಯತೆ ಕಡಿಮೆ. ಏಕೆಂದರೆ ನಮ್ಮ ಬರೆವಣಿಗೆ ಮತ್ತು ಅದರ ಶುದ್ಧತೆಯ ಹಪಾಹಪಿ ಸೇರಿಕೊಂಡು ಜನರನ್ನು ಓದುವ ಮತ್ತು ಬರೆಯುವ ಕ್ರಿಯೆಗಳಿಂದ ದೂರವಿರಿಸುತ್ತಿವೆ.

ನಾವು ಮಾತು ಕಲಿತವರು, ಬರೆಯಲು ಹೋಗುವಾಗ ಎರಡು ವಿಧಾನಗಳನ್ನು ಅನುಸರಿಸುತ್ತೇವೆ. ಮೊದಲನೆಯದು: ಬರೆವಣಿಗೆಯನ್ನೇ ಮೊದಲು ರೂಪುಗೊಳಿಸಿಕೊಂಡು ಅನಂತರ ಅದನ್ನು ಬರೆಹಕ್ಕಿಳಿಸುವುದು. ಎರಡನೆಯದು ನಾವು ಮಾತನಾಡುತ್ತಿರುವ ಭಾಷೆಯನ್ನೇ ಮಾತನಾಡುತ್ತಿರುವಂತೆಯೇ ಬರೆಯಲು ಯತ್ನಿಸುವುದು. ಮೊದಲನೆಯ ಬಗೆ ಹೆಚ್ಚು ತಾಂತ್ರಿಕವಾದುದು. ಮತ್ತು ಅದರ ವ್ಯಾಪ್ತಿ ಕಡಿಮೆ. ಆದರೆ ಎರಡನೆಯ ಬಗೆ ಈಗ ಬಹು ವ್ಯಾಪಕ. ತಾವು ಮಾತನಾಡುವ ವಾಕ್ಯದ ಲಿಖಿತರೂಪವನ್ನು ಬರೆವಣಿಗೆಯಲ್ಲಿ ಮೂಡಿಸಲು ಯತ್ನಿಸುತ್ತಾರೆ. ಏಕೆಂದರೆ ಆ ಮೂಲರೂಪವನ್ನು ಅಥವಾ ಶುದ್ಧರೂಪವನ್ನು ಬರೆಹರೂಪದಲ್ಲಿ ಅವರು ಕಂಡವರಲ್ಲ. ಓದಿದವರೂ ಅಲ್ಲ. ಆದ್ದರಿಂದ ಮಾತನಾಡಿದಂತೆ ಬರೆಯುವಾಗ ಮಾತಿನ ತದ್ಭವಗಳು ಬರೆವಣಿಗೆಗೆ ಬರತೊಡಗುತ್ತವೆ. ಇದನ್ನು ಒಂದು ಸಹಜ ಪ್ರಕ್ರಿಯೆ ಎಂದು ತಿಳಿಯಬೇಕಲ್ಲವೇ? ಈ ಮಾತನ್ನು ಒಪ್ಪದವರು ಒಂದು ತರ್ಕವನ್ನು ಮುಂದಿಡುತ್ತಾರೆ.

ಅವರ ಪ್ರಕಾರ ಹೀಗೆ ಮಾತಿನ ರೂಪವನ್ನೇ ಬರೆಯಲು ಹೊರಟರೆ ನೂರಾರು ಬಗೆಯ ಬರೆವಣಿಗೆಗಳು ಸೃಷ್ಟಿಯಾಗಿ ಬಿಡುತ್ತವೆ. ಇದರಿಂದ ಸಂವಹನಕ್ಕೆ ಕೊರತೆ ಉಂಟಾಗುತ್ತದೆ. ಈ ಮಾತು ಪೂರ್ಣ ಸತ್ಯವಲ್ಲ. ಏಕೆಂದರೆ ಜನರ ಆಡುಮಾತಿನಲ್ಲಿ ಒಂದು ಬಗೆಯ ಸಾಮಾನ್ಯ ರೂಪಗಳು ಇದ್ದೇ ಇರುತ್ತವೆ. ತದ್ಭವಗಳು ನಿಯಮಬದ್ಧವಾಗಿಯೇ ರೂಪಗೊಳ್ಳಬೇಕು. ಒಬ್ಬೊಬ್ಬರಿಗೆ ಒಂದೊಂದು ಬಗೆಯ ತದ್ಭವಗಳು ಸೃಷ್ಟಿಯಾಗುವುದಿಲ್ಲ. ಆದ್ದರಿಂದ ಲಿಖಿತ ಭಾಷೆ ಮಾತಿನ ಭಾಷೆಯನ್ನು ಅನುಸರಿಸುವುದರಿಂದ ಗೊಂದಲದ ವಾತಾವರಣ ಉಂಟಾಗಬಹುದೆಂಬ ಭಯಕ್ಕೆ ಕಾರಣಗಳಿಲ್ಲ. ಹಾಗೆ ನೋಡಿದರೆ ಅತ್ಯಂತ ಖಚಿತವಾದ ಪ್ರಮಾಣಿತ ರೂಪಗಳನ್ನು ಕಲಿತು ಬರೆಯಲು ಹೊರಡುವವರ ಬರೆವಣಿಗೆಯಲ್ಲೂ 'ದೋಷಗಳು' ಇದ್ದೇ ಇರುತ್ತವೆ.

ತದ್ಭವಗಳನ್ನು ಬಳಸುವ ಮೂಲಕ ಜನರಿಗೆ, ಭಾಷೆಯ ಬರೆವಣಿಗೆ ಒಂದು ಅನಗತ್ಯ ಹೊರೆ ಎನ್ನಿಸುವುದು ತಪ್ಪುತ್ತದೆ. ಮತ್ತು ಇತರರು ಬರೆದುದನ್ನು ಓದುವ ಸಾಧ್ಯತೆಯು ಹೆಚ್ಚುತ್ತದೆ. ಏಕೆಂದರೆ ಆ ಬರೆಹದಲ್ಲಿ ತಮ್ಮ ಮಾತಿಗೆ ಹತ್ತಿರವಾದ ರೂಪಗಳನ್ನೇ ಜನರು ಗ್ರಹಿಸುತ್ತಿರುತ್ತಾರೆ. ಪ್ರಜಾಪ್ರಭುತ್ವದ ನೆಲೆಗಟ್ಟು ಭದ್ರವಾಗುವ ದೃಷ್ಟಿಯಿಂದ ಈ ಅವಕಾಶವನ್ನು ನಾವು ಬಳಸಿಕೊಳ್ಳಬೇಕಾಗಿದೆ. ಭಾಷಾಯೋಜನೆಯಲ್ಲಿ ತದ್ಭವಗಳ ಬಳಕೆಗೆ ಅವಕಾಶ ದೊರಕಿಸಬೇಕಾಗಿದೆ.

ಇಂತಹ ಪ್ರಯತ್ನಗಳಿಗೆ ಚಾರಿತ್ರಿಕವಾದ ಮನ್ನಣೆಯೂ ಇದೆ. ಏಕೆಂದರೆ ನಮ್ಮ ಎಷ್ಟೋ ಕವಿಗಳ ಭಾಷಾಪ್ರಯೋಗದಲ್ಲಿ ಇಂತಹ ತದ್ಭವಗಳು ಹಿಂಜರಿಕೆ ಇಲ್ಲದೆ ಬಳಕೆಯಾಗಿವೆ. ಒಂದು ಉದಾಹರಣೆಯನ್ನು ಗಮನಿಸೋಣ. ನಡುಗನ್ನಡದಲ್ಲಿ ಸಂಸ್ಕೃತದ ಪದಗಳನ್ನು ಬರೆವಣಿಗೆಗೆ ತರುವಾಗ ಆ ಪದಗಳ ಉಚ್ಚಾರಣೆಯಲ್ಲಿ ಆಗಿದ್ದ ವ್ಯತ್ಯಾಸವನ್ನು ಅಳವಡಿಸಿಕೊಳ್ಳಲಾಯಿತು. ಒಂದು ಪದದ ನಡುವೆ ವಿಜಾತೀಯ ದ್ವಿತ್ವ ಅಕ್ಷರಗಳಿದ್ದರೆ ಅವುಗಳ ನಡುವೆ 'ಉ'ಕಾರವನ್ನು ಸೇರಿಸಿ ಉಚ್ಚರಿಸುವ ವಿಧಾನ ಇತ್ತು. ಮುಕುತಿ(ಮುಕ್ತಿ), ಯುಕುತಿ(ಯುಕ್ತಿ), ಶಕುತಿ(ಶಕ್ತಿ), ಆತುಮ(ಆತ್ಮ), ರತುನ(ರತ್ನ), ರಕುತ(ರಕ್ತ) ಮುಂತಾದ ಪದಗಳನ್ನು ನಡುಗನ್ನಡ ಕಾವ್ಯಗಳಲ್ಲಿ ಯಾವ ಹಿಂಜರಿಕೆಯೂ ಇಲ್ಲದೇ ಬಳಸುತ್ತಾರೆ. ಇದು ಒಂದು ಚಿಕ್ಕ ನಿದರ್ಶನ ಮಾತ್ರ. ಇಂಥಾ ರೂಪಗಳು ಜನರ ಆಡುಮಾತಿನಲ್ಲಿ ಬರದಿದ್ದರೆ ಅವುಗಳನ್ನು ಕವಿಗಳು ಬರೆಹದಲ್ಲಿ ಬಳಸುವ ಸಾಧ್ಯತೆಗಳು ಇರುತ್ತಿರಲಿಲ್ಲ. ಹೀಗೆ ಕನ್ನಡ ಭಾಷೆಯ ಚರಿತ್ರೆಯಲ್ಲಿ ಆಡುಮಾತನ್ನು ಬರೆಹದ ಭಾಷೆಗಿಂತ ಬಹುದೂರ ಇರಿಸುವ ಪ್ರಯತ್ನಗಳು ನಡೆದಿಲ್ಲ. ಈಗ ಮಾತ್ರ ನಾವು ಶುದ್ಧತೆಯ ಬೆನ್ನು ಹತ್ತಿದ್ದೇವೆ.

ಒಂದೇ ಪದದ ಮೂಲರೂಪ ಮತ್ತು ತದ್ಭವರೂಪಗಳು ಬಳಕೆಯಲ್ಲಿದ್ದಾಗ ಅವೆರಡರ ಅರ್ಥಭಾರ ಮತ್ತು ಬಳಕೆಗಳಲ್ಲಿ ಭಿನ್ನತೆ ಕಂಡು ಬರುತ್ತದೆ. ಇಂತಹ ಕಡೆಯೂ ಸಾಮಾನ್ಯವಾಗಿ ಮೂಲಪದಕ್ಕೆ ಉನ್ನತ ಸ್ಥಾನ ಮತ್ತು ತದ್ಭವಕ್ಕೆ ಕೆಳಸ್ಥಾನ ಲಭಿಸುತ್ತದೆ. ಭಾಷಾದ್ವಿಸ್ತರತೆಯ ಭಾಗದಲ್ಲಿ ಈ ವಿಚಾರವನ್ನು ಇನ್ನೂ ವಿವರವಾಗಿ ಚರ್ಚಿಸುತ್ತೇವೆ. ಈ ಅರ್ಥವ್ಯತ್ಯಾಸ ಮತ್ತು ಸ್ಥಾನಮಾನದ ತಾರತಮ್ಯ ಕೂಡಾ ಭಾಷೆಯ

ಒಟ್ಟಾರೆ ಬೆಳವಣಿಗೆಯ ದೃಷ್ಟಿಯಿಂದ ಸ್ವಾಗತಾರ್ಹವಲ್ಲ. ಇದರಿಂದ ಮತ್ತೆ ತದ್ಭವಗಳಿಂದ ತುಂಬಿರುವ ಕನ್ನಡದ ಬಹುಸಂಖ್ಯಾತರ ಭಾಷೆ ಹೆಚ್ಚು ಮನ್ನಣೆಗೆ ಒಳಗಾಗದೆ ಉಳಿದು ಬಿಡುತ್ತದೆ. ಕನ್ನಡವೆಂದರೆ ಕಲಿತವರ, ಮೇಲುಜನರ ಭಾಷೆ ಎಂಬ ಅರ್ಥವನ್ನು ಪಡೆದುಕೊಂಡು ಬಿಡುತ್ತದೆ. ಈ ಹೊತ್ತಿಗೆ ಕನ್ನಡದಲ್ಲಿ ತದ್ಭವಗಳನ್ನು ಮರುಸ್ಥಾಪಿಸುವ ಪ್ರಯತ್ನ ಅತ್ಯಗತ್ಯ. ಈ ತದ್ಭವಗಳ ಲಿಖಿತ ರೂಪಗಳನ್ನು ಪ್ರಮಾಣೀಕರಿಸುವ ವ್ಯವಸ್ಥಿತ ಪ್ರಯತ್ನವನ್ನು ಮಾಡಬೇಕಾಗುತ್ತದೆ. ಪರಾಮರ್ಶನ ನೆಲೆಯಲ್ಲಿ ಇಂಥಾ ತದ್ಭವರೂಪಗಳ ಪ್ರಮಾಣರೂಪಗಳು ದೊರಕುವಂತಿದ್ದರೆ ಆಗ ಬರೆವಣಿಗೆಯಲ್ಲಿ ಗೊಂದಲಗಳಾಗುವುದನ್ನು ತಪ್ಪಿಸಬಹುದು.

ತದ್ಭವಗಳನ್ನು ಬಳಸಲು ವಿರೋಧ ಉಂಟಾಗಲು ಇನ್ನೊಂದು ಕಾರಣವಿದೆ. ಮೂಲಪದವು ಹಲವು ರೀತಿಗಳಲ್ಲಿ ತದ್ಭವೀಕರಣಗೊಳ್ಳಲು ಸಾಧ್ಯವೆಂದೂ ಅದರಿಂದ ವಿಕಲ್ಪಗಳಲ್ಲಿ ಯಾವುದನ್ನು ಬಳಸಬೇಕೆಂಬ ತಾಕಲಾಟ ಉಂಟಾಗುವುದೆಂದೂ ವಾದಿಸಲು ಸಾಧ್ಯ.

# ಕನ್ನಡ ಪದಕೋಶ–3

ಕನ್ನಡದಲ್ಲಿ ಎಷ್ಟು ಪದಗಳಿವೆ ಎಂಬ ಪ್ರಶ್ನೆಯನ್ನು ಆಗಾಗ ಕುತೂಹಲಿಗಳು ಕೇಳುತ್ತಾರೆ. ಕನ್ನಡದಲ್ಲಿ ಸಂಶೋಧನೆ ಮಾಡುವುದು ಎಂದರೆ ಹೊಸ ಪದಗಳನ್ನು ಕಂಡುಹಿಡಿಯುವುದು ಎಂದು ತಿಳಿದವರೂ ಇದ್ದಾರೆ.

ಹಾಗೆಯೇ ಕನ್ನಡದಲ್ಲಿ ಸಾಕಷ್ಟು ಪದಗಳಿಲ್ಲವೆಂದೋ, ಅತಿ ಸೂಕ್ಷ್ಮವಾದ ವಿಷಯಗಳನ್ನು ಮಂಡಿಸಲು ಕನ್ನಡ ಪದಗಳ ಕೊರತೆ ಇದೆಯೆಂದೋ ಹೇಳುವವರೂ ಇದ್ದಾರೆ. ಅವರು ತಮ್ಮ ವಾದವನ್ನು ಸಮರ್ಥಿಸಲು ಮಂಡಿಸುವ ತರ್ಕ ಏನೇ ಇರಲಿ, ನಮಗದು ಇಲ್ಲಿ ಪ್ರಸ್ತುತವಲ್ಲ. ಆದರೆ ಕನ್ನಡ ಪದಕೋಶವೆಂದರೆ ಸೀಮಿತ ಪದಗಳ ಒಂದು ಸಂಗ್ರಹವೆಂಬ ತಿಳುವಳಿಕೆ ಸಾಮಾನ್ಯವಾಗಿ ಪ್ರಚಲಿತದಲ್ಲಿದೆ ಎನ್ನಬಹುದು.

ಹಾಗೆ ನೋಡಿದರೆ ಸಾಮಾನ್ಯ ಕನ್ನಡಿಗರು ಎಷ್ಟು ಪದಗಳನ್ನು ತಿಳಿದಿರುತ್ತಾರೆ ಎಂಬ ಪ್ರಶ್ನೆಗೆ ಉತ್ತರಿಸುವುದೂ ಕಷ್ಟ. ಕನಿಷ್ಠ ಎಷ್ಟು ಪದಗಳನ್ನು ತಿಳಿದಿರಲೇಬೇಕು ಎಂಬ ಶೋಧವನ್ನು ಮಾಡುವುದೂ ಕಷ್ಟ. ಕನ್ನಡದ ಸಾವಿರಾರು ಪದಗಳು ಕನ್ನಡ ಬಲ್ಲ ಎಷ್ಟೋ ಲಕ್ಷ ಮಂದಿಗೆ ತಿಳಿದಿರುವುದೇ ಇಲ್ಲ; ಆ ಪದಗಳನ್ನು ಬಳಸುವ ಪ್ರಸಕ್ತಿಯೇ ಅವರಿಗೆ ಬಾರದಿರಬಹುದು.

ಹೀಗಿದ್ದರೂ ಭಾಷೆಯ ಅಧ್ಯಯನದಲ್ಲಿ ಆಸಕ್ತರಾಗಿರುವವರು ಪದಕೋಶದ ರಚನೆಯನ್ನು ತಿಳಿಯಲು ಉತ್ಸುಕರಾಗಿರುತ್ತಾರೆ. ಅವರು ರಚಿಸುವ ಆ ಭಾಷೆಯ ಪದಕೋಶ ಒಂದು ಊಹಾರೂಪ; ಒಂದು ಕಲ್ಪನೆ. ಏಕೆಂದರೆ ಆ ಪದಕೋಶದಲ್ಲಿರುವ ಎಲ್ಲ ಪದಗಳನ್ನೂ ಬಲ್ಲ ಯಾವೊಬ್ಬ ಸ್ವಭಾಷಿಕರನ್ನೂ ಬೆರಳು ಮಾಡಿ ತೋರಿಸುವುದು ಸಾಧ್ಯವಾಗದು. 'ನಮ್ಮ ಕನ್ನಡ' (ಕನ್ನಡ ವಿವಿಯ ಕನ್ನಡ ಭಾಷಾಭಿವೃದ್ಧಿ ವಿಭಾಗದ ಪತ್ರಿಕೆ)ದ ಪುಟಗಳಲ್ಲಿ ದಾಖಲಾಗುವ "ದಿನದಿನ" ಮತ್ತು "ನಿದಾನ" ಶೀರ್ಷಿಕೆಗಳ ಪದಕೋಶ ಇದಕ್ಕೆ ಒಂದು ನಿದರ್ಶನ.

ಈ ಊಹಾ ಪದಕೋಶ ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುತ್ತದೆ ಎನ್ನುವುದು ಇನ್ನೊಂದು ತಿಳುವಳಿಕೆ. ಕನ್ನಡ ಮಾತನಾಡುವವರ, ಬರೆಯುವವರ ಅಂತಸ್ಥ ಪದಕೋಶದಲ್ಲಿ ಆಗುವ, ಆಗುತ್ತಿರುವ ಬದಲಾವಣೆಗೂ ಅಧ್ಯಯನಕಾರರು ಹೇಳುತ್ತಿರುವ ಕಾಲಾನುಕ್ರಮದ ಬದಲಾವಣೆಗೂ ವ್ಯತ್ಯಾಸಗಳಿವೆ. ವ್ಯಕ್ತಿ ತನ್ನ ಭಾಷೆಯ

ಪದಗಳನ್ನೇ ತನ್ನ ಪದಕೋಶಕ್ಕೆ ಕಲಿಕೆಯ ಮೂಲಕ ಸೇರಿಸಿಕೊಳ್ಳುತ್ತಿರಬಹುದು. ಉಪಭಾಷೆಗಳ ಸಂಪರ್ಕ ಬಂದಾಗ ಈ ರೀತಿಯ ಬೆಳವಣಿಗೆಗಳು ನಡೆಯುತ್ತಿರುತ್ತವೆ. ಅಲ್ಲದೆ, ತನ್ನ ಪದಕೋಶದಲ್ಲಿರುವ ಎಷ್ಟೋ ಪದಗಳನ್ನು ಮರೆಯುತ್ತಿರಬಹುದು. ಈ ಮರೆವಿಗೆ ಹಲವಾರು ವೈಯಕ್ತಿಕ ಮತ್ತು ಸಾಮಾಜಿಕ ಕಾರಣಗಳಿರುತ್ತವೆ. ಆದರೆ ವ್ಯಕ್ತಿಯ ಪದಕೋಶದಲ್ಲಿ ನಡೆಯುವ ಇಂಥ ಬದಲಾವಣೆಗಳು ಅಧ್ಯಯನಕಾರರು ರೂಪಿಸುವ ಪದಕೋಶದಲ್ಲಿ ಯಥಾವತ್ತಾಗಿ ಬಿಂಬಿತವಾಗುವುದಿಲ್ಲ.

ಊಹಾ ಪದಕೋಶವನ್ನು ರಚಿಸುವವರು ಸಾಮಾನ್ಯವಾಗಿ ಪದಗಳ ಮೂಲವನ್ನು ಗುರುತಿಸುತ್ತಾರೆ. ಹಾಗಾಗಿ ದೇಶ್ಯ ಮತ್ತು ಅನ್ಯದೇಶ್ಯವೆಂಬ ವಿಭಜನೆಯನ್ನು ಮಾಡಿಕೊಳ್ಳುತ್ತಾರೆ. ಭಾಷೆಯನ್ನು ಬಳಸುವವರು ಈ ವಿಭಜನೆಯ ಬಗೆಗೆ ಜಾಗ್ರತರಾಗಿರುತ್ತಾರೆಯೇ ಎಂಬ ಪ್ರಶ್ನೆಗೆ ಉತ್ತರಿಸುವುದು ಕಷ್ಟ. ಹೌದು ಎಂದು ಹೇಳಲು ನಿದರ್ಶನಗಳಿರುವಂತೆ ಇಲ್ಲವೆಂದು ಹೇಳಲೂ ನಿದರ್ಶನಗಳಿವೆ. 'ಸುಮಾರು' ಎನ್ನುವ ಪದವನ್ನೇ ತೆಗೆದುಕೊಳ್ಳೋಣ. ಇದು ದೇಶ್ಯವೋ? ಅನ್ಯದೇಶ್ಯವೋ? ಕನ್ನಡಿಗರಿಗೆ ಇದು ತಿಳಿದಿರಬೇಕಾದ ಮಾಹಿತಿಯಲ್ಲ. ಆದರೆ ಪದಕೋಶ ರಚಕರಿಗೆ ಈ ಮಾಹಿತಿ ಅವಶ್ಯವಾಗಿರುತ್ತದೆ.

ಇದಕ್ಕಿಂತ ಮುಖ್ಯವಾದ ವಿಭಜನೆಯೊಂದು ಪದಕೋಶದಲ್ಲಿ ಸಾಧ್ಯ. ಪದಗಳನ್ನು ಬಳಸುವ ಸ್ವಭಾಷಿಕರು ನೂರಾರು ಪದಗಳನ್ನು ಪದಕೋಶಕಾರರು ಸೂಚಿಸುವ ಅರ್ಥದಲ್ಲಿ ಬಳಸುವ ಜತೆಗೆ ಬೇರೆಯ ನೆಲೆಗಳಲ್ಲೂ ಬಳಸುತ್ತಿರುತ್ತಾರೆ. ಪದಕೋಶದ ಪರಿಭಾಷೆಯಲ್ಲಿ ಇದನ್ನು ಅಭಿಧಾರ್ಥ(ವಾಚ್ಯಾರ್ಥ)ಮತ್ತು ಲಕ್ಷಣಾರ್ಥ ಎಂದು ಕರೆಯೋಣ.

ಭಾಷಿಕರೊಬ್ಬರ ಪದಕೋಶದಲ್ಲಿ ಇವೆರಡೂ ರೀತಿಯ ಬಳಕೆಗಳ ಸಾಧ್ಯತೆಗಳು ಬೆರೆತುಕೊಂಡಿರುತ್ತದೆ. ನೀರು ಎನ್ನುವ ಪದವನ್ನೇ ಗಮನಿಸೋಣ. ನೀರು, ಕೆರೆ, ನದಿ, ಹಳ್ಳ, ಕೊಳ್ಳ, ತೊರೆ, ಹರಿ, ಬೀಳು ಮುಂತಾದ ಪದಗಳು ವಾಚ್ಯಾರ್ಥದಲ್ಲಿ ನೀರಿನ ಸಂಬಂಧದಲ್ಲಿ ಬಳಕೆಯಾಗುತ್ತಿರುತ್ತವೆ. ಮುಂದೆ ನೀಡುವ ಪಟ್ಟಿಯನ್ನು ಗಮನಿಸಿ; ಉಕ್ಕು, ದಡಮುಟ್ಟು, ದಡಮೀರು, ಮೊರೆ, ಬತ್ತು, ಸೆಲೆ, ಕಟ್ಟೊಡೆ, ಮುಳುಗು, ತೇಲು, ನಡುನೀರು, ಹಾಯಿಸು, ಈಜು, ತಿಳಿ, ಕದಡು, ತುಂಬು, ಜಿನುಗು, ಸುಳಿ, ದಾಟು, ನಿಂತನೀರು, ಹರಿ, ಹರಿವು, ನೀರ್ಗೆರೆ ಇವೇ ಮುಂತಾದ ಪದಗಳನ್ನು ಕೇವಲ ನೀರಿನ ಸಂಬಂಧದಲ್ಲಿ ಮಾತ್ರ ಬಳಸುತ್ತಿರುವುದಿಲ್ಲ. ನಿತ್ಯದಲ್ಲಿ ನೀರಿಗೆ ಸಂಬಂಧಪಡದ ಹಲವಾರು ಪ್ರಸಂಗಗಳಲ್ಲಿ ಈ ಪದಗಳನ್ನು ಸೂಕ್ತವಾಗಿ ಬಳಸುತ್ತಿರುತ್ತೇವೆ. ಈ ವ್ಯಾಪಕತೆಯನ್ನು ಭಾಷಿಕರು ರೂಢಿಸಿಕೊಂಡಿರುತ್ತಾರೆ. ಇದರಿಂದ ಪದಕೋಶ ಸೀಮಿತವಾಗಿದ್ದರೂ ಅಸೀಮ ಅರ್ಥಸಾಧ್ಯತೆಗಳು ಪ್ರಕಟಗೊಳ್ಳಲು ಸಾಕಾಗುತ್ತದೆ. ಈ ಸಾಧ್ಯತೆಗಳು ಪದಕೋಶದಲ್ಲಿ ಅಂತಸ್ಥವಾಗಿರುತ್ತವೆಂದು ಹೇಳುವಂತಿಲ್ಲ. ಭಾಷಿಕರಲ್ಲಿ ಮತ್ತು ಭಾಷಿಕರು ಬದುಕುತ್ತಿರುವ ಸಾಂಸ್ಕೃತಿಕ ಸಂದರ್ಭದಲ್ಲಿ ಇವು ಅಡಕವಾಗಿರುತ್ತವೆ. ನಲ್ಲಿಯಲ್ಲಿ ಮಾತ್ರ ನೀರನ್ನು ನೋಡುವ ಹೊಸ ತಲೆಮಾರಿನ ಕನ್ನಡಿಗರು ಮೇಲೆ ಪಟ್ಟಿ ಮಾಡಿದ ಪದಗಳನ್ನು ಅಭಿಧಾರ್ಥ ಇಲ್ಲವೇ ಲಕ್ಷಣಾರ್ಥಗಳಲ್ಲಿ ಬಳಸದೇ ಹೋಗಬಹುದು.

ಪಾರಂಪರಿಕ ಸಮುದಾಯುಗಳಲ್ಲಿ ತಂತ್ರಜ್ಞಾನ ಮತ್ತು ಉತ್ಪಾದನೆಗಳು ಜತೆಜತೆಯಾಗಿ ಹೋಗುವುದರಿಂದ ವೃತ್ತಿಗಳಲ್ಲಿ ಬಳಕೆಯಾಗುವ ಉಪಕರಣಗಳು ಬಳಸುವವರ ದೇಹದ ಅಂಗಾಂಗಗಳ ಮುಂದುವರಿಕೆಯಾಗಿರುತ್ತದೆ. ಇಂಥ ಕಡೆಗಳಲ್ಲಿ ಉಪಕರಣಗಳನ್ನು ಸೂಚಿಸುವ ಪದಗಳು ಆಯಾ ವೃತ್ತಿಯವರ ದೈನಂದಿನ ಹೊರತುಪಡಿಸಿದ ಬೇರೆ ಅರ್ಥಗಳಿರುವುದಿಲ್ಲ. ಆದರೆ ಆ ವೃತ್ತಿಗಳಿರುವ ಸಮುದಾಯದ ಇನ್ನಿತರ ಜನರು ಅವೇ ಪದಗಳನ್ನು ತಮ್ಮ ಬಳಕೆಯಲ್ಲಿ ಲಕ್ಷಣಾರ್ಥದಲ್ಲಿ ಬಳಸುವುದು ಸಾಧ್ಯವಿದೆ. ಉದಾ: ಕೃಷಿಕರ ಹತ್ತಾರು ಉಪಕರಣಗಳನ್ನು ಸೂಚಿಸುವ ಪದಗಳು ಅವರಿಗೆ ಕೇವಲ ಅಭಿಧಾರ್ಥದಲ್ಲಿ ಮಾತ್ರ ನಿಜ. ಆದರೆ ಕೃಷಿಕರಲ್ಲದವರಿಗೆ ಆ ಪದಗಳು ಲಕ್ಷಣಾರ್ಥದಲ್ಲಿಯೂ ನಿಜ. ಸುಮ್ಮನೆ 'ಕಳೆ' ಎನ್ನುವ ಪದವನ್ನು ಗಮನಿಸಿ. ವೃತ್ತಿಗೆ ಸಂಬಂಧಿಸಿದಂತೆ 'ಕಳೆ' ಎಂದರೆ ಬೆಳೆಯ ನಡುವೆ ಬಂದ ಬೇಡದ ಸಸ್ಯ. ಆದರೆ ಇತರರಿಗೆ ಅದು ಸಸ್ಯವೇ ಆಗಿರಬೇಕಿಲ್ಲ. ಅನವಶ್ಯವಾದ ಎಲ್ಲವೂ 'ಕಳೆ'ಯಾಗಿರುವುದು ಸಾಧ್ಯ. ಇದೇ ಉಪಕರಣಗಳನ್ನು ಸೂಚಿಸುವ ಅನ್ಯಭಾಷೆಯ ಪದಗಳು ಎರವಲಾಗಿ ಬಂದಾಗ ಅವು ವೃತ್ತಿಂಯು ಅರ್ಥವನ್ನು ಮಾತ್ರ ಉಳಿಸಿಕೊಂಡಿರುವುದಿಲ್ಲ. ಉದಾ.ನೇಗಿಲು ಪದಕ್ಕೆ ಪರ್ಯಾಯವಾಗಿ ಹಲ ಎನ್ನುವ ಪದ ಸಂಸ್ಕೃತದಿಂದ ಎರವಲಾಗಿ ಬಂದಿದೆ. ನೇಗಿಲು ಪದಕ್ಕೆ ಕನ್ನಡದ ಬಳಕೆಯಲ್ಲಿ ಇರದ ಆಯುಧವೆಂಬ ಅರ್ಥ ಸಾಧ್ಯತೆ ಹಲ ಪದಕ್ಕಿದೆ. ಹೀಗೆ ಕೂಡ ಪದಕೋಶ ವಿಸ್ತಾರಗೊಳ್ಳುತ್ತಿರುತ್ತದೆ. ಊಹಾ ಪದಕೋಶದಲ್ಲಿ ಆಗುವ ಪರಿವರ್ತನೆಗಳನ್ನು ಅಭ್ಯಾಸ ಮಾಡುವುದಕ್ಕಾಗಿ ಶಾಸ್ತ್ರಗಳು ಬೆಳೆದಿವೆ. ಹಾಗೆಯೇ ಭಾಷಿಕರ ಪದಕೋಶದಲ್ಲಿ ಸಾಂಸ್ಕೃತಿಕ ಕಾರಣಗಳಿಂದಾಗಿ ನಡೆಯುವ ಈ ಬಗೆಯ ವಿಸ್ತಾರ, ಸಂಕೋಚ ಮತ್ತು ವಿನ್ಯಾಸಗಳನ್ನು ಗಮನಿಸುವುದು ಕೂಡ ಅತ್ಯವಶ್ಯವೆಂದು ತೋರುತ್ತದೆ.

## ಪದಕೋಶ: ಎರಡು ಬಗೆಗಳು

ಭಾಷಿಕರೊಬ್ಬರಲ್ಲಿ ಪದಕೋಶ ಹೇಗೆ ನೆಲೆಗೊಂಡಿರುತ್ತದೆ ಎಂಬ ಬಗ್ಗೆ ಕೊನೆ ಮಾತನ್ನು ಹೇಳುವುದು ಸಾಧ್ಯವಾಗಿಲ್ಲ. ಹೋಗಲಿ. ನೆಲೆಗೊಂಡಿರುವ ಪದಕೋಶ ಅವರಿಗೆ ಹೇಗೆ ಬಳಕೆಗೆ ಒದಗುತ್ತದೆ ಎಂಬ ಪ್ರಶ್ನೆಗಾದರೂ ಖಚಿತ ಉತ್ತರವಿದೆಯೇ? ಇಲ್ಲ. ಮೆದುಳಿನಲ್ಲಿ ಪದಕೋಶ ನೆನಪಾಗಿ ಮುದ್ರಿತವಾಗಿರುತ್ತದೆ ಹಾಗೂ ಬೇಕಾದಾಗ ಆ ರಾಶಿಯಿಂದ ಬೇಕಾದ ಪದವನ್ನು ಭಾಷಿಕರು ಆಯ್ಕೆ ಮಾಡಿ ಬಳಸುತ್ತಾರೆ ಎಂಬುದೊಂದು ಸಾಮಾನ್ಯ ತಿಳುವಳಿಕೆ ಇದೆ. ಪದದ ಜತೆಗೆ ಪದಾರ್ಥದ ಸಮಸ್ಯೆಯೂ ಇದೆ. ಪದದ ರೂಪವನ್ನು ನೆನಪಿನಲ್ಲಿ ಮುದ್ರಿಸಿಕೊಂಡಿದ್ದರೆ ಅದರ ಅರ್ಥವನ್ನು ಹೇಗೆ ಹಿಡಿದಿಡುವುದು? ಹೇಗೆ ಮರಳಿ ಪಡೆದು ಸಂಯೋಜಿಸುವುದು?ಇವೆಲ್ಲ ಕಾಡುತ್ತಿರುವ ಪ್ರಶ್ನೆಗಳು. ಪದದ ರೂಪ ಮತ್ತು ಅರ್ಥಗಳು ಸೂಕ್ತ ಸಂಯೋಜನೆಗೆ ಒಳಪಡದ ಹತ್ತಾರು ಸಂದರ್ಭಗಳು ನಮಗೆ ನಿತ್ಯ ಜೀವನದಲ್ಲಿ ಒದಗಿಬರುತ್ತವೆ. ಅರ್ಥ ಮೊದಲು ಗ್ರಹಿಕೆಗೆ ಬಂದು ಅದನ್ನು ಪ್ರತಿನಿಧಿಸಬಲ್ಲ ಧ್ವನಿರೂಪಕ್ಕೆ ತಡಕಾಡುತ್ತ ಗೊಂದಲದಲ್ಲಿ ಬೀಳುವ ಪ್ರಸಂಗಗಳಿವೆ. ಹಾಗೆಯೇ ಧ್ವನಿರೂಪಗಳು ಅರ್ಥಗ್ರಹಿಕೆಯಿಲ್ಲದೆ ನೆನಪಿಗೆ ಬರುವುದೂ ಉಂಟು.

ಈ ಎಲ್ಲ ವಿವರಗಳನ್ನು ಇಲ್ಲಿ ಹೇಳಿದ್ದಕ್ಕೆ ಕಾರಣಗಳಿವೆ. ಪದಕೋಶದ ರಚನೆಯನ್ನು ಅದರ ಮಾನಸಿಕ ನೆಲೆಯಿಂದ ವಿವರಿಸಲು ಹೊರಡುವುದಕ್ಕಿಂತ ಬಳಕೆಯಾಗುವ ಕ್ರಮವನ್ನು ಆಧರಿಸಿ ವಿವರಿಸುವುದು ಹೆಚ್ಚು ಸೂಕ್ತವಾಗಿದೆ. ಪದಗಳನ್ನು ನಾವು ಓದುವಾಗ, ಮಾತನ್ನು ಆಲಿಸುವಾಗ, ಮಾತನಾಡುವಾಗ, ಹಾಗೂ ಬರೆಯುವಾಗ ಹೀಗೆ ನಾಲ್ಕು ವಲಯಗಳಲ್ಲಿ ಬಳಸುತ್ತೇವೆ. ಅಂದರೆ ಅಲ್ಲಿ ನಮಗೂ ಪದಗಳಿಗೂ ಮುಖಾಮುಖಿಯಾಗುತ್ತದೆ. ನಾವು 'ಹೊಂದಿರುವ' ಪದಕೋಶವನ್ನು ಈ ನಾಲ್ಕು ಸಂದರ್ಭದಲ್ಲೂ ಒಂದೇ ರೀತಿ ಬಳಸುವುದಿಲ್ಲ. ನಾವು ಆಡುವ ಎಷ್ಟೋ ಪದಗಳನ್ನು ಬರೆಯುವುದಿಲ್ಲ. ಬರೆದ, ಓದಿದ ಎಷ್ಟೋ ಪದಗಳನ್ನು ಆಡುವುದಿಲ್ಲ. ಹಾಗಾಗಿ ಪದಕೋಶದ ಬಳಕೆಯಲ್ಲಿ ಎರಡು ಮುಖ್ಯ ಬಗೆಗಳನ್ನು ಗುರುತಿಸಬಹುದು. ಕ್ರಿಯಾತ್ಮಕ ಪದಕೋಶ ಹಾಗೂ ನಿಷ್ಕ್ರಿಯಾತ್ಮಕ ಪದಕೋಶ. ಈ ಪಾರಿಭಾಷಿಕ ಪದಗಳು ಅಷ್ಟು ಸರಿಯಲ್ಲ. ಭಾಷಿಕರೊಬ್ಬರು ತಾವೇ ಬಳಸುವ (ಮಾತಾಡಲು, ಬರೆಯಲು) ಪದಕೋಶ ಕ್ರಿಯಾತ್ಮಕ, ತಾವೇ ಬಳಸದಿದ್ದರೂ ಇತರ ಮೂಲಗಳಿಂದ ಬಳಕೆಯಾದಾಗ ಗ್ರಹಿಕೆಗೆ ಒದಗುವ ಪದಕೋಶ ನಿಷ್ಕ್ರಿಯಾತ್ಮಕ. ಎಷ್ಟೋ ಪದಗಳು ಇವೆರಡಕ್ಕೂ ಸಮಾನ. ಆದರೂ ಎರಡಕ್ಕೂ ವಿಶಿಷ್ಟವಾದ ಪದಗಳಿರುತ್ತವೆ.

ಹೀಗೆ ಎರಡು ಬಗೆಗಳನ್ನು ಗೆರೆಯೆಳೆದು ತೋರಿಸುವುದು ಎಷ್ಟು ಸರಿ? ಹಾಗೂ ಒಂದು ಭಾಷೆಯಲ್ಲಿ ನಿರ್ದಿಷ್ಟವಾಗಿ ಇದೇ ಕ್ರಿಯಾತ್ಮಕ ಪದಕೋಶ, ಇದು ಅಲ್ಲ ಎಂದು ಹೇಳುವುದು ಸಾಧ್ಯವೇ? ಎರಡನೆಯ ಪ್ರಶ್ನೆಗೆ ಇಲ್ಲವೆಂದೇ ಉತ್ತರ. ವಕೀಲರೊಬ್ಬರ ಕ್ರಿಯಾತ್ಮಕ ಪದಕೋಶ ನಮಗೆ ಹಾಗಿಲ್ಲ, (ನಾವು ವಕೀಲರಲ್ಲದಿದ್ದರೆ) ಆದರೆ ಈ ಎರಡು ಬಗೆಗಳನ್ನು ಗುರುತಿಸುವುದು ಕಷ್ಟವಾದರೂ ಉಪಯುಕ್ತವಾದ ಮಾದರಿ ಎಂಬುದನ್ನು ಮರೆಯಬಾರದು: ಏಕೆಂದರೆ ಪದಕೋಶಕ್ಕೆ ಸಂಬಂಧಿಸಿದ ಕೆಲವು ಮುಖ್ಯ ಸಮಸ್ಯೆಗಳನ್ನು ಇದರಿಂದಾಗಿ ಅರ್ಥಮಾಡಿಕೊಳ್ಳುವುದು ಸಾಧ್ಯವಾಗುತ್ತದೆ. ಕೆಲವು ಪದಗಳು ಗೆರೆದಾಟುವ ಕೆಲಸ ಮಾಡುತ್ತಿರುತ್ತವೆ. ಅಂದರೆ ನಿಷ್ಕ್ರಿಯಾತ್ಮಕ ಪದಕೋಶದಿಂದ ಕ್ರಿಯಾತ್ಮಕ ಪದಕೋಶದಲ್ಲಿ ಜಾಗ ಮಾಡಿಕೊಳ್ಳುತ್ತಿರುತ್ತವೆ. ಈ ಗೆರೆದಾಟುವ ಪ್ರಕ್ರಿಯೆಯ ಹಿಂದೆ ಬಲವಾದ ಸಾಮಾಜಿಕ ಸಂಗತಿಗಳು ಕೆಲಸ ಮಾಡುತ್ತವೆ. ಹಾಗಾಗಿ ಪದಕೋಶದ ಒಳಗೆ ನಡೆಯುತ್ತಿರುವ ಚಲನೆ ಭಾಷಾಶಾಸ್ತ್ರಜ್ಞರಿಗೆ ಹಲವಾರು ಕುತೂಹಲಕಾರಿ ಸಂಗತಿಗಳನ್ನು ತಿಳಿಸಿಕೊಡಬಲ್ಲದು. ಅಲ್ಲದೆ ಈ ಆಂತರಿಕ ಚಲನೆಯು ಏಕರೂಪಿಯಾಗಿರುವುದಿಲ್ಲ. ಚಲನೆಯ ಪ್ರಸಾರ ಹಾಗೂ ವ್ಯಾಪ್ತಿ ಕೂಡ.

# ಕಿಟಲ್ ಕೋಶಕ್ಕೆ ನೂರು ವರ್ಷ

ನಿಘಂಟುಗಳು ಕನ್ನಡಕ್ಕೆ ಹೊಸವೇನಲ್ಲ. ಕನ್ನಡ ಪದಕೋಶಕ್ಕೆ ಸಂಸ್ಕೃತ ಅರ್ಥವ್ಯಾಖ್ಯೆ ನೀಡುವ ನಿಘಂಟುಗಳೂ ರಚಿತವಾಗಿವೆ. ನಿಘಂಟು ಎಂದರೆ ಅರ್ಥಕೋಶ ಎಂದಷ್ಟೇ ತಿಳಿದರೆ ಆಗ ದ್ವಿಭಾಷಿಕ ನಿಘಂಟುಗಳು ಕನ್ನಡದಲ್ಲಿ ಇದ್ದವೆನ್ನಬಹುದು. ಆದರೆ ನಿಘಂಟು ಕೇವಲ ಅರ್ಥಕೋಶವಲ್ಲ. ಈ ಅಂಶವನ್ನು ಕನ್ನಡದ ಮಟ್ಟಿಗೆ ವ್ಯವಸ್ಥಿತವಾಗಿ ಸಾಧಿಸಿ ತೋರಿಸಿದ ಯಶಸ್ಸು ಕಿಟೆಲ್ ಕೋಶಕ್ಕೆ ಸೇರಬೇಕು.

ಕಿಟೆಲ್ ಸಂಪಾದಿಸಿದ ಕನ್ನಡ-ಕನ್ನಡ-ಇಂಗ್ಲಿಶ್ ನಿಘಂಟು ಇಂದಿಗೂ ಒಂದು ಅಪೂರ್ವ ದಾಖಲೆ. ಇದಕ್ಕೆ ಕಾರಣಗಳನ್ನು ಒಂದೊಂದಾಗಿ ನೋಡೋಣ.

1. ನಮೂದುಗಳಿಗಾಗಿ ಕೇವಲ ಲಿಖಿತ ದಾಖಲೆಗಳನ್ನು ಮಾತ್ರ ಆಧರಿಸದೆ ಆಡುಮಾತಿನ ರೂಪಗಳನ್ನೂ ದಾಖಲಿಸಿರುವುದು. ನೂರಾರು ಪ್ರಯೋಗಗಳನ್ನು ಜನರ ನುಡಿಯಿಂದ ಕಿಟೆಲ್ ಆಯ್ದು ದಾಖಲಿಸಿದ್ದಾರೆ. ಕನ್ನಡ ಪ್ರದೇಶದ ವೈವಿಧ್ಯಗಳೆಲ್ಲ ಪ್ರತಿನಿಧಿತವಾಗಿಲ್ಲವೆಂಬ ಕೊರತೆಯನ್ನು ಹೇಳಬಹುದು. ನೂರು ವರ್ಷದ ಹಿಂದಿನ ಈ ಪ್ರಯತ್ನಕ್ಕೆ ಇಂಥ ಕೊರತೆಯ ಆರೋಪ ಸಲ್ಲದು. ಏಕೆಂದರೆ ಇಂದಿಗೂ ನಮಗೆ ಅಂಥ ಪ್ರಾತಿನಿಧಿಕ ಪದಕೋಶವನ್ನು ರೂಪಿಸುವುದು ಸಾಧ್ಯವಾಗಿಲ್ಲ.

2. ನಮೂದುಗಳ ಬಳಕೆಯನ್ನು ತೋರಿಸಲು ಉಲ್ಲೇಖಗಳನ್ನು ನೀಡಿರುವುದು. ಆಗ ಲಭ್ಯವಿದ್ದ ಪರಿಚಿತವಿದ್ದ ಕನ್ನಡ ಕೃತಿಗಳಿಂದ ಪ್ರಯೋಗಗಳನ್ನು ಆಯ್ದು ನೀಡಲಾಗಿದೆ. ಜನರ ನುಡಿಗಟ್ಟುಗಳನ್ನು ಗಾದೆ ಮಾತುಗಳನ್ನು ಉಲ್ಲೇಖಗಳನ್ನಾಗಿ ಆರಿಸಿಕೊಟ್ಟಿದ್ದಾರೆ. ಕನ್ನಡದ ನೂರಾರು ವೈವಿಧ್ಯಮಯ ಗಾದೆಗಳ ಸಂಗ್ರಹವೇ ಈ ಕೋಶದಲ್ಲಿದೆ. ಲಿಖಿತ ದಾಖಲೆಗಳಿಂದ ಲಕ್ಷ್ಯಗಳನ್ನು ನೀಡಿದ್ದು ಗಮನಾರ್ಹ ಪ್ರಯೋಗ.

3. ಅರ್ಥವಿವರಣೆ ನೀಡುವಾಗ ಮೂಲ ನಮೂದುಗಳಿಗೆ ಇಂಗ್ಲಿಶ್‌ನಲ್ಲಿ ಅರ್ಥ ನೀಡಿ ಪಾರಿಭಾಷಿಕ ರೂಪಗಳನ್ನೂ ಒದಗಿಸಲಾಗಿದೆ. ಸಸ್ಯವರ್ಗದ ನಾಮರೂಪಗಳನ್ನು ಈ ಮಾತಿಗೆ ನಿದರ್ಶನವಾಗಿ ನೋಡಬಹುದು. ದೇಶೀಯ ಪ್ರಾಣಿಸಸ್ಯವರ್ಗಕ್ಕೆ ಈ ಕೋಶವು ನೀಡಿರುವ ಪಾರಿಭಾಷಿಕ ಸಮಾನಾರ್ಥಕಗಳ ಪ್ರಯೋಜನವನ್ನು ನಾವಿನ್ನೂ ಪಡೆದುಕೊಳ್ಳಬೇಕಾಗಿದೆ.

ಕಿಟೆಲ್ ಈ ಕೋಶ ರಚಿಸುವ ಹೊತ್ತಿಗೆ ಕಾಲ್ಡ್‌ವೆಲ್ಲರು ದ್ರಾವಿಡ ಭಾಷಾವರ್ಗ ಹಾಗೂ ಆ ವರ್ಗದ ಭಾಷೆಗಳ ವ್ಯಾಕರಣಗಳನ್ನು ಆಗಲೇ ಚರ್ಚಿಸಿದ್ದರು. ಸ್ವತಃ

ಕಿಟೆಲ್ ಕನ್ನಡ ಶಾಸ್ತ್ರಗ್ರಂಥಗಳ, ಅದರಲ್ಲೂ ಕೇಶಿರಾಜನ ಶಬ್ದಮಣಿದರ್ಪಣದ ನಿಕಟಪರಿಚಯ ಪಡೆದಿದ್ದರು. ಇಂಗ್ಲಿಶಿನಲ್ಲಿ ಕನ್ನಡ ಭಾಷೆಯ ಬೆಳವಣಿಗೆಯನ್ನು ಆಧರಿಸಿದ ವ್ಯಾಕರಣ ರಚಿಸಲು ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಇವೆಲ್ಲದರ ಸಮೂಹ ಪರಿಣಾಮ ಈ ಕೋಶದಲ್ಲಿದೆ. ಜ್ಞಾತಿ ಭಾಷೆಗಳಿಂದ ಸಂವಾದಿ ರೂಪಗಳನ್ನು ದಾಖಲು ಮಾಡುವ ಕ್ರಮವನ್ನು ಕಿಟೆಲ್ ಬಳಸಿದ್ದಕ್ಕೆ ಈ ಮೇಲಿನ ಸಂದರ್ಭವೂ ಕಾರಣ. ಹೀಗೆ ಸಂವಾದಿ ರೂಪಗಳ ಸಿದ್ಧ ಆಕರಗಳೇನೂ ಆಗ ಲಭ್ಯವಿರಲಿಲ್ಲ. ಆಯಾ ಭಾಷೆಯ ಕೋಶ, ವ್ಯಾಕರಣಗಳನ್ನು ಬಳಸಿ ಈ ಪದಪಟ್ಟಿಯನ್ನು ಪಡೆಯಬೇಕಿತ್ತು.

ಇಂಗ್ಲಿಶಿನಲ್ಲಿ ಈ ಕೋಶಕ್ಕೆ ಒಂದು ಉಪೋದ್ಘಾತವಿದೆ. ಕನ್ನಡ ಭಾಷೆಯ ಬಗ್ಗೆ ಈ ಭಾಗದಲ್ಲಿ ಚರ್ಚಿಸುತ್ತಲೇ ಕಿಟೆಲ್ ಒಂದು ಮಹತ್ವದ ಸಂಗತಿಯನ್ನು ದಾಖಲಿಸಿದ್ದಾರೆ. ಭಾರತೀಯ ಭಾಷೆಗಳಿಗೆಲ್ಲ ಸಂಸ್ಕೃತ 'ಕೊಡುವ ಭಾಷೆ'ಯಾಗಿದೆ. ಆದರೆ ಅನ್ಯ ಭಾಷಾವರ್ಗದ ಭಾಷೆಗಳಿಂದ ಅದು ತೆಗೆದುಕೊಂಡಿದೆ ಕೂಡ. ಹೀಗೆ ತೆಗೆದುಕೊಂಡ ಪದಗಳು ಕಡಿಮೆ ಇರಬಹುದು. ಆದರೆ ಅಂಥ ಪದಗಳಿವೆ. ಪಾರಂಪರಿಕ ವೈಯಾಕರಣರು ಇಂಥ ಪದಗಳನ್ನು ಗುರುತಿಸಿದ್ದರು. ಆದರೆ ಅವು ಎರಡೂ ಭಾಷೆಗಳಿಗೂ ಸಮಾನವೆಂದಷ್ಟೇ ತಿಳಿದಿದ್ದರು. ಆದರೆ ಕಿಟೆಲ್ ಇದೇ ಅಂಶವನ್ನು ಬೇರೆ ರೀತಿಯಿಂದ ವಿವರಿಸಿದ್ದಾರೆ. ಈ ಪದಗಳು ಸಂಸ್ಕೃತದ ಕಡೆಗೆ ಪಯಣಿಸಿವೆ ಎಂಬುದೇ ಆ ವಿವರಣೆ.

ಮೇಲುನೋಟಕ್ಕೆ ಕಿಟೆಲ್‌ರ ಈ ವಿವರಣೆ ಹಾಗೂ ಆ ಮೂಲಕ ಸಾಬೀತು ಮಾಡಿದ ಅಂಶ ತೀರಾ ಸಾಮಾನ್ಯ ಅನ್ನಿಸಲು ಸಾಧ್ಯ. ಆದರೆ ಈ ಸಂಗತಿಗೆ ಬೇರೊಂದು ಮಹತ್ವವಿದೆ. ಭಾರತೀಯ ಭಾಷೆಗಳಿಗೆ ವ್ಯಾಕರಣ ರಚಿಸಿದ, ಕೋಶರೂಪಿಸಿದ ಐರೋಪ್ಯ ಮಿಷನರಿಗಳು. ಪರೋಕ್ಷವಾಗಿ ಒಂದು ಸಾಂಸ್ಕೃತಿಕ ವಾಗ್ವಾದವನ್ನು ರೂಪಿಸಿದ್ದಾರೆ. ಭಾರತೀಯ ಸಂಸ್ಕೃತಿಯನ್ನು ಸಂಸ್ಕೃತ ಕೇಂದ್ರಿತವಾಗಿ ನೋಡುವ ಪ್ರವೃತ್ತಿಯನ್ನು ನಿರಾಕರಿಸಿ ಹಲವಾರು ಪ್ರಧಾನ ಸಂಸ್ಕೃತಿಗಳ ನೇಯ್ಗೆಯೆಂದು ನೋಡಲು ಮಿಷನರಿಗಳ ಈ ಯತ್ನಗಳು ಪ್ರೇರೇಪಿಸುತ್ತವೆ ಹಾಗಾಗಿ ಕಿಟೆಲ್ ನಿಘಂಟು ಕನ್ನಡದ ಒಂದು ಶ್ರೇಷ್ಠ ಕೋಶ ಮಾತ್ರವಲ್ಲ; ಕನ್ನಡದ ಅಂತಃಸತ್ತ್ವವನ್ನು ಸ್ಥಾಪಿಸಲು ಯತ್ನವೂ ಆಗಿದೆ.

ಈ ನೂರು ವರ್ಷಗಳಲ್ಲಿ ಕಿಟೆಲ್ ಕೋಶವನ್ನು ಪರಿಷ್ಕರಿಸುವ ಯತ್ನ ಮದರಾಸ್ ವಿಶ್ವವಿದ್ಯಾಲಯದ ವತಿಯಿಂದ ನಡೆದಿದೆ. ಹೆಚ್ಚಿನ ನಮೂದುಗಳು. ಅಧಿಕ ಉಲ್ಲೇಖಗಳು. ದೇಶೀ ಮತ್ತು ಅನ್ಯದೇಶ್ಯ ಪದಗಳನ್ನು ಬೇರ್ಪಡಿಸಲು ಮುದ್ರಣದಲ್ಲಿ ಕೆಲವು ಸೂಚನೆಗಳು ಇತ್ಯಾದಿಗಳನ್ನೊಳಗೊಂಡು ನಾಲ್ಕು ಸಂಪುಟಗಳಲ್ಲಿ ಕಿಟೆಲ್‌ಕೋಶ ಪ್ರಕಟಗೊಂಡಿದೆ. ಕಿಟೆಲ್‌ಕೋಶದ ಗಾದೆಗಳನ್ನು ಹೊರತೆಗೆದು ಪ್ರತ್ಯೇಕ ಪುಸ್ತಕವನ್ನಾಗಿ ಪ್ರಕಟಿಸಲಾಗಿದೆ. ಈಚೆಗೆ ಕಿಟೆಲ್‌ಕೋಶ ಯಥಾಮುದ್ರಣಗೊಂಡಿದೆ; ಅಭ್ಯಾಸಿಗಳಿಗೆ ಸುಲಭ ಲಭ್ಯವಿದೆ. ಪರಾಮರ್ಶನ ಗ್ರಂಥವೊಂದು ದೇಶಭಾಷೆಯೊಂದರಲ್ಲಿ ಇಷ್ಟು ಪ್ರಭಾವಶಾಲಿಯಾಗುವ ಪ್ರಸಂಗಗಳು ವಿರಳ.

## ಪದರಚನೆ

ಕನ್ನಡದ ಪದರಚನೆಯಲ್ಲಿ ಅಗಿರುವ ಪಲ್ಲಟಗಳನ್ನು ನಾವೀಗ ಅಭ್ಯಾಸ ಮಾಡಬೇಕು. ಪದರಚನೆಯ ಕೆಲವು ನಿಯಮಗಳು ಈಗ ಬದಲಾಗಿವೆ. ವಿಭಕ್ತಿ ಪ್ರತ್ಯಯಗಳನ್ನು ನಾಮಪದಗಳಿಗೆ ಹತ್ತಿಸುವಾಗ ಇದ್ದ ನಿಯಮಗಳು ಕೆಲವು ಬದಲಾಗುತ್ತಿವೆ. ಚತುರ್ಥೀ ವಿಭಕ್ತಿ ಪ್ರತ್ಯಯಗಳಲ್ಲಿ ಒಂದಾದ 'ಗೆ' ಪ್ರತ್ಯಯವು ಸಾಮಾನ್ಯವಾಗಿ ಈಗ ನಮಗೆ ಪರಿಚಿತವಿರುವ ನಿಯಮದಂತೆ 'ಎ' ಕಾರ ಮತ್ತು 'ಇ' ಕಾರ (ಪೂರ್ವ ಸ್ವರಗಳು) ಗಳಿಂದ ಕೊನೆಯಾಗುವ ಪದಗಳಿಗೆ ಮಾತ್ರ ಸೇರುತ್ತವೆ. ಆದರೆ ಈಗ ಈ ಪ್ರತ್ಯಯವನ್ನು ಬೇರೆ ಎರಡು ಸಂದರ್ಭಗಳಲ್ಲಿ ಬಳಸುತ್ತಿದ್ದೇವೆ. ಒಂದು: ವ್ಯಂಜನಾಂತ ಪದಗಳಿಗೆ ಚತುರ್ಥೀ ವಿಭಕ್ತಿ ಪ್ರತ್ಯಯವಾಗಿ ಈ 'ಗೆ' ಪ್ರತ್ಯಯ ಸೇರುತ್ತದೆ. ಕನ್ನಡದ ಯಾವುದೇ ದಿನಪತ್ರಿಕೆಯನ್ನು ತೆರೆದು ನೋಡಿದರೂ ಪ್ರತಿ ದಿನವೂ ನೂರಾರು ಇಂತಹ ಪ್ರಯೋಗಗಳು ನಮಗೆ ದೊರಕುತ್ತವೆ. ಉದಾ.ಗೆ ಲಂಡನ್‌ಗೆ, ಇರಾಕ್‌ಗೆ, ಜಪಾನ್‌ಗೆ, ಬ್ಯಾಟ್‌ಗೆ, ಬಾಲ್‌ಗೆ ಹೀಗೆ ಹಲವಾರು. ಇಲ್ಲಿ ಈ ಹಿಂದೆ ಇದ್ದ ಇನ್ನೊಂದು ನಿಯಮ ಬಳಕೆಯಿಂದ ಜಾರಿಹೋಗಿರುವುದು ಗಮನಿಸಬೇಕಾದ ವಿಷಯ. ಸಾಮಾನ್ಯವಾಗಿ ವ್ಯಂಜನಾಂತ ಪದಗಳನ್ನು ಕನ್ನಡಕ್ಕೆ ಎರವಲು ಪಡೆದಾಗ ಆ ಪದಗಳನ್ನು ಸ್ವರಾಂತ ಮಾಡಿಕೊಂಡು ಅನಂತರ ಅಗತ್ಯ ಬಿದ್ದರೆ ಚತುರ್ಥೀ ವಿಭಕ್ತಿ ಪ್ರತ್ಯಯ ಹತ್ತಿಸಬೇಕಿತ್ತು. ಸ್ವರಾಂತ ಮಾಡಬೇಕೆಂದರೆ 'ಉ' ಕಾರ ಸೇರ್ಪಡೆಯಾಗುತ್ತಿತ್ತು. ಈ 'ಉ' ಕಾರ ಸೇರುವಾಗ ಕೊನೆಯ ವ್ಯಂಜನದ ಹಿಂದಿನ ಸ್ವರ ಕನ್ನಡಿಗರ ಉಚ್ಚಾರಣೆಯಲ್ಲಿ ಹ್ರಸ್ವವಾಗಿದ್ದರೆ ಆಗ ಆ ವ್ಯಂಜನವು ದ್ವಿತ್ವಗೊಂಡು ಅನಂತರ 'ಉ' ಕಾರ ಸೇರುತ್ತದೆ. ಉದಾ.ಗೆ- ಬಸ್-ಬಸ್ಸು ಪೆನ್-ಪೆನ್ನು, ಕಿಟ್-ಕಿಟ್ಟು ಇತ್ಯಾದಿ. ಆದರೆ 'ಕಾರ್-ಕಾರು, ಬ್ಯಾಟ್-ಬ್ಯಾಟು ಆಗುತ್ತವೆ. ಹೀಗೆ 'ಉ'ಕಾರ ಸೇರಿದ ಮೇಲೆ ಚತುರ್ಥೀವಿಭಕ್ತಿ ಪ್ರತ್ಯಯವನ್ನು ಸೇರಿಸಬೇಕಾಗಿ ಬಂದರೆ 'ಉ' ಕಾರವನ್ನು ಲೋಪಗೊಳಿಸಿ ಅದಕ್ಕೆ 'ಇಗೆ' ಪ್ರತ್ಯಯವನ್ನು ಸೇರಿಸುವುದುಂಟು. ಉದಾ.ಗೆ ಕಾಲು-ಕಾಲಿಗೆ, ಕೋಲು-ಕೋಲಿಗೆ, ಹಾಡು-ಹಾಡಿಗೆ ಇದ್ದಂತೆ ಬ್ಯಾಟು-ಬ್ಯಾಟಿಗೆ, ಗೇಟು-ಗೇಟಿಗೆ ಆಗುತ್ತಿತ್ತು. ನಾವು ಇಲ್ಲಿ ಗುರುತಿಸಿರುವಂತೆ ಕಳೆದ ಕೆಲವು ದಶಕಗಳಲ್ಲಿ ಆಗಿರುವ ಬದಲಾವಣೆ ಎಂದರೆ ಈ ಪ್ರಚಲಿತ ನಿಯಮ ಕಳೆದುಹೋಗಿ ಮೂಲ ವ್ಯಂಜನಾಂತ ರೂಪಕ್ಕೆ ನೇರವಾಗಿ 'ಗೆ' ಕಾರವನ್ನು ಸೇರಿಸಲಾಗುತ್ತದೆ.ಉದಾ. ಗೇಟ್‌ಗೆ, ಬ್ಯಾಟ್‌ಗೆ ಇತ್ಯಾದಿ ಇದು ಉಚ್ಚಾರಣೆ ಮತ್ತು ಬರೆಹ ಎರಡರಲ್ಲೂ ಕಾಣಿಸಿಕೊಳ್ಳತೊಡಗಿದೆ. ನಾವು ಧ್ವನಿ ಪಲ್ಲಟಗಳ ನೆಲೆಯಲ್ಲಿ ಗುರುತಿಸಿದ ನಿಯಮಗಳೇ ಇಲ್ಲೂ ಕೂಡ ಪ್ರವೃತ್ತವಾಗಿವೆ.

'ಗೆ' ಎಂಬ ಚತುರ್ಥೀ ವಿಭಕ್ತಿಪ್ರತ್ಯಯ ಸಾಮಾನ್ಯವಾಗಿ 'ಅ' ಕಾರಾಂತ ಪದಗಳಿಗೆ ಸೇರುವುದಿಲ್ಲ. ಮರ, ಪುಸ್ತಕ, ಹಸ್ತ, ಮುಂತಾದ ಮಾನವೇತರ ನಾಮಪದಗಳಿಗೆ ಚತುರ್ಥೀ ಪ್ರತ್ಯಯವಾಗಿ 'ಕ್ಕೆ' ಎಂಬ ಪ್ರತ್ಯಯ ಸೇರುತ್ತದೆ. ಮರಕ್ಕೆ, ತೋಟಕ್ಕೆ, ಪುಸ್ತಕಕ್ಕೆ, ಹಸ್ತಕ್ಕೆ ಎಂಬಂತೆ. ಆದರೆ ಮಾನವ ನಾಮಪದಗಳು 'ಅ' ಕಾರಾಂತವಾಗಿದ್ದಾಗ ಮೊದಲು ಲಿಂಗವಾಚಿ ಪ್ರತ್ಯಯವನ್ನು ಪಡೆದು ಅನಂತರ 'ಇಗೆ' ಎಂಬ ಪ್ರತ್ಯಯವನ್ನು ಸೇರಿಸುತ್ತದೆ. ಉದಾ.ಗೆ– ರಾಮ ಎಂಬ 'ಅ' ಕಾರಾಂತ ಪದಕ್ಕೆ ಮೊದಲು ಪುಲ್ಲಿಂಗವಾಚಿ 'ಅನ್' ಪ್ರತ್ಯಯವನ್ನು ಸೇರಿಸಿ ಅನಂತರ 'ಇಗೆ' ಕೂಡಿಸಿದರೆ 'ರಾಮನಿಗೆ' ಎಂಬ ರೂಪ ಸಿಗುತ್ತದೆ. ಈ ನಿಯಮ ಕೂಡ ಬದಲಾಗುತ್ತಿದೆ. ವ್ಯಕ್ತಿವಾಚಿ ನಾಮಪದಗಳಲ್ಲಿ 'ಅ' ಕಾರಾಂತ ಪದಗಳೆಂದರೆ ಅವುಗಳಿಗೆ ನೇರವಾಗಿ 'ಗೆ' ಪ್ರತ್ಯಯ ಸೇರುತ್ತಿದೆ. ಉದಾ.ಗೆ ರಾಮಗೆ–ಸೀತಗೆ ಈ ಹೊಸ ನಿಯಮವು ಸಾರಾಸಗಟಾಗಿ ಎಲ್ಲಾ 'ಅ' ಕಾರಾಂತ ನಾಮಪದಗಳಿಗೂ ಅನ್ವಯಿಸುವಂತಿದೆ. ಇದರಿಂದ ಕೆಲವು ಗೊಂದಲಗಳು ಉಂಟಾಗುವ ಸಾಧ್ಯತೆಗಳು ಇವೆ. ಅದರಲ್ಲೂ ಈ ಪ್ರತ್ಯಯ ಪಡೆಯುತ್ತಿರುವ ವ್ಯಕ್ತಿಗೆ ಸಾಮಾಜಿಕವಾಗಿ ಹೆಚ್ಚು ಗೌರವವಿದ್ದರೆ ಆಗ ಹೀಗೆ 'ಗೆ' ಪ್ರತ್ಯಯ ಸೇರಿಸುವ ಮೊದಲು ಗೌರವ ಸೂಚಕವಾದ 'ಅವರು' ಎಂಬ ಪದವನ್ನು ಸೇರಿಸಬೇಕೇ ಬೇಡವೇ ಎಂಬ ಜಿಜ್ಞಾಸೆ ಮೊದಲಾಗುತ್ತದೆ. ಉದಾ.ಗೆ ಸಿದ್ದರಾಮಯ್ಯ ಎಂಬ ನಾಮಪದಕ್ಕೆ 'ಗೆ' ಪ್ರತ್ಯಯವನ್ನು ಸೇರಿಸಿದ್ದಾಗ ಸಿದ್ದರಾಮಯ್ಯನವರಿಗೆ ಎನ್ನಬೇಕೋ ಅಥವಾ ಸಿದ್ಧರಾಮಯ್ಯಗೆ ಎನ್ನಬೇಕೋ ಎಂಬ ಗೊಂದಲ ಉಂಟಾಗುತ್ತದೆ. ಕನ್ನಡ ಪತ್ರಿಕೆಗಳು ಈ ನೆಲೆಯಲ್ಲಿ ಇನ್ನೂ ಖಚಿತವಾದ ನಿಲುವನ್ನು ತಳೆದಿಲ್ಲವೆಂದು ತೋರುತ್ತದೆ. ಸಿದ್ಧರಾಮಯ್ಯಗೆ, ಯಡಿಯೂರಪ್ಪಗೆ ಎಂಬ ರೂಪಗಳನ್ನು ನಾವು ಪತ್ರಿಕೆಗಳಲ್ಲಿ ಕಂಡರೂ ದೇವೆಗೌಡಗೆ ಎಂಬ ರೂಪವನ್ನು ಗಮನಿಸಿಲ್ಲ. ಸಾಮಾನ್ಯವಾಗಿ ದೇವೆಗೌಡರಿಗೆ ಎಂಬ ರೂಪ ಬಳಕೆಯಲ್ಲಿದೆ ಅಂದರೆ ಈ 'ಗೆ' ಪ್ರತ್ಯಯ ಸೇರುವ ಹೊಸ ವಿಧಾನ ಕೇವಲ ಪದಾಂತ್ಯದ ಧ್ವನಿಯನ್ನು ಮಾತ್ರ ಅವಲಂಬಿಸಿಲ್ಲ ಎಂದಾಯಿತು.

ಕನ್ನಡದಲ್ಲಿ ಸಪ್ತಮೀ ವಿಭಕ್ತಿ ಪ್ರತ್ಯಯ ಇದೆಯೋ ಇಲ್ಲವೋ ಅಥವಾ ಈಗ ಅದರ ಬದಲು ಪೂರ್ಣವಾಗಿ ಸ್ವತಂತ್ರವಾಗಿರುವ ಪದಗಳನ್ನು ಬಳಸುತ್ತಿದ್ದೇವೆಯೋ ಎಂಬುದು ಚರ್ಚೆಯ ವಿಷಯ. ಆ ವಿಭಕ್ತಿಯ ಕೆಲಸ ಮಾಡಲು 'ಒಳಗೆ' ಮತ್ತು 'ಅಲ್ಲಿ' ಎಂಬ ಪದೋತ್ತರಿಗಳನ್ನು ಬಳಸುತ್ತಿದ್ದೇವೆ. ಈ ಎರಡೂ ರೂಪಗಳು ಸ್ವತಂತ್ರವಾಗಿಯೂ ಬಳಕೆಯಾಗುತ್ತವೆ. ಆದ್ದರಿಂದ ಅವುಗಳನ್ನು ಪ್ರತ್ಯಯಗಳೆಂದು ಹೇಳುವುದು ಕಷ್ಟ. ಆದರೆ ನಮ್ಮ ಗಮನ ಸೆಳೆಯಬೇಕಾದ ಮತ್ತೊಂದು ಅಂಶವೆಂದರೆ ಈ ಪದೋತ್ತರಿಗಳ ಬದಲು ಮತ್ತೊಂದು ಪ್ರತ್ಯಯ ಈಗ ವ್ಯಾಪಕವಾಗಿ ಬಳಕೆಯಾಗುತ್ತಿದೆ. ಇದು 'ಆಗ' ಎನ್ನುವ ಪ್ರತ್ಯಯ. ಚಾರಿತ್ರಿಕವಾಗಿ 'ಆಗ' ಎಂಬ ರೂಪ 'ಆಗಂ' ಎಂಬ ಪದದಿಂದ ನಿಷ್ಪನ್ನವಾಗಿದೆ. ಆಗಂ ಎಂದರೆ ಒಳಗೆ ಎಂದರ್ಥ. ದ್ರಾವಿಡದ ಜ್ಞಾತಿಭಾಷೆಗಳಲ್ಲಿ ಕೆಲವು ಕಡೆ 'ಆಗಂ' ಉಳಿದುಕೊಂಡಿದೆ. ಈ ರೂಪದಿಂದಲೇ ಬೆಳೆದುಬಂದ 'ಆಗ' ರೂಪ ಪ್ರತ್ಯಯವಾಗಿ ತುಂಗಭದ್ರೆಯ ಉತ್ತರದ ಕರ್ನಾಟಕದಲ್ಲಿ ಬಹು ವ್ಯಾಪಕವಾಗಿ ಬಳಕೆಯಲ್ಲಿದೆ. ಮನಿಯಾಗ, ಊರಾಗ, ತಲಿಯಾಗ, ಹೊಲದಾಗ, ಮಾರ್ಕೆಟ್‌ನಾಗ,

ಬಸ್‌ನಾಗ ಈ ರೂಪಗಳು ಈ ಉಪಭಾಷೆಗಳಲ್ಲಿ ಮಾತ್ರ ಇದ್ದವು. ಆದರೆ ಈಚೆಗೆ ಈ 'ಆಗ' ಪ್ರತ್ಯಯ ತುಂಗಭದ್ರೆಯ ದಕ್ಷಿಣದ ಕಡೆಯೂ ಗೋಚರಿಸಲು ಪ್ರಾರಂಭಿಸಿದೆ. ಈ ಚಲನೆ ನಿಧಾನಗತಿಯಲ್ಲಿದೆ. ಹಾಡುಗಳಲ್ಲಿ ಅದು ಕಾಣತೊಡಗಿದೆ. ಮುಂದಿನ ದಶಕಗಳಲ್ಲಿ ಈ ಚಲನೆ ವ್ಯಾಪಕಗೊಂಡು ಈ ಪ್ರತ್ಯಯ ಕನ್ನಡದ ಸಪ್ತಮೀ ವಿಭಕ್ತಿಪ್ರತ್ಯಯವಾಗಿ ನೆಲೆಗೊಳ್ಳುವುದೇ ಎಂಬುದನ್ನು ಕಾಯ್ದುನೋಡಬೇಕು.

ಕನ್ನಡದ ಸಂಧಿಗಳನ್ನು ಲೋಪ, ಆಗಮ ಮತ್ತು ಆದೇಶ ಎಂದು ವಿಭಜಿಸುತ್ತೇವೆ. ಕನ್ನಡಪದಕ್ಕೆ ಕನ್ನಡಪದವೇ ಪರವಾದಾಗ ಈ ಸಂಧಿಗಳು ನಡೆಯುತ್ತವೆ. ಉತ್ತರಪದವು ಸ್ವರದಿಂದ ಮೊದಲಾದರೆ ಲೋಪ ಇಲ್ಲವೇ ಆಗಮ ಸಂಧಿಗಳೂ, ವ್ಯಂಜನ ಇದ್ದರೆ ಸಾಮಾನ್ಯವಾಗಿ ಆದೇಶ ಸಂಧಿಯೂ ನಡೆಯುವುದು. ಇದು ಅಷ್ಟು ಖಚಿತವಾದ ನಿಯಮವಾಗಿ ಉಳಿದಿಲ್ಲ. (ಪೂರ್ವಪದದ ಕೊನೆಯ ಧ್ವನಿಯು ಯಾವುದು ಎನ್ನುವುದೂ ಕೂಡ ಮುಖ್ಯ) ಏಕೆಂದರೆ ಈಚಿನ ದಶಕಗಳಲ್ಲಿ ಕನ್ನಡ ಮತ್ತು ಸಂಸ್ಕೃತ ಪದಗಳನ್ನು ಸೇರಿಸಿ ಸಂಧಿ ಮಾಡುವ ಪ್ರವೃತ್ತಿ ಹೆಚ್ಚಾಗುತ್ತಿದೆ. ಹೀಗಿದ್ದಾಗ ಯಾವ ಭಾಷೆಯ ಸಂಧಿನಿಯಮವನ್ನು ಅನುಸರಿಸಬೇಕು ಎಂಬ ಪ್ರಶ್ನೆ ಎದುರಾಗುತ್ತದೆ. ಉದಾ.ಗೆ ಊಟೋಪಚಾರ ಎಂಬ ರಚನೆಯನ್ನೇ ನೋಡೋಣ. ಇಲ್ಲಿ ಪೂರ್ವಪದ 'ಊಟ'. ಕನ್ನಡದ ಪದ. ಉತ್ತರಪದ ಉಪಚಾರ ಸಂಸ್ಕೃತದ ಪದ. ಊಟೋಪಚಾರ ಪದದಲ್ಲಿ ಸಂಸ್ಕೃತದ ಗುಣಸಂಧಿಯ ನಿಯಮವನ್ನು ಪಾಲಿಸಲಾಗಿದೆ. 'ಅ' ಕಾರಕ್ಕೆ 'ಉ' ಕಾರ ಪರವಾದಾಗ 'ಓ' ಕಾರ ಬರುವುದು ಈ ಸಂಧಿಯ ಒಂದು ಸಾಧ್ಯತೆ. ಅದೇ ಇಲ್ಲೂ ನಡೆದಿದೆ.

ಇಂತಹ ಪ್ರಸಂಗಗಳಲ್ಲಿ ಸಾಮಾನ್ಯವಾಗಿ ಸಂಸ್ಕೃತಸಂಧಿಯ ನಿಯಮಗಳನ್ನೇ ಪಾಲಿಸಲಾಗುತ್ತದೆ ಎಂದು ತಿಳಿಯಬೇಕೋ ಅಥವಾ ಬೇರೆ ಯಾವುದೋ ಒಂದು ಪದರಚನೆಯ ಮಾದರಿಯನ್ನು ಅನುಕರಿಸಿ ಈ ಹೊಸರೂಪಗಳನ್ನು ಸೃಷ್ಟಿಸುತ್ತಾರೆ ಎಂದು ತಿಳಿಯಬೇಕೋ ಎಂಬ ಪ್ರಶ್ನೆ ಎದುರಾಗುತ್ತದೆ. ಇಂತಹ ಪದರಚನೆಗಳು ಸಾಮಾನ್ಯವಾಗಿ ಮಾಧ್ಯಮಗಳಲ್ಲಿ ಬಳಕೆಯಾಗುವುದನ್ನು ಗಮನಿಸುತ್ತೇವೆ. ಅಲ್ಲಿ ಸಂದರ್ಭದ ತುರ್ತಿನಿಂದ ಹೊಸ ಪದಗಳು ರಚನೆಯಾಗಿ ಬಳಕೆಯಾಗುತ್ತವೆ. ಸಂಧಿನಿಯಮಗಳ ಅನ್ವಯವು ಅಲ್ಲಿನ ಮುಖ್ಯ ಕಾಳಜಿಯಾಗಿ ತೋರುವುದಿಲ್ಲ. ಹಾಗಾಗಿ ಅಂತಹುದೇ ರೂಪಗಳನ್ನು ಮಾದರಿಯಾಗಿ ಇರಿಸಿಕೊಂಡು ಅದರ ಹೋಲಿಕೆಯ ಮೇಲೆ ಹೊಸ ಪದಗಳನ್ನು ಪಡೆಯಲಾಗುತ್ತದೆ. ಇದು ಹೆಚ್ಚು ಸಾಧುವಾದ ವಿವರಣೆ ಎಂದು ತಿಳಿಯಬೇಕು. ಇಲ್ಲದಿದ್ದರೆ ಕನ್ನಡೋತ್ಸವ, ಹಸುರೋತ್ಸವ ಎಂಬ ರೂಪಗಳನ್ನು ಬಳಸುವುದು ಸಾಧ್ಯವಾಗುವುದಿಲ್ಲ.

ಇದೇ ಬಗೆಯಲ್ಲಿ ಇನ್ನೂ ಬೇರೆ ಬೇರೆ ಹೊಸ ಪದಗಳನ್ನು ರೂಪಿಸುವುದನ್ನು ನೋಡುತ್ತೇವೆ. ಅದರಲ್ಲೂ ನಿಷೇಧರೂಪಗಳನ್ನು ಅಥವಾ ವಿರುದ್ಧಪದಗಳನ್ನು ಪಡೆಯಲು ಸಂಸ್ಕೃತದ ಉಪಸರ್ಗ ಅಥವಾ ಪೂರ್ವಪ್ರತ್ಯಯವನ್ನು ಬಳಸಲಾಗುತ್ತದೆ. ಸಂಸ್ಕೃತದ

ಅಂಥಾ ಎರಡು ಪ್ರತ್ಯಯಗಳು ಕನ್ನಡದಲ್ಲಿ ಬಳಕೆಯಲ್ಲಿವೆ. ಒಂದು 'ಅ/ಅನ್' ಇನ್ನೊಂದು 'ನಿಃ/ನಿರ್/ನಿಶ್/ನಿಷ್' ಇವೆರಡೂ ಬೇರೆ ಬೇರೆ ಕೆಲಸಗಳನ್ನು ಮಾಡುವ ಪ್ರತ್ಯಯಗಳು. ಗುಣವನ್ನು ಅಲ್ಲಗಳೆಯುವುದು 'ಅ' ಪ್ರತ್ಯಯದ ಕೆಲಸ. ಆದರೆ ಗುಣ ಇಲ್ಲ ಎನ್ನುವುದನ್ನು ಹೇಳುವುದು 'ನಿರ್' ಪ್ರತ್ಯಯದ ಕೆಲಸ. ಉದಾ.ಗೆ ಅಚಲ ಮತ್ತು ನಿಶ್ಚಲ ಎಂಬ ಎರಡು ರೂಪಗಳನ್ನು ನೋಡೋಣ. ಚಲಿಸಬಹುದಾದದ್ದು 'ಚಲ'. ಚಲಿಸಲಾಗದ್ದು ಅಂದರೆ ಎಂದೆಂದೂ ಅಲುಗಾಡದೇ ಇರುವಂಥದ್ದು 'ಅಚಲ'. ಆದರೆ ಚಲಿಸುವ ಸಾಧ್ಯತೆ ಇದ್ದು ಈಗ ಚಲನೆ ಇಲ್ಲದೆ ಸುಮ್ಮನಿರುವುದು ನಿಶ್ಚಲ. ಆದರೆ ಕನ್ನಡದಲ್ಲಿ ಈ ಎರಡು ಪ್ರತ್ಯಯಗಳನ್ನು ಬೇರೆ ಬೇರೆಯಾಗಿ ಇರಿಸಿಕೊಳ್ಳುವ ಬದಲಿಗೆ ಇವೆರಡೂ ಪ್ರತ್ಯಯಗಳ ಕೆಲಸವನ್ನು ಒಂದೇ ಪ್ರತ್ಯಯದಿಂದ ನಿರ್ವಹಿಸುತ್ತಿರುವುದು ಕಂಡು ಬರುತ್ತದೆ. ಅಂದರೆ 'ಅ' ಮತ್ತು 'ನಿರ್'ಗಳನ್ನು 'ಅ' ಪ್ರತ್ಯಯದ ವ್ಯಾಪ್ತಿಯಲ್ಲೇ ಇರಿಸಲಾಗಿದೆ. ಸಂಸ್ಕೃತದಿಂದ ಎರವಲು ಪಡೆಯದೆ ಕನ್ನಡದಲ್ಲೇ ಹೊಸದಾಗಿ ನಿಷೇದರೂಪಗಳನ್ನು ತಯಾರು ಮಾಡಿಕೊಳ್ಳಬೇಕಾಗಿಬಂದಾಗ 'ಅ' ಪ್ರತ್ಯಯವನ್ನು ಮಾತ್ರ ಬಳಸುತ್ತಾರೆ. ಹೀಗೆ ಈ ಪ್ರತ್ಯಯ ಸೇರಬೇಕಾದ ರೂಪ ಸಂಸ್ಕೃತದ್ದೇ ಆಗಿರಬೇಕು ಎಂಬ ನಿಯಮವನ್ನು ಇಟ್ಟುಕೊಂಡಿಲ್ಲ. ಕನ್ನಡದ ಪದಗಳಿರಲಿ, ಕೆಲವೊಮ್ಮೆ ಅನ್ಯಮೂಲದ ಪದಗಳಿಗೂ ಈ ಪ್ರತ್ಯಯವನ್ನು ಹತ್ತಿಸುವುದುಂಟು. ಉದಾ.ಗೆ ಹಿಂದಿಯಲ್ಲದ್ದು ಎಂದು ಹೇಳಬೇಕಾದಾಗ 'ಅಹಿಂದಿ' ಎನ್ನುವುದು. ಹಾಗೆಯೇ 'ಅದಲಿತ' ಎಂಬ ಪದವನ್ನು ಬಳಸಲಾಗಿದೆ. ಇಂತಹ ರಚನೆಗಳನ್ನು ಗಮನಿಸಿದಾಗ ಪದರಚನೆಯ ನಿಯಮಗಳನ್ನು ಅರಿತು ಅದಕ್ಕನುಗುಣವಾಗಿ ಹೊಸಪದಗಳನ್ನು ರೂಪಿಸುತ್ತಿದ್ದಾರೆ ಎಂದು ತಿಳಿಯುವುದು ಕಷ್ಟ. ಬಹುಮಟ್ಟಿಗೆ ಪ್ರಚಲಿತವಿರುವ ಒಂದು ರೂಪವನ್ನು ಮಾದರಿಯಾಗಿಟ್ಟುಕೊಂಡು ಅದಕ್ಕೆ ಸಮಾನ ರಚನೆಯ ನೆಲೆಯಲ್ಲಿ ಮತ್ತೊಂದು ರೂಪವನ್ನು ಸೃಷ್ಟಿಸುವುದು ಒಂದು ಮುಖ್ಯ ಪ್ರವೃತ್ತಿಯಾಗಿದೆ. ಇತರ ವ್ಯಾಕರಣ ಮುಂತಾದ ಪ್ರತ್ಯಯಗಳನ್ನು ಬಳಸಿ ಹೀಗೆಯೇ ಹೊಸ ಪದಗಳನ್ನು ರಚಿಸುತ್ತಿರುವುದು ಮಾಧ್ಯಮಗಳಲ್ಲಿ ಧಾಳಾಗಿ ಕಂಡು ಬರುವ ಪ್ರವೃತ್ತಿ.

**ವಾಕ್ಯರಚನೆಯ ನೆಲೆ:** ವಾಕ್ಯರಚನೆಯ ನೆಲೆಯಲ್ಲಿ ಹೊಸ ಪ್ರವೃತ್ತಿಗಳು ಕಂಡುಬರುತ್ತಿರುವ ಬಗೆಗೆ ನಡೆದಿರುವ ಅಧ್ಯಯನಗಳು ತೀರಾ ಕಡಿಮೆ. ಸಾಮಾನ್ಯವಾಗಿ ವಾಕ್ಯದ ಅಂತಸ್ಥ ನಿಯಮಗಳನ್ನು ಯಾರೂ ಬದಲಾಯಿಸಲಾರರು. ಆದರೆ ಆ ನಿಯಮಗಳನ್ನು ಬಳಸಿ ರಚಿಸಿದ ವಾಕ್ಯಗಳ ಹೊರರೂಪವನ್ನು ಅಗತ್ಯಕ್ಕನುಸಾರವಾಗಿ ಮಾರ್ಪಡಿಸಿಕೊಳ್ಳುವ ಸ್ವಾತಂತ್ರ ಭಾಷಿಕರಿಗೆ ಇರುತ್ತದೆ. ಕನ್ನಡದಲ್ಲಿ ಒಂದಕ್ಕಿಂತ ಹೆಚ್ಚು ಕ್ರಿಯಾಪದಗಳನ್ನು ಹೊಂದಿರುವ ಸಂಯೋಜಿತ ವಾಕ್ಯಗಳನ್ನು ಈಗ ಹೆಚ್ಚಿನ ಪ್ರಮಾಣದಲ್ಲಿ ಬರೆವಣಿಗೆಯಲ್ಲಿ ರಚಿಸಲಾಗುತ್ತಿದೆ. ಹೀಗೆ ಕ್ರಿಯಾಪದಗಳು ಹೆಚ್ಚು ಸಂಖ್ಯೆಯಲ್ಲಿ ಇರುವಾಗ ಸಾಮಾನ್ಯವಾಗಿ ಅವು ವಾಕ್ಯದಲ್ಲಿ ಬರುವ ಅನುಕ್ರಮವನ್ನು ನಿಯಂತ್ರಿಸುವ ನಿಯಮಗಳು ಕೆಲವು ಇರುತ್ತವೆ. ಸಾಮಾನ್ಯವಾಗಿ ಪೂರ್ಣಕ್ರಿಯಾಪದವು ವಾಕ್ಯದ ಪ್ರಧಾನ ಅಂಶವೆಂದು ನಾವು ತಿಳಿದರೂ, ಸಂಯೋಜಿತ ವಾಕ್ಯಗಳಲ್ಲಿ ಗಮನ ಸೆಳೆಯಬೇಕಾದ ಅಂಶಗಳನ್ನು

ವಾಕ್ಯದ ಮೊದಲಲ್ಲಿ ತಂದು ಅನಂತರ ಪ್ರಧಾನ ಕ್ರಿಯಾಪದವನ್ನು ಅದೆಷ್ಟೇ ಮುಖ್ಯವಾಗಿದ್ದರೂ ವಾಕ್ಯದ ಕೊನೆಗೆ ತರುವ ಪ್ರವೃತ್ತಿ ಈಚೆಗೆ ಹೆಚ್ಚಾಗುತ್ತಿದೆ. ನಿದರ್ಶನಕ್ಕಾಗಿ ಒಂದು ವಾಕ್ಯವನ್ನು ಗಮನಿಸಿ. "ಕಾಲ್‌ಸೆಂಟರ್ ಉದ್ಯೋಗಿ ಪ್ರತಿಭಾ ಹತ್ಯೆಯ ಪ್ರಕರಣದ ನೆನಪು ಇನ್ನೂ ಹಸಿರಾಗಿರುವಾಗಲೇ ಮತ್ತೊಬ್ಬ ಕಾಲ್‌ಸೆಂಟರ್ ಉದ್ಯೋಗಿಯನ್ನು ಕೊಲೆ ಮಾಡಲಾಗಿದೆ." ಈ ವಾಕ್ಯದಲ್ಲಿ ಈಚಿನ ಘಟನೆಯೊಂದನ್ನು ವರದಿ ಮಾಡಬೇಕಾಗಿದೆ. ಆದರೆ ಈ ಹಿಂದೆ ನಡೆದ ಘಟನೆಯೊಂದನ್ನು ವಾಕ್ಯದ ಮೊದಲಲ್ಲಿ ಉಲ್ಲೇಖಿಸಲಾಗಿದೆ. ಈ ವಾಕ್ಯದ ಉದ್ದೇಶ ಮತ್ತು ದೃಷ್ಟಿಕೋನಗಳ ಮಾತು ಪ್ರತ್ಯೇಕ ಚರ್ಚೆಯನ್ನು ಬಯಸುತ್ತದೆ. ನಮಗಿಲ್ಲಿ ಎರಡು ಕ್ರಿಯೆಗಳನ್ನು ವಾಕ್ಯರಚನೆಯಲ್ಲಿ ಜೋಡಿಸಿರುವ ಕ್ರಮ ಮುಖ್ಯ. ಈಚಿನ ಕನ್ನಡದಲ್ಲಿ ಈ ಬಗೆಯ ರಚನೆಗಳು ತುಂಬಾ ಹೆಚ್ಚಾಗುತ್ತಿವೆ.

## ಕೋಶೀಯ ಪದ ರಚನೆಗಳು

ಭಾಷೆಯಲ್ಲಿ ಪದಗಳಿರುವಂತೆ ಪದರಚನೆಗಳೂ ಇರುತ್ತವೆ. ಈ ಪದರಚನೆಗಳಲ್ಲಿ ಎರಡು ಬಗೆಗಳು. ಒಂದು ಬಗೆಯ ಪದರಚನೆಗಳು ನಾವು ಭಾಷೆಯನ್ನು ಬಳಸುವಾಗ ನಿರ್ಮಾಣಗೊಳ್ಳುತ್ತವೆ. ಮತ್ತೊಂದು ಬಗೆಯವು ಮೊದಲೇ ನಮ್ಮ ಪದಕೋಶದ ಭಾಗವಾಗಿ ಸೇರಿ ಹೋಗಿರುತ್ತವೆ. ಮೊದಲ ಬಗೆಗೆ ಪುಸ್ತಕಗಳು, ಓದುವಿಕೆ, ದುಷ್ಟತನ ಮುಂತಾದ ಪದರಚನೆಗಳು ನಿದರ್ಶನವಾಗುತ್ತವೆ. ಏಕೆಂದರೆ ನಮಗೆ ಪುಸ್ತಕ, ಓದು, ದುಷ್ಟ ಎಂಬ ರೂಪಗಳು (ನಾಮರೂಪಗಳು, ಕ್ರಿಯಾಧಾತುಗಳು, ಗುಣವಾಚಕಗಳು) ಮತ್ತು –ಗಳು, –ಇಕೆ ಮತ್ತು –ತನ ಎಂಬ ಪ್ರತ್ಯಯಗಳು ತಿಳಿದಿರುತ್ತವೆ. ಜತೆಗೆ ಆ ಪ್ರತ್ಯಯಗಳನ್ನು ಹೇಗೆ ಬಳಸಬೇಕೆಂಬ ನಿಯಮಗಳು ಗೊತ್ತಿರುತ್ತವೆ. ಮುಂದೆ ನಮಗೆ ಬೇಕಾದ ರೂಪಗಳನ್ನು ನಾವೇ ರಚಿಸಿಕೊಳ್ಳುತ್ತೇವೆ. ಇದರಿಂದ ಈ ಬಗೆಯ ರಚನೆಗಳು ವಿವೃತ ವರ್ಗಕ್ಕೆ ಸೇರುತ್ತವೆ. ಅಂದರೆ ಹೊಸ ಹೊಸ ರಚನೆಗಳು ಯಾವಾಗಲೂ ಸಾಧ್ಯವಿರುತ್ತವೆ. ಇನ್ನೊಂದು ಬಗೆಯ ಪದರಚನೆಗಳಿಗೆ ಹರಕೆ, ಚಾಚು, ಬಾಚು, ಕೋರಿಕೆ ಮುಂತಾದವು ನಿದರ್ಶನಗಳು. ಈ ರಚನೆಗಳಲ್ಲಿ ಪ್ರಕೃತಿ, ಪ್ರತ್ಯಯಗಳು ಸೇರಿದ್ದರೂ ಭಾಷಿಕರಿಗೆ ಅವು ಯಾವುವು ಎಂಬುದು ತಿಳಿದಿರುವುದಿಲ್ಲ. ಇಡೀ ರಚನೆಗಳೇ ಅವರಲ್ಲಿ ಸಂಗ್ರಹಗೊಂಡಿರುತ್ತವೆ. ಇಂಥ ರಚನೆಗಳ ಗುಂಪಿಗೆ ಮನೆಮಠ, ಕಾಳುಕಡ್ಡಿ, ಪಾಲುಪಾರಿಕತ್ತು, ಕೆಲಸಬೊಗಸೆ ಮುಂತಾದ ಜೋಡುನುಡಿಗಳೂ ಸೇರುತ್ತವೆ. ಇಂಥ ಉಕ್ತಿಗಳನ್ನು ಭಾಷಿಕರು ನೆನಪಿನಲ್ಲಿ ಇರಿಸಿಕೊಂಡಿದ್ದು ಬಳಸುತ್ತಾರೆ. ತಾವೇ ರಚಿಸುವುದಿಲ್ಲ.

ಅದಕ್ಕೆ ಬೇಕಾದ ಪದರಚನೆಯ ನಿಯಮಗಳೂ ಅವರಿಗೆ ಗೊತ್ತಿರುವುದಿಲ್ಲ. ಈ ಗುಂಪಿನ ಪದರಚನೆಗಳಿಗೆ ನಾವು ಗಾದೆಗಳು, ವಾಗ್ರೂಢಿಗಳು, ನುಡಿಗಟ್ಟುಗಳನ್ನು ಸೇರಿಸಬಹುದು. ಇವೆಲ್ಲವೂ ಇಡಿ ಇಡಿಯಾಗಿ ಭಾಷಿಕರ ನೆನಪಿನಲ್ಲಿ ಇರಬೇಕಾಗುತ್ತದೆ.

ಮೊದಲ ಗುಂಪಿನ ಪದರಚನೆಗಳು ಭಾಷಿಕರ ನೆನಪಿನ ಭಾಗವಲ್ಲ; ಸಾಮಗ್ರಿಗಳು ಮತ್ತು ನಿಯಮಗಳು ಗೊತ್ತಿದ್ದರೆ ಅಸಂಖ್ಯಾತ ಪದರಚನೆಗಳು ಭಾಷೆಯ ಬಳಕೆಯೊಡನೆ ಸಿದ್ಧಗೊಳ್ಳುತ್ತವೆ. ಮತ್ತೆ ಬೇರೆಯವರು ತಮಗೆ ಬೇಕಾದಾಗ ಅಂಥ ರೂಪಗಳನ್ನು ತಾವೇ ರಚಿಸಿಕೊಳ್ಳುತ್ತಾರೆ. ಆದರೆ ಎರಡನೇ ಗುಂಪಿನ ಪದರಚನೆಗಳನ್ನು ನೆನಪಿನಲ್ಲಿ ಇರಿಸಿಕೊಳ್ಳಬೇಕು. ಮತ್ತು ಅವನ್ನು ಬಳಸುವ ಸೂಕ್ತ ಸಂದರ್ಭಗಳನ್ನು ತಿಳಿದಿರಬೇಕು. ಇದು ಭಾಷಾ ಕಲಿಕೆ ಮತ್ತು ಬಳಕೆಯ ಒಂದು ಅತಿಮುಖ್ಯ ನೆಲೆಯಾಗಿದೆ. ಅನೌಪಚಾರಿಕ

ಕಲಿಕೆಯಲ್ಲಿ ಇಂಥ ಪದರಚನೆಗಳು ದಕ್ಕುತ್ತವೆ. ಮತ್ತು ಬಳಕೆಯ ಸಂದರ್ಭಗಳೂ ಪರಿಚಿತವಾಗುತ್ತವೆ. ಔಪಚಾರಿಕ ಕಲಿಕೆಯಲ್ಲಿ ಇವು ಸಿಗುವುದು ಕಡಿಮೆ. ಬಳಕೆಯ ರೀತಿಯಂತೂ ತಿಳಿಯುವುದಿಲ್ಲ. ಉದಾ.ಗೆ ಪಿ.ಯು.ಸಿ ತರಗತಿಯ ಕನ್ನಡದಲ್ಲಿ ಒಂದು ಗಾದೆ ಮಾತನ್ನು ವಿವರಿಸಲು ಹೇಳುವುದು ಪ್ರಶ್ನೆ ಪತ್ರಿಕೆಯ ಒಂದು ಭಾಗ. ಗಾದೆಗಳ ಅರ್ಥ ಏನೆಂಬುದನ್ನು ವಿದ್ಯಾರ್ಥಿಗಳು ಕಲಿಯುವುದು ಇದರಿಂದ ಸಾಧ್ಯವಾಗುವುದು. ಆದರೆ ಆ ಗಾದೆ ಮಾತನ್ನು ತಮ್ಮ ಕನ್ನಡ ಬಳಕೆಯಲ್ಲಿ ಸೇರಿಸಿಕೊಳ್ಳುವುದು ಅವರಿಗೆ ಸಾಧ್ಯವಾಗುವುದಿಲ್ಲ.

ಮೊದಲ ಗುಂಪಿನ ಪದರಚನೆಗಳು ಕೋಶೋತ್ತರಿಗಳು. ಏಕೆಂದರೆ ಅವು ಪದಕೋಶದ ಭಾಗಗಳಲ್ಲ. ಎರಡನೆಯ ಗುಂಪಿನವು ಕೋಶೀಯ. ಈ ಕೋಶೀಯ ಪದ ರಚನೆ (ಕೋಪರ)ಗಳ ಬಳಕೆ ಕೂಡ ಕೆಲವು ಶರತ್ತುಗಳಿಗೆ ಅನುಗುಣವಾಗಿದೆ. ಅವು ಹೆಚ್ಚಾಗಿ ಬಳಕೆಯಾಗುವುದು ಮಾತಿನಲ್ಲಿ. ಬರೆವಣಿಗೆಯಲ್ಲಿ ಬರುವುದು ಕಡಿಮೆ. ಬಂದರೂ ಮಾತು ಬರೆವಣಿಗೆಯಾಗಿ ಮೈ ತಳೆದಾಗ ಮಾತ್ರ. ಉದಾ.ಗೆ ನಾಟಕಗಳ ಸಂಭಾಷಣೆಯಲ್ಲಿ ಮತ್ತು ಕಥಾಸಾಹಿತ್ಯದಲ್ಲಿ ಪಾತ್ರಗಳು ಮಾತನಾಡುವಾಗ ಸಾಮಾನ್ಯವಾಗಿ ಭಾಷೆಯಲ್ಲಿ 'ಒಳ್ಳೆಯ' ಮಾತುಗಾರರೆಂದರೆ ಈ ಕೋಪರ(ಪದರಚನೆ)ಗಳನ್ನು ಸೂಕ್ಷ್ಮವಾಗಿ ಬಳಸುವವರೇ ಆಗಿರುತ್ತಾರೆ.

ನಮ್ಮ ಔಪಚಾರಿಕ ಭಾಷಾಕಲಿಕೆಯಲ್ಲಿ ಈ ಕೋಪರಗಳು ನಿರ್ಲಕ್ಷ್ಯಕ್ಕೆ ಒಳಗಾಗುತ್ತಿವೆ. ಇವುಗಳ ಅರ್ಥ, ಸ್ವರೂಪ, ಲಕ್ಷಣಗಳನ್ನು ತಿಳಿಸಿಕೊಡಲಾಗುತ್ತದೆ. ಆದರೆ ಬಳಕೆ ಮಾತ್ರ ಗೊತ್ತಾಗುತ್ತಿಲ್ಲ. ಆದ್ದರಿಂದ ನಮ್ಮ ಪದಕೋಶದಲ್ಲಿ ಈ ಕೋಪರಗಳು ಸೇರುತ್ತಲೇ ಇಲ್ಲ. ಅಥವಾ ಸೇರಿದರೂ ಅವು ಬಳಕೆಯಾಗದೆ ನಮ್ಮ ನೆನಪಿನ ಯಾವುದೋ ಭಾಗದಲ್ಲಿ ಹುದುಗಿ ಹೋಗುತ್ತಿವೆ. ಭಾಷೆಯ ವಿವಿಧ ಬಳಕೆಗಳಿಗೆ ನಮ್ಮನ್ನು ತೆರೆದುಕೊಂಡರೆ ಆಗ ಈ ಕೋಪರಗಳು ಕೇಳಿಸಬಹುದು ಅಥವಾ ಅವನ್ನು ಓದಬಹುದು. ಕನ್ನಡದಲ್ಲಿ ಇಂಥ ಕೋಪರಗಳ ಬಳಕೆ ಕುಗ್ಗುತ್ತಿರುವುದು ಕಂಡುಬರುತ್ತಿದೆ. ಮತ್ತು ಭಾಷಿಕರ ಪದಕೋಶದಲ್ಲೂ ಇವು ಸೇರುತ್ತಿಲ್ಲ. ಬಳಕೆಯಲ್ಲಿ ಬಾರದಿರುವುದು ಮತ್ತು ಪದಕೋಶದಲ್ಲಿ ಸೇರದಿರುವುದು ಇವೆರಡೂ ಪರಸ್ಪರ ಅವಲಂಬಿತ ಸಂಗತಿಗಳಾಗಿವೆ. ಭಾಷಾಕಲಿಕೆಯ ಯೋಜಕರು ಈ ದಿಕ್ಕಿನಲ್ಲಿ ಚಿಂತಿಸುವುದು ಅಗತ್ಯವಾಗಿದೆ.

# ಚರಿತ್ರೆ, ಭಾಷೆ ಮತ್ತು ನೆನಪು

ಕೆಲವು ವರುಷಗಳ ಹಿಂದೆ ಕನ್ನಡ ವಿಶ್ವವಿದ್ಯಾಲಯದಲ್ಲಿ ನಡೆದ ಚರಿತ್ರೆಯ ಅಧ್ಯಾಪಕರ ಪುನರ್ಮನನ ಶಿಬಿರವೊಂದರಲ್ಲಿ 'ಚರಿತ್ರೆ ಮತ್ತು ಭಾಷೆ' ಎನ್ನುವ ವಿಷಯವನ್ನು ಕುರಿತು ಮಾತನಾಡಲು ಆ ಶಿಬಿರದ ಸಂಚಾಲಕರು ನನ್ನನ್ನು ಕೇಳಿದರು. ಹಾಗೆ ಕೇಳುವಾಗ ಅವರ ಉದ್ದೇಶವೇನಿತ್ತೋ ನನಗೆ ತಿಳಿಯದು. ಅಲ್ಲಿ ಮಾತಾಡುತ್ತ ಚರಿತ್ರೆಯಲ್ಲಿ ಎರಡು ಪದರುಗಳಿರುತ್ತವೆಂದೂ, ಅವುಗಳಲ್ಲಿ ಒಂದು ಪದರು ನಡೆದ ಘಟನೆಗಳ ಸರಣಿಯಾದರೆ ಎರಡನೆಯ ಪದರ ಆ ಘಟನೆಗಳನ್ನು 'ಬಣ್ಣಿಸುವ'(ನಿರೂಪಿಸು) ವುದಾಗಿರುತ್ತದೆಂದು ಹೇಳಿದೆ. ನಾವು ಸಾಮಾನ್ಯವಾಗಿ ಎರಡನೆಯ ಪದರವನ್ನೇ ಚರಿತ್ರೆ ಎಂದು ತಿಳಿದು ವ್ಯವಹರಿಸುತ್ತೇವೆ. ಅಂದರೆ ನಡೆದ ಘಟನೆಗಳ ಭಾಷಿಕ ಬಣ್ಣನೆಯ ನೆಲೆಯೇ ಚರಿತ್ರೆ ಎಂದಾಯ್ತು. ಹಾಗಾಗಿ ಭಾಷೆ ಕಟ್ಟಿಕೊಡುವ ವಾಸ್ತವವನ್ನೇ ನಾವು ಚರಿತ್ರೆ ಎಂದು ತಿಳಿಯುತ್ತಿದ್ದೇವೆ. ಹಾಗಾಗಿ ಚರಿತ್ರೆ ಇರುವುದು ಭಾಷೆಯಲ್ಲಿಯೇ ಎಂದಾಯಿತು. ಈ ವಾದ ಸರಣಿ ಅಲ್ಲಿದ್ದ ಅಧ್ಯಾಪಕರಿಗೆ ಒಪ್ಪಿಗೆಯಾಗಲಿಲ್ಲ. ಅವರೆಲ್ಲ ಭಾಷೆ ಎಂಬುದು ವಾಹಕ; ಸಾಧನ. ಅದನ್ನು ಬಳಸಿ ನಡೆದ ಘಟನಾವಳಿಗಳನ್ನು ಬಣ್ಣಿಸುತ್ತೇವೆ ಎಂದು ತಿಳಿದವರು ಮತ್ತು ಆ ವಾದ ಸರಣಿಯನ್ನು ಒಪ್ಪಿಕೊಂಡು ಬಂದವರು. ಅವರಿಗೆ ಭಾಷೆಯೇ ವಾಸ್ತವವನ್ನು ಹುಟ್ಟಿಹಾಕುತ್ತದೆ ಎನ್ನುವ ವಾದ ಒಪ್ಪಿಗೆಯಾಗದಿರುವುದರಲ್ಲಿ ಅಚ್ಚರಿಯೇನೂ ಇಲ್ಲ. ಅಲ್ಲಿಗೆ ಅದು ಮುಗಿದು ಮರವೆಗೆ ಸಂದಿತು.

ಮತ್ತೆ ಕೆಲವು ವರುಷ ಕಳೆದ ಮೇಲೆ ಚರಿತ್ರೆಗೂ ನೆನಪುಗಳಿಗೂ ಇರುವ ನಂಟನ್ನು ಕುರಿತು ಯೋಚಿಸುವಾಗ ನೆನಪುಗಳು ಯಾವ ಬಗೆಯಲ್ಲಿ ಇರುತ್ತವೆ ಎಂಬ ಪ್ರಶ್ನೆ ಮುಂದಾಯಿತು. ಸಾಮುದಾಯಿಕ ನೆನಪುಗಳ ಬಗೆಗೆ ಮಾತಾಡೋಣ. ಘಟನಾವಳಿಗಳಲ್ಲಿ ಪಾಲ್ಗೊಂಡು ಅದರ ನೆನಪನ್ನು ಹೊತ್ತಿರುವವರು ಕೆಲವರಾದರೆ ಪಾಲುದಾರರಾಗದಿದ್ದರೂ ಘಟನಾವಳಿಗಳ ಭಾಷಿಕ ನಿರೂಪಣೆಗಳನ್ನು ಕೇಳಿ ಅದನ್ನು ತಮ್ಮ ನೆನಪಿನ ಭಾಗವನ್ನಾಗಿ ಮಾಡಿಕೊಂಡವರು ಹಲವರು. ಭಾಷಿಕ ನಿರೂಪಣೆಗಳ ನೆನಪುಗಳಿಗೂ ಚರಿತ್ರೆಗೂ ನಿಕಟವಾದ ಸಂಬಂಧವಿದೆ. ಈ ಬಗೆಗೆ ಮುಂದೆ ಚರ್ಚಿಸೋಣ. ಈ ಹಂತದಲ್ಲಿ ಚರಿತ್ರೆಗೂ ಭಾಷೆಗೂ ಇರುವ ನಂಟನ್ನು ಕುರಿತ ಪ್ರಶ್ನೆ ಮತ್ತೆ ಮುಂಚೂಣಿಗೆ ಬಂತು. ಇದನ್ನು ಕೆಲವು ಉದಾಹರಣೆಗಳನ್ನು ಬಳಸಿ ಪರಿಶೀಲಿಸೋಣ.

ಮೊದಲ ಉದಾಹರಣೆ ಕನ್ನಡ ನಾಡಿನ ಶಾಸನ. ಇದು ಸುಮಾರು ಏಳನೆಯ ಶತಮಾನದ್ದು. ಶ್ರವಣಬೆಳಗೊಳದಲ್ಲಿ ದೊರಕಿದೆ. ಶಾಸನದ ಪಾಠ ಹೀಗಿದೆ.

**ಸುರಚಾಪಂಬೋಲೆ ವಿದ್ಯುಲ್ಲತೆಗಳ ತೆರವೋಲ್ ಮಂಜುವೋಲ್ ತೋರಿ ಬೇಗಂ**
**ಪಿರಿಗುಂ ಶ್ರೀ ರೂಪ ಲೀಲಾ ವಿಭವ ಮಹಾರಾಶಿಗಳ್ ನಿಲ್ಲವಾರ್ಗ್ಗಂ**
**ಪರಮಾರ್ತ್ಥಂ ಮೆಚ್ಚೆ ನಾನ್ ಈ ಧರಣಿಯುಳ್ ಇರವಾನ್ ಎನ್ದು ಸನ್ಯಾಸನಂ ಗೆ**
**ಯ್ದುರುಸತ್ವನ್ ನನ್ದಿಸೇನ ಪ್ರವರ ಮುನಿವರನ್ ದೇವಲೋಕಕ್ಕೆ ಸನ್ದಾನ್**

ಈ ಶಾಸನದಲ್ಲಿ ಇಬ್ಬರು ವ್ಯಕ್ತಿಗಳ ದನಿ ಇದೆ. ಒಂದು ಈ ಶಾಸನವನ್ನು ನಿರೂಪಿಸಿದವರ ದನಿ. ಈ ವ್ಯಕ್ತಿ ನಂದಿಸೇನ ಮುನಿಯನ್ನು ಕಂಡಿರಬಹುದೆಂದು ಸದ್ಯಕ್ಕೆ ಊಹಿಸೋಣ. ಎರಡನೆಯ ದನಿ ನಂದಿಸೇನ ಮುನಿಯದ್ದು. ಎರಡನೆಯ ದನಿ ಕೂಡ ನಮಗೆ ನಿರೂಪಿಸಿದವರ ದನಿಯ ಮೂಲಕ ದೊರಕುತ್ತಿದೆ. ನಡೆದ ಘಟನೆಗಳಲ್ಲಿ ಎರಡು ಮಾತ್ರ ಭಾಷೆಗೆ ಸಂಬಂಧ ಪಡದೇ ಇರುವಂತಹವು. ಒಂದು: ನಂದಿಸೇನ ಮುನಿ ಎಂಬಾತ ಸಲ್ಲೇಖನ ವ್ರತವನ್ನು ಮಾಡಿದ್ದು. ಮತ್ತು ಎರಡು: ಆತ ತನ್ನ ದೇಹವನ್ನು ಮುಡಿಪಿಟ್ಟು ತೀರಿಕೊಂಡದ್ದು. ಉಳಿದ ಹಲವು ಸಂಗತಿಗಳು ನೇರವಾಗಿ ಭಾಷೆಗೆ ಸಂಬಂಧಿಸಿವೆ. ನಂದಿಸೇನ ಮುನಿ ದೇವಲೋಕಕ್ಕೆ ಸಂದನು ಎನ್ನುವುದು ಕನ್ನಡ ಮಾತಿನ ವರಸೆ. ಸಾವನ್ನು ಬಣ್ಣಿಸುವ ಹಲವು ಪರಿಗಳಲ್ಲಿ ಇದೂ ಒಂದು. ಇನ್ನು ನಿರೂಪಕರ ದನಿಗೆ ಬರೋಣ. ಆ ದನಿ ನಂದಿಸೇನ ಮುನಿ ಸಲ್ಲೇಖನ ವ್ರತವನ್ನು ಕೈಗೊಳ್ಳಲು ಇದ್ದ ಕಾರಣಗಳನ್ನು ಹುಡುಕುತ್ತಿದೆ. 'ಈ ಧರಣಿಯಲ್ಲಿ ನಾನು ಇರುವುದಿಲ್ಲ' ಎಂದು ನಂದಿಸೇನ ಮುನಿ ಹೇಳಿಕೊಂಡನೆಂದು ನಿರೂಪಕ ದನಿ ನಮಗೆ ತಿಳಿಸುತ್ತಿದೆ. ನಂದಿಸೇನ ಮುನಿ ಹಾಗೆ ಹೇಳಿದ್ದನ್ನು ಈ ನಿರೂಪಕ ಕೇಳಿದ್ದಿರಲೂಬಹುದು. ಇಲ್ಲವೇ ಹಾಗೆ ಹೇಳಿದ್ದಿರಬಹುದೆಂದು ನಿರೂಪಕ ದನಿ ಕಲ್ಪಿಸಿಕೊಳ್ಳುತ್ತಿರಲೂ ಬಹುದು. ಹೇಗಿದ್ದರೂ ನಂದಿಸೇನ ಮುನಿಯ ನಿರ್ಣಯ ಕೂಡ ಒಂದು ಭಾಷಿಕ ಹೇಳಿಕೆಯಾಗಿದೆ. ಹೀಗೆ ನಿರ್ಣಯ ಕೈಗೊಳ್ಳುವುದಕ್ಕೆ ಕಾರಣಗಳನ್ನು ಕೂಡ ಹೇಳಲಾಗಿದೆ. ಈ ಜಗತ್ತು ನಶ್ವರವಾದದ್ದು, ಇಲ್ಲಿ ಯಾವುದೂ ಶಾಶ್ವತವಾದುದಲ್ಲ ಎಂಬುದನ್ನು ತಿಳಿದ ನಂದಿಸೇನ ಮುನಿ ಈ ನಿರ್ಣಯಕ್ಕೆ ಬಂದನು. ಇದು ಶಾಶ್ವತವಲ್ಲ ಎಂಬು ತಿಳಿಯಲು ಆತನಿಗೆ ಆದ ಅನುಭವಗಳೇ ಕಾರಣ. ಮಳೆಬಿಲ್ಲು, ಮಿಂಚು ಮತ್ತು ಮಂಜು ಇವೆಲ್ಲವೂ ತೋರಿ ಕರಗುವಂತೆ ಸಂಪತ್ತು, ರೂಪ, ವೈಭವಗಳೂ ಕೂಡ ತೋರಿ ಮರೆಯಾಗುತ್ತವೆ. ಆದ್ದರಿಂದ ಈ ಜಗತ್ತಿನಲ್ಲಿ ಇರುವುದು ಅಗತ್ಯವಿಲ್ಲವೆಂದು ನಂದಿಸೇನ ನಿರ್ಣಯಿಸಿದನೆಂದು ನಿರೂಪಕ ದನಿ ಹೇಳುತ್ತದೆ. ಇದು ನಿರೂಪಕ ದನಿಯ ವಿವರಣೆಯೋ ಅಥವಾ ನಂದಿಸೇನ ಮುನಿಯ ಅನುಭವವೋ ತಿಳಿಯದು. ನಂದಿಸೇನ ಮುನಿಯ ಅನುಭವವೇ ಆಗಿದ್ದರೂ ಮಳೆಬಿಲ್ಲು, ಮಿಂಚು, ಮಂಜುಗಳು ತೋರಿ ಮರೆಯಾಗುವ ಬಿಡಿಬಿಡಿ ಅನುಭವಗಳು ಆಗುವುದಕ್ಕೂ ಆ ಅನುಭವಗಳನ್ನು ಸಂಪತ್ತು, ರೂಪ ವೈಭವಗಳ ನಾಶಕ್ಕೂ ಹೋಲಿಸುವುದಕ್ಕೂ ಭಾಷೆಯ ನೆರವು ಬೇಕೇ ಬೇಕು. ಅಂದರೆ ಇಡೀ ಘಟನಾವಳಿಯ ಆಕಾರ ಭಾಷಿಕವಾಗಿ ಮಾತ್ರ ನಿಜ. ಇದನ್ನು

ನಂದಿಸೇನ ಮುನಿಯ ನಿಟ್ಟಿನಲ್ಲಿ ನೋಡಿ ಇಲ್ಲವೇ ನಿರೂಪಕ ದನಿಯ ನಿಟ್ಟಿನಲ್ಲಿ ನೋಡಿ, ಹೇಗೆ ನೋಡಿದರೂ ಭಾಷೆಯ ಪಾತ್ರ ಸ್ಪಷ್ಟವಾಗಿದೆ.

ಈ ಉದಾಹರಣೆಯನ್ನು ನೀಡಿದ್ದರ ಉದ್ದೇಶ ಈಗ ಸ್ಪಷ್ಟವಾಗಿದೆ ಎಂದುಕೊಳ್ಳುತ್ತೇನೆ. ಉಪವಾಸವಿದ್ದು ಜೀವ ಬಿಟ್ಟ ಘಟನೆಯನ್ನು ಬಣ್ಣಿಸುವಾಗ ಅದು ನಡೆದ ಘಟನೆಯನ್ನು ಹೇಳದೆ, ಅದಕ್ಕಿರುವ ಕಾರಣಗಳನ್ನು ಭಾಷಿಕವಾಗಿ ಮಂಡಿಸುವ ಹಾದಿ ಇಲ್ಲಿದೆ. ಚರಿತ್ರೆ (ಅಂದರೆ ಚರಿತ್ರೆಯ ಬರೆವಣಿಗೆ) ಕಾರ್ಯಕಾರಣ ಸಂಬಂಧಗಳನ್ನು ಹುಡುಕುವ ಗುರಿಯನ್ನು ಹೊಂದಿರುವುದರಿಂದ ಅದು ಏನು ನಡೆಯಿತು ಎಂಬುದನ್ನು 'ಹೇಳಲು' ಭಾಷೆಯನ್ನೇ ಅವಲಂಬಿಸಬೇಕಾಗುತ್ತದೆ. ಈ ಮಾತು ಬರೆಯುವಾಗ ನಾನು 'ಹೇಳು' ಎಂಬ ಕ್ರಿಯಾಪದವನ್ನು ಬಳಸಿದೆ. ಈ ಕ್ರಿಯಾಪದದ ಬಗೆಗೆ ಮೊದಲು ಕೆಲವು ಸಂಗತಿಗಳನ್ನು ಗಮನಿಸುವುದು ಒಳ್ಳೆಯದು.

ಇದಕ್ಕೆ ಇನ್ನೊಂದು ಉದಾಹರಣೆಯನ್ನು ನೀಡ ಬಯಸುತ್ತೇನೆ. ನೀವು ಕೋರ್ಟ್ ದೃಶ್ಯಗಳನ್ನು ಚಲನಚಿತ್ರಗಳಲ್ಲಿ, ಟಿವಿ ಧಾರಾವಾಹಿಗಳಲ್ಲಿ ನೋಡಿದ್ದರೆ ಅಲ್ಲಿ ಸಾಕ್ಷ್ಯ ಹೇಳಲು ಬಂದವರಿಂದ ಪ್ರಮಾಣ ಮಾಡಿಸುವ ನೆಲೆಯನ್ನು ಕಂಡಿರುತ್ತೀರಿ. (ನಿಜವಾಗಿ ಕೋರ್ಟ್‌ಗಳಲ್ಲಿ ಹಾಗಿರುತ್ತದೆಂದು ನಾನೂ ತಿಳಿದಿದ್ದೆ. ಯಾವುದೋ ಒಂದು ಖಟ್ಲೆಯಲ್ಲಿ ಸಾಕ್ಷ್ಯ ಹೇಳಲು ಕಟಕಟೆಯಲ್ಲಿ ನಿಂತಾಗ ಆ ಕಟಕಟೆಯ ತುದಿಗೆ ಅಂಟಿಸಿದ್ದ ಹಾಳೆಯೊಂದರ ಮೇಲೆ ಬರೆದಿದ್ದ ಮಾತುಗಳನ್ನು 'ಓದಿ ಹೇಳಲು' ನನಗೆ ತಿಳಿಸಲಾಯಿತು. ಈ ಬಗ್ಗೆ ಚರ್ಚೆ ಇಲ್ಲಿ ಬೇಡ.) ಮೂರು ವಾಕ್ಯಗಳ ಪ್ರಮಾಣ ವಚನ. **'ನಾನು ಸತ್ಯವನ್ನೇ ಹೇಳುತ್ತೇನೆ. ನಾನು ಹೇಳುವುದೆಲ್ಲ ಸತ್ಯ ಸತ್ಯವನ್ನಲ್ಲದೆ ಬೇರೆನನ್ನೂ ಹೇಳುವುದಿಲ್ಲ'**. ಏಕೆ ಈ ಮೂರು ವಾಕ್ಯಗಳನ್ನು ಹೇಳಿಸುತ್ತಾರೆ ಎಂದು ಬಹಳ ಯೋಚಿಸಿದ್ದೇನೆ. ಮೊದಲ ಎರಡು ವಾಕ್ಯಗಳ ರಚನೆಯಲ್ಲಿ ವ್ಯತ್ಯಾಸವಿದೆಯಾದರೂ ತಿರುಳು ಒಂದೇ ಅಲ್ಲವೇ ಎಂದೂ ನನಗೆ ಅನ್ನಿಸುತ್ತಿತ್ತು. ಆದರೆ ಅದು ಹಾಗಲ್ಲ. ಎರಡನೆಯ ವಾಕ್ಯವನ್ನು ನೋಡಿ. **ನಾನು ಹೇಳುವುದೆಲ್ಲ ಸತ್ಯ** ಎಂಬುದರ ಅರ್ಥವೇನು? ನಾನು ಹೇಳಿದ ಮಾತು ನಾನು ಹೇಳಿದ ಬಳಿಕ ಸತ್ಯವಾಗುತ್ತದೆ ಎಂದಲ್ಲವೇ? ಆದರೆ ಮೊದಲ ವಾಕ್ಯ ಹಾಗಲ್ಲ. ಸತ್ಯ ಎನ್ನುವುದು ನನಗೆ ಗೊತ್ತಿದೆ ಅದನ್ನು ನಾನು ಹೇಳುತ್ತೇನೆ ಎಂಬುದು ಅದರ ಅರ್ಥ. ಅಂದರೆ ಎರಡು ನೆಲೆಗಳಿವೆ. ಒಂದು: ಸತ್ಯ ಎನ್ನುವುದು ಇದೆ ಎನ್ನುವುದು. ಎರಡು: ಅದನ್ನು 'ಹೇಳ'ಬಹುದು ಎಂಬ ನೆಲೆ. ಆದರೆ ಸತ್ಯವನ್ನು ಹೇಳುತ್ತೇವೆಯೋ ಅಥವಾ ಹೇಳಿದ್ದನ್ನು ಸತ್ಯ ಎಂದು ತೀಳಿಯುತ್ತೇವೆಯೋ ಎಂಬುದು ಬೇರೆ ಬೇರೆ ನೆಲೆಗಳು. ಈ ಹಿನ್ನೆಲೆಯಲ್ಲಿ ಮತ್ತೆ ಶಾಸನದ ನಿರೂಪಕ ದನಿಯನ್ನು ಪರಿಶೀಲಿಸೋಣ. ಆ ದನಿ ಸತ್ಯವನ್ನು ಹೇಳುತ್ತಿದೆಯೋ ಅಥವಾ ತಾನು ಹೇಳಿದ್ದನ್ನು ಸತ್ಯ ಎಂದು ತಿಳಿಯಲು ಸೂಚಿಸುತ್ತಿದೆಯೋ? ನ್ಯಾಯಾಲಯದ ಪ್ರಮಾಣ ವಚನದ ಮೂರನೆಯ ವಾಕ್ಯ ಇನ್ನಷ್ಟು ಸಂಗತಿಗಳನ್ನು ಸೂಚಿಸುವಂತಿದೆ. ನಾನು ಸತ್ಯವನ್ನಲ್ಲದೆ ಬೇರೇನನ್ನೂ ಹೇಳುವುದಿಲ್ಲ ಎಂಬುದು ನಿಷೇಧ ವಾಕ್ಯ. ಹಾಗಿರುವಾಗ ಸತ್ಯವನ್ನಲ್ಲದೆ ಬೇರೇನನ್ನೋ ಹೇಳಲು ಸಾಧ್ಯ ಎಂದಾಯಿತಲ್ಲವೇ? ( ಅದು ಸುಳ್ಳೇ ಆಗಿರಬೇಕಿಲ್ಲ.

ಏಕೆಂದರೆ ಸತ್ಯವಲ್ಲದ್ದೆಲ್ಲಾ ಸುಳ್ಳಲ್ಲ.) ಶಾಸನದ ನಿರೂಪಕ ದನಿಯಲ್ಲಿ ಸತ್ಯವೂ ಇದೆ; ಸತ್ಯವಲ್ಲದ್ದೂ ಇದೆ. ಭಾಷಿಕ ನೆಲೆಗೆ ಸೇರದ ಸಂಗತಿಗಳಾದ ನಂದಿಸೇನ ಮುನಿಯ ಉಪವಾಸ ಮತ್ತು ಆತನ ಮರಣ ಇವೆರಡೂ ಭಾಷಿಕವಲ್ಲ. ಹಾಗಾಗಿ ಅದು ಎಲ್ಲರಿಗೂ ಒಂದೇ. ಆದರೆ ಕಾರಣ ಮೀಮಾಂಸೆ ಮಾತ್ರ ನಿರೂಪಕ ದನಿಗೆ ಸೇರಿದ್ದು. ವಾಸ್ತವವಾಗಿ ಚರಿತ್ರೆಯೆಂದರೆ ಇದೇ ಅಲ್ಲವೇ?

ಖ್ಯಾತ ನಾಟಕಕಾರ ಬರ್ಟೋಲ್ಟ್ ಬ್ರೆಕ್ಟ್ ಒಂದು ಪ್ರಬಂಧ ಬರೆದಿದ್ದಾನೆ. ಕನ್ನಡದಲ್ಲಿ ಅದರ ಶೀರ್ಷಿಕೆಯನ್ನು "ಹಾದಿ ಬದಿಯ ದೃಶ್ಯ' ಎನ್ನೋಣ. ಬೀದಿಯಲ್ಲಿ ನಡೆದ ಘಟನೆಯೊಂದನ್ನು ಅದನ್ನು ನೋಡಿರುವ ವ್ಯಕ್ತಿ ಬೇರೊಂದು ಕಡೆ ಅಲ್ಲಿ ಇರದಿದ್ದವರಿಗೆ ಬಣ್ಣಿಸುವಾಗ ಏನಾಗುವುದೆಂದು ಬ್ರೆಕ್ಟ್ ವಿವರಿಸುತ್ತಾನೆ. ಇದು ಹೆಚ್ಚು ಕಡಿಮೆ ನಂದಿಸೇನ ಮುನಿಯ ದೇಹತ್ಯಾಗವನ್ನು 'ಕಂಡು' ಇತರರಿಗೆ ಹೇಳುತ್ತಿರುವ ನಿರೂಪಕನ ಪರಿಸ್ಥಿತಿಗೆ ಹತ್ತಿರವಾಗಿದೆ. ನೋಡಿದ ವ್ಯಕ್ತಿಗಳು, ಹೇಳುವಾಗ ತಾನು 'ಕಂಡದ್ದನ್ನು' ಮಾತ್ರ ಹೇಳುತ್ತಾರೋ ಅಥವಾ ತಾವು ನೋಡಿದ ಬಗೆಯನ್ನು ಇತರರಿಗೆ ರವಾನಿಸುತ್ತಿರುತ್ತಾರೋ? ಇದು ಬ್ರೆಕ್ಟ್ ಎತ್ತುವ ಪ್ರಶ್ನೆ. ಬ್ರೆಕ್ಟ್ ನೀಡುವ ಉತ್ತರ ಏನೇ ಇರಲಿ. ನಿರೂಪಣೆಗಳಲ್ಲಿ ಇರುವ ಈ ಇಬ್ಬಗೆಯ ನೆಲೆಗಳನ್ನು ನಾವು ಎಚ್ಚರಿಕೆಯಿಂದ ಗಮನಿಸಬೇಕು. ಏಕೆಂದರೆ ಚರಿತ್ರೆ ಎಂಬ ನಿರೂಪಣೆ ಕೂಡ ಇದೇ ಇಬ್ಬಗೆಯನ್ನು ತೋರುತ್ತದೆ. ಬ್ರೆಕ್ಟ್ ಹೇಳಿದ ಸಂದರ್ಭದಲ್ಲಿ ಘಟನೆಯನ್ನು ನೋಡಿದ ವ್ಯಕ್ತಿಯಾದರೂ ಇರುತ್ತಾನೆ. ಆದರೆ ಚರಿತ್ರೆಯ ನಿರೂಪಣೆಯಲ್ಲಿ ಹೀಗೆ 'ನೋಡುವ' ಅವಕಾಶವಿಲ್ಲದವರೇ ನಿರೂಪಕರಾಗಿರುತ್ತಾರೆ. ಹಾಗಾಗಿ ಹಾದಿ ಬದಿಯ ದೃಶ್ಯದ ನಿರೂಪಕನ ಕಥನಕ್ಕಿಂತ ಚರಿತ್ರೆ ದೊಡ್ಡ ಬಿಕ್ಕಟ್ಟನ್ನು ಎದುರಿಸುತ್ತದೆ.

ಚರಿತ್ರೆಯ ಭಾಷೆ ಎಂಬ ಈ ಟಿಪ್ಪಣಿಯನ್ನು ಓದಲು ಹೊರಟವರು ಚರಿತ್ರೆಯ ಬರೆವಣಿಗೆಗೆ ತಕ್ಕುದಾದ ಭಾಷೆ ಹೇಗಿರಬೇಕೆಂದು ಹೇಳುವುದೇ ಇಲ್ಲಿನ ಉದ್ದೇಶವಿರಬೇಕೆಂದು ತಿಳಿಯುವುದು ಸಹಜ. ಆದರೆ ಚರಿತ್ರೆ ಮತ್ತು ಭಾಷೆ ಎಂಬ ಎರಡು ನೆಲೆಗಳನ್ನು ಕಲ್ಪಿಸಿಕೊಳ್ಳುವುದು ಕಷ್ಟ. ಚರಿತ್ರೆ ಆಕಾರ ಪಡೆಯುವುದೇ ಭಾಷೆಯಲ್ಲಿ. ಈ ಆಕಾರ ತಳೆಯುವ ಪ್ರಕ್ರಿಯೆಯ ಸ್ವರೂಪವನ್ನು ತಿಳಿದುಕೊಳ್ಳಲು ಈ ಟಿಪ್ಪಣಿಯನ್ನು ಬರೆಯಲು ಮೊದಲು ಮಾಡಿದೆ.

# ದ್ವಿಭಾಷಿಕತೆ

ಭಾಷೆಯೊಂದನ್ನು ಬಳಸದ ಮಾನವಸಮುದಾಯವನ್ನು ಅಥವಾ ಬಳಸುವ ಒಂದು ಸಮುದಾಯವಿಲ್ಲದ ಜೀವಂತಭಾಷೆಯನ್ನು ಕಾಣುವುದು ಅಸಾಧ್ಯ. ಇಂಥ ಸಂದರ್ಭದಿಂದ ಒಂದು ಮಾನವಸಮುದಾಯಕ್ಕೆ ಒಂದು ಜೀವಂತಭಾಷೆ ಎಂಬ ಸೂತ್ರ ರೂಪಿಸಬೇಕಾಗುತ್ತದೆ. ಆದರೆ ವಾಸ್ತವವಾಗಿ ಹೀಗಿಲ್ಲ. ಒಂದು ಭಾಷೆಯನ್ನು ಆಡುವ ಜನರು ಒಂದಕ್ಕಿಂತ ಹೆಚ್ಚು ಸಮುದಾಯಗಳಲ್ಲಿ, ಭೂಪ್ರದೇಶಗಳಲ್ಲಿ ಕಾಣಸಿಗುವಂತೆ, ಒಂದೇ ಸಮುದಾಯದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳು ಬಳಕೆಯಾಗುತ್ತಿರುವುದೂ ಕಂಡುಬರುತ್ತದೆ. ರಾಜಕೀಯ ಕಾರಣಗಳಿಂದ ನಡೆಯುವ ಆಡಳಿತವಲಯದ ವಿಸ್ತರಣೆಗಳು, ಸಮುದಾಯಗಳ ಜನರು ಬೇರೆ ಬೇರೆ ಭೂಪ್ರದೇಶಗಳಿಗೆ ಹೋಗಿ ನೆಲೆಸುವುದು, ವಲಸೆಗಳು ಇತ್ಯಾದಿಗಳಿಂದಾಗಿ ಭಾಷಾಸಮುದಾಯಗಳು ಬೆರೆಯುವುದು ಅನಿವಾರ್ಯವಾಗುತ್ತದೆ. ಇಂಥ ಪರಿಸ್ಥಿತಿ ಬಹು ಹಿಂದಿನಿಂದಲೂ ಉಂಟಾಗಿರುವುದಕ್ಕೆ ಪುರಾವೆಗಳಿವೆ. ಅದೇನೇ ಇರಲಿ, ಒಂದು ಸಮುದಾಯದಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳು ಬಳಕೆಯಾಗುವ ಸಂದರ್ಭವಿದ್ದಾಗ ಅದನ್ನೊಂದು ಬಹುಭಾಷಿಕ ಸನ್ನಿವೇಶ ಎನ್ನುತ್ತೇವೆ. ಭಾಷೆಗಳ ಸಂಖ್ಯೆ ಎರಡಾದರೆ ಅದೊಂದು ದ್ವಿಭಾಷಿಕ ಸನ್ನಿವೇಶ. ಇಂಥ ಸನ್ನಿವೇಶಗಳಲ್ಲಿ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸಬೇಕಾದ ಅವಕಾಶ, ಒತ್ತಾಯಗಳು ಉಂಟಾಗುತ್ತವೆ. ಜನರು ಹೀಗೆ ಎರಡು ಭಾಷೆಗಳನ್ನು ಕಲಿತು ಬಳಸತೊಡಗಿದಾಗ ಆ ಪರಿಸರದಲ್ಲಿ ದ್ವಿಭಾಷಿಕತೆ ಇದೆ ಎನ್ನುತ್ತೇವೆ. ಇದು ಸಾಮುದಾಯಿಕ ದ್ವಿಭಾಷಿಕತೆ. ಉದಾ: ಕರ್ನಾಟಕದ ಕೋಲಾರ ಜಿಲ್ಲೆಯ ಕೆಲವು ತಾಲೂಕುಗಳಲ್ಲಿ ಕನ್ನಡ–ತೆಲುಗು ಈ ಎರಡೂ ಭಾಷೆಗಳನ್ನು ಕಲಿತು ಬಳಸುವ ಜನರು ವಾಸಿಸುತ್ತಾರೆ. ಇಂತಹ ಪ್ರದೇಶದಲ್ಲಿ ಎಲ್ಲ ಜನರೂ ದ್ವಿಭಾಷಿಕರಾಗಿರುವುದಿಲ್ಲ. ದ್ವಿಭಾಷಿಕತೆ ಎನ್ನುವುದು ದ್ವಿಭಾಷಿಕ ಪ್ರದೇಶದ ನಿರ್ದಿಷ್ಟ ಪ್ರಮಾಣದ ಜನರಲ್ಲಿ ಕಾಣಸಿಗುವ ಭಾಷಾಲಕ್ಷಣವೆಂದು ತಿಳಿಯಬೇಕು.

ಕರ್ನಾಟಕದಲ್ಲಿ ಇಂಥ ದ್ವಿಭಾಷಿಕ ಪ್ರದೇಶಗಳು ಹಲವಾರಿವೆ. ಇವುಗಳಲ್ಲಿ ಕೆಲವು ಗೊತ್ತಾದ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದರೆ ಮತ್ತೆ ಕೆಲವು ರಾಜ್ಯಾದ್ಯಂತ ಹರಡಿಕೊಂಡಿರುತ್ತವೆ. ವಾಯುವ್ಯ ಭಾಗದಲ್ಲಿ ಕನ್ನಡ–ಮರಾಠಿ, ಕರಾವಳಿಯಲ್ಲಿ ಕನ್ನಡ–ಕೊಂಕಣಿ ಮತ್ತು ಕನ್ನಡ–ತುಳು, ಕೊಡಗಿನಲ್ಲಿ ಕನ್ನಡ–ಕೊಡಗು, ಕೋಲಾರ, ತುಮಕೂರು ಬಳ್ಳಾರಿಗಳ ಪೂರ್ವಗಡಿಗಳಲ್ಲಿ ಕನ್ನಡ–ತೆಲುಗು ದ್ವಿಭಾಷಿಕ ಪ್ರದೇಶಗಳಿವೆ. ಕೆಲವು

ಸಾಂದ್ರವಲಯಗಳಲ್ಲಿ ಕನ್ನಡ-ತಮಿಳು ದ್ವಿಭಾಷಿಕ ಪ್ರದೇಶಗಳಿವೆ. ಉದಾ: ಕೆ.ಜಿ. ಎಫ್, ಬೆಂಗಳೂರು, ಶಿವಮೊಗ್ಗ, ಚಿಕ್ಕಮಗಳೂರು, ಹುಬ್ಬಳ್ಳಿ. ಕನ್ನಡ-ಉರ್ದು ದ್ವಿಭಾಷಿಕರು ಹೀಗೆ ನಿರ್ದಿಷ್ಟ ಭೂಭಾಗಕ್ಕೆ ಸೀಮಿತವಾಗದೆ ಹಲವಾರು ಜಿಲ್ಲೆಗಳಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಹರಡಿ ಹೋಗಿದ್ದಾರೆ. ಕೆಲವು ದ್ವಿಭಾಷಿಕ ಸಮುದಾಯಗಳು ಕರ್ನಾಟಕದ ನಡುವೆ ಬೇರೆ ಬೇರೆ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿವೆ. ಕನ್ನಡ-ಲಂಬಾಣಿ ಮಾತಾಡುವ ಜನರು ಇಂಥದಕ್ಕೆ ಒಂದು ನಿದರ್ಶನ.

ಕರ್ನಾಟಕದಲ್ಲಿರುವ ಈ ದ್ವಿಭಾಷಿಕ ಸನ್ನಿವೇಶಗಳು ಏಕೆ ಉಂಟಾಗಿವೆ ಮತ್ತು ಯಾವಾಗ ಉಂಟಾದವು ಎಂಬುದು ಮುಂದಿನ ಪ್ರಶ್ನೆ. ಈಗ ಕಾಣುವಂತೆ ಕರ್ನಾಟಕದ ಗಡಿ ಪ್ರದೇಶವು ಕರಾವಳಿಯನ್ನು ಹೊರತು ಪಡಿಸಿದರೆ ಉಳಿದಂತೆ ಮಲೆಯಾಳಂ, ತಮಿಳು, ತೆಲುಗು, ಮರಾಠಿ ಮತ್ತು ಕೊಂಕಣಿಯನ್ನಾಡುವ ಜನರಿರುವ ರಾಜ್ಯಗಳಿಗೆ ತೆರೆದುಕೊಂಡಿವೆ. ಕರ್ನಾಟಕದ ಒಳಗೇ ತುಳು, ಕೊಡವ, ಕೊಂಕಣಿ ಮಾತಾಡುವ ಸಮುದಾಯಗಳಿವೆ. ಉರ್ದು ಮಾತಾಡುವ ಜನರು ಹಲವಾರು ಶತಮಾನಗಳಿಂದ ಕರ್ನಾಟಕದ ವಿವಿಧ ಭಾಗಗಳಲ್ಲಿ ನೆಲೆಸಿದ್ದಾರೆ. 1956ರ ಮೊದಲು ಕನ್ನಡ ಮಾತಾಡುವ ಜನಸಮುದಾಯದೊಡನೆ ಅನ್ಯಭಾಷೆಯನ್ನಾಡುವ ಜನಸಮುದಾಯದ ಸಂಪರ್ಕವಿದ್ದಿತು. ಇದು ರಾಜಕೀಯವಾಗಿಯೂ ಅನಿವಾರ್ಯವಾಗಿದ್ದಿತು. ಬ್ರಿಟಿಷ್ ಆಡಳಿತದ ಎರಡು ಪ್ರಾಂತ್ಯಗಳು ಮತ್ತು ನಿಜಾಮ್ ಆಡಳಿತದ ರಾಜ್ಯ ಇವುಗಳಲ್ಲಿ ಈಗಿನ ಕರ್ನಾಟಕದ ಬಹುಭಾಗ ಸೇರಿದ್ದಿತು. ಆದ್ದರಿಂದ ವಿವಿಧ ಭಾಷಾಸಮುದಾಯಗಳೊಡನೆ ಕನ್ನಡ ಮಾತನಾಡುವವರು ಮತ್ತು ಕನ್ನಡಿಗರೊಡನೆ ವಿವಿಧ ಭಾಷಿಕರು ವ್ಯವಹರಿಸುವುದು ಅನಿವಾರ್ಯವಾಗಿತ್ತು.

ಇದಲ್ಲದೆ ಬಹು ಹಿಂದಿನಿಂದಲೂ ಕರ್ನಾಟಕಕ್ಕೆ ವಿವಿಧ ಕಾಲಘಟ್ಟಗಳಲ್ಲಿ ಭಾರತದ ಬೇರೆ ಬೇರೆ ಪ್ರದೇಶಗಳಿಂದ ಬೇರೆ ಬೇರೆ ಭಾಷೆಗಳನ್ನಾಡುವ ಜನರು ವಲಸೆ ಬರುತ್ತಲೇ ಇದ್ದಾರೆ. ಪ್ರಾಕೃತವನ್ನಾಡುತ್ತಿದ್ದ ಜನಸಮುದಾಯಗಳಿಂದ ಮೊದಲ್ಗೊಂಡು ಬೇರೆ ಬೇರೆ ಮಧ್ಯ ಇಂಡೋಆರ್ಯನ್ ಭಾಷೆಗಳನ್ನಾಡುವ ಜನರು ಕರ್ನಾಟಕಕ್ಕೆ ಬಂದಿದ್ದಾರೆ. ಇವರಲ್ಲಿ ಕೆಲವರು ತಮ್ಮ ಮೂಲಭಾಷೆಯನ್ನು ಕಳೆದುಕೊಂಡು ಕನ್ನಡವನ್ನೇ ತಮ್ಮ ಭಾಷೆಯನ್ನಾಗಿ ಸ್ವೀಕರಿಸಿರುವುದೂ ಸಾಧ್ಯ. ಆದರೆ ಉಳಿದವರು ಚಿಕ್ಕ ಚಿಕ್ಕ ದ್ವಿಭಾಷಿಕ ಸಮುದಾಯಗಳಾಗಿ ರೂಪುಗೊಂಡರು. ಉತ್ತರ ಕನ್ನಡ ಜಿಲ್ಲೆಯ ಹಲವಾರು ಬುಡಕಟ್ಟು ಜನರು ಇದಕ್ಕೆ ನಿದರ್ಶನ. ಮಧ್ಯ ಮತ್ತು ದಕ್ಷಿಣ ಕರ್ನಾಟಕದಲ್ಲಿ ಕಾಣಸಿಗುವ ಹತ್ತಾರು ಅಲೆಮಾರಿ ಜನಾಂಗಗಳು ಹೀಗೆ ಚಲಿಸುವ ದ್ವಿಭಾಷಿಕ ಸಮುದಾಯಗಳಾಗಿವೆ. ಸಮಾಜ ರಚನೆಯಲ್ಲಿ ಅಂಚಿನ ಜನಾಂಗಗಳಾಗಿ ಸೇರುವ ಹಕ್ಕಿಪಿಕ್ಕಿಗಳು, ಬುಂಡೆಬೆಸ್ತರು, ಗೊಂಬೆಯಾಟದವರು, ಬುಡುಬುಡುಕೆಯುವರು, ದೊಂಬರು, ಜೋಗಿಗಳು ಮುಂತಾದವರು ಇದಕ್ಕೆ ನಿದರ್ಶನ. ನಾವು ಸಾರಾಸಗಟಾಗಿ ಅವರು ಮರಾಠಿಯನ್ನೋ, ತೆಲುಗನ್ನೋ ಮಾತಾಡುವವರೆಂದು ಹೇಳುತ್ತೇವಾದರೂ ಅವರ ಭಾಷಾಸನ್ನಿವೇಶವನ್ನು ಪೂರ್ಣವಾಗಿ ಅರಿತಿಲ್ಲ. ಇವರೆಲ್ಲ ಬಹುಮಟ್ಟಿಗೆ ಕನ್ನಡವನ್ನು ಬಳಸಬಲ್ಲವರಾಗಿದ್ದಾರೆ.

ಬೇರೆ ಬೇರೆ ಭಾಷಾಸಮುದಾಯಗಳು ಒಟ್ಟಾಗಿ ಜೀವಿಸಲು ಮೊದಲು ಮಾಡುವುದು, ಅಂಥ ಸಂದರ್ಭ ಒದಗುವುದು ದ್ವಿಭಾಷಿಕ ಸನ್ನಿವೇಶಗಳು ಉಂಟಾಗಲು ಕಾರಣ. ಆದರೆ ಅದಷ್ಟೇ ಸಾಲದು, ಎಷ್ಟೋ ಭಾಷಿಕಸಮುದಾಯಗಳು ಜತೆಯಲ್ಲಿ ಜೀವಿಸಬೇಕಾದ ಸಂದರ್ಭ ಒದಗಿದರೂ ಅಲ್ಲಿ ದ್ವಿಭಾಷಿಕ ಸನ್ನಿವೇಶ ಸಾಮಾಜಿಕ ನೆಲೆಯಲ್ಲಿ ಬೆಳೆಯದೆ ಇರಬಹುದು. ಇದಕ್ಕೆ ಸಂಕೀರ್ಣ ಕಾರಣಗಳಿರುತ್ತವೆ. ಸಮುದಾಯಗಳು ದ್ವಿಭಾಷಿಕತೆಯನ್ನು ಏಕೆ ಬೆಳೆಸಿಕೊಳ್ಳುತ್ತವೆ ಎನ್ನುವುದನ್ನು ಮೊದಲು ನೋಡೋಣ.

ಭಾಷಾಸಂಪರ್ಕದಿಂದಾಗಿ ಮತ್ತು ಸಾಮಾಜಿಕ ಸಂದರ್ಭಗಳಿಂದಾಗಿ ಒಂದು ಭಾಷೆಯನ್ನು ಬಲ್ಲ ಜನರು ಇನ್ನೊಂದು ಭಾಷೆಯನ್ನು ಕಲಿಯುವುದು ಅನಿವಾರ್ಯವಾಗುತ್ತದೆ. ಹಲವಾರು ಸಾಮಾಜಿಕ ವ್ಯವಹಾರಗಳನ್ನು ನಡೆಸಲು, ವೃತ್ತಿ ಜೀವನವನ್ನು ನಿರ್ವಹಿಸಲು, ಆಡಳಿತ ಕ್ರಿಯೆಯಲ್ಲಿ ಭಾಗಿಗಳಾಗಲು ವ್ಯಕ್ತಿಗಳು ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸಬೇಕಾದ ಸಂದರ್ಭಗಳು ನಿರ್ಮಾಣವಾಗುತ್ತವೆ. ಇಂಥ ಅನ್ಯಭಾಷಾ ಕಲಿಕೆ, ಬಳಕೆ ಸಂದರ್ಭಗಳು ಕೆಲವೊಮ್ಮೆ ಸಮುದಾಯದ ಆಯ್ಕೆಯಾಗಿದ್ದರೆ, ಮತ್ತೆ ಕೆಲವೊಮ್ಮೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ ಒತ್ತಾಯ ಪೂರ್ವಕವಾಗಿ ದತ್ತವಾಗುತ್ತವೆ. ತೆಲುಗು-ಕನ್ನಡ ದ್ವಿಭಾಷಿಕರಿಗೆ ಎರಡು ಭಾಷೆಗಳ ಕಲಿಕೆ ತಂತಾನೇ ಸಂಭವಿಸುವಂಥದು. ಆದರೆ ಹಿಂದಿಯನ್ನು ಕಲಿಯುವುದು ಕನ್ನಡಿಗರಿಗೆ ಒಂದು ರಾಜಕೀಯ ಒತ್ತಾಯವಾಗುತ್ತದೆ.

ಭಾಷಾಸಂಪರ್ಕವಿದ್ದ ಕಡೆಗಳಲ್ಲಿ ಸಮುದಾಯದ ಎಲ್ಲ ಸದಸ್ಯರೂ ದ್ವಿಭಾಷಿಕರಾಗುವ ಅವಶ್ಯಕತೆ ಇರುವುದಿಲ್ಲ. ಹೀಗೆ ನೂರಕ್ಕೆ ನೂರು ದ್ವಿಭಾಷಿಕರಾಗುವ ಪ್ರಸಂಗಗಳು ಅಪರೂಪ. ಎರಡೂ ಭಾಷಿಕಸಮುದಾಯಗಳಲ್ಲಿ ಕೆಲವು ಮಂದಿ ಮಾತ್ರ ದ್ವಿಭಾಷಿಕರಾಗುತ್ತಾರೆ. ಉಳಿದವರಿಗೆ ದ್ವಿಭಾಷಿಕರಾಗುವ ಅವಶ್ಯಕತೆ ಇಲ್ಲವಾದರೆ, ಅಂಥ ಸಂದರ್ಭಗಳು ಒದಗಿ ಬಾರದಿದ್ದರೆ, ಅವರು ಏಕಭಾಷಿಕರಾಗಿಯೇ ಉಳಿಯುತ್ತಾರೆ. ಸಾಮಾಜಿಕ ಸಂಪರ್ಕ ಕಡಿಮೆ ಇರುವ ಹೆಂಗಸರು, ಕಲಿಯುವ ಸಾಮರ್ಥ್ಯ ಮಾಸಿದ ವೃದ್ಧರು ಹೀಗೆ ಏಕಭಾಷಿಕರಾಗಿ ಉಳಿಯುವ ಸಂದರ್ಭಗಳು ಹೆಚ್ಚು.

ಈವರೆಗೆ ನಾವು ಚರ್ಚಿಸಿದ್ದು ದ್ವಿಭಾಷಿಕತೆಯ ಸಾಮುದಾಯಿಕ ನೆಲೆಗಳನ್ನು. ಆದರೆ ದ್ವಿಭಾಷಿಕತೆ ಎಂಬುದು ವ್ಯಕ್ತಿಗತ ನೆಲೆಯಲ್ಲಷ್ಟೇ ಕೂಡ ಪ್ರವೃತ್ತವಾಗಬಹುದು. ಹಲವಾರು ಭಾಷೆಗಳನ್ನು ಕಲಿತು ವ್ಯವಹರಿಸಬಲ್ಲವರನ್ನು ನಾವು ಕಂಡಿದ್ದೇವೆ. ವ್ಯಕ್ತಿಗಳು ತಮ್ಮ ವೃತ್ತಿಯ ಅಪೇಕ್ಷೆಗಳಿಂದ, ಶೈಕ್ಷಣಿಕ ಪರಿಸರದಿಂದ, ಸಾಮಾಜಿಕ ಆಯ್ಕೆಗಳಿಂದ ಒಂದಕ್ಕಿಂತ ಹೆಚ್ಚು ಭಾಷೆಗಳನ್ನು ಕಲಿತು ಬಳಸುವುದುಂಟು. ಇಂಥ ಸಂದರ್ಭಗಳಲ್ಲಿ ಭಾಷಾ ಸಮುದಾಯಗಳ ಸಂಪರ್ಕ ಕಡ್ಡಾಯವೇನಲ್ಲ. ಫ್ರೆಂಚ್, ಜಪಾನೀಸ್, ಜರ್ಮನ್, ರಶ್ಯನ್, ಚೈನೀಸ್ ಕಲಿತವರನ್ನು ನಾವು ಮಹಾನಗರಗಳಲ್ಲಿ ಕಾಣುತ್ತೇವೆ. ಸಂಸ್ಕೃತ, ಗ್ರೀಕ್, ಲ್ಯಾಟಿನ್, ಅರಾಬಿಕ್ ಮೊದಲಾದ ಪ್ರಾಚೀನ ಭಾಷೆಗಳಲ್ಲಿ ಪರಿಣಿತರಾದವರೂ ಇರುತ್ತಾರೆ. ಇವರೆಲ್ಲರ ದ್ವಿಭಾಷಿಕತೆ ಅವರವರ ಆಯ್ಕೆಯಾಗಿದೆ. ಸಾಮುದಾಯಿಕ ಒತ್ತಾಯವಾಗಲೀ, ಪೂರಕಸಂದರ್ಭಗಳಾಗಲೀ ಅವರ ಕಲಿಕೆ-ಬಳಕೆಗಳನ್ನು

ನಿಯಂತ್ರಿಸುವುದಿಲ್ಲ. ಅವರವರು ತಮಗೆ ಬೇಕಾದ ಭಾಷೆಗಳಲ್ಲಿ ಪರಿಣತಿಯನ್ನು ಪಡೆಯಲು ಅವಕಾಶಗಳನ್ನು ಕಲ್ಪಿಸಿಕೊಳ್ಳುತ್ತಾರೆ. ಈ ಸಂದರ್ಭವನ್ನು ವ್ಯಕ್ತಿಗತ ದ್ವಿಭಾಷಿಕತೆ ಎನ್ನುತ್ತಾರೆ. ಸಾಮುದಾಯಿಕ ದ್ವಿಭಾಷಿಕ ಸಂದರ್ಭಗಳಲ್ಲೂ ದ್ವಿಭಾಷಿಕರಾಗಿರುವುದು ವ್ಯಕ್ತಿಗಳೇ ತಾನೇ? ಹಾಗಿದ್ದಲ್ಲಿ ವ್ಯಕ್ತಿಗತ ದ್ವಿಭಾಷಿಕತೆ ಎಂಬ ಪ್ರತ್ಯೇಕ ವರ್ಗವನ್ನು ಕಲ್ಪಿಸುವ ಅವಶ್ಯಕತೆ ಕಾಣದು. ಆದರೆ ಸಾಮುದಾಯಿಕ ದ್ವಿಭಾಷಿಕತೆ ಇರುವಲ್ಲಿ ವ್ಯಕ್ತಿಗಳು ಒಂದಕ್ಕಿಂತ ಹೆಚ್ಚು ಭಾಷೆಯನ್ನು ಕಲಿತು ಬಳಸುವಂತೆ ಮಾಡುವ ಸಾಮಾಜಿಕ–ಸಾಂಸ್ಕೃತಿಕ ಕಾರಣಗಳಿರುತ್ತವೆ. ಮತ್ತು ಇಂಥ ದ್ವಿಭಾಷಿಕತೆಗೆ ನಿರ್ದಿಷ್ಟ ಸಾಮಾಜಿಕ ಸ್ವರೂಪ ಮತ್ತು ಪರಿಣಾಮಗಳು ಇರುತ್ತವೆ. ವ್ಯಕ್ತಿಗತ ದ್ವಿಭಾಷಿಕತೆ ಉಂಟಾಗಲು ಬೇಕಾದ ಪೂರಕ ಸನ್ನಿವೇಶಗಳು, ಅವಕಾಶಗಳು ಸಮಾಜದಲ್ಲಿ ಇರುತ್ತವೆಯಾದರೂ ಕಲಿಕೆ ಬಳಕೆಗಳು ಬಹುಮಟ್ಟಿಗೆ ವ್ಯಕ್ತಿಗಳ ಆಯ್ಕೆಯಾಗಿರುತ್ತದೆ. ಕನ್ನಡಿಗರಿಗೆ ಜರ್ಮನ್ ಕಲಿಯುವ ಅವಕಾಶ ಇದೆಯೆಂದ ಮಾತ್ರಕ್ಕೆ ಜರ್ಮನ್ ಕಲಿಯಬೇಕಾದ ಒತ್ತಾಯ ಮೂಡುವುದಿಲ್ಲ. ಬೇಕಾದವರು ಆ ಭಾಷೆಯನ್ನು ಕಲಿಯುತ್ತಾರೆ; ಬಳಸುತ್ತಾರೆ. ವ್ಯಕ್ತಿಗತ ದ್ವಿಭಾಷಿಕರ ಸ್ವರೂಪ ಮತ್ತು ಭಾಷಾವರ್ತನೆಗಳು ಭಿನ್ನವಾಗಿರುತ್ತವೆ.

**ದ್ವಿಭಾಷಿಕರು ಯಾರು?**

ಒಂದಕ್ಕಿಂತ ಹೆಚ್ಚು–ಇಲ್ಲಿ ಎರಡು–ಭಾಷೆಗಳನ್ನು ಸಮರ್ಥವಾಗಿ ಬಳಸಬಲ್ಲವರೇ ದ್ವಿಭಾಷಿಕರು. ಇದು ಸರಳ ನಿರ್ವಚನ, ಏಕೆಂದರೆ 'ಸಮರ್ಥವಾಗಿ' ಎಂದರೇನು? ಇದನ್ನು ನಿರ್ಧರಿಸುವುದು ಕಷ್ಟ. ದ್ವಿಭಾಷಿಕರೊಬ್ಬರಿಗೆ A ಮತ್ತು B ಭಾಷೆಗಳು ಬರುತ್ತವೆ ಎಂದುಕೊಳ್ಳೋಣ. A ಮತ್ತು B ಗಳೆರಡರಲ್ಲೂ ಸಮಾನ ಸಾಮರ್ಥ್ಯವನ್ನು ಪ್ರಕಟಿಸಿದಾಗ ಮಾತ್ರ ಆ ವ್ಯಕ್ತಿಯನ್ನು ದ್ವಿಭಾಷಿಕ ಎನ್ನಬೇಕು ಎಂದು ಕೆಲವು ಭಾಷಾಶಾಸ್ತ್ರಜ್ಞರು ಹೇಳುತ್ತಾರೆ. ವಾಸ್ತವವಾಗಿ ಇದು ಅಸಾಧ್ಯ ಪರಿಸ್ಥಿತಿ. ಎರಡು ಭಾಷೆಗಳನ್ನೂ ಬಲ್ಲವರಿಗೆ ಆ ಎರಡೂ ಭಾಷೆಗಳಲ್ಲೂ ಸಮಾನವಾದ ಹಿಡಿತ ಇರುವುದೆಂದು ಹೇಳಲಾಗದು. ಒಂದು ವೇಳೆ ಹಾಗಿದ್ದರೂ ಈ ಭಾಷಾಸಾಮರ್ಥ್ಯಗಳ ಸಮಾನತೆಯನ್ನು ಅಳೆಯುವುದು ಹೇಗೆ? ಇದಕ್ಕಾಗಿ ಖಚಿತವಾದ ಪ್ರಾಯೋಗಿಕ ನೆಲೆಯನ್ನು ರೂಪಿಸುವುದು ಸಾಧ್ಯವಾಗುವುದಿಲ್ಲ. ಇಂಥ ಪ್ರಯತ್ನಗಳು ನಡೆದಿವೆ. ಆದರೆ ದ್ವಿಭಾಷಿಕರು ಎರಡೂ ಭಾಷೆಗಳಲ್ಲಿ ಸಮಾನ ಸಾಮರ್ಥ್ಯ ಹೊಂದಿರಬೇಕು ಎನ್ನುವ ತಿಳುವಳಿಕೆಯನ್ನು ಈ ಮಾಪನ ವಿಧಾನಗಳು ನಂಬುವುದಿಲ್ಲ.

ಕನ್ನಡಿಗರು ಮಾತಾಡುವಾಗ ನೂರಾರು ಇಂಗ್ಲಿಶ್ ಪದಗಳನ್ನು ತಮ್ಮ ಕನ್ನಡದಲ್ಲಿ ಬಳಸುತ್ತಾರೆ. ಬಸ್ಸು, ಕಾರು, ರೋಡು, ಮಿನಿಸ್ಟರು, ಪ್ಲೇನ್, ಮಾರ್ಕೆಟ್ಟು, ಸಬ್ಸಿಡಿ, ಟ್ಯಾಕ್ಸ್, ಬ್ಯಾಂಕ್, ಟರ್ನ್, ಡ್ರೈವ್, ಆಕ್ಸಿಡೆಂಟ್, ಡೆತ್ ಹೀಗೆ ಎಷ್ಟೋ ಪದಗಳು. ಆದರೆ ಹೀಗೆ ಬಳಸುವ ಕನ್ನಡಿಗರೆಲ್ಲ ಕನ್ನಡ–ಇಂಗ್ಲಿಶ್ ದ್ವಿಭಾಷಿಕರಲ್ಲ. ಕೆಲವರು ಹೇಳುವಂತೆ ದ್ವಿಭಾಷಿಕರಾಗಲು ಎರಡೂ ಭಾಷೆಗಳಲ್ಲಿ ಅರ್ಥಪೂರ್ಣ ರಚನೆಗಳನ್ನು ಬಳಸಲು ಸಾಮರ್ಥ್ಯವಿರಬೇಕು. ಈ ಮಾತನ್ನು ಎಚ್ಚರಿಕೆಯಿಂದ ಪರಿಗಣಿಸಬೇಕು. ಏಕೆಂದರೆ ಎಷ್ಟೋ ಭಾಷಣಕಾರರು ದೀರ್ಘವಾದ ಸಂಸ್ಕೃತ ಶ್ಲೋಕಗಳನ್ನು, ಉಕ್ತಿಗಳನ್ನು

ಕನ್ನಡ ಮಾತಿನ ನಡುವೆ ಸೇರಿಸುತ್ತಾರೆ. ಹಾಗೆಂದ ಮಾತ್ರಕ್ಕೆ ಅವರು ಕನ್ನಡ-ಸಂಸ್ಕೃತ ದ್ವಿಭಾಷಿಕರಾಗುವುದಿಲ್ಲ. ಒಂದು ಭಾಷೆಯ ಸಿದ್ಧರಚನೆಗಳನ್ನು ಕಲಿತು ಇನ್ನೊಂದು ಭಾಷೆಯ ವಾಕ್ಯಗಳಲ್ಲಿ ಸೇರಿಸುವುದರಿಂದ ದ್ವಿಭಾಷಿಕತೆ ಲಭಿಸದು. ಅನ್ಯಭಾಷೆಯ ಪದಗಳನ್ನು ಬಳಸುವ ಕನ್ನಡಿಗರಿಗೆ ಆ ಪದಗಳು ಬೇರೆ ಭಾಷೆಯವು ಎಂದು ಗೊತ್ತಿರುವುದಿಲ್ಲ. ಆದ್ದರಿಂದ ಅವರು ದ್ವಿಭಾಷಿಕರೆನ್ನುವ ಪ್ರಸಂಗವೇ ಬರದು. ಸಂಸ್ಕೃತ ವಾಕ್ಯಗಳನ್ನು ಕಲಿತು ಬಳಸುವವರಿಗೆ ಆ ವಾಕ್ಯಗಳು ಸಂಸ್ಕೃತದ್ದು ಎಂದು ತಿಳಿದಿದ್ದರೂ ಅವರು ಕೂಡ ದ್ವಿಭಾಷಿಕರಾಗುವುದಿಲ್ಲ.

ಮೇಲಿನ ವಿವರಣೆಯಿಂದ ತಿಳಿಯುವುದಿಷ್ಟು; ಎರಡೂ ಭಾಷೆಗಳಲ್ಲಿ ಸಮಾನ ಸಾಮರ್ಥ್ಯವನ್ನು ಹೊಂದಿರುವುದು ಒಂದು ತುದಿಯಾದರೆ, ಒಂದು ಭಾಷೆಯ ರೂಪಗಳನ್ನು ಇನ್ನೊಂದು ಭಾಷೆಯ ಬಳಕೆಯಲ್ಲಿ ಸೇರಿಸಿಕೊಳ್ಳುವುದು ಇನ್ನೊಂದು ತುದಿ. ನಿಜವಾದ ದ್ವಿಭಾಷಿಕರು ಈ ಎರಡು ತುದಿಗಳ ನಡುವೆ ಇರುತ್ತಾರೆ. ಅವರಿಗೆ ಎರಡೂ ಭಾಷೆಗಳನ್ನೂ ಬಳಸಲು ಗೊತ್ತಿರುತ್ತದೆ. ಸ್ವತಂತ್ರ ರಚನೆಗಳನ್ನು ಎರಡೂ ಭಾಷೆಗಳಲ್ಲಿ ಮಾಡಬಲ್ಲರು. ಅಥವಾ ಸ್ವತಂತ್ರ ರಚನೆಗಳನ್ನು ಕೇಳಿ ಅರ್ಥಮಾಡಿಕೊಳ್ಳಬಲ್ಲರು.

ದ್ವಿಭಾಷಿಕರು A ಮತ್ತು B ಭಾಷೆಗಳನ್ನು ಕಲಿತಿರುತ್ತಾರೆಂದುಕೊಳ್ಳೋಣ. A ಭಾಷೆಯ ಎಲ್ಲ ಬಗೆಯ ಕೌಶಲಗಳೂ ಇದ್ದು (ಮಾತಾಡುವ, ಅರ್ಥಮಾಡಿಕೊಳ್ಳುವ/ಓದುವ, ಬರೆಯುವ)B ಭಾಷೆಯಲ್ಲಿ ಕೇವಲ ಒಳಪಡೆಯುವ ಕೌಶಲಗಳು (ಕೇಳಿದ್ದನ್ನು ಅರ್ಥಮಾಡಿಕೊಳ್ಳಬಲ್ಲ/ಓದಿದ್ದನ್ನು ಅರಿತುಕೊಳ್ಳಬಲ್ಲ) ಮಾತ್ರ ಇರುವುದು ಸಾಧ್ಯ. ಇಂಥವರನ್ನು ಅರೆದ್ವಿಭಾಷಿಕರು ಎಂದೂ, ಇಂಥ ಸಂದರ್ಭವನ್ನು ಅರೆದ್ವಿಭಾಷಿಕತೆ ಎಂದೂ ಕರೆಯುತ್ತಾರೆ. ಬ್ರೆಜಿಲ್‌ನ ಹಲವು ಪೋರ್ಚುಗೀಸ್-ಸ್ಪ್ಯಾನಿಶ್ ದ್ವಿಭಾಷಿಕರಿಗೆ ಸ್ಪ್ಯಾನಿಶ್ ಮಾತನಾಡಿದರೆ ಅರ್ಥವಾಗುತ್ತದೆ. ಆದರೆ ಮರಳಿ ಸ್ಪ್ಯಾನಿಶ್‌ನಲ್ಲಿ ಮಾತನಾಡಲು ಬಾರದು. ಹಾಗೆಯೇ ಅರ್ಜೆಂಟಿನಾದಲ್ಲಿನ ಇಂಥ ದ್ವಿಭಾಷಿಕರಿಗೆ ಪೋರ್ಚುಗೀಸ್ ಮಾತನ್ನು ಅರಿಯುವ ಶಕ್ತಿ ಇರುತ್ತದೆ. ಆದರೆ ಅವರು ಆ ಭಾಷೆಯಲ್ಲಿ ಸ್ವತಂತ್ರವಾದ ರಚನೆಗಳನ್ನು ಮಾಡಿ ಮಾತಾಡಲಾರರು. ಇಂಥ ದ್ವಿಭಾಷಿಕರಲ್ಲಿ ಸಂಭಾಷಣೆ ಸ್ಪ್ಯಾನಿಶ್ (ಅರ್ಜೆಂಟಿನಾದ ವ್ಯಕ್ತಿ) ಮತ್ತು ಪೋರ್ಚುಗೀಸ್ (ಬ್ರೆಜಿಲ್‌ನ ವ್ಯಕ್ತಿ) ಗಳೆರಡರಲ್ಲೂ ನಡೆಯುತ್ತದೆ. ಏಕಮುಖವಾದ ಭಾಷಾಬಳಕೆ ಇದು. ಇಂಥ ಸಂದರ್ಭಗಳು ಅರೆ ದ್ವಿಭಾಷಿಕತೆಗೆ ನಿದರ್ಶನಗಳು. ಸಂಸ್ಕೃತ ನಾಟಕಗಳಲ್ಲಿ ಉತ್ತಮ ಮತ್ತು ಅನ್ಯ ಪಾತ್ರಗಳ ನಡುವೆ ನಡೆಯುವ ಸಂಭಾಷಣೆಯೂ ಈ ಬಗೆಯದ್ದೇ. ಉತ್ತಮ ಪಾತ್ರಗಳು ಸಂಸ್ಕೃತದಲ್ಲಿ ಮಾತಾಡುತ್ತವೆ. ಪ್ರಾಕೃತದಲ್ಲಿ ಮಾತಾಡುವುದಿಲ್ಲ. ಅನ್ಯಪಾತ್ರಗಳು ಪ್ರಾಕೃತದಲ್ಲಿ ಮಾತಾಡುತ್ತವೆ; ಸಂಸ್ಕೃತವನ್ನು ಮಾತಾಡುವಂತಿಲ್ಲ. ಆದರೆ ಆಯಾ ಸಂದರ್ಭಗಳಲ್ಲಿ ಉತ್ತಮ ಪಾತ್ರಗಳು ಪ್ರಾಕೃತವನ್ನು ಮತ್ತು ಅನ್ಯಪಾತ್ರಗಳು ಸಂಸ್ಕೃತವನ್ನು ಅರ್ಥಮಾಡಿಕೊಳ್ಳಬಲ್ಲವು. ಇಲ್ಲೆಲ್ಲ ನಮಗೆ ಅರೆದ್ವಿಭಾಷಿಕತೆಯ ಲಕ್ಷಣಗಳೇ ತೋರುತ್ತವೆ.

ದ್ವಿಭಾಷಿಕತೆಯ ವ್ಯಾಖ್ಯಾನದಲ್ಲಿ ಬರುವ 'ಎರಡೂ ಭಾಷೆಗಳನ್ನು ಬಳಸಬಲ್ಲ ಸಾಮರ್ಥ್ಯ' ಎಂಬ ಮಾತನ್ನು ಈ ಹಿನ್ನೆಲೆಯಲ್ಲಿ ಸರಿಯಾಗಿ ತಿಳಿಯಬೇಕು. ಬಳಸುವುದು ಎಂದರೆ ವಾಕ್ಯಗಳನ್ನು ಮಾತಾಡುವಾಗ ಇಲ್ಲವೇ ಬರೆಯುವಾಗ ಒಂದು ಭಾಷೆಯಲ್ಲಿ ಹೊಸದಾಗಿ ರೂಪಿಸಿಕೊಂಡು ಇನ್ನೊಂದನ್ನು ಉಪಯೋಗಿಸುವುದು ಎಂದು ಮಾತ್ರ ತಿಳಿಯುವಂತಿಲ್ಲ. ಇನ್ನೊಂದು ಭಾಷೆಯ ಹೊಸರಚನೆಗಳನ್ನು ಕೇಳಿ/ಓದಿ ಅರ್ಥಮಾಡಿಕೊಳ್ಳುವುದಕ್ಕೂ ಆ ಭಾಷೆಯ ಸಾಮರ್ಥ್ಯವನ್ನು ಬಳಸುವುದು ಅನಿವಾರ್ಯ ಹಾಗಾಗಿ ಇಂಥ ಬಗೆಯಲ್ಲಿ ದ್ವಿಭಾಷಿಕರು ಪ್ರವೃತ್ತವಾಗುವುದನ್ನು ಕಾಣುತ್ತೇವೆ. ಸಾಮುದಾಯಿಕ ದ್ವಿಭಾಷಿಕತೆ ಹಾಗೂ ವ್ಯಕ್ತಿಗತ ದ್ವಿಭಾಷಿಕತೆ ಈ ಎರಡೂ ಮಾದರಿಗಳಲ್ಲೂ ಅರೆದ್ವಿಭಾಷಿಕತೆ ಬೇರೆ ಬೇರೆ ರೀತಿಗಳಲ್ಲಿ, ಬೇರೆ ಬೇರೆ ಪರಿಣಾಮದೊಂದಿಗೆ ಕಾಣಿಸಿಕೊಳ್ಳಲು ಸಾಧ್ಯ.

ಅರೆದ್ವಿಭಾಷಿಕತೆಯನ್ನು ಕುಂಠಿತ ಭಾಷಾಸಾಮರ್ಥ್ಯವೆಂದು ತಿಳಿಯಬಾರದು. ಸಾಮಾನ್ಯ ತಿಳುವಳಿಕೆಯಲ್ಲಿ ಹೀಗೆ ಭಾವಿಸಲಾಗುತ್ತದೆ. ಒಂದು ಭಾಷೆಯನ್ನು ಕೇಳಿ ಅರ್ಥಮಾಡಿಕೊಳ್ಳುವುದು ಮತ್ತು ಓದಿ ತಿಳಿಯುವುದು ಮಾತ್ರ ಗೊತ್ತಿದ್ದರೆ ಅದನ್ನು ಪೂರ್ಣಸಾಮರ್ಥ್ಯವೆಂದು ತಿಳಿಯುವುದಿಲ್ಲ. ಒಂದು ಭಾಷೆಯನ್ನಾಡುವವರು ತಮ್ಮ ಸಾಮರ್ಥ್ಯದ ಬಗ್ಗೆ ಸಂಕೋಚವನ್ನು ಹೊಂದಿರುತ್ತಾರೆ. ಕನ್ನಡ–ಇಂಗ್ಲಿಶ್ ದ್ವಿಭಾಷಿಕರಲ್ಲಿ ಹಲವರಿಗೆ ಇಂಗ್ಲಿಶ್ ಮಾತಾಡಿದ್ದನ್ನು ಕೇಳಿದರೆ ಮತ್ತು ಬರೆದ ಇಂಗ್ಲಿಶ್‌ನ್ನು ಓದಿದರೆ ಅರ್ಥವಾಗುತ್ತದೆ. ಅವರು ತಮ್ಮ ಇಂಗ್ಲಿಶ್ ಸಾಮರ್ಥ್ಯ ಪೂರ್ಣಪ್ರಮಾಣದ್ದೆಂದು ತಿಳಿಯುವುದಿಲ್ಲ. ಹಿಂಜರಿಕೆಯಿಂದಲೇ ತಮಗೆ ಇಂಗ್ಲಿಶ್ 'ತಕ್ಕಮಟ್ಟಿಗೆ' ಗೊತ್ತು ಎಂದು ಹೇಳುತ್ತಾರೆ. ಆದರೆ ಇದು ಕುಂಠಿತಭಾಷಾಸಾಮರ್ಥ್ಯಕ್ಕೆ ನಿದರ್ಶನವಲ್ಲ. ಇಂಥ ಅರೆದ್ವಿಭಾಷಿಕ ಸನ್ನಿವೇಶಗಳಿಗೆ ಸಾಮಾಜಿಕವಾದ ಕಾರಣಗಳಿರುತ್ತವೆ. ಎರಡು ಭಾಷಾಸಮುದಾಯಗಳು ಪರಸ್ಪರ ಸಂಪರ್ಕಕ್ಕೆ ಬಾರದೆ ಉಂಟಾಗುವ ದ್ವಿಭಾಷಿಕ ಸಂದರ್ಭದಲ್ಲಿ ಎರಡನೆಯ ಭಾಷೆಯನ್ನು ಓದಬಲ್ಲ, ಕೇಳಿ ತಿಳಿಯಬಲ್ಲ ಸಾಮರ್ಥ್ಯ ಮಾತ್ರ ಸಾಕಾಗುತ್ತದೆ. ಆದ್ದರಿಂದ ಆ ಭಾಷೆಯ ಸಾಮರ್ಥ್ಯವನ್ನು ಪೂರ್ಣಪ್ರಮಾಣದಲ್ಲಿ ಪಡೆದುಕೊಳ್ಳುವ ಅವಶ್ಯಕತೆಯೇ ಬಾರದಿರಬಹುದು. ಹಲವು ಕನ್ನಡ–ಸಂಸ್ಕೃತ ದ್ವಿಭಾಷಿಕರ ಸಾಮರ್ಥ್ಯ ಇದೇ ಮಾದರಿಯದ್ದು. ಸಂಸ್ಕೃತವನ್ನು ಓದಿ, ಕೇಳಿ ತಿಳಿಯಬಲ್ಲಷ್ಟು ಆ ಭಾಷೆ ಸಾಕು. ಆ ಭಾಷೆಯುಲ್ಲೇ ಬರೆಯುವ ಮಾತಾಡುವ ಪ್ರಸಂಗಗಳು ಒದಗುವುದಿಲ್ಲವಾದ್ದರಿಂದ ಆ ಸಾಮರ್ಥ್ಯಗಳನ್ನು ಪಡೆದುಕೊಳ್ಳುವ ಒತ್ತಾಯವೇ ಇರುವುದಿಲ್ಲ.

ಭಾಷಾಸಂಪರ್ಕದಿಂದ ಉಂಟಾಗುವ ಹಲವು ಪರಿಣಾಮಗಳಲ್ಲಿ ಪಿಜಿನ್‌ಗಳ ನಿರ್ಮಾಣವೂ ಒಂದು. ವ್ಯಾಪಾರಕ್ಕಾಗಿ ಬಂದ ವಾಣಿಜ್ಯವರ್ಗದ ಭಾಷೆ ಮತ್ತು ಆಯಾ ಪ್ರದೇಶದ ಜನರ ಆಡುನುಡಿ ಇವುಗಳ ಸಂಪರ್ಕದಿಂದ ಆ ಪ್ರದೇಶದ ಜನರು ವಣಿಜರೊಡನೆ ಮಾತನಾಡಲು ಒಂದು ಭಾಷಾಪ್ರಭೇದವನ್ನು ನಿರ್ಮಿಸಿಕೊಳ್ಳುತ್ತಾರೆ. ಇಂಥ ಸಂಪರ್ಕಭಾಷೆಗಳನ್ನು ಪಿಜಿನ್ ಎನ್ನುತ್ತಾರೆ. ಪಿಜಿನ್‌ಗಳಲ್ಲಿ

ವ್ಯಾಕರಣವು ಬಹುಮಟ್ಟಿಗೆ ಅದನ್ನು ರೂಪಿಸಿಕೊಂಡ ಜನರ ಭಾಷೆಗೆ ಸೇರಿದ್ದು, ಪದಕೋಶ ಮಾತ್ರ ವಣಿಜರ ಭಾಷೆಯಿಂದ ಬಂದಿರುತ್ತದೆ. ಈ ಪಿಜಿನ್ ಅನ್ನು ಆ ಪ್ರದೇಶದ ಜನರು ಮಾತಾಡುತ್ತಾರೆ. ಅವರು ವಣಿಜರೊಡನೆ ಪಿಜಿನ್ ಅನ್ನು, ತಂತಮ್ಮಲ್ಲೇ ತಮ್ಮ ಭಾಷೆಯನ್ನು ಮಾತಾಡುತ್ತಾರೆ. ಆದ್ದರಿಂದ ಅವರು ದ್ವಿಭಾಷಿಕರು. ವಣಿಜರು ತಮ್ಮ ಭಾಷೆಯನ್ನು ಮಾತ್ರ ಮಾತಾಡುತ್ತಾರೆ. ತಮ್ಮೊಡನೆ ಮಾತ್ರವಲ್ಲ; ಪ್ರದೇಶದ ಜನರೊಡನೆಯೂ ಅದೇ ಭಾಷೆಯನ್ನು ಮಾತಾಡುತ್ತಾರೆ. ಪಿಜಿನ್ ಅನ್ನು ಅವರು ಮಾತಾಡುವುದಿಲ್ಲ. ಆದರೆ ಜನರು ಪಿಜಿನ್ ಭಾಷೆ ಬಳಸಿ ಮಾತಾಡಿದರೆ ಇವರಿಗೆ ಅರ್ಥವಾಗುತ್ತದೆ. ಹಾಗಾಗಿ ವಣಿಜರೂ ದ್ವಿಭಾಷಿಕರೇ ಸರಿ. ಆದರೆ ಅವರು ಅರೆ ದ್ವಿಭಾಷಿಕರು. ಪಿಜಿನ್ 'ಮಾತಾಡುವ' ಒತ್ತಾಯ ಅವರಿಗೆ ಇಲ್ಲವೆಂಬುದನ್ನು ಗಮನಿಸಬೇಕು.

**ದ್ವಿಭಾಷಿಕತೆಯ ಬಗೆಗಳು:**

ದ್ವಿಭಾಷಿಕತೆ ಉಂಟಾಗುವ ಸನ್ನಿವೇಶಗಳಲ್ಲಿ ಆಯಾ ಭಾಷಿಕರ ರಾಜಕೀಯ ಸಾಂಸ್ಕೃತಿಕ ಸ್ಥಾನಮಾನಗಳನ್ನು ಅನುಸರಿಸಿ ಬೇರೆ ಬೇರೆ ರೀತಿಯ ದ್ವಿಭಾಷಿಕತೆಗಳು ಉಂಟಾಗುತ್ತವೆ. ಹಾಗೆಯೇ ದ್ವಿಭಾಷಿಕರಾದವರು ತಮ್ಮ ಭಾಷಾಸಾಮರ್ಥ್ಯವನ್ನು ಬಳಸುವ ವಿಧಾನಗಳನ್ನು ಅವಲಂಬಿಸಿ ದ್ವಿಭಾಷಿಕತೆಯಲ್ಲಿ ಬೇರೆ ಬೇರೆ ಬಗೆಗಳು ಉಂಟಾಗುತ್ತವೆ.

ದ್ವಿಭಾಷಿಕರು ಎರಡೂ ಭಾಷೆಗಳನ್ನು ಒಟ್ಟಾಗಿ ಕಲಿಯುವುದು ಒಂದು ಮಾದರಿಯಾದರೆ, ಒಂದು ಭಾಷೆಯನ್ನು ಕಲಿತು ಅನಂತರ ಇನ್ನೊಂದು ಭಾಷೆಯನ್ನು ಕಲಿಯುವುದು ಇನ್ನೊಂದು ಮಾದರಿ. ಚಿಕ್ಕಮಕ್ಕಳು ದ್ವಿಭಾಷಿಕ ಪರಿಸರದಲ್ಲಿ ಭಾಷೆಯನ್ನು ಕಲಿಯಲು ಮೊದಲು ಮಾಡಿದರೆ ಅವರು ಎರಡೂ ಭಾಷೆಗಳನ್ನು ಒಟ್ಟಾಗಿಯೇ ಕಲಿಯುವ ಅವಕಾಶಗಳಿರುತ್ತವೆ. ಇಂಥ ಮಕ್ಕಳಲ್ಲಿ ಯಾವುದು ಮೊದಲ ಭಾಷೆ ಯಾವುದು ಎರಡನೇ ಭಾಷೆ ಎಂದು ಹೇಳುವುದು ಕಷ್ಟ. ಔಪಚಾರಿಕವಾಗಿ ಮನೆ ಭಾಷೆ, ಹೊರಗಿನ ಭಾಷೆ ಎಂದು ವಿಂಗಡಿಸುವುದುಂಟು. ಎಷ್ಟೋ ಸಂದರ್ಭಗಳಲ್ಲಿ ಎರಡೂ ಭಾಷೆಗಳು ಮನೆಭಾಷೆಯಾಗಿರುವುದು ಸಾಧ್ಯ. ಅಂದರೆ ಮಗು ಎರಡೂ ಭಾಷೆಗಳನ್ನು ಮನೆಯೊಳಗೇ ದೊರೆತ ಭಾಷಾಸಂದರ್ಭಗಳಿಂದ ಕಲಿಯುವುದು. ಎರಡು ಬೇರೆ ಬೇರೆ ಭಾಷೆಗಳನ್ನಾಡುವ ತಂದೆ ತಾಯಿಯರಿದ್ದರೆ ಅವರ ಮಗು ತಂದೆ ಮತ್ತು ಅವರ ಬಂಧುಗಳ ಮೂಲಕ ಒಂದು ಭಾಷೆಯನ್ನು, ತಾಯಿ ಮತ್ತು ಅವರ ಬಂಧುಗಳ ಮೂಲಕ ಮತ್ತೊಂದು ಭಾಷೆಯನ್ನು ಕಲಿಯುತ್ತದೆ. ಹಾಗಾಗಿ ಆ ಮಗುವಿಗೆ ಎರಡೂ ಮನೆಭಾಷೆಗಳೇ ಆಗಿರುತ್ತವೆ.

ಒಂದು ಭಾಷೆಯನ್ನು ಕಲಿತ ಅನಂತರ ಇನ್ನೊಂದು ಭಾಷೆಯನ್ನು ಕಲಿಯುವ ಮಾದರಿಯಲ್ಲೂ ಎರಡು ಬಗೆಗಳಿವೆ. ಮಗುವಿಗೆ ಭಾಷೆಯನ್ನು ಕಲಿಯುವ ಅಥವಾ ಭಾಷೆಯನ್ನು ಗಳಿಸುವ ವಿಶೇಷ ಸಾಮರ್ಥ್ಯವೊಂದು ಮೆದುಳಿನಲ್ಲಿ ಪ್ರವೃತ್ತವಾಗಿರುತ್ತದೆಂದು

ತಜ್ಞರು ಹೇಳುತ್ತಾರೆ. ಭಾಷಾಗಳಿಕೆಗೆ ನೆರವಾಗುವ ಈ ಮೆದುಳಿನ ಸಾಮರ್ಥ್ಯ ಮಗುವಿಗೆ ವಯಸ್ಸಾದಂತೆ-ಈಗ ತಿಳಿದಿರುವಂತೆ ಬಹುಮಟ್ಟಿಗೆ ಕೌಮಾರ್ಯಕ್ಕೆ ದಾಟುವ ಹೊತ್ತಿಗೆ-ಕಳೆದು ಹೋಗುತ್ತದೆ. ಎರಡನೇ ಭಾಷೆಯನ್ನು ಮಗು ಈ ಸಾಮರ್ಥ್ಯ ಲಭ್ಯವಿದ್ದಾಗ ಕಲಿಯುವುದು ಒಂದು ಬಗೆ. ಈ ಸಾಮರ್ಥ್ಯ ಮರೆಯಾದ ಮೇಲೆ ವಯಸ್ಕ ಹಂತದಲ್ಲಿ ಎರಡನೆಯ ಭಾಷೆಯನ್ನು ಕಲಿಯುವುದು ಇನ್ನೊಂದು ಬಗೆ. ಎರಡೂ ಭಾಷೆಗಳನ್ನು ಒಟ್ಟಿಗೆ ಕಲಿಯುವ ಪ್ರಸಂಗದ ದ್ವಿಭಾಷಿಕರನ್ನು **ಸಹದ್ವಿಭಾಷಿಕರೆಂದೂ** ಕೌಮಾರ್ಯ ವಯೋಮಾನದೊಳಗೆ ಬೇರೆ ಬೇರೆ ಹಂತದಲ್ಲಿ ಎರಡು ಭಾಷೆಗಳನ್ನು ಕಲಿಯುವವರನ್ನು **ಕ್ರಮದ್ವಿಭಾಷಿಕರೆಂದೂ** ಕರೆಯುತ್ತಾರೆ. ವಯಸ್ಕರು ಎರಡನೇ ಭಾಷೆ ಕಲಿತು ದ್ವಿಭಾಷಿಕರಾಗುವುದು **ಸಾಧಿತ ದ್ವಿಭಾಷಿಕತೆ**. ಈ ವರ್ಗೀಕರಣ ಮುಖ್ಯ. ಏಕೆಂದರೆ ದ್ವಿಭಾಷಿಕರಾಗುವ ಈ ವಿಧಾನಗಳು ಆ ಭಾಷೆಗಳ ಮೇಲೆ ದ್ವಿಭಾಷಿಕರು ಪಡೆದುಕೊಳ್ಳುವ ಪ್ರಭುತ್ವ ಮತ್ತು ಎರಡೂ ಭಾಷೆಗಳನ್ನು ಬಳಸುವ ರೀತಿಯನ್ನು ಪ್ರಭಾವಿಸುತ್ತವೆ.

ದ್ವಿಭಾಷಿಕರಾಗುವ ವ್ಯಕ್ತಿಗಳು ಎರಡನೇ ಭಾಷೆಯನ್ನು ಸ್ವಂತ ಆಯ್ಕೆಯಿಂದ ಕಲಿತಿರುವ ಸಂದರ್ಭಗಳಿರುತ್ತವೆಂದು ತಿಳಿದೆವು. ಪ್ರವಾಸಿ ಗೈಡ್‌ಗಳು, ಹೋಟೆಲ್ ಮಾಣಿಗಳು, ಚಿಕ್ಕ ವ್ಯಾಪಾರಿಗಳು ಹೀಗೆ ಇನ್ನೊಂದು ಭಾಷೆಯಲ್ಲಿ-ಕೆಲವೊಮ್ಮೆ ಹಲವು ಭಾಷೆಗಳಲ್ಲಿ- ವ್ಯವಹರಿಸುವುದನ್ನು ಕಲಿಯಬೇಕಾಗುತ್ತದೆ. ಎಂದರೆ ಇಲ್ಲಿ ದ್ವಿಭಾಷಿಕತೆಗೆ ಒಂದು ನಿರ್ದಿಷ್ಟ ಪಾತ್ರವಿದೆ. ಈ ಬಗೆಯನ್ನು **ನಿಯೋಗಾತ್ಮಕ ದ್ವಿಭಾಷಿಕತೆ** ಎನ್ನುತ್ತಾರೆ. ಇಂಥ ದ್ವಿಭಾಷಿಕತೆಯಲ್ಲಿ ಕನಿಷ್ಠ ಸ್ಥಿತಿಯೊಂದಿರುತ್ತದೆ. ಎರಡನೆಯ ಭಾಷೆಯನ್ನು ಕ್ಲುಪ್ತ ಸಂದರ್ಭ ಮತ್ತು ಉದ್ದೇಶಗಳಿಗೆ ಬಳಸುವಷ್ಟು ಸಾಮರ್ಥ್ಯವನ್ನು ಪಡೆದುಕೊಳ್ಳುವುದೇ ಈ ಕನಿಷ್ಠ ಸ್ಥಿತಿ. ಈ ಸಾಮರ್ಥ್ಯವನ್ನು ಪಡೆದು ಬಳಸುವುದು ಕನಿಷ್ಠ ಶ್ರಮವನ್ನು ಬಯಸುತ್ತದೆ. ಈ ನಿರ್ದಿಷ್ಟ ಉಪಯೋಗದ ವ್ಯಾಪ್ತಿ ಹೆಚ್ಚಾಗುತ್ತಲೂ ಹೋಗಬಹುದು. ಅದಕ್ಕನುಗುಣವಾಗಿ ವ್ಯಕ್ತಿಯು ಎರಡನೆಯ ಭಾಷೆಯಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ಪಡೆಯಬೇಕಾಗುತ್ತದೆ.

ದ್ವಿಭಾಷಿಕರು ಯಾವ ಭಾಷೆಗಳನ್ನೇ ಕಲಿಯಲಿ, ಆ ಭಾಷೆಗಳನ್ನಾಡುವ ಸಮುದಾಯದ ನಡುವೆ ಯಾವ ಬಗೆಯ ರಾಜಕೀಯ, ಸಾಂಸ್ಕೃತಿಕ ಸಂಬಂಧಗಳಿವೆ ಎನ್ನುವುದು ಗಮನಾರ್ಹ ಸಂಗತಿ. ಎರಡೂ ಭಾಷೆಗಳು ಸಮಾನ ನೆಲೆಯಲ್ಲಿದ್ದರೆ, ಅವುಗಳನ್ನಾಡುವ ಜನ ಸಮುದಾಯಗಳ ನಡುವೆ ಅಧಿಕಾರದ, ಸಂಸ್ಕೃತಿಯ ತಾರತಮ್ಯಗಳಿಲ್ಲದಿದ್ದರೆ, ಆಗ ಆ ಎರಡೂ ಭಾಷೆಗಳ ಮೂಲಕ ಉಂಟಾಗುವ ದ್ವಿಭಾಷಿಕತೆಯನ್ನು **ಸಮಾಂತರ ದ್ವಿಭಾಷಿಕತೆ** ಎನ್ನುತ್ತಾರೆ. ಇಂಥ ಸಂದರ್ಭಗಳಲ್ಲಿ ರೂಪುಗೊಳ್ಳುವ ದ್ವಿಭಾಷಿಕರು ತಾವು ಕಲಿತ ಎರಡೂ ಭಾಷೆಗಳನ್ನು ಬಳಸುವಾಗ ಯಾವುದೇ ನಿರ್ಬಂಧವನ್ನು ಅನುಭವಿಸುವುದಿಲ್ಲ. ಎಲ್ಲ ವಲಯಗಳಲ್ಲೂ ಆ ಭಾಷೆಗಳನ್ನು ಬಳಸಲು ಸಿದ್ಧರಿರುತ್ತಾರೆ. ಆದರೆ ಆ ಎರಡೂ ಭಾಷೆಗಳ ನಡುವೆ ಅಧಿಕಾರದ, ಸಂಸ್ಕೃತಿಯ ತಾರತಮ್ಯವಿದ್ದರೆ ಆಗ ಉಂಟಾಗುವ ದ್ವಿಭಾಷಿಕತೆಗೆ **ಲಂಬಾಂತರ ದ್ವಿಭಾಷಿಕತೆ** ಎನ್ನುತ್ತಾರೆ. ಈ ಬಗೆಯ ದ್ವಿಭಾಷಿಕತೆಯ ಪ್ರಾಯೋಗಿಕ ಪರಿಣಾಮಗಳು ಬೇರೆ

ರೀತಿಯಲ್ಲಿರುತ್ತವೆ. ಭಾಷೆಗಳ ನಡುವೆ ಮೇಲು/ಕೀಳು ಎಂಬ ಸಂಬಂಧವಿದ್ದಾಗ ದ್ವಿಭಾಷಿಕರು ಆಯಾ ಭಾಷೆಯ ಬಳಕೆಗಳನ್ನು ನಿರ್ಬಂಧಿತ ಬಗೆಯಲ್ಲಿ ಮಾಡುತ್ತಿರುತ್ತಾರೆ. ಒಂದು ಭಾಷೆಯನ್ನು ಸೀಮಿತ ವಲಯಗಳಲ್ಲಿ ಬಳಸಿ ಮತ್ತೊಂದನ್ನು ಉಳಿದ ವಲಯಗಳಲ್ಲಿ ಬಳಸುವುದು ಒಂದು ವಿಧಾನ. ಆಗ ಒಂದು ವಲಯಕ್ಕೆ ನಿಗದಿಯಾದ ಭಾಷೆಯನ್ನು ಇನ್ನೊಂದು ವಲಯದಲ್ಲಿ ಬಳಸುವುದು ಉಲ್ಲಂಘನೆಯಾಗಿ ತೋರುತ್ತದೆ.

ಈ ಮೇಲಿನ ಲಂಬಾಂತರ ದ್ವಿಭಾಷಿಕತೆಯ ವಿವರಣೆಗೆ ಪೂರಕವಾಗಿ ಇನ್ನೊಂದು ಭಾಷಾಸ್ಥಿತಿಯನ್ನು ಚರ್ಚಿಸುವ ಅವಶ್ಯಕತೆ ಇದೆ. 'ದ್ವಿಸ್ತರತೆ' ಎನ್ನುವ ಭಾಷಾಸ್ಥಿತಿಯಲ್ಲಿ ಒಂದು ಭಾಷೆಯಲ್ಲೇ ಇರುವ ಎರಡು ಪ್ರಭೇದಗಳನ್ನು ಉನ್ನತ ಮತ್ತು ಅಧಮ ಎಂದು ಭಾಷಿಕರು ಗುರುತಿಸಿಕೊಳ್ಳುತ್ತಾರೆ. ಈ ಪ್ರಭೇದಗಳು ಉಂಟಾಗಲು ಕಾರಣಗಳೇನೇ ಇರಲಿ, ಅವುಗಳನ್ನು ಬಳಸುವ ಕ್ರಮದಲ್ಲಿ ನಿಯಮಗಳಿರುತ್ತವೆ. ಅಲ್ಲದೆ ಆ ಪ್ರಭೇದಗಳನ್ನು ಭಾಷಿಕರು ಗಳಿಸಿಕೊಳ್ಳುವ ಕ್ರಮದಲ್ಲೂ ವ್ಯತ್ಯಾಸಗಳಿರುತ್ತವೆ. ಉನ್ನತ ರೂಪವು ಪೂಜೆ, ಆರಾಧನೆಗಳಲ್ಲಿ, ಸಾರ್ವಜನಿಕ ಸಂಪರ್ಕದಲ್ಲಿ, ಶಿಕ್ಷಣದಲ್ಲಿ ಬಳಕೆಯಾಗುತ್ತದೆ. ಇದನ್ನು ವಿಶೇಷ ತರಬೇತಿಯ ಮೂಲಕ ಭಾಷಿಕರು ಪಡೆದುಕೊಳ್ಳುತ್ತಾರೆ. ಅಧಮ ರೂಪವು ವ್ಯವಹಾರಗಳಲ್ಲಿ, ಜಗಳಗಳಲ್ಲಿ, ಬೀದಿಯಲ್ಲಿ, ಆಪ್ತವಲಯಗಳಲ್ಲಿ ಬಳಕೆಯಾಗುತ್ತದೆ. ಇದು ಭಾಷಿಕರಿಗೆ ಅನೌಪಚಾರಿಕ ಕಲಿಕೆಯ ಮೂಲಕ ಲಭಿಸುತ್ತದೆ. ಈ ದ್ವಿಸ್ತರತೆಯ ಪರಿಣಾಮಗಳ ಚರ್ಚೆಗೆ ಇಲ್ಲಿ ಅವಕಾಶವಿಲ್ಲ. ಆದರೆ ಭಾಷೆಯ ಎರಡು ಪ್ರಭೇದಗಳ ನಡುವೆ ದ್ವಿಸ್ತರತೆ ಉಂಟಾಗುವುದೆಂಬ ವ್ಯಾಖ್ಯೆಯನ್ನು ವಿಸ್ತರಿಸಿ, ಶಿಷ್ಟ/ಪ್ರಮಾಣರೂಪ ಮತ್ತು ಉಪಭಾಷೆಗಳ ನಡುವೆ, ಲಿಖಿತ ಮತ್ತು ಮೌಖಿಕ ರೂಪಗಳ ನಡುವೆ, ಮತ್ತು ದ್ವಿಭಾಷಿಕರು ಕಲಿಯುವ ಎರಡು ಭಾಷೆಗಳ ನಡುವೆ ಕೂಡ ಈ ಸ್ಥಿತಿ ಉಂಟಾಗುವುದು ಸಾಧ್ಯವೆಂದು ವಾದಿಸಲಾಗಿದೆ. ಕನ್ನಡ-ಇಂಗ್ಲಿಶ್ ದ್ವಿಭಾಷಿಕರಲ್ಲಿ ಈ ದ್ವಿಸ್ತರತೆ ಕಾಣಿಸಿಕೊಳ್ಳಲು ಕಾರಣವೆಂದರೆ ಇಂಗ್ಲಿಶ್ ಗೌರವಯುತ, ಅಧಿಕಾರದ ಸ್ಥಾನದಲ್ಲಿದ್ದು ಕನ್ನಡಕ್ಕಿಂತ ಮೇಲುಸ್ತರದ ಭಾಷೆಯೆಂಬ ತಿಳುವಳಿಕೆ ಪ್ರಚುರವಾಗುವುದೇ ಆಗಿದೆ.

ಲಂಬಾಂತರ ದ್ವಿಭಾಷಿಕತೆ ಎಷ್ಟೋ ವೇಳೆ ಮೇಲೆ ಹೇಳಿದ ದ್ವಿಸ್ತರತೆಯಲ್ಲಿ ಕೊನೆಗೊಳ್ಳುವ ಸಾಧ್ಯತೆ ಇದೆ. ಆಗ ಮೊದಲ ಭಾಷೆಯನ್ನು ನಿರ್ದಿಷ್ಟ, ಸೀಮಿತ ವಲಯಗಳಿಗೆ ಮೀಸಲಾಗಿರಿಸಿ ಗೌರವದ ಭಾಷೆಯನ್ನು ಸಂಪರ್ಕಕ್ಕೆ, ಉನ್ನತ ವ್ಯವಹಾರಗಳಿಗೆ ಬಳಸಲಾಗುತ್ತದೆ. ಈ ವಿಭಜನೆಯನ್ನು ದ್ವಿಭಾಷಿಕರು ಮತ್ತು ದ್ವಿಭಾಷಿಕರೊಡನೆ ವ್ಯವಹರಿಸುವ ಏಕಭಾಷಿಕರು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ. ಈ ವಿಭಜನೆಯ ಉಲ್ಲಂಘನೆ ಹಲವಾರು ಸಾಮಾಜಿಕ ಪ್ರತಿಕ್ರಿಯೆಗಳಿಗೆ, ಪ್ರತಿಭಟನೆಗಳಿಗೆ ಕಾರಣವಾಗಬಹುದು. ಪ್ರಾರ್ಥನೆಯ ಭಾಷೆಯಾಗಿ ಲ್ಯಾಟಿನ್ ಬದಲು ದೇಶೀಯ ಭಾಷೆಗಳನ್ನು ಬಳಸಬೇಕೆಂದಾಗ, ಆಡಳಿತ ಭಾಷೆಯ ಸ್ಥಾನದಲ್ಲಿರುವ ಇಂಗ್ಲಿಶ್ ಸ್ಥಾನಕ್ಕೆ ಭಾರತದ ಯಾವುದಾದರೂ ಭಾಷೆಯನ್ನು ತರಬೇಕೆಂದಾಗ ಯಾವ ರೀತಿಯ ಪ್ರತಿಕ್ರಿಯೆಗಳು ಉಂಟಾಗುತ್ತವೆಂಬುದು ಈಗಾಗಲೇ ಗೊತ್ತಿರುವ ವಿಷಯ.

ದ್ವಿಭಾಷಿಕತೆಯನ್ನು ಬೇರೊಂದು ರೀತಿಯಲ್ಲಿ ವರ್ಗೀಕರಿಸುವ ಪ್ರಯತ್ನಗಳು ನಡೆದಿವೆ. ದ್ವಿಭಾಷಿಕ ವ್ಯಕ್ತಿಯು ಎರಡೂ ಭಾಷೆಗಳಲ್ಲಿ ವ್ಯವಹರಿಸುವಾಗ ಅನುಸರಿಸುವ ಭಾಷಿಕತಂತ್ರಗಳನ್ನು ಅವಲಂಬಿಸಿ ಮಾಡಿದ ವರ್ಗೀಕರಣವನ್ನು ನಾವೀಗ ಗಮನಿಸಬಹುದು. ಕನ್ನಡ–ತೆಲುಗು ಭಾಷೆಯ ದ್ವಿಭಾಷಿಕರನ್ನು ಗಮನಿಸೋಣ. ಕನ್ನಡದಲ್ಲಿ 'ಮನೆ' ಎಂಬ ಶಬ್ದವಿದೆ. ತೆಲುಗಿನಲ್ಲಿ 'ಇಲ್ಲು' ಎಂಬ ಶಬ್ದವಿದೆ. ಇವೆರಡೂ ಪದಗಳ ಶಾಬ್ದಿಕ ರೂಪಗಳು ಬೇರೆ ಬೇರೆ ಎಂಬುದು ಮೇಲುನೋಟಕ್ಕೆ ಗೊತ್ತಾಗುತ್ತದೆ. ಆದರೆ ಈ ಎರಡೂ ಪದಗಳೂ ಪ್ರತಿನಿಧಿಸುವ ಅರ್ಥವಲಯಗಳಲ್ಲೂ ವ್ಯತ್ಯಾಸಗಳಿರಲು ಸಾಧ್ಯ. ಬೇರೊಂದು ನಿದರ್ಶನವನ್ನು ನೋಡೋಣ. 'ಘರ್' ಎಂಬುದು ಹಿಂದಿಯ ಒಂದು ಪದ. ಹಿಂದಿಯಲ್ಲಿಯೇ 'ಮಕಾನ್' ಎಂಬ ಪದವೂ ಇದೆ. ಇವೆರಡೂ ಪ್ರತಿನಿಧಿಸುವ ಅರ್ಥಗಳು ಬೇರೆ ಬೇರೆ. ಇಂಗ್ಲಿಶಿನ ಹೋಮ್ ಮತ್ತು ಹೌಸ್ ಪದಗಳಿಗಿರುವ ಅರ್ಥವ್ಯತ್ಯಾಸಗಳೇ ಸುಮಾರಾಗಿ ಘರ್ ಮತ್ತು ಮಕಾನ್‌ಗಳ ನಡುವೆ ಇದೆ. ಆದ್ದರಿಂದ ಎರಡು ಭಾಷೆಗಳ ನಡುವೆ ನಾವು ವ್ಯಾವಹಾರಿಕವಾಗಿ ಸಮಾನವೆಂದು ತಿಳಿಯುವ ಪದಗಳಲ್ಲಿ ಸೂಕ್ಷ್ಮ ಅರ್ಥವ್ಯತ್ಯಾಸಗಳಿರುವುದು ಸಾಧ್ಯ. ದ್ವಿಭಾಷಿಕರಲ್ಲಿ ಈ ಎರಡೂ ಭಾಷೆಗಳ ಪದಗಳನ್ನು ಮತ್ತು ಆಯಾ ಪದಗಳು ಆಯಾ ಭಾಷೆಯಲ್ಲಿ ಪ್ರತಿನಿಧಿಸುವ ಅರ್ಥಪರಂಪರೆಯನ್ನು ಪ್ರತ್ಯೇಕವಾಗಿ ಇರಿಸಿಕೊಳ್ಳುವವರದು ಒಂದು ಬಗೆ. ಇವರನ್ನು **ಸಹವರ್ತಿದ್ವಿಭಾಷಿಕರೆಂದು** ಕರೆಯುವರು. ಮತ್ತೆ ಕೆಲವರು ದ್ವಿಭಾಷಿಕರು ಎರಡೂ ಭಾಷೆಗಳ ಪದಕೋಶಗಳನ್ನು ಬೇರೆ ಬೇರೆಯಾಗಿ ಇರಿಸಿಕೊಂಡರೂ, ಅವು ಪ್ರತಿನಿಧಿಸುವ ಅರ್ಥವಲಯವನ್ನು ಮಾತ್ರ ಒಂದೇ ಆಗಿಸಿಕೊಳ್ಳುತ್ತಾರೆ. ಮೇಲೆ ಹೇಳಿದ ನಿದರ್ಶನದಲ್ಲಿ ಕನ್ನಡ–ತೆಲುಗು ದ್ವಿಭಾಷಿಕರು ಕನ್ನಡದಲ್ಲಿ 'ಮನೆ' ಎಂದಾಗ, ತೆಲುಗಿನಲ್ಲಿ 'ಇಲ್ಲು' ಎಂದಾಗ ಉದ್ದೇಶಿಸಿದ ಅರ್ಥ ಮಾತ್ರ ಒಂದೇ ಆಗಿರುತ್ತದೆ. ಈ ಬಗೆಯ ದ್ವಿಭಾಷಿಕತೆಯನ್ನು **ಸಂಯುಕ್ತ ದ್ವಿಭಾಷಿಕತೆ** ಎನ್ನುತ್ತಾರೆ. ಹೀಗೆ ಅರ್ಥವಲಯಗಳು ಒಂದರೊಡನೆ ಒಂದು ಬೆರೆಯುವಾಗ ಯಾವ ಭಾಷೆಯ ಪದಕೋಶದ ಅರ್ಥವಲಯ ಪ್ರಧಾನವಾಗುತ್ತದೆ ಎಂಬುದು ನಿಗದಿಯಾಗಿರುವುದಿಲ್ಲ. ಸಂಯುಕ್ತ ದ್ವಿಭಾಷಿಕರು ಎರಡು ಭಾಷೆಗಳನ್ನು ಬಳಸಿದರೂ ಅವರು ಮಾತಿನಲ್ಲಿ ಪ್ರತಿನಿಧಿಸುವ ಲೋಕ ಮಾತ್ರ ಒಂದೇ ಆಗಿರುತ್ತದೆ. ಆದರೆ ಸಹವರ್ತಿ ದ್ವಿಭಾಷಿಕರು ಎರಡು ಭಾಷೆಗಳನ್ನಾಡುವುದು ಮಾತ್ರವಲ್ಲ; ಎರಡು ಲೋಕಗಳನ್ನು ತಮ್ಮ ಭಾಷಾಬಳಕೆಯಲ್ಲಿ ಪ್ರತಿನಿಧಿಸುತ್ತಿರುತ್ತಾರೆ. ಇಲ್ಲಿ ಮೂರನೆಯ ಬಗೆಯೊಂದಿದೆ. ಎರಡು ಭಾಷೆಗಳ ಪದಕೋಶಗಳನ್ನು ಪ್ರತ್ಯೇಕವಾಗಿ ಇರಿಸಿಕೊಂಡರೂ ಅರ್ಥವಲಯಕ್ಕೆ ಯಾವುದಾದರೂ ಒಂದು ಭಾಷೆಯನ್ನು ಸಂಪೂರ್ಣವಾಗಿ ಆಶ್ರಯಿಸುವುದು ಈ ದ್ವಿಭಾಷಿಕ ಬಗೆಯ ಲಕ್ಷಣ. ಈ ದ್ವಿಭಾಷಿಕರು ಕಲಿತ ಎರಡು ಭಾಷೆಗಳಲ್ಲಿ ಒಂದು ಪ್ರಧಾನ, ಅಧಿಕಾರದ ಭಾಷೆಯಾಗಿದ್ದು, ಎರಡನೆಯದು ಸಾಂಸ್ಕೃತಿಕವಾಗಿ ದುರ್ಬಲವಾಗಿದ್ದರೆ ಆಗ ಎರಡನೆಯ ಭಾಷೆಯ ಪದಗಳಿಗೆ ಪ್ರಧಾನ ಭಾಷೆಯ ಅರ್ಥಗಳನ್ನೇ ಹೊಂದಿಸಿಕೊಳ್ಳುತ್ತಾರೆ. ಅಂದರೆ ಅಧೀನ ಭಾಷೆಯ ಪದಗಳನ್ನೂ ಪ್ರಧಾನ ಭಾಷೆಯ ಲೋಕದೃಷ್ಟಿಗೆ ಹೊಂದಿಸಿಕೊಳ್ಳುತ್ತಾರೆ. ಈ ಬಗೆಯ ದ್ವಿಭಾಷಿಕತೆಯನ್ನು **ಅನುವರ್ತಿ ದ್ವಿಭಾಷಿಕತೆ** ಎನ್ನುತ್ತಾರೆ. ಈ ವಿಭಜನೆಯಲ್ಲಿ ಮಾರ್ಪಾಡನ್ನು ಬಯಸುವ

ಕೆಲವರು ಎರಡನೇ ಮತ್ತು ಮೂರನೇ ಬಗೆಗಳನ್ನು ಒಂದೇ ಗುಂಪಿನಲ್ಲಿ ಇರಿಸಲು ಬಯಸುತ್ತಾರೆ. ಅವರು ಹೇಳುವಂತೆ ಈ ಎರಡೂ ಬಗೆಗಳಲ್ಲಿ ಅರ್ಥವಲಯಗಳು ಬೆರೆಯುವುದು ಸಾಮಾನ್ಯ ಲಕ್ಷಣವಾಗಿದೆ. ಯಾವ ಅರ್ಥವಲಯ ಪ್ರಧಾನವಾಗುವುದೆಂಬ ವಿಷಯದಲ್ಲಿ ವ್ಯತ್ಯಾಸಗಳಿದ್ದರೂ ಪ್ರಕ್ರಿಯೆಯ ಸಮಾನತೆಯಿಂದ ಇವೆರಡನ್ನೂ ಬೇರೆ ಬೇರೆ ಬಗೆಯ ದ್ವಿಭಾಷಿಕತೆಗಳೆಂದು ತಿಳಿಯುವ ಅವಶ್ಯಕತೆ ಇಲ್ಲವೆಂದು ಅವರು ವಾದಿಸುತ್ತಾರೆ.

ಈ ಮೇಲಿನ ವಿಭಜನೆಯು, ದ್ವಿಭಾಷಿಕತೆಯು ರೂಪುಗೊಳ್ಳುವ ಕ್ರಮ, ಸಂದರ್ಭ ಇತ್ಯಾದಿಗಳನ್ನು ಅವಲಂಬಿಸದೆ, ಅದು ಪ್ರಕ್ರಿಯಾತ್ಮಕವಾಗುವ ನೆಲೆಯನ್ನು ಅನುಸರಿಸಿದೆ. ಇದು ಬಹುಮಟ್ಟಿಗೆ ಮನೋವಿಜ್ಞಾನಿಗಳ ಆಸಕ್ತಿಯ ವಿಷಯ. ದ್ವಿಭಾಷಿಕರ ಶಿಕ್ಷಣ ಕ್ರಮವನ್ನು ಯೋಜಿಸುವ ಸಮಾಜಗಳೂ ಕೂಡ ಈ ವಿಭಜನೆಯನ್ನು ಗಮನಿಸುವುದು ಅವಶ್ಯವಾಗುತ್ತದೆ.

ದ್ವಿಭಾಷಿಕರು ಎರಡು ಭಾಷೆಗಳನ್ನು ಕಲಿತಾದ ಮೇಲೆ ಆ ಎರಡೂ ಭಾಷೆಗಳ ಸಾಮರ್ಥ್ಯಗಳ ನಡುವೆ ಮುಖಾಮುಖಿ ಪ್ರಾರಂಭವಾಗುತ್ತದೆ. ಇದಕ್ಕೆ ಸಾಮಾಜಿಕವಾದ ಕಾರಣಗಳೂ ಇರುತ್ತವೆ. ಮೊದಲು ಕಲಿತ ಭಾಷೆಯ ಸಾಮರ್ಥ್ಯಗಳಿಗೆ ಅನಂತರ ಕಲಿತ ಎರಡನೇ ಭಾಷೆಯ ಸಾಮರ್ಥ್ಯಗಳು ಪೂರಕವಾಗಿ, ಪೋಷಕವಾಗಿ ಒದಗಿಬರುವುದು ಒಂದು ವಿಧ. ಇದನ್ನು **ಕೂಡು ದ್ವಿಭಾಷಿಕತೆ** ಎನ್ನುತ್ತಾರೆ. ಬಹು ಹಿಂದಿನಿಂದಲೂ ಶಿಕ್ಷಣವನ್ನು ಪಡೆಯುವಾಗ ಎರಡನೇ ಭಾಷೆಯನ್ನು ಕಲಿಯುವ ಅವಕಾಶ ಪಡೆದವರಲ್ಲಿ ಈ ಬಗೆಯ ದ್ವಿಭಾಷಿಕತೆ ಕಂಡು ಬಂದಿದೆ. ಕನ್ನಡ-ಸಂಸ್ಕೃತ ದ್ವಿಭಾಷಿಕತೆ ಇದಕ್ಕೊಂದು ಮಾದರಿ. ಸಂಸ್ಕೃತದ ಕಲಿಕೆ ಕನ್ನಡದ ಸಾಮರ್ಥ್ಯ ಬಳಕೆಗೆ ಅಡ್ಡಿಯಾಗುವ ಬದಲು ನೆರವಾಗುತ್ತದೆಂಬ ನಂಬಿಕೆ ಇದ್ದಿತು.ಅಲ್ಲದೆ ಪ್ರಾಯೋಗಿಕವಾಗಿಯೂ ಇದನ್ನು ಸಮರ್ಥಿಸುವ ಸನ್ನಿವೇಶಗಳಿವೆ. ಹೀಗಾಗಿ ಕೂಡು ದ್ವಿಭಾಷಿಕತೆಗೆ ಇದೊಂದು ನಿದರ್ಶನ. ಪರ್ಷಿಯನ್-ಅರಾಬಿಕ್, ಇಂಗ್ಲಿಶ್-ಲ್ಯಾಟಿನ್, ಇಂಗ್ಲಿಶ್-ಫ್ರೆಂಚ್ ಈ ಎಲ್ಲ ದ್ವಿಭಾಷಿಕ ಸಂದರ್ಭಗಳೂ ಇಂಥವೇ ಆಗಿವೆ.

ಆದರೆ ಇದಕ್ಕೆ ವಿರುದ್ಧವಾಗಿ ಎರಡನೆಯ ಭಾಷೆಯ ಮೂಲಕ ದೊರೆತ ಸಾಮರ್ಥ್ಯಗಳು ಮೊದಲ ಭಾಷೆಯ ಬಳಕೆಗೆ ಅಡ್ಡಿಯಾಗುವುದೂ ಉಂಟು. ಇಂಥ ಸಂದರ್ಭವನ್ನು **ತಡೆ ದ್ವಿಭಾಷಿಕತೆ** ಎನ್ನುತ್ತಾರೆ. ಮೊದಲ ಭಾಷೆಯ ಸಾಮರ್ಥ್ಯಗಳು ಪ್ರಕಟಗೊಳ್ಳದೆ ಕಮರಿ ಹೋಗುತ್ತವೆ, ಅಥವಾ ಸೀಮಿತ ವಲಯಗಳಿಗೆ ಮಾತ್ರ ಸಾಕೆನಿಸುವಂತಿರುತ್ತವೆ. ಎರಡನೇ ಭಾಷೆಯು ಸಾರ್ವಭೌಮ ಭಾಷೆಯಾಗಿ ಬರುತ್ತದೆ. ಕನ್ನಡ-ಇಂಗ್ಲಿಶ್ ದ್ವಿಭಾಷಿಕತೆಯನ್ನು ತಡೆ ದ್ವಿಭಾಷಿಕತೆಗೆ ಒಂದು ಮಾದರಿಯನ್ನಾಗಿ ಗಮನಿಸಬಹುದು. ಸಾಮಾನ್ಯ ತಿಳುವಳಿಕೆಯಂತೆ ಇಂಗ್ಲಿಶ್ ಮೂಲಕ ಏನನ್ನಾದರೂ ಹೇಳಬಹುದು. ಆದರೆ ಕನ್ನಡವನ್ನು ಎಲ್ಲ ವಲಯಗಳಲ್ಲೂ ಬಳಸಲು ಸಾಧ್ಯವಾಗುವುದಿಲ್ಲ. ಮತ್ತೆ ಮತ್ತೆ ಈ 'ತಿಳುವಳಿಕೆ'ಯನ್ನು ಪ್ರಚುರಪಡಿಸುವುದನ್ನು ನೋಡುತ್ತೇವೆ. ಕನ್ನಡ-ಇಂಗ್ಲಿಶ್ ದ್ವಿಭಾಷಿಕರಲ್ಲೂ ಈ ನಂಬಿಕೆ ಬೇರೂರಿದೆ. ಕನ್ನಡದ ಎಲ್ಲ ಸಾಮರ್ಥ್ಯಗಳೂ

ಅವರಲ್ಲಿ ಪ್ರಕಟಗೊಳ್ಳುವುದಿಲ್ಲ. ಇಂಗ್ಲಿಶ್ ವ್ಯಾಪಕವಾಗಿ ಬಳಕೆಯಾಗುವ ಮೂಲಕ ಕನ್ನಡದ ಅವಕಾಶಗಳು ಸೀಮಿತವಾಗುತ್ತವೆ. ಜಗತ್ತಿನಾದ್ಯಂತ ಈ ಬಗೆಯ ದ್ವಿಭಾಷಿಕತೆಗೆ ನೂರಾರು ನಿದರ್ಶನಗಳು ದೊರಕುತ್ತವೆ. ವಲಸೆಗಾರರು, ವಸಾಹತು ಆಡಳಿತದಲ್ಲಿದ್ದವರು, ವ್ಯಾಪಾರ ಸಂಬಂಧದಲ್ಲಿ ಅಧೀನರಾಗಿರುವವರು, ಅಲ್ಪಸಂಖ್ಯಾತರು, ಬುಡಕಟ್ಟು ಜನರು, ಸಮಾಜದ ಅಂಚಿಗೆ ತಳ್ಳಲ್ಪಟ್ಟವರು ಈ ಬಗೆಯ ದ್ವಿಭಾಷಿಕ ಸಂದರ್ಭಗಳಲ್ಲಿರುತ್ತಾರೆ.

ದ್ವಿಭಾಷಿಕರು ಎರಡೂ ಭಾಷೆಗಳಲ್ಲಿ ಪ್ರಾವೀಣ್ಯವನ್ನು ಪಡೆದುಕೊಳ್ಳುವ ವಿವಿಧ ಹಂತಗಳನ್ನು ಭಾಷಾಶಾಸ್ತ್ರಜ್ಞರು ಗುರುತಿಸಿದ್ದಾರೆ. ಮೊದಲ ಹಂತವನ್ನು **ಕ್ಷೀಣ ದ್ವಿಭಾಷಿಕತೆ** ಎನ್ನುತ್ತಾರೆ. ಈ ಹಂತದಲ್ಲಿ ಎರಡೂ ಭಾಷೆಗಳಲ್ಲಿ ಅಥವಾ ಎರಡನೇ ಭಾಷೆಯಲ್ಲಿ ಭಾಷಿಕಕೌಶಲಗಳು ಇನ್ನೂ ಆರಂಭಿಕ ಹಂತದಲ್ಲೇ ಇರುತ್ತವೆ. ಕೇಳುವ/ ಓದುವ ಸಾಮರ್ಥ್ಯ ಎರಡನೇ ಹಂತ. ಇಲ್ಲಿ ಉತ್ಪಾದನ ಕೌಶಲಗಳು ದ್ವಿಭಾಷಿಕರಿಗೆ ಒದಗಿರುವುದಿಲ್ಲ. ಮುಂದಿನ ಹಂತದಲ್ಲಿ ಎರಡೂ ಭಾಷೆಗಳಲ್ಲೂ ಎಲ್ಲ ಕೌಶಲಗಳೂ ಒದಗಿರುತ್ತವೆ. ಅವುಗಳ ಬಳಕೆಯಲ್ಲಿ ದ್ವಿಭಾಷಿಕರು ತರತಮ ಭಾವವನ್ನು ಪ್ರಕಟಿಸಬಹುದು. ಆದರೆ ಆ ಕೌಶಲಗಳು ಅವರಿಗೆ ಲಭ್ಯವಿರುತ್ತವೆ. ಎರಡೂ ಭಾಷೆಗಳ ಸಾಮರ್ಥ್ಯವನ್ನು ಅಡೆತಡೆಗಳಿಲ್ಲದೆ ಬಳಸಿದರೆ **ಸಮ ದ್ವಿಭಾಷಿಕತೆಯೂ,** ಏರುಪೇರುಗಳಿದ್ದರೆ **ಅಸಮ ದ್ವಿಭಾಷಿಕತೆಯೂ** ಉಂಟಾಗುತ್ತದೆ.

ಈ ಹಂತಗಳನ್ನು ಗುರುತಿಸುವುದು ಅವಶ್ಯ. ಏಕೆಂದರೆ ವಿವಿಧ ಹಂತಗಳನ್ನು ದ್ವಿಭಾಷಿಕರು ದಾಟಿ ಬರುವಾಗ ಎರಡನೇ ಭಾಷೆಯನ್ನು ಬಳಸುವ ಸಾಮರ್ಥ್ಯ ಹೆಚ್ಚಾಗುತ್ತಿರುವುದು ಗಣನೆಗೆ ಬರುತ್ತದೆ. ಇದು **ಏರು ದ್ವಿಭಾಷಿಕತೆ**ಯಾಗುತ್ತದೆ. ಆದರೆ ಎಷ್ಟೋ ವೇಳೆ ವಿವಿಧ ಹಂತಗಳನ್ನು ದಾಟುವಾಗ ಎರಡರಲ್ಲೊಂದು ಭಾಷೆಯನ್ನು ಬಳಸುವ ಅವಕಾಶಗಳು ಕಡಿಮೆಯಾಗಿ ಆ ಸಂಬಂಧದ ಸಾಮರ್ಥ್ಯಗಳೂ ಕುಗ್ಗುತ್ತವೆ. ಇದು **ಇಳಿ ದ್ವಿಭಾಷಿಕತೆ**. ವಲಸೆ ಹೋಗುವ ಕುಟುಂಬದ ಮಕ್ಕಳು ದ್ವಿಭಾಷಿಕತೆಯ ವಿವಿಧ ಹಂತಗಳಲ್ಲಿದ್ದು ವಲಸೆ ಹೋದ ದೇಶದಲ್ಲಿ ತಮ್ಮ ಮೊದಲ ಭಾಷೆ (ಅಥವಾ ಮನೆ ಭಾಷೆ)ಯನ್ನು ಬಳಸುವ ಅವಕಾಶಗಳನ್ನು ಪಡೆಯುವುದಿಲ್ಲ. ದೊರಕಿದರೂ ಅವು ಕ್ಷೀಣವಾಗಿರುತ್ತವೆ. ಹಾಗಾಗಿ ಅವರು ತಮ್ಮ ಮೊದಲ ಭಾಷೆಯ ಸಾಮರ್ಥ್ಯಗಳನ್ನು ಕುಗ್ಗಿಸಿಕೊಳ್ಳುತ್ತಾರೆ. ಸಮರ್ಥವಾಗಿ ಆ ಭಾಷೆಯನ್ನು ಬಳಸಲು ಅಶಕ್ತರಾಗುತ್ತಾರೆ. ಇದು ಇಳಿ ದ್ವಿಭಾಷಿಕತೆಯ ಲಕ್ಷಣ.

**ದ್ವಿಭಾಷಿಕತೆ ಮತ್ತು ಸಮಾಜ**

ದ್ವಿಭಾಷಿಕತೆಯು ಉಂಟಾಗಲು ಇರುವ ಕಾರಣ, ವಿವಿಧ ಬಗೆಗಳು, ಆ ಬಗೆಗಳಿಗೆ ಇರುವ ಕಾರಣ ಇತ್ಯಾದಿಗಳನ್ನು ಈವರೆಗೆ ಗಮನಿಸಿದ್ದೇವೆ. ದ್ವಿಭಾಷಿಕ ಸನ್ನಿವೇಶವಿರುವ ಸಮಾಜದಲ್ಲಿ ಸಮಸ್ಯೆಗಳಿರುತ್ತವೆಯೋ, ಅಥವಾ ಸಮಸ್ಯೆಗಳಿರುತ್ತವೆ ಎಂದು ಭಾವಿಸುತ್ತೇವೆಯೋ, ಅಥವಾ ದ್ವಿಭಾಷಿಕತೆ ಒಂದು ಪರಿಣಾಮರಹಿತ ಸಾಮಾಜಿಕ ಲಕ್ಷಣವೋ ಇತ್ಯಾದಿಗಳನ್ನು ತಿಳಿಯಬೇಕಾದ ಅವಶ್ಯಕತೆ ಇದೆ.

ಭಾಷಾಶಾಸ್ತ್ರದ ಮುಖ್ಯ ಮಿತಿ ಎಂದರೆ ಭಾಷಾಶಾಸ್ತ್ರಜ್ಞರು ಕಣ್ಣುಪಟ್ಟಿ ಕಟ್ಟಿಕೊಂಡವರಾಗಿರುವುದು. ಯೂರೋಪು ಮತ್ತು ಅಮೇರಿಕಾದಲ್ಲಿ ಕಂಡು ಬರುವ ಭಾಷಾಸನ್ನಿವೇಶಗಳನ್ನು ಮಾತ್ರ ಪರಿಗಣಿಸಿ ಅಲ್ಲಿನ ಮಾಹಿತಿಯನ್ನೇ ಎಲ್ಲ ಕಡೆಗೂ ಅನ್ವಯಿಸುವುದು. ಮತ್ತು ಅನ್ಯಪ್ರದೇಶದ ಮಾಹಿತಿಯನ್ನು ಪಡೆದರೂ ವಿಶ್ಲೇಷಿಸುವಾಗ ಯುರೋ-ಅಮೆರಿಕನ್ ಚೌಕಟ್ಟನ್ನೇ ಇಲ್ಲಿಯೂ ಕಾಣಲು ಉತ್ಸುಕರಾಗುವುದು. ಇದು ಭಾಷಾಶಾಸ್ತ್ರಜ್ಞರ ನಿಲುವಾಗಿದೆ. ಈಚೆಗೆ ಈ ಪ್ರವೃತ್ತಿಯಲ್ಲಿ ಬದಲಾವಣೆ ಮೊದಲಾಗಿದೆಯಾದರೂ ಪೂರ್ಣವಾಗಿ ಬದಲಾವಣೆಯಾಗಿಲ್ಲ. ಈ ಕಟ್ಟುಪಾಡಿನಲ್ಲಿ ಕಾರ್ಯಶೀಲರಾದ ಭಾಷಾಶಾಸ್ತ್ರಜ್ಞರಿಗೆ ದ್ವಿಭಾಷಿಕತೆ ಎನ್ನುವುದು ಒಂದು ಸಹಜ ಸಾಮಾಜಿಕ ಸ್ಥಿತಿ ಎಂದು ತಿಳಿಯಲಿಲ್ಲ. ಆದ್ದರಿಂದ ಅವರು ಭಾಷೆಯ ಪ್ರಗತಿಗೆ, ಸಾಮಾಜಿಕ ಪ್ರಗತಿಗೆ ದ್ವಿಭಾಷಿಕತೆ ಒಂದು ತೊಡರುಗಾಲು ಎಂದೇ ಭಾವಿಸಿದರು. ಆಫ್ರಿಕಾ, ಏಷಿಯಾದ ದೇಶಗಳು 'ಹಿಂದುಳಿದಿರುವುದಕ್ಕೂ' ಆ ದೇಶಗಳು ದ್ವಿಭಾಷಿಕ (ಹಲವು ಕಡೆ ಬಹುಭಾಷಿಕ) ಸಮುದಾಯಗಳನ್ನು ಒಳಗೊಂಡಿರುವುದೇ ಕಾರಣವೆಂದು ವಾದಿಸಿದರು. ಆರ್ಥಿಕವಾಗಿ ದುರ್ಬಲವಾಗಿರುವುದು ಒಂದು ಸ್ಥಿತಿ; ದ್ವಿಭಾಷಿಕರ ಸಮುದಾಯಗಳಿರುವುದು ಇನ್ನೊಂದು ಸ್ಥಿತಿ. ಇವೆರಡರ ನಡುವೆ ಕಾರಣ ಕಾರ್ಯ ಸಂಬಂಧ ಇರುವುದು ಅನಿವಾರ್ಯವಲ್ಲ. ಭಾಷಾಶಾಸ್ತ್ರಜ್ಞರು ಯಾವುದೇ ಕಾರಣ ನೀಡದೆ ಅಥವಾ ತೋಚಿದ ಕಾರಣಗಳನ್ನು ನೀಡಿ ದ್ವಿಭಾಷಿಕ ಸಮುದಾಯಗಳಿರುವುದೇ ಆರ್ಥಿಕ ಹಿನ್ನಡೆಗೆ ಕಾರಣವೆಂದು ಹೇಳಿದರು.

ಈ 'ತಿಳುವಳಿಕೆ'ಯ ಪರಿಣಾಮವೆಂದರೆ ಜಗತ್ತಿನಾದ್ಯಂತ ದ್ವಿಭಾಷಿಕ ಸಮುದಾಯಗಳ ಮೇಲೆ ನಡೆದ ಅವ್ಯಾಹತ ದಾಳಿ. ರಾಜ್ಯಶಕ್ತಿಗಳು, ಅಲ್ಪಸಂಖ್ಯಾತ ಸಮುದಾಯಗಳು ದ್ವಿಭಾಷಿಕ ಸ್ಥಿತಿಯಿಂದ ಹೊರ ಬರುವಂತೆ, ತಲೆಮಾರು ಕಳೆಯುವಷ್ಟರಲ್ಲಿ ತಮ್ಮ ಮನೆಭಾಷೆಯನ್ನು ಕಳೆದುಕೊಳ್ಳುವಂತೆ ಮಾಡಲು ಉದ್ಯುಕ್ತವಾದವು; ಈಗಲೂ ಅಂಥ ರಾಷ್ಟ್ರಗಳನ್ನು ನಾವು ನೋಡಬಹುದು. ಕುರ್ದಿಶ್ ಜನರು ಹರಡಿರುವ ರಾಷ್ಟ್ರಗಳಲ್ಲಿ ತುರ್ಕಿಯೂ ಒಂದಾಗಿದೆ. ತುರ್ಕಿಯಲ್ಲಿ ಕುರ್ದಿಶ್ ಜನರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡುವಾಗ ತಮ್ಮ ಭಾಷೆಯಲ್ಲಿ ಕಲಿಯಲು ಅವಕಾಶ ಕೇಳುವುದು ಮರಣದಂಡನೆಯಂಥ ಶಿಕ್ಷೆಗೆ ಗುರಿಯಾಗುವ ಅಪರಾಧವಾಗಿದೆ. ಬೇರೆ ದೇಶಗಳಲ್ಲಿ ಇಷ್ಟು ತೀವ್ರವಾದ ಸ್ಥಿತಿಯಿಲ್ಲವಾದರೂ ನಿರಂತರವಾಗಿ ಅಲ್ಪಸಂಖ್ಯಾತ ಭಾಷೆಗಳನ್ನು ಅಳಿಸಿ ಹಾಕುವ ಯತ್ನಗಳು ಬೇರೆ ಬೇರೆ ಪ್ರಮಾಣದಲ್ಲಿ ನಡೆಯುತ್ತಲೇ ಇವೆ. ದ್ವಿಭಾಷಿಕತೆಯನ್ನು ಉಳಿಸಿಕೊಳ್ಳುವುದು ಆರ್ಥಿಕವಾಗಿ ಲಾಭದಾಯಕವಲ್ಲ ಎನ್ನುವ ನಿಲುವಿನ ಪರಿಣಾಮವೇ ಇದು.

ದೇಶದಲ್ಲಿ ಒಂದೇ ಭಾಷೆ ಇದ್ದರೆ ಒಳಿತೆನ್ನುವುದು, ಅದು ಪ್ರಗತಿಗೆ ಪೂರಕವೆನ್ನುವುದು ಈ ವಾದದ ಒಂದು ಮುಖ. ಕಡಿಮೆ ವರಮಾನದ ಜನರು ಬಳಸುವ ಭಾಷೆಗಳಿಂದಾಗಿ ಉಂಟಾಗಿರುವ ದ್ವಿಭಾಷಿಕ ಸನ್ನಿವೇಶವೇ ಪ್ರಗತಿಗೆ ಅಡ್ಡಿಯಾಗಿದೆ ಎಂದು ತಿಳಿಯುವುದು ಈ ವಾದದ ಇನ್ನೊಂದು ಮುಖ. ಆದರೆ ವಾಸ್ತವದಲ್ಲಿ ಪ್ರಗತಿಗೂ ಭಾಷಾಬಾಹುಳ್ಯಕ್ಕೂ ಯಾವ ನೇರ ಸಂಬಂಧವೂ ಇಲ್ಲ. ಅತಿ ಹೆಚ್ಚು ರಾಷ್ಟ್ರೀಯ ವರಮಾನವುಳ್ಳ ಬೆಲ್ಜಿಯಂ, ಫಿನ್ಲೆಂಡ್, ಕೆನಡಾ ಇತ್ಯಾದಿ ದೇಶಗಳಲ್ಲಿ

ಒಂದಕ್ಕಿಂತ ಹೆಚ್ಚು ಭಾಷೆಗಳನ್ನಾಡುವ ಜನಸಮುದಾಯಗಳಿವೆ. ಹಾಗೆಯೇ ಬಹುಮಟ್ಟಿಗೆ ಭಾಷಾವೈವಿಧ್ಯವಿಲ್ಲದ, ಏಕಭಾಷಿಕ ಸಮುದಾಯಗಳೇ ಇರುವ ಮೆಕ್ಸಿಕೋ, ಅಲ್ಬೇನಿಯಾ, ಸೋಮಾಲಿಯಾ, ಯೆಮನ್ ಮುಂತಾದ ದೇಶಗಳ ರಾಷ್ಟ್ರೀಯ ವರಮಾನ ಕಡಿಮೆಯೇ ಇದೆ. ಅಂದರೆ ರಾಷ್ಟ್ರದ ಆರ್ಥಿಕ ಪ್ರಗತಿಗೂ ದ್ವಿಭಾಷಿಕ ಸಮುದಾಯಕ್ಕೂ ಇದೆಯೆಂದು ಹೇಳಲಾದ ಸಂಬಂಧದ ತಳಹದಿಯೇ ಕುಸಿಯುತ್ತದೆ.

ದ್ವಿಭಾಷಿಕ ಸನ್ನಿವೇಶಗಳಲ್ಲಿರುವ ಬಡವರು, ರಿಕ್ತರು ಬೌದ್ಧಿಕವಾಗಿ ದುರ್ಬಲರಾಗಿರುತ್ತಾರೆಂಬ ತಿಳುವಳಿಕೆಗೂ ಆಧಾರಗಳಿಲ್ಲ. ಹಲವಾರು ಅಧ್ಯಯನಗಳು ಈ ನಿಟ್ಟಿನಲ್ಲಿ ನಡೆದಿವೆ. ರಿಕ್ತತೆಗೂ ಭಾಷಾಸಾಮರ್ಥ್ಯಗಳಿಗೂ ನೇರ ಸಂಬಂಧವಿದೆಯೆಂದು ತಿಳಿಯುವುದನ್ನು ಈ ಅಧ್ಯಯನಗಳು ಅಲ್ಲಗಳೆದಿವೆ. ಆಳುವ ವರ್ಗವು ದ್ವಿಭಾಷಿಕ ಸನ್ನಿವೇಶವನ್ನು ಪ್ರಗತಿಯ ಶತ್ರುವೆಂದು ತಿಳಿದು ವಾದಿಸುವುದು. ವಾಸ್ತವವಾಗಿ ಅಲ್ಪಸಂಖ್ಯಾತ, ದುರ್ಬಲ ಜನರ ಭಾಷಾಸಂಸ್ಕೃತಿಗಳನ್ನು ಅಸಹನೀಯವೆಂಬಂತೆ ನೋಡುವುದರ ಪರಿಣಾಮವಾಗಿದೆ.

ಶೈಕ್ಷಣಿಕ ಸನ್ನಿವೇಶಗಳಲ್ಲಿ ದ್ವಿಭಾಷಿಕತೆಯು ಶೈಕ್ಷಣಿಕ ಸಾಧನೆ. ಪ್ರಗತಿಗಳಿಗೆ ಅಡ್ಡಿಯಾಗುವುದೆಂಬುದು ಇನ್ನೊಂದು ಸಾಮಾನ್ಯ ತಿಳುವಳಿಕೆಯಾಗಿದೆ. ಭಾರತದಂಥ ದೇಶದಲ್ಲಿ ಬಹುಸಂಖ್ಯಾತರ ಅಥವಾ ಅಧಿಕಾರಕೇಂದ್ರದ ಪೋಷಣೆ ಪಡೆದ ಭಾಷೆಗಳ ಪರವಾಗಿ ವಾದಿಸುವವರು ದೇಶೀಯ ಭಾಷೆಗಳ ವಿರುದ್ಧವಾಗಿರುತ್ತಾರೆ. ಶೈಕ್ಷಣಿಕ ವಲಯಗಳಲ್ಲಿ ಈ ಭಾಷೆಗಳಿಗೆ ಅವಕಾಶವನ್ನು ನಿರಾಕರಿಸುವ ಅಥವಾ ಸೀಮಿತಗೊಳಿಸುವ ಕ್ರಮವನ್ನು ಅವರು ಸಮರ್ಥಿಸುತ್ತಾರೆ. ನಮ್ಮ ಭಾಷಾಯೋಜನೆಗಳೂ ಹೀಗೆ ದ್ವಿಭಾಷಿಕತೆಯನ್ನು ದುರ್ಬಲಗೊಳಿಸುವ ದೂರಗಾಮಿ ನೆಲೆಗಳನ್ನೇ ಹೊಂದಿರುವುದನ್ನು ಯಾರಾದರೂ ಗಮನಿಸಲು ಸಾಧ್ಯ.

ಬುದ್ಧಿಮತ್ತೆಯನ್ನು ಮಾಪನ ಮಾಡುವ ಪರೀಕ್ಷೆಗಳಲ್ಲಿ ದ್ವಿಭಾಷಿಕ ವಿದ್ಯಾರ್ಥಿಗಳು ಏಕಭಾಷಿಕ ವಿದ್ಯಾರ್ಥಿಗಳಿಗಿಂತ ಕಡಿಮೆ ಅಂಕಗಳನ್ನು ಪಡೆಯುತ್ತಾರೆಂದು ಕೆಲವು ಅಧ್ಯಯನಗಳು ತೋರಿಸಿವೆ. ಅಂದರೆ ಗ್ರಹಿಕೆಯ ಸಂಪೂರ್ಣ ಸಾಮರ್ಥ್ಯಗಳನ್ನು ಪ್ರಕಟಿಸಲು ಇರುವ ಅವಕಾಶಗಳಿಂದ ದ್ವಿಭಾಷಿಕ ವಿದ್ಯಾರ್ಥಿಗಳು ವಂಚಿತರಾಗಿರುತ್ತಾರೆಂದು ಸಾಧಿಸಲು ಈ ಪ್ರಯೋಗಗಳು ನಡೆದಿವೆ. ಈ ಪ್ರಯೋಗಗಳನ್ನು ಎಚ್ಚರಿಕೆಯಿಂದ ಗಮನಿಸಬೇಕು. ಆಧಾರಕಲ್ಪನೆ ಮತ್ತು ಫಲಿತಾಂಶಗಳನ್ನು ಸಮೀಕರಿಸಲು ತಕ್ಕ ಪ್ರಯೋಗ ವಿಧಾನವನ್ನು ರೂಪಿಸುವುದು ಸಾಧ್ಯ. ಅಧ್ಯಯನಕಾರರು ಉದ್ದೇಶಪೂರ್ವಕವಲ್ಲದೆಯೂ ಇಂಥ ವಿಧಾನಗಳನ್ನು ಆಯ್ಕೆ ಮಾಡಿರುವುದು ಸಾಧ್ಯ. ದ್ವಿಭಾಷಿಕ ವಿದ್ಯಾರ್ಥಿಗಳು ತಮ್ಮ ನಿಜಬುದ್ಧಿಮತ್ತೆಯನ್ನು ಪ್ರಕಟಿಸಲು ಅಡ್ಡಿಯಾಗಿರುವ ಬೇರೆ ಹಲವಾರು ಸಂಗತಿಗಳಿರುವುದು ಸಾಧ್ಯ. ಆ ಸಂಗತಿಗಳನ್ನು ಪ್ರಯೋಗದಲ್ಲಿ ಪರಿಗಣಿಸದೆ ಇರುವಾಗ ವಿದ್ಯಾರ್ಥಿಗಳು ದ್ವಿಭಾಷಿಕರಾಗುವುದೇ ಅವರ ಬುದ್ಧಿಮತ್ತೆಯ ಕೊರತೆಗಳಿಗೆ ಕಾರಣವೆಂಬ ನಿರ್ಣಯವನ್ನು ತಲುಪುವುದು ಸಾಧ್ಯವಾಗಿದೆ.

ಈ ಪ್ರಯೋಗಗಳನ್ನು ಪುನಾರೂಪಿಸಿ ಮತ್ತೆ ಬಳಸಿದಾಗ ದ್ವಿಭಾಷಿಕ ವಿದ್ಯಾರ್ಥಿಗಳ ಬುದ್ಧಿಮತ್ತೆ ಏಕಭಾಷಿಕರ ಬುದ್ಧಿಮತ್ತೆಗೆ ಸರಿಸಾಟಿಯಾಗಿ ಕೆಲವೊಮ್ಮೆ ಮಿಗಿಲಾಗಿ ಇರುವುದೂ ಗೊತ್ತಾಗಿದೆ. ಎಂದರೆ ಶೈಕ್ಷಣಿಕ ಹಿನ್ನೆಡೆಗೂ ವಿದ್ಯಾರ್ಥಿ ಸಮುದಾಯದ ದ್ವಿಭಾಷಿಕ ಸನ್ನಿವೇಶಕ್ಕೂ ಸಂಬಂಧವಿಲ್ಲವೆಂದಾಯ್ತು. ಹೀಗಿದ್ದರೂ ದ್ವಿಭಾಷಿಕ ವಿದ್ಯಾರ್ಥಿಗಳು ಶೈಕ್ಷಣಿಕ ನೀತಿಯಲ್ಲಿ ಅಡಕಗೊಂಡಿರುವ ದ್ವಿಭಾಷಿಕತೆಯ ವಿರೋಧದ ತಿಳುವಳಿಕೆಯಿಂದಾಗಿ ಕಷ್ಟವನ್ನು ಅನುಭವಿಸುವುದು ನಿಂತಿಲ್ಲ.

ಕೆಲವು ವಲಸೆ ಸಮುದಾಯಗಳ ಮಕ್ಕಳಲ್ಲಿ ಕಂಡುಬರುವ ಅರೆಭಾಷಿಕತೆಯನ್ನು ಉದಾಹರಿಸಿ ದ್ವಿಭಾಷಿಕತೆಯೇ ಬೌದ್ಧಿಕ ಪ್ರಗತಿಗೆ, ಮಾನಸಿಕ ಸ್ಥಿರತೆಗೆ ಅಡ್ಡಿ ಎಂದು ವಾದಿಸುವುದುಂಟು. ಅರೆಭಾಷಿಕತೆ ಎಂದರೇನು? ವಲಸೆ ಹೋಗುವ ಸಮುದಾಯದ ಮಕ್ಕಳು ಬೇರೊಂದು ಭಾಷಾವಾತಾವರಣದಲ್ಲಿ ಬೆಳೆಯಬೇಕಾಗಿ ಬಂದಾಗ ತಮ್ಮ ಮನೆಭಾಷೆಯ ಬಳಕೆಗೆ ತಕ್ಕ ಅವಕಾಶಗಳನ್ನು ಪಡೆಯುವುದಿಲ್ಲ. ವಲಸೆಯ ಸಂದರ್ಭದಿಂದಾಗಿಯೇ ತಾವು ಇರುವ ವಾತಾವರಣದ ಭಾಷೆಯನ್ನು ಕಲಿತು, ಬಳಸುವ ಸಾಮರ್ಥ್ಯಗಳನ್ನು ಪೂರ್ಣಪ್ರಮಾಣದಲ್ಲಿ ಬೆಳೆಸಿಕೊಳ್ಳುವುದು ಸಾಧ್ಯವಾಗುವುದಿಲ್ಲ. ಹಾಗಾಗಿ ಅಂಥ ಮಕ್ಕಳು ಯಾವ ಭಾಷೆಯಲ್ಲಾಗಲೀ ಎಲ್ಲ ಕೌಶಲಗಳನ್ನೂ ಬಳಸುವ ಸಾಮರ್ಥ್ಯಗಳನ್ನು ಪೂರ್ಣಪ್ರಮಾಣದಲ್ಲಿ ಪಡೆಯದೇ ಹೋಗುತ್ತಾರೆ. ಇಂಥ ಪರಿಸ್ಥಿತಿಯನ್ನು ಅರೆಭಾಷಿಕತೆ ಎನ್ನುತ್ತಾರೆ. ವಾಸ್ತವವಾಗಿ ಇಂಥ ಸ್ಥಿತಿಗೆ ಆ ಮಕ್ಕಳು ಇರುವ ಸಾಮಾಜಿಕ ಸ್ಥಿತಿ ಮತ್ತು ವಾತಾವರಣದ ಅಧಿಕಾರಿಕ ಬಿಗುವು ಕಾರಣವೇ ಹೊರತು ದ್ವಿಭಾಷಿಕತೆಯಲ್ಲ ಎಂಬುದು ಗೊತ್ತಾಗುತ್ತದೆ. ವಲಸೆಗಾರರು, ನಿರಾಶ್ರಿತರು, ಅಂಚಿನ ಸಾಮಾಜಿಕರಾಗಿರುತ್ತಾರೆ. ಆಶ್ರಯ ನೀಡುವ ಸಮಾಜದ ಒತ್ತಾಯಗಳಿಂದಾಗಿ ಅವರು ದೈನ್ಯವನ್ನು ಅನುಭವಿಸುತ್ತಾರೆ. ಇದು ಆ ಸಮುದಾಯದ ಮಕ್ಕಳ ಮೇಲೂ ಪ್ರಭಾವ ಬೀರುತ್ತದಷ್ಟೆ. ಹೀಗಾಗಿ ಆ ಮಕ್ಕಳಲ್ಲಿ ಈ ವಿಕಲತೆ ರೂಪುಗೊಳ್ಳುವುದು. ಹೀಗಾಗಿ, ಸಾಮಾಜಿಕ ಪರಿಸ್ಥಿತಿಯ ಅಸಮತೆಯನ್ನು, ಅದರ ಒತ್ತಡಗಳನ್ನು ಬದಿಗಿರಿಸಿ, ಕೇವಲ ದ್ವಿಭಾಷಿಕತೆಯೇ ಬೌದ್ಧಿಕ ಪ್ರಗತಿಗೆ ಅಡ್ಡಿ ಎಂದು ವಾದಿಸುವುದು ದೋಷಪೂರ್ಣವಾಗಿದೆ. ಈ ಪರಿಸ್ಥಿತಿಯನ್ನು ಬಲ್ಲ ಶಿಕ್ಷಣಯೋಜಕರು ನಿರಾಶ್ರಿತರ ಮಕ್ಕಳಿಗಾಗಿ 'ಬೆರೆಯುವ' ಇಮ್ಮರ್‌ಶನ್-ಕಾರ್ಯಕ್ರಮಗಳನ್ನು ಯೋಜಿಸುತ್ತಿದ್ದಾರೆ. ಆಶ್ರಯ ಪಡೆದ ನಾಡಿನ ಭಾಷೆಯನ್ನು ವ್ಯವಸ್ಥಿತವಾಗಿ ಆ ಮಕ್ಕಳಿಗೆ ಕಲಿಸಲು ತಕ್ಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಇದು ಒಟ್ಟಾರೆಯಾಗಿ ಆ ಮಕ್ಕಳ ಭಾಷಾಸಾಮರ್ಥ್ಯಗಳು ಬೆಳೆಯಲು ಅವಕಾಶ ನೀಡುತ್ತದೆ. ಅಂತಾರಾಷ್ಟ್ರೀಯವಾಗಿ ಹಲವಾರು ಬಗೆಯ ಪಲ್ಲಟಗಳು, ವಲಸೆಗಳು, ದೇಶೋಚ್ಚಾಟನೆಗಳು ನಡೆಯುತ್ತಿವೆ. ಈ ಸಮಸ್ಯೆಯನ್ನು ಸಮರ್ಥವಾಗಿ ಎದುರಿಸಲು ದ್ವಿಭಾಷಿಕತೆಯನ್ನು ಕುರಿತಂತೆ ಇರುವ ತಪ್ಪುಗ್ರಹಿಕೆಗಳನ್ನು ಬಿಟ್ಟುಕೊಡುವುದು ಅತ್ಯವಶ್ಯವಾಗಿದೆ.

ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ವ್ಯವಹರಿಸಬೇಕಾಗಿ ಬರುವ ಸನ್ನಿವೇಶಗಳನ್ನು ಅಸಹಜ ಮತ್ತು ನಿವಾರಿಸಬೇಕಾದ ಸನ್ನಿವೇಶಗಳೆಂದು ತಿಳಿದದ್ದರಿಂದಲೇ ಭಾಷಾಶಾಸ್ತ್ರಜ್ಞರಿಗೆ

ದ್ವಿಭಾಷಿಕತೆ ಒಂದು ಸಮಸ್ಯೆಯಾಯಿತು. ದ್ವಿಭಾಷಿಕ ಸಮುದಾಯಗಳ ಸಾಂಸ್ಕೃತಿಕ ಪ್ರಗತಿಯೂ ಕುಂಠಿತವಾಗುತ್ತದೆಂದೂ, ಮಹತ್ತ್ವದ ಸಾಧನೆಗಳನ್ನು ದ್ವಿಭಾಷಿಕರು ಮಾಡಲಾರರೆಂದೂ ವಾದಿಸುವ ಹಂತಕ್ಕೆ ಈ ಭಾಷಾಶಾಸ್ತ್ರಜ್ಞರು ಹೋಗುತ್ತಾರೆ. ಇದು ವಾಸ್ತವತೆಗೆ ಬೇಕೆಂದೇ ಬೆನ್ನು ತಿರುಗಿಸಿದ ನಿಲುವು. ಯುರೋಪಿನಲ್ಲಾಗಲೀ, ಏಶಿಯಾದಲ್ಲಾಗಲೀ ಭಾಷಿಕ ನೆಲೆಯಲ್ಲಿ ಉನ್ನತ ಸಾಧನೆಗಳನ್ನು ಮಾಡಿದ ದ್ವಿಭಾಷಿಕ ವ್ಯಕ್ತಿಗಳು-ಕವಿಗಳು-ಕಾಣಸಿಗುತ್ತಾರೆ. ಈ ಪ್ರದೇಶಗಳಲ್ಲಿ ಶತಮಾನಗಳಿಂದ ದ್ವಿಭಾಷಿಕವಾಗಿರುವ ಸಮುದಾಯಗಳಿದ್ದು ಅವು ಸಾಂಸ್ಕೃತಿಕವಾಗಿಯೂ ದೃಢವಾಗಿವೆ.

ಹಾಗೆ ನೋಡಿದರೆ ಏಕಭಾಷಿಕ ಸನ್ನಿವೇಶಗಳೂ ಭಾಷಿಕರಿಗೆ ಏಕಘನಾಕೃತಿಯ ಭಾಷಿಕ ಆಯ್ಕೆಗಳನ್ನು ನಿಗದಿ ಪಡಿಸುವುದಿಲ್ಲ. ಬೇರೆ ಬೇರೆ ಸಾಮಾಜಿಕ ಸಂದರ್ಭಗಳಿಗೆ ತಕ್ಕ ಭಾಷಾರೂಪಗಳನ್ನು ಭಾಷಿಕರು ಆಯ್ದು ಬಳಸಬೇಕಾಗುತ್ತದೆ. ಧ್ವನಿರಚನೆಯ ನಿಯಮಗಳು. ಪದಕೋಶ, ವಾಕ್ಯರಚನೆ ಹೀಗೆ ಎಲ್ಲ ಹಂತಗಳಲ್ಲೂ ಈ ಆಯ್ಕೆಗಳಿರುತ್ತವೆ. ಉದಾ.ಗೆ ಬರ್ತೇನೆ, ಬರ್ತೀನಿ, ಬತ್ತೀನಿ ಎಂಬ ರೂಪಗಳು ಮಾತಿನಲ್ಲಿ ಆಯ್ಕೆಗಾಗಿ ದೊರಕಿದರೂ ಬರೆವಣಿಗೆಯಲ್ಲಿ ಬರುತ್ತೇನೆ, ಬರುವೆನು, ಬರುವೆಗಳು ಮಾತ್ರ ಲಭ್ಯ ಶಷಗಳ ನಡುವಣ ವ್ಯತ್ಯಾಸ ಮಾತಿನಲ್ಲಿ ಮುಖ್ಯವಾಗದಿದ್ದರೂ ಬರೆವಣಿಗೆಯಲ್ಲಿ ಖಚಿತ. ಇಂಥ ಹತ್ತಾರು ನಿದರ್ಶನಗಳು ಸಾಧ್ಯ. ಹೀಗೆ ಸಂದರ್ಭಕ್ಕೆ ಉಚಿತವಾದ ಆಯ್ಕೆಗಳನ್ನು ಮಾಡುವ ಏಕಭಾಷಿಕರಿಗೂ, ತಾವು ಬಲ್ಲ ಎರಡು ಭಾಷೆಗಳ ಸಾಮರ್ಥ್ಯ ಮತ್ತು ಸಾಮಗ್ರಿಗಳನ್ನು ಸಂದರ್ಭೋಚಿತವಾಗಿ ಬಳಸುವ ದ್ವಿಭಾಷಿಕರಿಗೂ ತಿರುಳಿನಲ್ಲಿ ವ್ಯತ್ಯಾಸಗಳಿಲ್ಲ. ಏಕಭಾಷಿಕರ ಈ ಸ್ಥಿತಿ ಭಾಷಿಕವಾಗಿ ಸಹಜವಾಗಿದ್ದರೆ ದ್ವಿಭಾಷಿಕರು ಕೂಡ ಸಹಜವಾದ ಭಾಷಾಸನ್ನಿವೇಶದಲ್ಲಿದ್ದಾರೆಂದು ತಿಳಿಯುವುದು ಸೂಕ್ತವಾಗುತ್ತದೆ.

ದೀರ್ಘಕಾಲದಿಂದ ದ್ವಿಭಾಷಿಕತೆಯನ್ನು -ಹಲವು ಸಂದರ್ಭದಲ್ಲಿ ಬಹುಭಾಷಿಕತೆಯನ್ನು-ಸಹಜವೆಂಬಂತೆ ನಿರ್ವಹಿಸಿಕೊಂಡು ಬಂದಿರುವ ಸಮಾಜಗಳನ್ನು ಅಭ್ಯಾಸಮಾಡುವ ಮೂಲಕ ದ್ವಿಭಾಷಿಕತೆಯ ಬಗೆಗೆ ಇರುವ ತಪ್ಪು ತಿಳುವಳಿಕೆಗಳು ನಿವಾರಣೆಯಾಗುತ್ತವೆ. ಆದರೆ ವಾಸ್ತವದಲ್ಲಿ ಬೆಳೆಯುತ್ತಿರುವ ಭಾಷಾರಾಷ್ಟ್ರೀಯತೆ ಮತ್ತು ಭಾಷೆಗಳ ಅಂತಾರಾಷ್ಟ್ರೀಯ ಪ್ರಭುತ್ವಗಳಿಂದಾಗಿ ದ್ವಿಭಾಷಿಕ ಸನ್ನಿವೇಶಗಳನ್ನು ಅಸಹನೆಯಿಂದ ನೋಡುವುದು ಹೆಚ್ಚಾಗುತ್ತಿದೆ. ಏಕಭಾಷಿಕತೆಯ ಪರವಾಗಿ, ಅಂದರೆ ಅಧಿಕಾರದ ಭಾಷೆಯ ಪರವಾಗಿ ಎಲ್ಲ ಭಾಷಾಯೋಜನೆಗಳೂ ದುಡಿಯುತ್ತವೆ. ಇದು ಪ್ರಪಂಚದ ಸಾವಿರಾರು ದ್ವಿಭಾಷಿಕ ಸಮುದಾಯಗಳಿಗೆ ಆತಂಕಕಾರಿಯಾದ ಸ್ಥಿತಿಯಾಗಿದೆ. ಇದು ಒಂದೆಡೆ ಸಮುದಾಯಗಳನ್ನು ಅಂಚಿಗೆ ದೂಡುತ್ತಿದ್ದರೆ ಮತ್ತೊಂದೆಡೆ ಅವುಗಳ ಅಸ್ಮಿತೆಯನ್ನು ನಿರಾಕರಿಸುತ್ತದೆ. ವಿಶ್ವದ ಹಲವು ಕಡೆಗಳಲ್ಲಿ ನಡೆಯುತ್ತಿರುವ ಹೋರಾಟದಲ್ಲಿ ಭಾಷೆಯ ಪ್ರಶ್ನೆಯೂ ಮುಂಚೂಣಿಯಲ್ಲಿರುವುದು ಮೇಲೆ ಹೇಳಿದ ಕಾರಣಗಳಿಂದಾಗಿ ಕೇವಲ ಕಾಕತಾಳೀಯವಲ್ಲ; ತಾರ್ಕಿಕವಾದ ಸಹಜ ಬೆಳವಣಿಗೆಯಾಗಿದೆ.

## ದ್ವಿಭಾಷಿಕರ ಲೋಕ

ದ್ವಿಭಾಷಿಕತೆಯನ್ನು ಸಾಮುದಾಯಿಕ ಮತ್ತು ವ್ಯಕ್ತಿಗತ ನೆಲೆಗಳೆರಡರಲ್ಲೂ ಪರಿಗಣಿಸುವುದು ಸಾಧ್ಯವೆಂದು ಈಗಾಗಲೇ ತಿಳಿದಿದ್ದೇವೆ. ಸಾಮುದಾಯಿಕ ದ್ವಿಭಾಷಿಕತೆಯೂ ದ್ವಿಭಾಷಿಕರಾದ ವ್ಯಕ್ತಿಗಳ ಮೂಲಕವೇ ಪ್ರಕಟವಾಗಬೇಕು ಎಂಬುದನ್ನು ಮರೆಯಬಾರದು. ಅಂದರೆ ಕೊನೆಗೂ ದ್ವಿಭಾಷಿಕ ವ್ಯಕ್ತಿಗಳಿರುತ್ತಾರೆ ಮತ್ತು ಅವರ ಮೂಲಕ ಸಾಮಾಜಿಕ ಪ್ರಕ್ರಿಯೆಯೊಂದು ಮೊದಲಾಗುತ್ತದೆ. ಈ ಪ್ರಕ್ರಿಯೆಯಲ್ಲಿ ಭಾಗಿಯಾಗುವ ದ್ವಿಭಾಷಿಕರಿಗೆ ವೈಯಕ್ತಿಕ ಲೋಕವೂ ಇರುತ್ತದೆ. ಹಾಗಾಗಿ ಮನೋವಿಜ್ಞಾನಿಗಳಿಗೆ ದ್ವಿಭಾಷಿಕರ ಅಧ್ಯಯನ ಒಂದು ಆಸಕ್ತಿಯ ವಿಷಯವಾಗಿದೆ.

ಎರಡು ಭಾಷೆಗಳನ್ನು ಕಲಿತು ಬಳಸುವ ವ್ಯಕ್ತಿಯ ಮೆದುಳು ಈ ಎರಡೂ ಭಾಷೆಗಳಿಗೆ ಸಂಬಂಧಿಸಿದ ಸಾಮಗ್ರಿ ಮತ್ತು ಸಾಮರ್ಥ್ಯಗಳನ್ನು ಅಳವಡಿಸಿಕೊಳ್ಳುವ ಕ್ರಮ ಕುತೂಹಲಕರವಾಗಿದೆ. ಎರಡೂ ಭಾಷೆಗಳು ಪ್ರತ್ಯೇಕ ನೆಲೆಗಳಲ್ಲಿ ಇರುತ್ತವೆಯೇ? ಎರಡೂ ಒಂದೇ ವಲಯದಲ್ಲಿದ್ದು ಆಯಾ ಸಂದರ್ಭಗಳಿಗೆ ಅನುಗುಣವಾಗಿ ಬೇರ್ಪಡುತ್ತವೆಯೇ? ಅಥವಾ ಸಮಾನ ನೆಲೆಗಳಲ್ಲಿ ಒಂದರೊಡನೊಂದು ಬೆರೆತು ಬೇರೆ ಬೇರೆ ವಲಯಗಳಲ್ಲಿ ಪ್ರತ್ಯೇಕತೆಯನ್ನು ಕಾಯ್ದುಕೊಳ್ಳುತ್ತವೆಯೇ? ಇವೆಲ್ಲ ಪ್ರಶ್ನೆಗಳು ಅಧ್ಯಯನಕಾರರನ್ನು ಕಾಡಿಸಿವೆ.

ಸಾಮಾನ್ಯ ಗ್ರಹಿಕೆಗೂ ಗೊತ್ತಾಗುವಂತೆ, ದ್ವಿಭಾಷಿಕರಲ್ಲಿ ಬಹುಮಂದಿಯ ಭಾಷಾಂಶಗಳಲ್ಲಿ ಒಂದು ಭಾಷೆಯ ಪ್ರಭಾವ ಇನ್ನೊಂದು ಭಾಷೆಯ ಮೇಲೆ ಆಗುತ್ತದೆ. ಈ ಪ್ರಭಾವ ಧ್ವನಿ, ಪದ, ವಾಕ್ಯ ಮತ್ತು ಅರ್ಥ ಈ ಎಲ್ಲ ಹಂತಗಳಲ್ಲೂ ಕಾಣುತ್ತದೆ. ಇಂಗ್ಲಿಶ್-ತಮಿಳು ದ್ವಿಭಾಷಿಕರು ಮತ್ತು ಇಂಗ್ಲಿಶ್-ಮಲೆಯಾಳಂ ದ್ವಿಭಾಷಿಕರು ಇಂಗ್ಲಿಶ್ ಮಾತಾಡುತ್ತಿದ್ದರೆ ಯಾರು ತಮಿಳು ಮಾತಾಡುವವರು ಮತ್ತು ಯಾರು ಮಲೆಯಾಳಂ ಮಾತಾಡುವವರು ಎಂದು ಬಹುಮಟ್ಟಿಗೆ ಖಚಿತವಾಗಿ ಹೇಳಬಹುದು. ಅವರವರ ಇಂಗ್ಲಿಶ್ ಉಚ್ಚಾರಣೆಯಲ್ಲಿ ತಮಿಳು ಇಲ್ಲವೇ ಮಲೆಯಾಳಂನ ಉಚ್ಚಾರಣಾ ಲಕ್ಷಣಗಳು ಕಿವಿಗೆ ಕೇಳಿಸುವಂತಿರುತ್ತವೆ. ವಿಶ್ಲೇಷಣೆಯಿಂದ ಉಳಿದ ಭಾಷಾಂಶಗಳಲ್ಲೂ ಪರಸ್ಪರ ಪ್ರಭಾವಗಳನ್ನು ಗುರುತಿಸಲು ಸಾಧ್ಯ. ಆಡುಮಾತಿನಲ್ಲಿ ಈ ಪ್ರಭಾವಗಳು ಗಣನೆಗೆ ಬರುವ ಪ್ರಮಾಣ ಹೆಚ್ಚು; ಬರೆವಣಿಗೆಯಲ್ಲಿ ಕಡಿಮೆ. ಆದರೆ ಈ ಪ್ರಭಾವವು ಬರೆವಣಿಗೆಯ ಭಾಷೆಯಲ್ಲಿ ಕಂಡುಬರುವ ರೀತಿಯು ಬೇರೆ ರೀತಿಯಲ್ಲಿರುತ್ತದೆ. ಭಾಷಾತಜ್ಞರು ಮಾತ್ರ ಅಧ್ಯಯನಗಳ ಮೂಲಕ ಈ ಪ್ರಭಾವಗಳ ಸ್ವರೂಪವನ್ನು ಗೊತ್ತು ಮಾಡಬಲ್ಲರು. ಆಡುಮಾತಿನಲ್ಲೂ ಧ್ವನಿಹಂತವನ್ನುಳಿದು ಬೇರೆ ಸ್ತರಗಳ ಪ್ರಭಾವವನ್ನು ಗುರುತಿಸಲು ತಜ್ಞತೆ ಅವಶ್ಯ.

## ನುಡಿ ಬೆರಕೆ: ನುಡಿ ಜಿಗಿತ

ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷಿಕರ ವ್ಯವಹಾರದಲ್ಲಿ ಕಂಡುಬರುವ ಮುಖ್ಯ ಭಾಷಿಕ ಪ್ರಕ್ರಿಯೆಗಳಾಗಿ ನುಡಿಬೆರಕೆ ಮತ್ತು ನುಡಿಜಿಗಿತಗಳನ್ನು ಗುರುತಿಸುತ್ತಾರೆ. ಒಂದು

ಭಾಷೆಯ ವಾಕ್ಯವನ್ನು ಆಡುವಾಗ/ಬರೆಯುವಾಗ ಇನ್ನೊಂದು ಭಾಷೆಯ ಭಾಷಾಂಶಗಳನ್ನು ಬೆರಸುವುದು ನುಡಿಬೆರಕೆ. ಇಡೀ ವಾಕ್ಯದ ಹಿಂದಿನ ನಿಯಮ ಒಂದು ಭಾಷೆಯದಾಗಿದ್ದು, ಕೆಲವು ವಾಕ್ಯಾಂಶಗಳು ಮಾತ್ರ ಇನ್ನೊಂದು ಭಾಷೆಯಿಂದ ಬಂದು ಸೇರಿರುತ್ತವೆ.

**'ಎಲೆಕ್ಷನ್ನಲ್ಲಿ ಎನ್ ಆದ್ರೆ ಮಿನಿಸ್ಟರ್ ಆಗುವ ಛಾನ್ಸ್ ಇದೆ'**
**'ನಾವು ಗೆಸ್ ಮಾಡಿದ ಕ್ವೆಶ್ಚನ್ಸ್ ಎಕ್ಸಾಮ್‌ನಲ್ಲಿ ಬಂದ್‌ಬಿಟ್ರೆ ನಾವೇ ಲಕಿ'**

ಈ ವಾಕ್ಯಗಳಲ್ಲಿ ಇಂಗ್ಲಿಶ್ ಭಾಷಾಂಶಗಳು ಕನ್ನಡ ವಾಕ್ಯದಲ್ಲಿ ಬೆರೆತಿವೆ. ಈ ಬೆರೆಯುವಿಕೆ ಪದಗಳಿಗೆ ಮಾತ್ರ ಸೀಮಿತವಾಗಬೇಕೆಂದೇನಿಲ್ಲ. ಕೆಳಗಿನ ವಾಕ್ಯಗಳನ್ನು ನೋಡಿ.

**'ಅಂಪೈರ್‌ಗೆ ಬೌಲರ್ ಅಪೀಲ್ ಮಾಡಿದಾಗ ಬೆನಿಫಿಟ್ ಆಫ್ ಡೌಟ್‌ನಿಂದಾಗಿ ಬ್ಯಾಟ್ಸ್‌ಮನ್ ಬಚಾವಾದ'**

**'ದೇಶದ ಈ ಸ್ಥಿತಿಗೆ ಸೋಕಾಲ್ಡ್ ಪಾಲಿಟೀಶಿಯನ್ಸ್ ತಾನೇ ಕಾರಣ'**

ಈ ವಾಕ್ಯಗಳಲ್ಲಿ ಸೇರಿರುವ 'ಬೆನಿಫಿಟ್ ಆಫ್‌ಡೌಟ್', 'ಸೋಕಾಲ್ಡ್' ಎಂಬ ಭಾಷಾಂಶಗಳು ಇಂಗ್ಲಿಶ್ ಭಾಷೆಯ ನಿಯಮಗಳನ್ನು ಅನುಸರಿಸಿವೆ. ಆದರೆ ಇಲ್ಲಿ ವಾಕ್ಯದಲ್ಲಿ ಸೇರಿದ ಮೇಲೆ ಇಡೀ ವಾಕ್ಯ ಕನ್ನಡದ ನಿಯಮಗಳನ್ನೇ ಅನುಸರಿಸಿದೆ.

ನುಡಿಜಿಗಿತದಲ್ಲಿ ಒಂದು ವಾಕ್ಯವನ್ನು ಒಂದು ಭಾಷೆಯ ನಿಯಮಾನುಸಾರ ರಚಿಸಿ ಮುಗಿಸಿ, ಅನಂತರ ಹೊಸವಾಕ್ಯವನ್ನು ಇಡಿಯಾಗಿ ಇನ್ನೊಂದು ಭಾಷೆಯಲ್ಲಿ ರಚಿಸಿ ಬಳಸಲಾಗುತ್ತದೆ. ವಾಕ್ಯದ ಆಚೆಗಿನ ಹಂತದಲ್ಲಿ ಈ ಬೆರಕೆ ನಡೆಯುತ್ತದೆ. ಕೆಲವು ಭಾಷಾಶಾಸ್ತ್ರಜ್ಞರು ಇವೆರಡನ್ನೂ ಬೇರೆ ಬೇರೆ ಎಂದು ಪರಿಗಣಿಸಲು ಬಯಸುವುದಿಲ್ಲ.

**'ನಾಳೆ ಬೆಳಿಗ್ಗೆ ಎಂಟುಗಂಟೆಗೆ ರೈಲಿದೆ. ಯೂ ಮಸ್ಟ್ ಗೆಟ್ ರೆಡಿ ಬೈ ದಟ್ ಟೈಮ್'**

**'ಐ ಟೋಲ್ಡ್ ಯು. ಹೀಗಾಗುತ್ತೇಂತ ನನಗೆ ಗೊತ್ತಿತ್ತು.**

ಇವು ನುಡಿಜಿಗಿತಕ್ಕೆ ನಿದರ್ಶನ.

ಒಂದು ವಾಕ್ಯದಲ್ಲಿ ಇಡಿಯಾಗಿ ಇನ್ನೊಂದು ಭಾಷೆಯ ವಾಕ್ಯವನ್ನು ಅಂತರ್ಗತಗೊಳಿಸುವುದೂ ಉಂಟು. ಅವುಗಳನ್ನು ನುಡಿಬೆರಕೆಯ ಬಗೆಯೆಂದು ಪರಿಗಣಿಸಬೇಕು.

ನುಡಿಬೆರಕೆ ದ್ವಿಭಾಷಿಕ ಸನ್ನಿವೇಶದ ಪರಿಣಾಮ ಎಂದ ಮಾತ್ರಕ್ಕೆ ಅದು ಯಾವಾಗಲೂ ದ್ವಿಭಾಷಿಕರಲ್ಲೇ ನಡೆಯುತ್ತದೆ ಎನ್ನುವಂತಿಲ್ಲ. ಎಷ್ಟೋ ವೇಳೆ ದ್ವಿಭಾಷಿಕ ಸನ್ನಿವೇಶಗಳಲ್ಲಿ ನಡೆಯುವ ಭಾಷಾಂಶಗಳ ಎರವಲು ಕ್ರಿಯೆಯಿಂದಾಗಿ ಏಕಭಾಷಿಕರು ಇನ್ನೊಂದು ಭಾಷೆಯ ಭಾಷಾಂಶಗಳನ್ನು ತಮ್ಮ ಭಾಷಿಕ ಸಂಕಥನಗಳಲ್ಲಿ

ಸೇರಿಸಿಕೊಳ್ಳುತ್ತಾರೆ. ಎಷ್ಟೋ ವೇಳೆ ಅವರಿಗೆ ಈ ಭಾಷಾಂಶಗಳು ಅನ್ಯಭಾಷೆಯವು ಎಂಬುದೂ ತಿಳಿದಿರುವುದಿಲ್ಲ. ಇಂಥ ಸನ್ನಿವೇಶಗಳನ್ನು ನುಡಿಬೆರಕೆ ಎನ್ನುವಂತಿಲ್ಲ. ದ್ವಿಭಾಷಿಕರಲ್ಲಿ ನಡೆಯುವ ನುಡಿಬೆರಕೆಯ ಪ್ರಮಾಣ, ಉದ್ದೇಶಗಳು ಭಿನ್ನವಾಗಿರುತ್ತವೆ. ಅವರು ಬೆರೆಸುತ್ತಿರುವ ಭಾಷಾಂಶಗಳು ಆಕರ ಭಾಷೆಯಿಂದ ಬಂದವೆಂಬುದನ್ನು ಸ್ಥೂಲವಾಗಿಯಾದರೂ ಬಲ್ಲವರಾಗಿರುತ್ತಾರೆ. ನುಡಿಜಗಿತ ಮಾತ್ರ ಬಹುಮಟ್ಟಿಗೆ ದ್ವಿಭಾಷಿಕರಲ್ಲಿ ಮಾತ್ರ ನಡೆಯುವಂಥದು. ಉಲ್ಲೇಖಿತ ವಾಕ್ಯ ಇಡಿಯಾಗಿ ಕೆಲವೊಮ್ಮೆ ಇನ್ನೊಂದು ಭಾಷೆಗೆ ರವಾನೆಯಾಗಿದ್ದರೆ ಆಗ ಮಾತ್ರ ದ್ವಿಭಾಷಿಕರಲ್ಲದವರೂ ನುಡಿಜಗಿತದಲ್ಲಿ ತೊಡಗಿದಂತೆ ತೋರುತ್ತದೆ. ಭಾಷಣಕಾರರು ಇಡಿಯಾದ ಸಂಸ್ಕೃತ ಶ್ಲೋಕಗಳನ್ನು ಕನ್ನಡವಾಕ್ಯಗಳ ಸರಣಿಯಲ್ಲಿ ಇರಿಸುವುದನ್ನು ಕಂಡಿದ್ದೇವೆ. ಇದು ನುಡಿಜಗಿತವಲ್ಲ. ಏಕೆಂದರೆ ನುಡಿಜಗಿತದಲ್ಲಿ ಇನ್ನೊಂದು ಭಾಷೆಯ ವಾಕ್ಯವನ್ನು ಪೂರ್ಣವಾಗಿ ರಚಿಸಬಲ್ಲ ಸಾಮರ್ಥ್ಯ ವ್ಯಕ್ತಿಗೆ ಇರುತ್ತದೆ.

ನುಡಿಬೆರಕೆ, ನುಡಿಜಗಿತಗಳಿಗೆ ಕಾರಣಗಳೇನು? ಒಂದು ಭಾಷೆಯಲ್ಲಿ ಕೊರತೆ ಇರುವ ಭಾಷಾಂಶಗಳನ್ನು ಇನ್ನೊಂದು ಭಾಷೆಯಿಂದ ಎರವಲು ಪಡೆದು ತುಂಬಿಕೊಳ್ಳುವುದೇ ಈ ಭಾಷಾಪ್ರಕ್ರಿಯೆಗಳ ಉದ್ದೇಶವೆಂದು ಸಾಮಾನ್ಯವಾಗಿ ತಿಳಿಯಲಾಗುತ್ತದೆ. ನುಡಿಬೆರಕೆಗೆ ಇಂಥ ಕಾರಣಗಳಿರುತ್ತವೆ. ಆದರೆ ಇವು ಕನಿಷ್ಠ ನೆಲೆಯ ಕಾರಣಗಳು ಮಾತ್ರ. ಭಾಷಾಂಶಗಳ ಕೊರತೆ ಇಲ್ಲದಿರುವ ಸಂದರ್ಭಗಳಲ್ಲೂ ನುಡಿಬೆರಕೆ ಸಾಕಷ್ಟು ಪ್ರಮಾಣದಲ್ಲಿ ನಡೆಯುತ್ತದೆ. ಭಾಷೆಯನ್ನು ಬಳಸುತ್ತಿರುವ ಸಂದರ್ಭ, ಭಾಗಿಗಳಾಗಿರುವ ಜನರು, ಚರ್ಚಿಸುತ್ತಿರುವ ವಿಷಯ, ಚರ್ಚೆಯ, ಸಂಭಾಷಣೆಯ ಉದ್ದೇಶ ಇವೆಲ್ಲವೂ ಒಂದಿಲ್ಲೊಂದು ರೀತಿಯಲ್ಲಿ ನುಡಿಬೆರಕೆಗೆ ಕಾರಣವಾಗುತ್ತದೆಂದು ಅಧ್ಯಯನಗಳು ತೋರಿಸಿಕೊಟ್ಟಿವೆ. ಗುಂಪುಗಳಲ್ಲಿ ಸಂಭಾಷಿಸುವಾಗ, ಇತರರೊಡನೆ ತಮ್ಮನ್ನು ಗುರುತಿಸಿಕೊಳ್ಳಲು ಮತ್ತು ಇತರರಿಂದ ಬೇರೆ ಎಂದು ತೋರಿಸಿಕೊಳ್ಳಲು ಈ ಭಾಷಾಪ್ರಕ್ರಿಯೆಗಳು ನಡೆಯುತ್ತವೆ. ಕನ್ನಡ-ತುಳು ದ್ವಿಭಾಷಿಕರು ತುಳು ಬಲ್ಲವರೊಡನೆ ತಮ್ಮನ್ನು ಗುರುತಿಸಿಕೊಳ್ಳಲು ತುಳುವನ್ನು ಕನ್ನಡದೊಡನೆ ಬೆರಸತೊಡಗಬಹುದು. ಇದು ಕನ್ನಡ ಮಾತ್ರ ಬಲ್ಲವರನ್ನು ಸಂಭಾಷಣೆಯಿಂದ ಹೊರಗಿರಿಸುವ ತಂತ್ರವಾಗಿಯೂ ಬಳಕೆಯಾಗುತ್ತದೆ. ಎಲ್ಲ ದ್ವಿಭಾಷಿಕರೂ ಬೇರೆ ಬೇರೆ ಸಂದರ್ಭಗಳಲ್ಲಿ ಈ ತಂತ್ರಗಳನ್ನು ಬಳಸುತ್ತಾರೆ.

ಕನ್ನಡ-ಇಂಗ್ಲಿಶ್ ದ್ವಿಭಾಷಿಕರನ್ನು ಗಮನಿಸಿದರೆ ಇನ್ನೂ ಕೆಲವು ಸಂಗತಿಗಳು ನಮ್ಮ ತಿಳಿವಿಗೆ ಬರುತ್ತವೆ. ಇವರು ಏಕೆ ಇಂಗ್ಲಿಶ್ ಭಾಷಾಂಶಗಳನ್ನು ಬೆರೆಸುತ್ತಾರೆ ಮತ್ತು ಇಂಗ್ಲಿಶ್ ವಾಕ್ಯದ ರಚನೆಗೆ ಜಗಿಯುತ್ತಾರೆ ಎನ್ನುವುದನ್ನು ವ್ಯವಸ್ಥಿತವಾಗಿ ಅಧ್ಯಯನ ಮಾಡಬೇಕಾಗಿದೆ. ಕೆಲವೊಮ್ಮೆ ಕನ್ನಡದಲ್ಲಿ ಹೇಳಿದ ವಿಷಯವನ್ನೇ ಇಂಗ್ಲಿಶ್‌ನಲ್ಲಿ ಪುನರಾವರ್ತಿಸುವುದನ್ನು ನೋಡುತ್ತೇವೆ. ಚಲನಚಿತ್ರಗಳಲ್ಲಿ, ಸಾಮಾಜಿಕ ಸಂವಾದಗಳಲ್ಲಿ ತರಗತಿಯ ಉಪನ್ಯಾಸಗಳಲ್ಲಿ ಈ ಮಾದರಿಗೆ ನಿದರ್ಶನಗಳು ಒದಗುತ್ತವೆ.

**'ಹೊರಟು ಹೋಗು ಇಲ್ಲಿಂದ, ಗೇಟ್ ಔಟ್'**

**'ಇಂಡಿಯಾ ಇಸ್ ಎ ಡೆವಲಪಿಂಗ್ ಕಂಟ್ರಿ, ನಮ್ಮದು ಅಭಿವೃದ್ಧಿಶೀಲ ರಾಷ್ಟ್ರ'**

**'ನೋ ಪಾರ್ಕಿಂಗ್, ನಿಲ್ದಾಣವಲ್ಲ'** (ರಸ್ತೆಗಳಲ್ಲಿ ಸೂಚನೆ)

ಕೊನೆಯದು ಇಂಗ್ಲಿಶ್ ಮಾತ್ರ ಗೊತ್ತಿರುವವರನ್ನು ಅಥವಾ ಕನ್ನಡ ಮಾತ್ರ ಬಲ್ಲವರನ್ನು ಉದ್ದೇಶಿಸಿದ ಸೂಚನೆ ಎಂದು ವಾದಿಸಲು ಸಾಧ್ಯ. ಅದೇನೇ ಇರಲಿ, ನಾವು ಗಮನಿಸುತ್ತಾ ಹೋದರೆ ಇಂಗ್ಲಿಶಿನ ವಿವರಣೆ, ಅನುವಾದ, ಪರ್ಯಾಯಗಳು ಅನಿವಾರ್ಯವಲ್ಲದ ಪ್ರಸಂಗಗಳಲ್ಲೂ ಈ ಬಗೆಯ ನುಡಿಜಗಿತಗಳಲ್ಲಿ ತೊಡಗುವುದಕ್ಕೆ ನಿದರ್ಶನಗಳು ದೊರಕುತ್ತವೆ, ಅಧಿಕಾರ ಸ್ಥಾಪನೆ, ಭಾವುಕತೆ, ಉದ್ವಿಗ್ನತೆ, ಗುಂಪಿನೊಡನೆ ಗುರುತಿಸಿಕೊಳ್ಳುವುದು, ಸಂವಹನಕ್ಕೆ ನೆರವಾಗುವುದು ಇವೆಲ್ಲವೂ ನುಡಿಜಗಿತಗಳ ಹಿಂದೆ ಪ್ರವೃತ್ತವಾಗುವ ಕಾರಣಗಳು. ಇವು ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆಯಾಗಿ ಅಥವಾ ಒಟ್ಟಾಗಿ ಕೆಲಸ ಮಾಡುವುದುಂಟು.

ಈ ಸಂದರ್ಭದಲ್ಲೇ **ಭಾಷಾ ಆಯ್ಕೆ** ಎಂಬ ಪ್ರಕ್ರಿಯೆಯನ್ನೂ ಚರ್ಚಿಸಬೇಕು. ದ್ವಿಭಾಷಿಕ ಸನ್ನಿವೇಶಗಳಲ್ಲಿ ಯಾವ ಭಾಷೆಯನ್ನು ಯಾರು ಯಾವಾಗ ಎಷ್ಟು ಮತ್ತು ಹೇಗೆ ಬಳಸುತ್ತಾರೆ ಎನ್ನುವುದು ಮುಖ್ಯ ಆಸಕ್ತಿಯ ವಿಷಯವಾಗಿದೆ. ತೆಲುಗು–ಕನ್ನಡ ದ್ವಿಭಾಷಿಕರು ಯಾವಾಗ ಕನ್ನಡ ಬಳಸುತ್ತಾರೆ ಮತ್ತು ತೆಲುಗನ್ನು ಯಾವಾಗ ಬಳಸುತ್ತಾರೆ ಎಂಬುದು ನಿರ್ದಿಷ್ಟಗೊಂಡಿರುತ್ತದೆ. ಎರಡೂ ಭಾಷೆಗಳನ್ನು ಬೇಕೆಂದಾಗ ಬಳಸಬಹುದೆಂಬುದು ಸಾಮಾನ್ಯ ತಿಳುವಳಿಕೆ. ಆದರೆ ದ್ವಿಭಾಷಿಕರ ಭಾಷಾಆಯ್ಕೆಯನ್ನು ನಿರ್ದೇಶಿಸುವಲ್ಲಿ ಸಾಮಾಜಿಕ ನಿಯಮಗಳು ಕೆಲಸ ಮಾಡುತ್ತಿರುತ್ತವೆ. ಭಾಷೆಯ ಬಳಕೆಯ ವಿವಿಧ ವಲಯಗಳಿಗೆ ನಿರ್ದಿಷ್ಟ ಭಾಷೆಯ ಪಾತ್ರ ನಿಗದಿಗೊಂಡಿರುವುದು ಒಂದು ನಿಯಮ. ಇಂಗ್ಲಿಶ್–ಕನ್ನಡ ದ್ವಿಭಾಷಿಕ ಸಂದರ್ಭಗಳಲ್ಲಿ ಆಡಳಿತ, ವ್ಯವಹಾರಗಳಲ್ಲಿ ಆಯ್ಕೆಯ ಭಾಷೆ ಇಂಗ್ಲಿಶ್ ಆಗಿರುತ್ತದೆ. ಈ ಸಂದರ್ಭಗಳಲ್ಲಿ ಕನ್ನಡವನ್ನು ಆಯ್ಕೆ ಮಾಡುವವರು ಈ ನಿಯಮವನ್ನು ಇಚ್ಛೆಯಿಂದ ಉಲ್ಲಂಘನೆ ಮಾಡುತ್ತಾರೆ. ಇಂಗ್ಲಿಶ್ ಸಹಜ; ಕನ್ನಡ ವಿಕಲ್ಪ ಎಂಬುದೇ ನಿಯಮ, ಬ್ಯಾಂಕುಗಳಲ್ಲಿ ಚೆಕ್ಕು ತುಂಬುವಾಗ, ಸಹಿ ಮಾಡುವಾಗ, ವಿವಿಧ ಲಿಖಿತ ನಮೂನೆಗಳನ್ನು ತುಂಬುವಾಗ, ನಿವೇದನೆಗಳನ್ನು, ದೂರುಗಳನ್ನು ಬರೆದುಕೊಡುವಾಗ ಬಹುಮಟ್ಟಿಗೆ ಇಂಗ್ಲಿಶ್ ಆಯ್ಕೆಯ ಭಾಷೆಯಾಗಿರುತ್ತದೆ. ಆಪ್ತವಲಯದ ಸಂಭಾಷಣೆಗೆ, ಅವರೊಡನೆ ಪತ್ರ ವ್ಯವಹಾರಕ್ಕೆ ಕನ್ನಡವನ್ನು ಆಯ್ಕೆ ಮಾಡಿಕೊಳ್ಳುತ್ತೇವೆ. ಈ ವಲಯಗಳಲ್ಲಿ ಇಂಗ್ಲಿಶ್ ಒಂದು ವಿಕಲ್ಪವಾಗಿರುತ್ತದೆ. ಇಡೀ ಸಂದರ್ಭದ ಅಲಿಖಿತ ನಿಯಮಗಳನ್ನು ದ್ವಿಭಾಷಿಕರು ಪಾಲಿಸುತ್ತಿರುತ್ತಾರೆ.

ಭಾಷೆಯ ಆಯ್ಕೆಯ ಅವಕಾಶದ ನಿಯಮ ಪ್ರವೃತ್ತವಾದ ಮೇಲೆ ಜರುಗುವ ಪ್ರಕ್ರಿಯೆಗಳನ್ನಾಗಿ ನುಡಿಜಗಿತ ಮತ್ತು ನುಡಿಬೆರಕೆಗಳನ್ನು ಗಮನಿಸಬಹುದು. ಒಂದು

ಸಂದರ್ಭದಲ್ಲಿ ಕನ್ನಡವನ್ನು ಆಯ್ಕೆ ಮಾಡಿಕೊಂಡ ಮೇಲೆ ಇಂಗ್ಲಿಶಿನ ಭಾಷಾಂಶಗಳನ್ನು ಪಡೆದುಕೊಳ್ಳುವುದು, ಇಂಗ್ಲಿಶಿನ ನೆರವಿನಿಂದ ಕನ್ನಡ ಬಳಕೆಯನ್ನು ಆವರಿಸುವುದು ಇವೆಲ್ಲವೂ ವಿವಿಧ ಸಂಕಥನಗಳಲ್ಲಿ ನಡೆಯುತ್ತವೆ. ಎಷ್ಟೋ ವೇಳೆ ಈ ನುಡಿಬೆರಕೆ, ನುಡಿಜಿಗಿತಗಳು ಭಾಷಾಆಯ್ಕೆಯ ನಿಯಮಕ್ಕೆ ಪೂರಕವಾಗಿರುತ್ತವೆ. ಕೆಲವೊಮ್ಮೆ ಭಾಷಾಆಯ್ಕೆ ತಂದೊಡ್ಡುವ ಕಟ್ಟುಪಾಡುಗಳನ್ನು ಮೀರುವುದೂ ಈ ಪ್ರಕ್ರಿಯೆಗಳ ಉದ್ದೇಶವಾಗಿರುತ್ತದೆ. ಅಂದರೆ ನಿರ್ದಿಷ್ಟ ಸಂದರ್ಭಕ್ಕೆ ನಿರ್ದಿಷ್ಟ ಭಾಷೆಯೊಂದನ್ನು ಆಯ್ದುಕೊಂಡಾದ ಮೇಲೆ, ಸಂವಹನದ ಮತ್ತು ಸಂದರ್ಭದ ಅವಶ್ಯಕತೆಗಳನ್ನು ಪೂರೈಸಲು ಇನ್ನೊಂದು ಭಾಷೆಯ ನೆರವನ್ನು ದ್ವಿಭಾಷಿಕರು ಪಡೆಯುತ್ತಾರೆ. ಇದು ನುಡಿಬೆರಕೆ, ನುಡಿಜಿಗಿತದ ರೂಪದಲ್ಲಿರುತ್ತದೆ. ನುಡಿಜಿಗಿತದಲ್ಲಾದರೂ ಕೊನೆಯ ಪಕ್ಷ ಇನ್ನೊಂದು ಭಾಷೆಯ ನೆರವು ಪಡೆದದ್ದು ಗೊತ್ತಾಗುತ್ತದೆ. ಆದರೆ ನುಡಿಬೆರಕೆಯಲ್ಲಿ ಹಾಗಲ್ಲ. ಭಾಷಿಕರು ನುಡಿಬೆರಕೆ ಮಾಡುತ್ತಿದ್ದರೂ ಒಂದೇ ಭಾಷೆಯ ನಿಯಮಗಳನ್ನು ಪಾಲಿಸುತ್ತಿರುತ್ತಾರೆ; ಕೊನೆಯ ಪಕ್ಷ ಹಾಗೆಂದು ಭಾವಿಸುತ್ತಾರೆ.

ಈ ನುಡಿಬೆರಕೆ, ಜಿಗಿತಗಳು ದ್ವಿಭಾಷಿಕ ಸನ್ನಿವೇಶಗಳಲ್ಲಿ ಸಹಜವಾಗಿ ನಡೆಯುತ್ತಿದ್ದರೂ ಭಾಷಿಕರು ಇವುಗಳನ್ನು ಉತ್ತಮ ಭಾಷಾಬಳಕೆಯ ನಿದರ್ಶನಗಳೆಂದು ಭಾವಿಸುವುದಿಲ್ಲ. ನುಡಿಬೆರಕೆಯಲ್ಲಿ ತೊಡಗಿದವರು ಭಾಷೆಯನ್ನು 'ಕೆಡಿಸು'ತ್ತಾರೆಂದೂ, ಭಾಷೆಯ ಸೂಕ್ತ ಬಳಕೆ ತಿಳಿಯದೆ ತಮ್ಮ ಕೊರತೆಗಳನ್ನು ತುಂಬಿಕೊಳ್ಳಲು ಹೀಗೆ ಬೆರಕೆ ಮಾಡುತ್ತಾರೆಂದೂ ಭಾವಿಸುತ್ತಾರೆ. ಬೆರಕೆಯ ಸನ್ನಿವೇಶಗಳನ್ನು ದೂರವಿರಿಸುವುದು ಭಾಷೆಯ ಶುದ್ಧತೆಯನ್ನು ಕಾಯ್ದುಕೊಳ್ಳುವ, ಭಾಷೆಯನ್ನು ಬೆಳೆಸುವ ಮಾರ್ಗವೆಂದು ವಾದಿಸುತ್ತಾರೆ. ಇಂಥ ಚಿಂತನೆಗಳು ದ್ವಿಭಾಷಿಕ ಸನ್ನಿವೇಶದಲ್ಲಿ ಏಕಮುಖಿಯಾದ ಬೆರಕೆ ನಡೆಯುವಾಗ ಮಂಡಿತವಾಗುತ್ತವೆ. ಕನ್ನಡ-ತೆಲುಗು, ತಮಿಳು-ಮಲೆಯಾಳಂ, ಹಿಂದಿ-ಉರ್ದುಗಳ ನಡುವೆ ನುಡಿಬೆರಕೆ ನಡೆದರೆ ಆಗ ಯಾರೂ ಈ ಶುದ್ಧತೆಯ ಮಾತನ್ನು ಮುಂದಿಡುವುದಿಲ್ಲ. ಎಷ್ಟೋ ವೇಳೆ ಈ ಭಾಷೆಗಳ ದ್ವಿಭಾಷಿಕರಲ್ಲಿ ನುಡಿಬೆರಕೆ ನಡೆಯುವುದೂ ಅರಿವಿಗೆ ಬರುವುದಿಲ್ಲ. ಏಕೆಂದರೆ ಈ ಬೆರಕೆ ಎರಡೂ ಭಾಷೆಗಳ ನಡುವೆ ಬಹುಮಟ್ಟಿಗೆ ಸಮಪ್ರಮಾಣದಲ್ಲಿ ನಡೆಯುತ್ತಿರುತ್ತದೆ. ಆದರೆ ಇಂಗ್ಲಿಶ್-ಕನ್ನಡಗಳ ನಡುವೆ ಏಕಮುಖಿಯಾದ ಬೆರಕೆ ನಡೆಯುವುದು. ಕನ್ನಡ ಸಂಕಥನಗಳಲ್ಲಿ ಇಂಗ್ಲಿಶ್ ಸೇರುತ್ತದೆ. ಆದರೆ ಈ ದ್ವಿಭಾಷಿಕರ ಇಂಗ್ಲಿಶ್ ಸಂಕಥನದಲ್ಲಿ ಕನ್ನಡ ಬೆರೆಯುವುದಿಲ್ಲ. ಹೀಗೆ ಒಂದು ಭಾಷೆ 'ಶುದ್ಧ'ವಾಗಿ ಉಳಿದು ಇನ್ನೊಂದು 'ಅಶುದ್ಧ'ವಾಗುವುದು ದ್ವಿಭಾಷಿಕರಿಗೆ ಸಹನೀಯವೆನಿಸದೇ ಹೋಗುವುದರಿಂದ ನುಡಿಬೆರಕೆಯನ್ನು ವಿರೋಧಿಸುತ್ತಾರೆ.

ನುಡಿಬೆರಕೆಯಲ್ಲಿ ತೊಡಗುವವರಿಗೂ ತಾವೇಕೆ ಹಾಗೆ ಮಾಡುತ್ತಿದ್ದೇವೆ ಎಂಬ ಬಗ್ಗೆ ಕೆಲವು ಅಭಿಪ್ರಾಯಗಳಿರುತ್ತವೆ. ಯಾವಾಗ ನುಡಿಬೆರಕೆ ಮಾಡುತ್ತಾರೆಂದು ಅವರು ಹೇಳಬಲ್ಲರು. ಬಹುಮಟ್ಟಿಗೆ ತಮ್ಮ ವಿಚಾರಗಳನ್ನು ಮಂಡಿಸಲು, ಸಂದರ್ಭೋಚಿತ ಸಂಗತಿಗಳನ್ನು ಹೇಳಲು ತಮಗೆ ಗೊತ್ತಿರುವ ಮತ್ತು ಕೇಳುಗರಿಗೂ ತಿಳಿದಿರುವ ಇನ್ನೊಂದು

ಭಾಷೆಯಿಂದ ಭಾಷಾಂಶಗಳನ್ನು ಬಳಸುವುದು ಅನಿವಾರ್ಯವಾಗುತ್ತದೆಂದು ಅವರು ನಂಬುತ್ತಾರೆ.

ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷೆಗಳ ರಚನೆಗಳು ಪರಸ್ಪರ ಪ್ರಭಾವಿತವಾಗುತ್ತವೆ ಎನ್ನುವ ಮಾತನ್ನು ಈಗಾಗಲೇ ಹೇಳಲಾಗಿದೆ. ಧ್ವನಿನಿಯಮಗಳು, ಪದರಚನೆಯ ನಿಯಮಗಳು ಮತ್ತು ವಾಕ್ಯರಚನೆ ಇವೆಲ್ಲವೂ ಬೇರೆ ಬೇರೆ ಪ್ರಭಾವಕ್ಕೆ ಒಳಗಾಗುತ್ತವೆ. ಕನ್ನಡ–ತಮಿಳು ದ್ವಿಭಾಷಿಕರನ್ನು ಗಮನಿಸೋಣ. ತಮಿಳಿನಲ್ಲಿ ಘೋಷ–ಅಘೋಷ ಸ್ಪರ್ಶಧ್ವನಿಗಳು (ಕ/ಗ, ಟ/ಡ, ತ/ದ, ಪ/ಬ) ಪೂರಕಪ್ರಸಾರದಲ್ಲಿರುತ್ತವೆ. ತಮಿಳು ಭಾಷಿಕರು ಕನ್ನಡ ಮಾತಾಡುವಾಗ ಈ ನಿಯಮವನ್ನು ಅನುಸರಿಸುವುದು ಒಂದು ಮಾದರಿಯಾದರೆ, ಕನ್ನಡದ ನಿಯಮಗಳನ್ನೇ ಕಲಿತು ಅವನ್ನು ಕನ್ನಡ ಉಚ್ಚಾರಣೆಯಲ್ಲಿ ಬಳಸುವುದು ಇನ್ನೊಂದು ಮಾದರಿ. ದ್ವಿಭಾಷಿಕರು ಹೀಗೆ ಒಂದು ಭಾಷೆಯ ಧ್ವನಿಗಳನ್ನು ಮತ್ತು ಧ್ವನಿರಚನೆಯ ನಿಯಮಗಳನ್ನು ಇನ್ನೊಂದು ಭಾಷೆಯನ್ನು ಉಚ್ಚರಿಸುವಾಗ ಬಳಸುವುದು ಸಾಮಾನ್ಯವಾಗಿ ಕಂಡುಬರುವ ಲಕ್ಷಣವಾಗಿದೆ.

ಪದರಚನೆಯಲ್ಲೂ ಪರಸ್ಪರ ಪ್ರಭಾವಗಳು ಹಲವು ದ್ವಿಭಾಷಿಕ ಸನ್ನಿವೇಶಗಳಲ್ಲಿ ನಡೆಯುತ್ತವೆ. ಈ ಬಗ್ಗೆ ಭಾಷಾಶಾಸ್ತ್ರಜ್ಞರು ಸಮಾನಾಭಿಪ್ರಾಯ ಹೊಂದಿಲ್ಲ. ಈ ಹಿಂದೆಯೇ ಚರ್ಚಿಸಿದಂತೆ ಇಲ್ಲಿ ಹಲವು ಸಾಧ್ಯತೆಗಳಿವೆ. ಒಂದು ಭಾಷೆಗೆ ಸಂಬಂಧಿಸಿದ ಪದಕೋಶ ಮತ್ತು ಪದರಚನೆಯ ನಿಯಮಗಳನ್ನು ಸದಾ ಪ್ರತ್ಯೇಕವಾಗಿರಿಸಿಕೊಳ್ಳುವುದು ಒಂದು ಮಾದರಿ. ಇವರಲ್ಲಿ ಪರಸ್ಪರ ಪ್ರಭಾವವೆಂಬುದು ಇರುವುದೇ ಇಲ್ಲ. ಆದರೆ ಇಂಥ ಸಂದರ್ಭಗಳು ಅಪರೂಪ. ಕನ್ನಡ–ಸಂಸ್ಕೃತದ ಸಂಬಂಧವನ್ನೇ ಗಮನಿಸೋಣ. ಕನ್ನಡ ತನ್ನ ಬರೆವಣಿಗೆಯ ಕ್ರಮದಲ್ಲಿ ಸಂಸ್ಕೃತಕ್ಕಾಗಿ ಹೊಸ ಚಿಹ್ನೆಗಳನ್ನೇ ರೂಪಿಸಿಕೊಂಡಿದೆ. ಎಲ್ಲ ಮಹಾಪ್ರಾಣ ಚಿಹ್ನೆಗಳೂ ಸಂಸ್ಕೃತ ಪದಗಳಿಗಾಗಿಯೇ ಇವೆ. ಏಕೆಂದರೆ ಕನ್ನಡದ ದೇಶ್ಯ ಪದಕೋಶದ ಪದಗಳಲ್ಲಿ ಮಹಾಪ್ರಾಣಗಳು ಇಲ್ಲ. ಕನ್ನಡಿಗರು ಕನ್ನಡವನ್ನು ಕಲಿಯುವಾಗಲೂ ಈ ಮಹಾಪ್ರಾಣಗಳ ಉಚ್ಚಾರಣೆ ಮತ್ತು ಬರೆಯುವ ಕ್ರಮವನ್ನು ಕಲಿಯುವುದು ಈಗ ಅನಿವಾರ್ಯವಾಗಿದೆ.

ಪದಕೋಶಗಳನ್ನು ಬೇರೆ ಬೇರೆಯಾಗಿರಿಸುವುದು ದ್ವಿಭಾಷಿಕರಲ್ಲಿ ಒಂದು ಸಾಧ್ಯತೆ. ಆದರೆ ಸಾಮುದಾಯಿಕ ದ್ವಿಭಾಷಿಕತೆಯಲ್ಲಿ ಇದು ಸಂಭವಿಸುವ ಸಾಧ್ಯತೆ ಕಡಿಮೆ. ಈ ಬಗ್ಗೆ ಹಲವು ಕುತೂಹಲಕಾರಿ ಪ್ರಯೋಗಗಳು ನಡೆದಿವೆ. ಒಂದು ಭಾಷಿಕ ಸಂಕಥನದಲ್ಲಿ ಎರಡೂ ಭಾಷೆಯ ಪದಗಳು ಬೆರೆತಿವೆ ಎನ್ನೋಣ. ನುಡಿಬೆರಕೆಯಲ್ಲಿ ಹೀಗಾಗುತ್ತದೆ. ಇಂಥ ಸಂಕಥನದ ವಾಕ್ಯಗಳನ್ನು ಒಂದೇ ಭಾಷೆಯಲ್ಲಿರುವಂತೆ ಪರಿವರ್ತಿಸಿಕೊಂಡು ಎರಡೂ ಸಂಕಥನಗಳನ್ನೂ ಓದಲು/ಕೇಳಲು ದ್ವಿಭಾಷಿಕರಿಗೆ ನೀಡಲಾಯಿತು. ಆ ವಾಕ್ಯಗಳನ್ನು ಓದಲು/ಕೇಳಲು ಮತ್ತು ಅರ್ಥಮಾಡಿಕೊಳ್ಳಲು ಬೇಕಾದ ವೇಳೆಯನ್ನು ಗುರುತಿಸಿಕೊಳ್ಳಲಾಯಿತು. ಎರಡೂ ಭಾಷೆಯ ಪದಗಳಿರುವ ಸಂಕಥನದ ಗ್ರಹಿಕೆಗೆ ಹೆಚ್ಚು ಸಮಯವನ್ನು ತೆಗೆದುಕೊಂಡದ್ದನ್ನು ಈ ಪ್ರಯೋಗಗಳು ವರದಿಮಾಡಿವೆ.

ಅಂದರೆ ದ್ವಿಭಾಷಿಕರಲ್ಲಿ ಎರಡೂ ಭಾಷೆಗಳ ಪದಕೋಶಗಳು ಪ್ರತ್ಯೇಕವಾಗಿದ್ದು ಒಂದು ಭಾಷೆಯಿಂದ ಇನ್ನೊಂದು ಭಾಷೆಗೆ ದಾಟುವ ಕೆಲಸವನ್ನು ಭಾಷಾಬಳಕೆಯ ಸಂದರ್ಭದಲ್ಲಿ ಮಾಡುತ್ತಿರುತ್ತಾರೆಂದು ತಿಳಿಯಲೇಬೇಕಾಗುತ್ತದೆ. ಇಂಥ ಪ್ರಯೋಗಗಳಿಗೆ ಮಿತಿ ಇದೆ. ಇವು ಆಧಾರ ಕಲ್ಪನೆಗೆ ತಕ್ಕ ಪ್ರಯೋಗ ಮಾದರಿಯನ್ನು ಆರಿಸಿಕೊಳ್ಳುತ್ತವೆ. ಮಿಶ್ರಭಾಷಾ ಸಂಕಥನದ ಉತ್ಪಾದನೆಗೂ ಹೀಗೆ 'ಹೆಚ್ಚಿನ' ಸಮಯವನ್ನು ತೆಗೆದುಕೊಳ್ಳುತ್ತಾರೋ ಎನ್ನುವುದು ಪ್ರಶ್ನೆಯಾಗಿಯೇ ಉಳಿಯುತ್ತದೆ. ವಾಸ್ತವವಾಗಿ ದ್ವಿಭಾಷಿಕರನ್ನು ಕೆಲವು ಸಂದರ್ಭದಲ್ಲಿ ಒಂದೇ ಭಾಷೆಯಲ್ಲಿ ನಿರ್ವಹಿಸಲು ಹೇಳಿದರೆ ಕಷ್ಟಪಡುವುದು ಸಾಮಾನ್ಯ ಅನುಭವ. ಎಂದರೆ ಪದಕೋಶಗಳನ್ನು ಬೇರ್ಪಡಿಸಿ ಇರಿಸಿಕೊಳ್ಳುತ್ತಾರೆ ಎನ್ನುವ ಮಾದರಿಯನ್ನು ಸಮರ್ಥವಾಗಿ ನಿಯಂತ್ರಿಸುವುದು ಕಷ್ಟ. ದ್ವಿಭಾಷಿಕ ಸನ್ನಿವೇಶಗಳಲ್ಲಿ ಪದಕೋಶಗಳಿಂದ ಆಯ್ಕೆ ಮಾಡುವ ಕ್ರಮ; ಆಯ್ಕೆಗೆ ಬಳಸುವ ಮಾನದಂಡ. ಪದರಚನೆಯ ನಿಯಮಗಳ ಬೆರಕೆ ಇತ್ಯಾದಿಗಳು ಅಭ್ಯಾಸಯೋಗ್ಯ ಸಂಗತಿಗಳಾಗಿವೆ. **ಸಂಕಥನ ಪೂರಕಗಳು** ಇಂಥ ಸನ್ನಿವೇಶಗಳಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಯೆಡೆಗೆ ಪಯಣಿಸುತ್ತಿರುತ್ತವೆ. ಕನ್ನಡ–ಇಂಗ್ಲಿಶ್ ದ್ವಿಭಾಷಿಕರ ಕನ್ನಡ ಮಾತುಕತೆಯಲ್ಲಿ ಸೇರುವ ಸೋ,ದೆನ್, ಬಟ್, ಅಕ್ಚುಯಲಿ, ಯಸ್, ನೋ ಮುಂತಾದ ಸಂಕಥನ ಪೂರಕಗಳನ್ನು ನಿದರ್ಶನಗಳನ್ನಾಗಿ ನೋಡಬಹುದು. ತಮಿಳು–ಕನ್ನಡ ದ್ವಿಭಾಷಿಕ ಸನ್ನಿವೇಶದಿಂದಾಗಿ ಕನ್ನಡ ವಾಕ್ಯಗಳಲ್ಲಿ **'ಆ ಕಾರು ಬಂದು ನಮ್ಮ ಅಂಕಲ್‌ದು' 'ಅಲ್ಲಿ ನಿಂತಿರೋ ಹುಡುಗ ಬಂದು (ಅವನು) ನನ್ನ ತಮ್ಮ'** ಮುಂತಾದ ಮಾದರಿಗಳು ಕೇಳಿಸುತ್ತವೆ. 'ಬಂದು' ಎಂಬ ಸಂಕಥನಪೂರಕ ಕನ್ನಡ ವಾಕ್ಯಗಳಲ್ಲಿ ಸೇರುತ್ತಿದೆ.

ಪದರಚನೆಯ ನಿಯಮಗಳು, ಸಾಧಿತ ರೂಪಗಳನ್ನು ಪಡೆಯುವ ನಿಯಮಗಳು, ಅಂತರ್ಗಮಕ ಪ್ರತ್ಯಯೀಕರಣ, ಸಂಧಿನಿಯಮಗಳು ಇವೆಲ್ಲವೂ ದ್ವಿಭಾಷಿಕ ಸನ್ನಿವೇಶದಲ್ಲಿ ಒಂದು ಭಾಷೆಯಿಂದ ಇನ್ನೊಂದು ಭಾಷೆಯೊಳಗೆ ಸೇರುವುದುಂಟು. ಕೆಲವು ನಿದರ್ಶನಗಳು:

1. **'ಬಾಯ್ಸ್‌ಗಳು ಎಡಗಡೆ. ಗರ್ಲ್ಸ್‌ಗಳು ಬಲಗಡೆ ನಿಲ್ಲಿ'**

ಬಾಯ್, ಗರ್ಲ್; ಪದಗಳ ಬಹುವಚನ ರೂಪವನ್ನು ಇಡಿಯಾಗಿ ತೆಗೆದುಕೊಂಡು ಅನಂತರ ಕನ್ನಡ ಬಹುವಚನ ಪ್ರತ್ಯಯ ಸೇರಿಸಿದೆ. ಬಸ್, ಬುಕ್ ಮುಂತಾದ ರೂಪಗಳಿಗೆ ನೇರವಾಗಿ ಕನ್ನಡ ಬಹುವಚನ ಪ್ರತ್ಯಯವನ್ನು ಹತ್ತಿಸುವುದು ಸಾಧ್ಯ. ಇಲ್ಲಿ ಕನ್ನಡ ವ್ಯಾಕರಣ ನಿಯಮವೊಂದು ವಿಶಿಷ್ಟ ರೀತಿಯಲ್ಲಿ ಕೆಲಸ ಮಾಡುತ್ತಿದೆ. ನಪುಂಸಕಲಿಂಗದ ನಾಮಪದಗಳಿಗೆ ಎಲ್ಲ ಸಂದರ್ಭಗಳಲ್ಲೂ ಬಹುವಚನ ಪ್ರತ್ಯಯ ಬೇಕಿಲ್ಲ ಎನ್ನುವುದೇ ಆ ನಿಯಮ.

2. ಊಟೋಪಚಾರ, ಮರೋದ್ಯಮ, ಕಲಿಕಾಕೇಂದ್ರ ಮುಂತಾದ ರೂಪಗಳಲ್ಲಿ ಸಂಸ್ಕೃತ ಭಾಷೆಯ ಸಂಧಿ, ಸಮಾಸದ ನಿಯಮಗಳನ್ನು ಕನ್ನಡ ಪದಗಳನ್ನು ಬಳಸಿರುವ ಸಂದರ್ಭದಲ್ಲೂ ಅನ್ವಯಿಸಿರುವುದು ಕಂಡುಬರುತ್ತದೆ. ಕನ್ನಡ–ಸಂಸ್ಕೃತ ದ್ವಿಭಾಷಿಕ ಸಂದರ್ಭದಲ್ಲಿ ಸಂಸ್ಕೃತದ ಪದರಚನೆಯ ನಿಯಮಗಳು ಹೀಗೆ ಕನ್ನಡದೊಳಗೆ ಬಂದು

ಸೇರುತ್ತವೆ. ಸಂಸ್ಕೃತ ಪದಗಳನ್ನು ಕನ್ನಡದ ವ್ಯಾಕರಣ ಪ್ರಕ್ರಿಯೆಗೆ ಗುರಿಪಡಿಸುವುದೂ ಉಂಟು. ಉದಾ: 1 ರ ಮಾದರಿಯಂತೆ ಸಂಸ್ಕೃತದ ನಾಮಪದಗಳಿಗೆ ಕನ್ನಡದ ಬಹುವಚನ ಪ್ರತ್ಯಯವನ್ನು ಲಗತ್ತಿಸಿ ಬಳಸುವುದು ಒಂದು ಅಂಥ ನಿದರ್ಶನ.

3. **'ಓಡ್ತಿರೋ ಬಸ್ಸಿಂದ ದಿಗಿದುಬಿಟ್ಟ'**

**'ಈ ಬೆಟ್ಟ ಎಕ್ಕೋಕೆ ನನ್‌ಕೈಲಿ ಆಗಲ್ಲ'**

ಈ ನಿದರ್ಶನಗಳು ಕನ್ನಡ-ತೆಲುಗು ದ್ವಿಭಾಷಿಕ ಸಂದರ್ಭದವು. ದಿಗು-ಎಂಬ ಕ್ರಿಯಾಧಾತುವನ್ನು ಕನ್ನಡ ವಾಕ್ಯದಲ್ಲಿ (ಇಳಿ ಎಂಬ ಅರ್ಥ) ಬಳಸಿರುವ ಕ್ರಮವನ್ನು ಗಮನಿಸಿ. ಹಾಗೆಯೇ 'ಎಕ್ಕು' ಎಂಬ ಕ್ರಿಯಾಧಾತುವನ್ನು 'ಹತ್ತು' ಎಂಬ ಅರ್ಥದಲ್ಲಿ ಬಳಸಲಾಗಿದೆ. ಇವೆರಡೂ ಧಾತುಗಳು ತೆಲುಗಿನವು. 'ಇಳಿದು' ರೂಪವನ್ನು ಸಾಧಿಸುವ ಕ್ರಮದಲ್ಲೇ 'ದಿಗಿದು' ರೂಪವನ್ನು ಸಾಧಿಸಿರುವುದು ಈ ವಾಕ್ಯಪ್ರಯೋಗದ ವಿಶೇಷವಾಗಿದೆ.

ವಾಕ್ಯಗಳ ನೆಲೆಯಲ್ಲಿ ಪ್ರಭಾವಗಳು ನಡೆಯುವುದನ್ನು ಹಲವು ಅಧ್ಯಯನಗಳು ದೃಢಪಡಿಸಿವೆ. ಕನ್ನಡ-ಕೊಂಕಣಿ, ತುರ್ಕಿಶ್-ಪರ್ಶಿಯನ್, ಸ್ಪಾನಿಶ್-ನಹುತ್ಲ್ (ಮೆಕ್ಸಿಕೋ) ಇಂಗ್ಲಿಶ್-ಫ್ರೆಂಚ್ (ಕ್ವಿಬೆಕ್, ಕೆನಡಾ) ಸ್ಪಾನಿಶ್-ಕ್ವೆಚ್ವಾ (ಬೊಲಿವಿಯಾ) ಈ ದ್ವಿಭಾಷಾ ಸನ್ನಿವೇಶವನ್ನು ಆಧರಿಸಿ ನಡೆಸಿದ ಅಧ್ಯಯನಗಳು ವಾಕ್ಯರಚನೆಯ ಹಂತದ ಪ್ರಭಾವಗಳನ್ನು ತೋರಿಸಿವೆ. ಈ ಐದೂ ಪ್ರಸಂಗಗಳಲ್ಲಿ ಒಂದೇ ವ್ಯಾಕರಣಾಂಶದ ಪ್ರಭಾವ ಕಂಡು ಬಂದಿರುವುದು ಆಶ್ಚರ್ಯದ ಸಂಗತಿಯಾಗಿದೆ. ವಾಕ್ಯಗಳಲ್ಲಿ ನಾಮಪದ ಗುಂಫನಗಳಿದ್ದು ಈ ನಾಮಪದ ಗುಂಫನಗಳಲ್ಲಿ ರಿಲೆಟಿವ್ ಕ್ಲಾಸ್ ಎಂಬುದೊಂದು ಬಗೆ. ಮುಖ್ಯನಾಮಪದವನ್ನು ವಿವರಿಸುವ ವಿಶೇಷಣದಂತೆ ತೋರುವ ಪದಗಳು ಈ ರಿಲೆಟಿವ್ ಕ್ಲಾಸ್‌ನಲ್ಲಿರುತ್ತವೆ. 'ಮರದ ಕೆಳಗೆ ನಿಂತ ಹುಡುಗ' ಎಂಬ ರಚನೆಯಲ್ಲಿ 'ಮರದ ಕೆಳಗೆ ನಿಂತ' ಎಂಬುದೊಂದು ರಿಲೆಟಿವ್ ಕ್ಲಾಸ್. ಈ ರಚನೆಯಲ್ಲಿ ಹಲವು ಬಗೆಗಳಿವೆ. ಈ ಮೇಲೆ ಹೇಳಿದ ವ್ಯಾಕರಣ ನಿಯಮಗಳ ಮೇಲಿನ ಪ್ರಭಾವಗಳು ಈ ವ್ಯಾಕರಣಾಂಶವನ್ನು ರೂಪಿಸುವ ನಿಯಮಗಳಲ್ಲಿ ಬದಲಾವಣೆ ತಂದಿವೆ.

ಕನ್ನಡ-ಕೊಂಕಣಿಯ ನಿದರ್ಶನವನ್ನು ನೋಡೋಣ. ಇದು ಕೊಂಕಣಿಯ ವಾಕ್ಯ.

**ಜೋ ಮ್ಹೊಂತಾರೊ ಪೇಪರ್ ವಾಚತ್ ಆಸ್ಸಾ, ತೊ ಡಾಕ್ತ್ರು ಆಸ್ಸಾ**

ಕನ್ನಡದಲ್ಲಿ 'ಯಾವ ಮುದುಕರು ಪೇಪರ್ ಓದುತ್ತಿದ್ದಾರೋ ಅವರು ಡಾಕ್ಟರು ಇದ್ದಾರೆ' [ಇದು ಕನ್ನಡಕ್ಕೆ ಸಹಜವಾದ ರಚನೆಯಲ್ಲ. ಪೇಪರ್ ಓದುತ್ತಿರುವ ವೃದ್ಧರು ಡಾಕ್ಟರು (ಆಗಿದ್ದಾರೆ) ಎಂಬುದು ಹೆಚ್ಚು ಸಹಜ ರಚನೆ. ಅದಿರಲಿ] ಕನ್ನಡ ಪ್ರಭಾವಕ್ಕೆ ಒಳಗಾದ ಕೊಂಕಣಿ-ಕನ್ನಡ ದ್ವಿಭಾಷಿಕರಲ್ಲಿ ಈ ಮೇಲಿನ ವಾಕ್ಯ ಹೀಗಾಗುತ್ತದೆ.

**'ಕ್ವಾಂಚೋ ಮ್ಹೊಂತಾರೋ ಪೇಪರ್ ವಾಚತ್ ಆಸ್ಸಾ ಕಿ ತೇ ಡಾಕ್ತ್ರು ಆಸ್ಸಾ'**

ಕನ್ನಡದಲ್ಲಿ ಕಾಣುವ 'ಯಾವ' ಎಂಬುದಕ್ಕೆ ಕೊಂಕಣಿ ಸಂವಾದಿಯಾಗಿ 'ಕ್ಯಾಂಚೊ' ಬಳಸಲಾಗಿದೆ. ಕನ್ನಡದಲ್ಲಿ ವಾಕ್ಯದ ಮೊದಲ ಭಾಗದಲ್ಲಿ ಬರುವ ಅರ್ಥಪೂರ್ಣತೆಯನ್ನು ಸೂಚಿಸುವ 'ಓ' ಪ್ರತ್ಯಯಕ್ಕೆ (ಓದುತ್ತಿದ್ದಾರೋ) ಸಂವಾದಿಯಾಗಿ 'ಕಿ' ಬಳಸಲಾಗಿದೆ. ಕ್ಯಾಂಚೋ ಮತ್ತು ಕಿ ಇವೆರಡೂ ಕೊಂಕಣಿ ರೂಪಗಳು. ಆದರೂ ಇತರ ಕೊಂಕಣಿ ಭಾಷಿಕರು ಇಂಥ ವಾಕ್ಯಗಳಲ್ಲಿ 'ಕ್ಯಾಂಚೋ' ಮತ್ತು 'ಕಿ' ಬಳಸುವುದಿಲ್ಲ; 'ಜೋ' ಮತ್ತು 'ತೊ' ಬಳಸುತ್ತಾರೆ. ಕನ್ನಡದ ಮಾದರಿಯಲ್ಲಿ ವಾಕ್ಯವನ್ನು ರಚಿಸಲೆಂದು ಈ ರೂಪಗಳನ್ನು ವಾಕ್ಯದಲ್ಲಿ ಬಳಸಲಾಗಿದೆ.

ಮೇಲೆ ಉಲ್ಲೇಖಿಸಿದ ಐದೂ ಭಾಷಾ ಸಂದರ್ಭಗಳಲ್ಲೂ ಇದೇ ಮಾದರಿಯ-ಇದೇ ವ್ಯಾಕರಣಾಂಶದ ನೆಲೆಯ-ಪ್ರಭಾವಗಳಿವೆ. ಈ ಸಮಾನತೆಗೆ ಕಾರಣಗಳು ಏನೇ ಇರಲಿ, ನಮಗಿಲ್ಲಿ ವಾಕ್ಯದ ಹಂತದಲ್ಲಿಯೂ ಪ್ರಭಾವಗಳು ಸಾಧ್ಯವೆಂಬುದಷ್ಟೇ ಮುಖ್ಯ. ಕನ್ನಡ-ಮರಾಠಿ-ಉರ್ದು ಸನ್ನಿವೇಶವೊಂದನ್ನು ಕುರಿತು ಮಹಾರಾಷ್ಟ್ರದ ಕುಪ್‌ವಾರ್ ಗ್ರಾಮದ ಮಾಹಿತಿಯನ್ನು ಆಧರಿಸಿ ಮಾಡಿದ ಅಧ್ಯಯನವು ವ್ಯಾಕರಣ ಹಂತದ ಪ್ರಭಾವದ ಮತ್ತೊಂದು ನೆಲೆಯನ್ನು ತೋರಿಸಿಕೊಡುತ್ತದೆ. ದ್ವಿಭಾಷಿಕತೆಯನ್ನು ವಿವರಿಸುವ ಬಹುಪಾಲು ಬರೆಹಗಳು ಈ ಕುಪ್‌ವಾರ್ ಅಧ್ಯಯನವನ್ನು ಮತ್ತೆ ಮತ್ತೆ ಉಲ್ಲೇಖಿಸುತ್ತದೆ. ಈ ಹಳ್ಳಿಯಲ್ಲಿ ತೆಲುಗು ಭಾಷಿಕರು ಇದ್ದಾರಾದರೂ ಅವರ ಸಂಬಂಧದ ಮಾಹಿತಿಯನ್ನು ಅಧ್ಯಯನವು ಬಳಸಿಲ್ಲ. ಈ ಕೆಳಗಿನ ವಾಕ್ಯಗಳನ್ನು ನೋಡಿ:

ಕನ್ನಡ: **ತಾಪ್ಲಾ ಜರಾ ಖೋಡಿ ತಗೊಂಡಿ ಬಯ್ನ್**
ಉರ್ದು: **ಪಾಲಾ ಜರಾ ಕಾಟ್‌ಕೀ ಲೇಕೇ ಆಯಾ**
ಮರಾಠಿ: **ಪಾಲಾ ಜರಾ ಕಾಪುನ್ ಘೇವುನ್ ಆ ಲೋ**

ಅರ್ಥ: ಸ್ವಲ್ಪ ಸೊಪ್ಪು ಕತ್ತರಿಸಿ ತೆಗೆದುಕೊಂಡು ಬಂದನು

ಹೆಚ್ಚು ಸೂಕ್ಷ್ಮ ವಿಶ್ಲೇಷಣೆಗೆ ಹೋಗದೆ ಮುಖ್ಯವಾದ ವಿವರಗಳನ್ನು ಗಮನಿಸಿದರೆ ಗೊತ್ತಾಗುವುದಿಷ್ಟು,

1. ಮೂರೂ ಭಾಷೆಗಳು ತಂತಮ್ಮ ಪದಕೋಶಕ್ಕೆ ಬದ್ಧವಾಗಿದೆ.

2. ಮೂರೂ ವಾಕ್ಯಗಳ ಹಿಂದಿನ ನಿಯಮ ಒಂದೇ ಆಗಿದೆ. ವಾಸ್ತವವಾಗಿ ಕನ್ನಡ ಮತ್ತು ಉಳಿದೆರಡು ಭಾಷೆಗಳು ವಾಂಶಿಕವಾಗಿ ಭಿನ್ನವಾಗಿವೆ. ಮರಾಠಿ ಮತ್ತು ಉರ್ದುಗಳ ನಡುವೆ ಕೂಡ ವ್ಯಾಕರಣದ ನಿಯಮಗಳು ಸಾಕಷ್ಟು ಬೇರೆಯಾಗಿರುತ್ತವೆ. ಆದರೆ ಈ ಸಂದರ್ಭದಲ್ಲಿ ಈ ಮೂರೂ ಭಾಷಿಕರು ಬಳಸುವ ವ್ಯಾಕರಣ ನಿಯಮಗಳಲ್ಲಿ ಏಕರೂಪತೆ ಕಾಣತೊಡಗಿದೆ. ಕನ್ನಡ ವಾಕ್ಯದಲ್ಲಿ 'ಜರಾ' ಎನ್ನುವ ವಿಶೇಷಣ 'ಕತ್ತರಿಸಿ' ಎನ್ನುವ ಅರ್ಥದ 'ಖೋಡಿ'ಗೆ ಅನ್ವಯಿಸುವಂತಿದೆ. ಆದರೆ ವಾಕ್ಯದ ಅರ್ಥದಲ್ಲಿ ಅದು 'ತಾಪ್ಲಾ' ಪದಕ್ಕೆ ಅನ್ವಯಿಸಬೇಕಾಗಿದೆ. ಈ ಬದಲಾವಣೆ ಮುಖ್ಯವಾಗಿ ಕನ್ನಡ ವ್ಯಾಕರಣವನ್ನು ಪ್ರಭಾವಿಸಿದಂತಿದೆ. ಇನ್ನೊಂದು ನಿದರ್ಶನ:

| | | |
|---|---|---|
| ಪ್ರಮಾಣ ಕನ್ನಡ | ಇದು ನಿಮ್ಮ ಮನೆ | ಈ ಮನೆ ನಿಮ್ಮದು |
| ಕುಪ್‌ವಾರ್ ಕನ್ನಡ | ಇದ್ ಮನಿ ನಿಮ್ದ್ ಐತಿ | ಇದ್ ನಿಮ್ದ್ ಮನಿ ಐತಿ |
| ಕುಪ್‌ವಾರ್ ಮರಾಠಿ | ಹೇ ಘರ್ ತುಮ್ಚಾ ಹಾಯ್ | ಹೇ ತುಮ್ಚಾಘರ್ ಹಾಯ್ |
| ಕುಪ್‌ವಾರ್ ಉರ್ದು | ಯೇ ಘರ್ ತುಮ್ಹಾರಾ ಹೈ | ಯೇ ತುಮ್ಹಾರಾ ಘರ್ ಹೈ |

ಪ್ರಮಾಣ ಕನ್ನಡದಲ್ಲಿ 'ಈ' ಮತ್ತು 'ಇದು' ಎಂಬ ಸರ್ವನಾಮಗಳನ್ನು ಬಳಸುವಾಗ ವಾಕ್ಯದಲ್ಲಿ ಉಂಟಾಗುವ ಬದಲಾವಣೆಗಳು ಕುಪ್‌ವಾರ್ ಕನ್ನಡದಲ್ಲಿ ಇಲ್ಲ. 'ಈ' ಸರ್ವನಾಮವನ್ನೇ ಬಳಸಿಲ್ಲ. ಕನ್ನಡದಲ್ಲಿ ಅವಶ್ಯ ಕಾಣದ ಇಂಗ್ಲಿಶಿನಲ್ಲಿರುವ 'be' ಅರ್ಥದ ಕ್ರಿಯಾಪದವನ್ನು ಕುಪ್‌ವಾರ್ ಕನ್ನಡ [ಐತಿ] ಬಳಸುತ್ತಿದೆ. ಇವೆರಡೂ ವ್ಯಾಕರಣದ ನೆಲೆಯಲ್ಲಿ ಆಗಿರುವ ಪ್ರಭಾವಗಳೇ ಆಗಿವೆ.

ಈವರೆಗೆ ನಡೆಸಿದ ಚರ್ಚೆಯಲ್ಲಿ ದ್ವಿಭಾಷಿಕ ಸನ್ನಿವೇಶಗಳಲ್ಲಿ ಭಾಷಾವ್ಯವಹಾರಗಳು ನಡೆಯುವ ಬಗೆ. ಭಾಷಾವ್ಯಾಪಾರದಲ್ಲಿ ಸಂಭವಿಸುವ ಪ್ರಭಾವಗಳು, ಇವೆಲ್ಲವನ್ನು ಗಮನಿಸಿದ್ದೇವೆ. ಈ ವಿವರಗಳು ಇನ್ನೂ ವಿಸ್ತಾರವಾದ ಚರ್ಚೆಯನ್ನು ಅಪೇಕ್ಷಿಸುತ್ತವೆ. ಮುಖ್ಯವಾದ ಕೆಲವು ಸಂಗತಿಗಳನ್ನಷ್ಟೇ ಗಮನಿಸಲಾಗಿದೆ. ದ್ವಿಭಾಷಿಕರು ಇಂಥ ಸನ್ನಿವೇಶದಲ್ಲಿ ಭಾಷೆಯನ್ನು ಬಳಸುವ ವಿಧಾನ ಮತ್ತು ದ್ವಿಭಾಷಿಕ ಸನ್ನಿವೇಶದಲ್ಲಿ ದ್ವಿಭಾಷಿಕರಲ್ಲದವರ ಭಾಷೆಯಲ್ಲೂ ಕಂಡುಬರುವ ವ್ಯತ್ಯಾಸ ಇವನ್ನು ಬೇರೆ ಬೇರೆಯಾಗಿ ನೋಡಬೇಕು. ದ್ವಿಭಾಷಿಕತೆ ಎನ್ನುವುದು ಕೇವಲ ದ್ವಿಭಾಷಿಕರ ಸಮಸ್ಯೆ ಮಾತ್ರವಲ್ಲ; ಅವರನ್ನು ಮಾತ್ರ ಕೇಂದ್ರೀಕರಿಸಿ ಅಧ್ಯಯನ ಮಾಡಿದರೆ ಸಾಲದು, ದ್ವಿಭಾಷಿಕ ಪರಿಸರದಲ್ಲಿರುವ ಎಲ್ಲ ಭಾಷಿಕರನ್ನೂ ಈ ಪರಿಸ್ಥಿತಿ ಪ್ರಭಾವಿಸುತ್ತದೆ. ಅವರ ಭಾಷಾ ಬಳಕೆಯು ಈ ಸನ್ನಿವೇಶದಿಂದ ಬದಲಾಗುತ್ತದೆ. ಹಾಗಾಗಿ ಇದು ವ್ಯಾಪಕವಾದ ಅಧ್ಯಯನಗಳನ್ನು ಬಯಸುತ್ತದೆ.

### ದ್ವಿಭಾಷಿಕತೆ ಮತ್ತು ಭಾಷಾಯೋಜನೆ

ಭಾಷಾಯೋಜನೆ ಎಂದರೆ ಭಾಷೆಯ ಬೆಳವಣಿಗೆಗಾಗಿ ಮಾಡುವ, ದೂರಗಾಮಿ ಪರಿಣಾಮಗಳುಳ್ಳ ಕಾರ್ಯಕ್ರಮಗಳು. ಸಾಮಾನ್ಯವಾಗಿ ಯೋಜಿತ ಭಾಷಾಭಿವೃದ್ಧಿ ಸರ್ಕಾರದ ಜವಾಬ್ದಾರಿ. ಸರ್ಕಾರದ ತಾತ್ತ್ವಿಕತೆಯು ಅದರ ಭಾಷಾಯೋಜನೆಯನ್ನು ಪ್ರಭಾವಿಸುತ್ತದೆ. ದ್ವಿಭಾಷಿಕ ಸನ್ನಿವೇಶಗಳನ್ನು ಭಾಷಾಯೋಜನೆ ಹೇಗೆ ಪರಿಗಣಿಸುತ್ತದೆ ಮತ್ತು ಭಾಷಾ ಯೋಜನೆಯಿಂದಾಗಿ ದ್ವಿಭಾಷಿಕ ಸಂದರ್ಭಗಳಲ್ಲಿ ನಡೆಯುವ ಪರಿವರ್ತನೆಗಳೇನು ಎಂಬ ಪ್ರಶ್ನೆಗಳನ್ನು ನಾವೀಗ ಗಮನಿಸಬಹುದು.

ಭಾಷಾಯೋಜನೆಯಲ್ಲಿ ಸ್ಥಾನಮಾನ ಯೋಜನೆ, ಸಾಮಗ್ರಿಯೋಜನೆ ಮತ್ತು ಕಲಿಕೆಯ ಯೋಜನೆ ಎಂಬ ಮೂರು ಬಗೆಗಳನ್ನೂ ಗುರುತಿಸುತ್ತಾರೆ. ಸ್ಥಾನಮಾನ ಯೋಜನೆಯಲ್ಲಿ ಭಾಷೆಗಳ ಪರಸ್ಪರ ಸ್ಥಾನಗಳನ್ನು ವಿಧಿವತ್ತಾಗಿ ನಿರ್ಧರಿಸಲಾಗುತ್ತದೆ. ಉದಾಹರಣೆಗೆ ರಾಷ್ಟ್ರಭಾಷೆ ಹಿಂದಿ ಎಂದು ರಾಜ್ಯಾಂಗದ ಮೂಲಕ ಘೋಷಿಸಿದ

ಮೇಲೆ ಆ ಭಾಷೆಗೆ ವಿವಿಧ ವ್ಯವಹಾರಗಳಲ್ಲಿ ಗೊತ್ತಾದ ಪಾತ್ರವನ್ನು ನಿಗದಿಗೊಳಿಸಲು ಕಾರ್ಯಕ್ರಮಗಳನ್ನು ರೂಪಿಸಲಾಗುತ್ತದೆ. ಆಡಳಿತದ ದಾಖಲೆಗಳನ್ನು ಆ ಭಾಷೆಯಲ್ಲಿ ಇರಿಸುವುದು, ವ್ಯವಹಾರವನ್ನು ನಡೆಸುವುದು ಇತ್ಯಾದಿ. ದ್ವಿಭಾಷಿಕ ಸನ್ನಿವೇಶಗಳಲ್ಲಿ ಈ ಬಗೆಯ ಸ್ಥಾನ ನಿಗದೀಕರಣ ಯಾವಾಗಲೂ ಸುಲಭವಲ್ಲ. ಕೆನಡಾ ದೇಶದ ನಿದರ್ಶನ ನೋಡೋಣ. ಅಲ್ಲಿ ಇಂಗ್ಲಿಶ್ ಮತ್ತು ಫ್ರೆಂಚ್ ದ್ವಿಭಾಷಿಕತೆ ಇದೆ. ಎರಡೂ ಭಾಷೆಗಳೂ ವಸಾಹತುಗಾರರ ಭಾಷೆಗಳೇ ಆಗಿವೆ. ಇಂಗ್ಲಿಶ್‌ಅನ್ನು ಆಡಳಿತಾತ್ಮಕವಾಗಿ ಫ್ರೆಂಚ್‌ಗಿಂತ ಮೇಲೆ ಇರಿಸಿದ ಸಂದರ್ಭದಿಂದಾಗಿ ಫ್ರೆಂಚ್ ಭಾಷಿಕರಲ್ಲಿ ಅಸಮಾಧಾನ ಉಂಟಾಯ್ತು. ಇದು ಕೊನೆಗೆ ರಾಷ್ಟ್ರವನ್ನು ಭಾಷಾವಾರು ನೆಲೆಯಲ್ಲಿ ಇಬ್ಭಾಗ ಮಾಡಬೇಕೆಂದು ಒತ್ತಾಯಿಸುವ ಮಟ್ಟಕ್ಕೆ ಹೋಯಿತು.

ದೇಶಗಳೊಡನೆ, ನಿರ್ದಿಷ್ಟ ಗಡಿಯೊಳಗೆ ಗುರುತಿಸಲಾಗದ ಭಾಷೆಗಳ ವಿಷಯದಲ್ಲಿ ಈ ಸ್ಥಾನಮಾನ ಯೋಜನೆ ಹಲವು ಇಕ್ಕಟ್ಟುಗಳನ್ನು ಎದುರಿಸುತ್ತದೆ. ಭಾರತದಲ್ಲಿ ಉರ್ದು ಅಂಥ ಒಂದು ಭಾಷೆ. ಇದು ಭಾರತದಲ್ಲಿ ಯಾವುದೇ ರಾಜ್ಯದ ಅಧಿಕೃತ ಭಾಷೆಯಲ್ಲ. ಆದರೆ ಹಲವು ರಾಜ್ಯಗಳಲ್ಲಿ ದ್ವಿಭಾಷಿಕ ಸನ್ನಿವೇಶವನ್ನು ಸೃಷ್ಟಿಸಿದೆ. ಕೆಲವು ರಾಜ್ಯಗಳಲ್ಲಿ (ಉದಾ: ಉತ್ತರ ಪ್ರದೇಶ, ಆಂಧ್ರ ಪ್ರದೇಶ)ಎರಡನೇ ಅಧಿಕೃತ ಭಾಷೆಯಾಗಿದೆ. ಉಳಿದ ರಾಜ್ಯಗಳಲ್ಲಿ ಆ ಸ್ಥಾನಮಾನವಿಲ್ಲ, ಉರ್ದು ಭಾಷಿಕರು ಈ ಪರಿಸ್ಥಿತಿಗೆ ಸದಾ ಚಡಪಡಿಕೆಯನ್ನು ತೋರಿಸುವುದು ಮುಂದುವರೆದಿದೆ.

ಭಾರತದ ರಾಜ್ಯಾಂಗವು ಅಧಿಕೃತವೆಂದು (8 ನೇ ಅನುಚ್ಛೇದದಲ್ಲಿ) ಮನ್ನಣೆ ಮಾಡಿರುವ ಭಾಷೆಗಳನ್ನು ಬಿಟ್ಟರೆ ಉಳಿದ ನೂರಾರು ಭಾಷೆಗಳು ಸ್ಥಾನಮಾನ ಯೋಜನೆಯಲ್ಲಿ ಯಾವ ಅವಕಾಶವನ್ನೂ ಪಡೆಯುವುದಿಲ್ಲ. ಇಂಥ ಭಾಷೆಗಳಲ್ಲಿ ಕೆಲವಕ್ಕೆ ಲಕ್ಷಾಂತರ ಸ್ವಭಾಷಿಕರಿದ್ದಾರೆ. ಇವೆಲ್ಲವೂ ಆಯಾ ಪ್ರದೇಶಗಳಲ್ಲಿ ದ್ವಿಭಾಷಿಕ ಸನ್ನಿವೇಶಗಳ ಭಾಗವಾಗಿ ಇರುತ್ತವೆ. ಕನ್ನಡ–ತುಳು, ಕನ್ನಡ–ಕೊಡಗು, ಕನ್ನಡ–ಲಂಬಾಣಿ ಮುಂತಾದ ದ್ವಿಭಾಷಿಕ ಸನ್ನಿವೇಶಗಳು ಇದಕ್ಕೆ ನಿದರ್ಶನ. ತುಳು, ಕೊಡಗು, ಲಂಬಾಣಿ ಮುಂತಾದ ಭಾಷೆಗಳು ರಾಜ್ಯಾಂಗದತ್ತವಾದ ಸ್ಥಾನಮಾನಗಳನ್ನು ಹೊಂದಿಲ್ಲ. ಆಯಾ ಭಾಷಿಕರು ತಮ್ಮ ದ್ವಿಭಾಷಿಕ ಸನ್ನಿವೇಶದಲ್ಲಿ ಸದಾ ಯಜಮಾನ ಭಾಷೆಯೊಂದಿಗೆ ಇರುವ ಸ್ಥಿತಿಯನ್ನು ಅನುಭವಿಸುತ್ತಾರೆ. ಇದು ಕೆಲವೊಮ್ಮೆ ಪ್ರತ್ಯೇಕತಾ ಚಳುವಳಿಗಳಿಗೆ ಕಾರಣವಾಗುವುದುಂಟು. ಭಾರತದ ಸಂದರ್ಭದಲ್ಲಿ ಇದಕ್ಕೆ ನಿದರ್ಶನಗಳಿವೆ.

ಸ್ಥಾನಮಾನ ಯೋಜನೆ ರಾಜ್ಯಶಕ್ತಿಯ ನಿರ್ಣಯಗಳನ್ನು ಗಟ್ಟಿಗೊಳಿಸುತ್ತದೆ. ಅದು ದ್ವಿಭಾಷಿಕ ಸನ್ನಿವೇಶದಲ್ಲಿ ಅಂತರ್ಗತವಾಗಿರುವ ಏರುಪೇರಿನ ಸ್ಥಿತಿಯನ್ನು ತೆಗೆದುಹಾಕುವ ಪ್ರಯತ್ನಗಳನ್ನು ಮಾಡುವುದಿಲ್ಲ. ಅಂಥ ಪ್ರಯತ್ನಗಳೇನೇ ಇದ್ದರೂ ಅವು ತೋರಿಕೆಯವು, ಮತ್ತು ಸಾಂಕೇತಿಕವಾಗಿರುತ್ತವೆ. ಕನ್ನಡ–ತುಳು ಸಂಬಂಧದಲ್ಲಿ ತುಳುವಿನ ಸ್ಥಾನಕ್ಕೂ, ಕನ್ನಡ–ಇಂಗ್ಲಿಶ್‌ನ ಸಂಬಂಧದಲ್ಲಿ ಕನ್ನಡದ ಸ್ಥಾನಕ್ಕೂ ಅಷ್ಟೇನೂ ವ್ಯತ್ಯಾಸವಿಲ್ಲ. ವ್ಯತ್ಯಾಸವೇನಿದ್ದರೂ ಪ್ರಮಾಣದಲ್ಲಿದೆ; ಸ್ವರೂಪದಲ್ಲಲ್ಲ. ಆಡಳಿತದಲ್ಲಿ

ಕನ್ನಡದ ಬಳಕೆಯನ್ನು ಗಮನಿಸಿದರೆ ಈ ಸಂಗತಿ ಸ್ಪಷ್ಟ. 1963ರಿಂದ (ಕನ್ನಡ, ಕರ್ನಾಟಕದ ಅಧಿಕೃತ ಆಡಳಿತ ಭಾಷೆ ಎಂದು ಘೋಷಿತವಾದ ವರ್ಷ) ಇಲ್ಲಿಯವರೆಗೆ 300 ಕ್ಕೂ ಮಿಕ್ಕಿದ ಸರ್ಕಾರಿ ಆದೇಶಗಳು, ಸುತ್ತೋಲೆಗಳು, ಜ್ಞಾಪನಗಳು ಹೊರಬಿದ್ದಿವೆ. ಆದರೆ ಈಗಲೂ ಕನ್ನಡ ಆಡಳಿತ ಭಾಷೆಯಾಗಿ ಜಾರಿಗೆ ಬಂದಿಲ್ಲ. ಎಂದರೆ ರಾಜ್ಯಾಂಗದಲ್ಲಿ ಇಂಗ್ಲಿಶ್‌ಗೆ ದತ್ತವಾಗಿರುವ ಅವಕಾಶವನ್ನು ಕನ್ನಡಕ್ಕೆ ಒದಗಿಸಲು ಸಾಧ್ಯವಾಗಿಲ್ಲ. ಈ ದ್ವಿಭಾಷಿಕ ಸನ್ನಿವೇಶದಲ್ಲಿರುವ ತಾರತಮ್ಯದ ನಿವಾರಣೆಗೆ ಕೆಲವು ಕ್ರಮಗಳನ್ನು ಸರ್ಕಾರದ ಭಾಷಾಯೋಜನೆಯಲ್ಲಿ ಅಳವಡಿಸಲಾಗಿದೆ. 1. ಎಲ್ಲ ಅಧಿಕೃತ ವ್ಯವಹಾರದ ಪ್ರತಿಗಳನ್ನು ಕನ್ನಡದಲ್ಲಿ ಸಿದ್ಧಪಡಿಸಿ ಒದಗಿಸುವುದು. ಉದಾಹರಣೆಗೆ ರಾಜ್ಯಪತ್ರ ಎರಡೂ ಭಾಷೆಗಳಲ್ಲಿ ಪ್ರಕಟವಾಗುತ್ತದೆ. 2. ಎಲ್ಲ ಸರ್ಕಾರಿ ಅರ್ಜಿನಮೂನೆಗಳಲ್ಲಿ ಎರಡೂ ಭಾಷೆಗಳಲ್ಲಿ ತುಂಬುವ ಅವಕಾಶವನ್ನು ಕಲ್ಪಿಸುವುದು. 3. ಎರಡೂ ಭಾಷೆಗಳಲ್ಲಿ ಸರಕಾರಕ್ಕೆ ಅರ್ಜಿ ಸಲ್ಲಿಸುವ ಅವಕಾಶವನ್ನು ಕಲ್ಪಿಸುವುದು. ಇದರಿಂದ ಸಮಾನ ಸ್ಥಾನಮಾನಗಳನ್ನು ಒದಗಿಸಿದಂತಾಗುತ್ತದೆಂಬುದು ಯೋಜಕರ ಅಭಿಪ್ರಾಯ, ವಾಸ್ತವವಾಗಿ ಹಾಗಾಗುವುದಿಲ್ಲ. ಇದು ಅಧ್ಯಯನಗಳಿಂದ ಶ್ರುತಪಟ್ಟ ಸಂಗತಿ.

ಸಾಮಗ್ರಿ ಯೋಜನೆಯಲ್ಲೂ ದ್ವಿಭಾಷಿಕ ಸನ್ನಿವೇಶದಲ್ಲಿ ಹೆಚ್ಚಿನ ಸ್ಥಾನಮಾನ ಹೊಂದಿದ ಭಾಷೆಯೊಡನೆ ಉಳಿದ ಭಾಷೆಗಳಿಗೂ ಅವಕಾಶ ಕಲ್ಪಿಸುವ ಕಾರ್ಯಕ್ರಮಗಳಿರುತ್ತವೆ. ಲಿಪಿಯಿಲ್ಲದ ಭಾಷೆಗಳಿಗೆ ಲಿಪಿ ರೂಪಿಸುವುದು, ಅಧಿಕೃತ ಪ್ರಮಾಣ ಭಾಷೆಯನ್ನು ನಿರ್ಧರಿಸುವುದು. ದ್ವಿಭಾಷಿಕ ನಿಘಂಟುಗಳನ್ನು ರಚಿಸಲು ಪ್ರೋತ್ಸಾಹಿಸುವುದು, ಪಾರಿಭಾಷಿಕ ಕೋಶಗಳನ್ನು ರಚಿಸಲು ನೆರವಾಗುವುದು ಇವೆಲ್ಲ ಇಂಥ ಕಾರ್ಯಕ್ರಮಗಳಾಗಿವೆ. ದ್ವಿಭಾಷಿಕ ಸಂದರ್ಭದ ಎರಡನೆಯ ಸ್ಥಾನದ ಭಾಷೆಗೆ ತಕ್ಕ ಅವಕಾಶ ಕಲ್ಪಿಸಬೇಕೆಂಬುದೇ ಈ ಯೋಜನೆಗಳ ಇರಾದೆ. ಆದರೆ ಕೊಂಕಣಿ ದ್ವಿಭಾಷಿಕ ಸನ್ನಿವೇಶಗಳನ್ನು ಗಮನಿಸಿ. ಮೊದಲ ಸನ್ನಿವೇಶದ ಕೊಂಕಣಿಗೆ ಲಿಪಿ ರೂಪಿಸುವಾಗ ಕನ್ನಡ ಲಿಪಿಯೂ, ಎರಡನೇ ಸನ್ನಿವೇಶದ ಕೊಂಕಣಿಗೆ ಮರಾಠಿ ಲಿಪಿಯೂ ಒದಗಿವೆ. ಗೋವೆಗೆ ಕೊಂಕಣಿ ಅಧಿಕೃತ ಭಾಷೆಯಾದಾಗ ಅದು ಮರಾಠಿ ಲಿಪಿಯನ್ನು ಒಪ್ಪಿತು. ಈಗ ಕರ್ನಾಟಕದ ಕೊಂಕಣಿಗೆ ಲಿಪಿ ಯಾವುದೇ ಇರಲಿ, ಅಧಿಕೃತ ಪ್ರಮಾಣ ರೂಪ ಮಾತ್ರ ಮರಾಠಿ–ಕೊಂಕಣಿ ಸಂದರ್ಭದ ಕೊಂಕಣಿಯಾಗಿದೆ. ಭಾರತದಲ್ಲಿ ಇಂಥ ಪ್ರಸಂಗಗಳು ಹಲವಾರಿವೆ. ಹಿಂದಿ ಪ್ರದೇಶವೆಂದು ಗುರುತಿಸಲಾಗುವ ಉತ್ತರ ಭಾರತದಲ್ಲಿ ಹಿಂದಿಯ ಹಲವಾರು ಪ್ರಬಲ ಉಪಭಾಷೆಗಳು ಈಗ ಅಧಿಕೃತ ಪ್ರಮಾಣ ಹಿಂದಿಯಾಗಿರುವ ವಾರಣಾಸಿಯ ಮಾದರಿಗೆ ಅಧೀನವಾಗಿವೆ.

ದ್ವಿಭಾಷಿಕ ಸನ್ನಿವೇಶದ ಅತ್ಯಂತ ಹೆಚ್ಚು ಸಂವೇದನಾಶೀಲ ನೆಲೆ ಶಿಕ್ಷಣಕ್ಕೆ ಸಂಬಂಧಿಸಿದೆ. ದ್ವಿಭಾಷಿಕ ಪ್ರದೇಶದಲ್ಲಿ ಮಕ್ಕಳಿಗೆ ಔಪಚಾರಿಕವಾಗಿ ಯಾವ ಭಾಷೆಯನ್ನು ಕಲಿಸಬೇಕು; ಯಾವ ಭಾಷಾಮಾಧ್ಯಮದ ಮೂಲಕ ಇತರ ವಿಷಯಗಳನ್ನು ಬೋಧಿಸಬೇಕು; ಎಂಬ ಮುಖ್ಯ ಪ್ರಶ್ನೆಗಳು ಎದುರಾಗುತ್ತವೆ. ಸಾಮಾನ್ಯವಾಗಿ ರಾಜ್ಯಶಕ್ತಿಗಳು ಬಹುತ್ವದ ವಿರೋಧಿಯಾಗಿರುತ್ತವೆ. ಸರ್ವಾಧಿಕಾರ ಆಡಳಿತ ಇಲ್ಲವೇ ಸಾಮ್ಯವಾದಿ ಆಡಳಿತಗಳಿರುವ

ದೇಶಗಳಲ್ಲಿ ಈ ಬಗೆಯ ಭಾಷಾ ಅಸಹನೀಯತೆ ಹೆಚ್ಚಿರುತ್ತದೆ ಎಂದು ಪ್ರಚಾರಮಾಡಲಾಗಿದೆ. ಸ್ಟಾಲಿನ್ ಆಡಳಿತದಲ್ಲಿ ಸೋವಿಯತ್ ರಷ್ಯಾದ ಅಲ್ಪಸಂಖ್ಯಾತ ಭಾಷೆಗಳನ್ನು ತುಳಿಯಲಾಯಿತೆಂದು ವರದಿಗಳಿವೆ. ತುರ್ಕಿಯಲ್ಲಿ ಕುರ್ದಿಶ್ ಭಾಷೆಯನ್ನು ಹತ್ತಿಕ್ಕುವ ಪ್ರಯತ್ನಗಳ ಬಗ್ಗೆ ಈ ಬರೆಹದಲ್ಲೇ ಹಿಂದೆ ಉಲ್ಲೇಖಿಸಲಾಗಿದೆ. ಆದರೆ ಇದು ಮಾನವ ಹಕ್ಕುಗಳ ಪ್ರತಿಪಾದನೆಯ ಮುಂಚೂಣಿಯಲ್ಲಿರುವ ಪ್ರಜಾಪ್ರಭುತ್ವ ಆಡಳಿತದ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲೂ ಕಂಡುಬರುತ್ತದೆ. ರೂಸ್‌ವೆಲ್ಟ್ ಇರಲಿ, ರೀಗನ್ ಇರಲಿ, ಅಮೆರಿಕಾದ ಅಧ್ಯಕ್ಷರು ಮತ್ತವರ ಆಡಳಿತ ನೀತಿಯು ದ್ವಿಭಾಷಿಕ ಸಂದರ್ಭವನ್ನು ನಿರಾಕರಿಸುತ್ತದೆ. ಆ ನಾಡಿಗೆ ವಲಸೆ ಹೋದ ವಿವಿಧ ಭಾಷೆಗಳ ಜನರು ಆ ನಾಡಿನ ಪ್ರಧಾನ ಭಾಷೆಯಾದ ಇಂಗ್ಲಿಶಿನೊಡನೆ ದ್ವಿಭಾಷಿಕ ಸನ್ನಿವೇಶವನ್ನು ರೂಪಿಸಿಕೊಳ್ಳುತ್ತಾರೆ. ಯುರೋಪಿನ ಹಲವು ಭಾಷಿಕರು, ಏಶಿಯಾದ ಭಾಷಿಕರು, ಮಧ್ಯ ಮತ್ತು ದಕ್ಷಿಣ ಅಮೆರಿಕಾದ ಭಾಷಿಕರು ಇಂಥ ದ್ವಿಭಾಷಾ ಸನ್ನಿವೇಶಗಳ ಪಾಲುದಾರರಾಗಿದ್ದಾರೆ. ಆದರೆ ಅಮೆರಿಕದ ಆಡಳಿತ ದ್ವಿಭಾಷಿಕರ ಹಕ್ಕುಗಳನ್ನು ಒಪ್ಪುತ್ತಿಲ್ಲ. ಇಂಗ್ಲಿಶನ್ನು ವೃದ್ಧಿಗೊಳಿಸಿಕೊಂಡು ಆದಷ್ಟು ಬೇಗ ನೆಲಸಿಗರು (ವಲಸಿಗರು) ಏಕಭಾಷಿಕರಾಗಬೇಕೆಂಬುದು ಆಡಳಿತದ ಉದ್ದೇಶವಾಗಿದೆ. ಈ ಮಾತನ್ನು ಸ್ಪಷ್ಟಪಡಿಸಲು ನೇತಾರರು ಹಿಂಜರಿದಿಲ್ಲ. ಅಲ್ಲಿನ ಶಿಕ್ಷಣಕ್ರಮದಲ್ಲಿ ಇಂಗ್ಲಿಶ್ ಹೊರತುಪಡಿಸಿ ಇತರ ಭಾಷೆಗಳಿಗೆ ದೊರಕಿರುವ ಸ್ಥಾನ ಅತ್ಯಲ್ಪ. ಹಾಗೂ ಕೆಲವು ರಾಜ್ಯಗಳಿಗೆ ಮಾತ್ರ ಸೀಮಿತವಾಗಿದೆ. ಹಿಸ್ಪಾನಿಕ್ ಜನಾಂಗದವರು (ಸ್ಪ್ಯಾನಿಶ್ ಭಾಷಿಕರು) ಮತ್ತು ಚೀನಿಯರು ಪ್ರಧಾನವಾದ ನೆಲಸಿಗರಾಗಿರುವ ರಾಜ್ಯಗಳಲ್ಲಿ ಫ್ಲಾರಿಡಾ ಮತ್ತು ಕ್ಯಾಲಿಫೋರ್ನಿಯಾ–ಇಂಗ್ಲಿಶ್‌ನೊಡನೆ ಸ್ಪ್ಯಾನಿಶ್ ಮತ್ತು ಚೈನೀಸ್ ಭಾಷೆಗಳಿಗೆ ಸಮಾನ ಸ್ಥಾನಗಳನ್ನು ಕಲ್ಪಿಸಬೇಕೆಂಬ ಚಳುವಳಿಗಳೂ ನಡೆದಿವೆ. ಏನೇ ಇದ್ದರೂ ಆ ರಾಷ್ಟ್ರದ ಭಾಷಾನೀತಿಯೇ ಏಕಭಾಷಾ ಸನ್ನಿವೇಶದ ಪರವಾಗಿ ಇರುವುದರಿಂದ ಎಲ್ಲ ದ್ವಿಭಾಷಿಕ ಸನ್ನಿವೇಶದ ಎರಡನೆಯ ಭಾಷೆಗಳು ಸೀಮಿತ ಬಳಕೆಗೆ ಮಾತ್ರ ಅವಕಾಶ ಪಡೆಯುತ್ತವೆ. ಒಂದೆರಡು ತಲೆಮಾರುಗಳಲ್ಲಿ ಆ ಸಮುದಾಯಗಳು ಪೂರ್ಣಪ್ರಮಾಣದ ಏಕಭಾಷಿಕ ಸಮುದಾಯಗಳಾಗುತ್ತವೆ, ಭಾಷಾಸಂಗೋಪನೆ, ಭಾಷಾಪಲ್ಲಟ ಮತ್ತು ಭಾಷಾನಾಶಗಳ ಅಧ್ಯಯನಗಳಲ್ಲಿ ಆಸಕ್ತರಾಗಿರುವ ಭಾಷಾಶಾಸ್ತ್ರಜ್ಞರಿಗೆ ಅಲ್ಲಿನ ಭಾಷಾಸನ್ನಿವೇಶದಲ್ಲಿ ಅಧ್ಯಯನಕ್ಕೆ ಮಾದರಿಗಳು ಹಲವಾರಿವೆ.

ಪ್ರಪಂಚದ ಹಲವು ಕಡೆಗಳಲ್ಲಿ ಅಲ್ಪಸಂಖ್ಯಾತ ಭಾಷಾಸಮುದಾಯಗಳು ತಾವು ಭಾಗಿಯಾಗಿರುವ ದ್ವಿಭಾಷಿಕ ಸನ್ನಿವೇಶಗಳಲ್ಲಿ ಎರಡನೆಯ ದರ್ಜೆಯ ನಾಗರಿಕರ ಅವಕಾಶಗಳನ್ನು ಮಾತ್ರ ಪಡೆದಿದ್ದಾರೆ. ಶಾಲಾಶಿಕ್ಷಣದಲ್ಲಿ ಅಲ್ಪಸಂಖ್ಯಾತರ ಭಾಷೆಗಳಿಗೆ ಒದಗಿಸುವ ಅವಕಾಶಗಳು ಸ್ಥಿರ ದ್ವಿಭಾಷಾಸನ್ನಿವೇಶವನ್ನು; ಬೆಳೆಸುವಂತಿರುವುದಿಲ್ಲ. ಪ್ರಧಾನವಲ್ಲದ ಭಾಷೆಯ ಸಾಮರ್ಥ್ಯಗಳನ್ನು ಅಲ್ಪ ಪ್ರಮಾಣದಲ್ಲಿ ಬೆಳೆಸಿಕೊಳ್ಳಲು ಮಾತ್ರ ಮಕ್ಕಳಿಗೆ ಅವಕಾಶ ಕಲ್ಪಿಸಿ, ಪ್ರಧಾನವಾದ–ರಾಜಕೀಯ ಒತ್ತಾಸೆ ಪಡೆದ–ಭಾಷೆಯ ಸಾಮರ್ಥ್ಯಗಳ ಬೆಳವಣಿಗೆಗೆ ಹೆಚ್ಚಿನ ಒತ್ತಾಸೆ ನೀಡಲಾಗುತ್ತದೆ.

ಕನ್ನಡ–ಇಂಗ್ಲಿಶ್‌ಗಳ ನಡುವೆ ಈಗ ಉಂಟಾಗಿರುವ ಶೈಕ್ಷಣಿಕ ಸ್ಥಾನಮಾನದ ತಾಕಲಾಟವನ್ನು ಮಾದರಿಯಾಗಿ ಗಮನಿಸಬಹುದು. ಸರ್ಕಾರದ ನೀತಿ ಕನ್ನಡ

ಪರವಾಗಿದ್ದರೂ, ಕ್ರಮಗಳು ಕನ್ನಡಕ್ಕೆ ಪೂರಕವಾಗಿಲ್ಲ; ಇಂಗ್ಲಿಶ್ ಪರವಾಗಿವೆ. ಈ ಏರುಪೇರಿಗೆ ಸಾಮಾಜಿಕವಾದ ಕಾರಣಗಳನ್ನೂ, ಸಮುದಾಯದ ಕನ್ನಡೇತರ ಜನರ ಅಪೇಕ್ಷೆಗಳನ್ನೂ ಮುಂದೆ ಮಾಡಲಾಗುತ್ತಿದೆ. ವಾಸ್ತವವಾಗಿ ಈ ದ್ವಿಭಾಷಾ ಸನ್ನಿವೇಶದಲ್ಲಿ ಮೈದಳೆದ ಇಕ್ಕಟ್ಟುಗಳು ಸಮುದಾಯ ವಿರೋಧಿಯಾಗಿವೆ. ಏಕೆಂದರೆ ಕನ್ನಡದ ಸಾಮರ್ಥ್ಯಗಳು ಇದ್ದರೂ ಅವುಗಳ ಬಳಕೆಗೆ ಅವಕಾಶಗಳು ಕಡಿಮೆ. ಇಂಗ್ಲಿಶ್‌ನ ಬಳಕೆಗೆ ಅವಕಾಶಗಳು ಇದ್ದರೂ, ಆ ಭಾಷೆಯ ಸಾಮರ್ಥ್ಯವನ್ನು ರೂಪಿಸುವ ಸಾಧ್ಯತೆಗಳು ಶೈಕ್ಷಣಿಕವಾಗಿ ಸೀಮಿತವಾಗಿವೆ. ಎಂದರೆ ಶಿಕ್ಷಣದ ವ್ಯಾಪ್ತಿಯಲ್ಲಿ ಬರುವ ಲಕ್ಷಾಂತರ ಮಕ್ಕಳಿಗೆ ಇಂಗ್ಲಿಶ್ ಭಾಷಾಸಾಮರ್ಥ್ಯಗಳನ್ನು ಒದಗಿಸುವ ಮಾನವ ಸಂಪನ್ಮೂಲ, ತಜ್ಞತೆ ಮತ್ತು ಪರಿಸರಗಳೇ ಇಲ್ಲ. ಹೀಗಾಗಿ ಈ ಶೈಕ್ಷಣಿಕ ಸನ್ನಿವೇಶದಿಂದ ಮಕ್ಕಳ ಭಾಷಾಸಾಮರ್ಥ್ಯಗಳು ಪೂರ್ಣವಾಗಿ ವಿಕಸನಗೊಳ್ಳುವುದು ಸಾಧ್ಯವೇ ಇಲ್ಲ. ಅರೆ ಭಾಷಿಕತೆ ಎಂದು ಹಿಂದೆ ಸೂಚಿಸಲಾದ ಪರಿಸ್ಥಿತಿಗೆ ಈ ಬೆಳವಣಿಗೆಯು ಕಾರಣವಾದರೆ ಆಶ್ಚರ್ಯವಿಲ್ಲ.

ಸಾಮಾಜಿಕ ಸನ್ನಿವೇಶದ ಇಕ್ಕಟ್ಟುಗಳು ಬೇರೊಂದು ರೀತಿಯಲ್ಲಿ ಈ ದ್ವಿಭಾಷಾ ಸನ್ನಿವೇಶದ ನಿರ್ವಹಣೆಯನ್ನು ನಿಯಂತ್ರಿಸುತ್ತಿವೆ. ಬೇರೊಂದು ಪ್ರಸಂಗದ ನಿದರ್ಶನ ನೋಡೋಣ: ವರ್ಣಭೇದದ ಆಡಳಿತವಿದ್ದಾಗ ದಕ್ಷಿಣ ಆಫ್ರಿಕಾದಲ್ಲಿ ಇಂಗ್ಲಿಶ್ ಬದಲಿಗೆ ಶೈಕ್ಷಣಿಕವಾಗಿ ಆಫ್ರಿಕಾನ್ಸ್ ಭಾಷೆಯನ್ನು ಸ್ಥಾಪಿಸಲು ಯತ್ನಗಳು ನಡೆದವು. ಆದರೆ ಆಫ್ರಿಕಾನ್ಸ್ ಭಾಷೆಯನ್ನು ತಮ್ಮ ಭಾಷೆಯೆಂದು ಒಪ್ಪದ ಅಲ್ಲಿನ ಬುಡಕಟ್ಟು ಜನರು ಇಂಗ್ಲಿಶ್ ಭಾಷೆಯ ಪರವಾಗಿ ನಿಂತರು. ಇಂಗ್ಲಿಶ್ ಬಿಡುಗಡೆಗೆ ಸಾಧನವೆಂದು ವಾದಿಸಿದರು. ಭಾರತದಲ್ಲೂ ಇಂಥದೇ ಪರಿಸ್ಥಿತಿ ಕಾಣುತ್ತದೆ. ಅಲ್ಪಸಂಖ್ಯಾತರು, ದಲಿತರು ಕನ್ನಡದಂಥ ರಾಜ್ಯಭಾಷೆಗಳನ್ನು ಯಜಮಾನಿಕೆಯ ಭಾಷೆಗಳೆಂದು ತಿಳಿಯುತ್ತಾರೆ. ಹಾಗಾಗಿ ಅವರು ತಮ್ಮ ಸಾಮಾಜಿಕ ಉನ್ನತಿಗಾಗಿ ಇಂಗ್ಲಿಶ್ ಅನಿವಾರ್ಯವೆಂದು ಭಾವಿಸುತ್ತಾರೆ. ಅಲ್ಲದೆ ಇಂಗ್ಲಿಶ್ ಮೂಲಕ ಉನ್ನತ ಜಾತಿಯವರು ಪಡೆದುಕೊಂಡಿರುವ ಸೌಲಭ್ಯಗಳಿಂದ ತಾವು ವಂಚಿತರಾಗದಿರಲು ಇಂಗ್ಲಿಶ್ ಪರವಾಗಿ ನಿಲ್ಲುವುದೇ ಸರಿಯೆಂದು ಭಾವಿಸುತ್ತಾರೆ.

ಈ ಎಲ್ಲ ವಿಷಯಗಳು ಒಟ್ಟಾಗಿ ಸೇರಿ ದ್ವಿಭಾಷಾ ಸನ್ನಿವೇಶಗಳಲ್ಲಿನ ಶೈಕ್ಷಣಿಕ ಭಾಷಾನೀತಿಯನ್ನು ಜಟಿಲಗೊಳಿಸಿವೆ; ವಿಪರ್ಯಾಸದ ಸಂದರ್ಭಗಳನ್ನು ರೂಪಿಸಿವೆ. ಶಿಕ್ಷಣದ ವ್ಯಾಪ್ತಿಗೆ ಸಮುದಾಯದ ಬಹುಭಾಗವನ್ನು ಒಳಪಡಿಸಬೇಕೆಂಬ ತತ್ತ್ವದ ಕಾರ್ಯನೀತಿಗಳು ಇದರಿಂದ ಕುಂಠಿತ ಪ್ರಗತಿ ಹೊಂದಿವೆ.

ರಾಜ್ಯಾಂಗದಲ್ಲಿ ಸ್ಥಾನ ಪಡೆದ ಭಾಷೆಗಳ ಸ್ಥಿತಿ ಹೀಗಿದ್ದರೆ, ಅಲ್ಲಿ ಸ್ಥಾನ ಸಿಗದ ಭಾಷೆಗಳನ್ನಾಡುವ ಜನಸಮುದಾಯದ ಸ್ಥಿತಿ ಇನ್ನೂ ವಿಚಿತ್ರವಾಗಿದೆ. ಆ ಭಾಷೆಗಳು ಶಿಕ್ಷಣದ ವ್ಯಾಪ್ತಿಗೆ ಬರುವುದಿಲ್ಲ. ಅವುಗಳಿಗೆ ಸಿಗುವ ಅತಿ ಹೆಚ್ಚಿನ ಅವಕಾಶವೆಂದರೆ ಸಾಮೂಹಿಕ ಸಂವಹನ ಮಾಧ್ಯಮಗಳಲ್ಲಿ ಅಲ್ಪ ಪ್ರಮಾಣದಲ್ಲಿ ಬಳಕೆಯಾಗುವುದು. ಆಕಾಶವಾಣಿ, ದೂರದರ್ಶನಗಳಲ್ಲಿ ಮೂಡುವ ತುಳು, ಕೊಡಗು ಭಾಷೆಯ

ಕಾರ್ಯಕ್ರಮಗಳನ್ನು ಉದಾಹರಣೆಗಾಗಿ ನೋಡಬಹುದು. ಎಷ್ಟೋ ಭಾಷೆಗಳಿಗೆ ಈ ಅವಕಾಶವೂ ಇಲ್ಲ. ಆದರೆ ತುಳು, ಕೊಡಗು ಇಂಥ ಭಾಷೆಗಳಿಗೂ ಶಿಕ್ಷಣದಲ್ಲಿ ಅವಕಾಶವಿಲ್ಲ. ಇವು ಸ್ಥಿರ ದ್ವಿಭಾಷಿಕ ಸನ್ನಿವೇಶದಲ್ಲಿ ಆಪ್ತವಲಯದ ವ್ಯವಹಾರದ ಭಾಷೆಗಳಾಗಿ, ಆಚರಣೆಗಳ ಭಾಷೆಗಳಾಗಿ ಉಳಿಯುವ ಸಂಭವಗಳು ಹೆಚ್ಚು. ಇವೆಲ್ಲವೂ ಹೆಚ್ಚಿನ ಅಧ್ಯಯನಗಳನ್ನು ಅಪೇಕ್ಷಿಸುವ ಸಂದರ್ಭಗಳಾಗಿವೆ.

ಅಲ್ಪ ಸಂಖ್ಯಾತರ ಭಾಷೆಗಳಿಗೆ ಆಗುತ್ತಿರುವ ಈ ಬಗೆಯ ಅವಕಾಶ ವಂಚನೆಯನ್ನು ಗಮನಿಸಿ, ವಿಶ್ವಸಂಸ್ಥೆಯ ಮಾನವ ಹಕ್ಕುಗಳ ಪಟ್ಟಿಯಲ್ಲಿ ಭಾಷೆಯನ್ನು ಸಮುದಾಯದ ಹಕ್ಕು ಎಂದು ಘೋಷಿಸಬೇಕೆಂಬ ಚಳುವಳಿಯೂ ಕೂಡ ಈಗ ಯುರೋಪಿನಲ್ಲಿ ಮೈದಳೆದು ವ್ಯಾಪಕವಾಗುತ್ತಿದೆ. ಬರಲಿರುವ ದಶಕಗಳಲ್ಲಿ ಈ ದ್ವಿಭಾಷಿಕತೆಯ ಸಂದರ್ಭಗಳು ಪ್ರಮುಖ ರಾಜಕೀಯ ಪ್ರಶ್ನೆಗಳಾಗಿ ಪರಿವರ್ತಿತವಾದರೆ ಆಶ್ಚರ್ಯವಿಲ್ಲ.

ಈವರೆಗೆ ದ್ವಿಭಾಷಿಕ ಸನ್ನಿವೇಶದ ಸ್ಥೂಲ ಪರಿಚಯವನ್ನು ಮಾಡಲಾಯಿತು. ಚರ್ಚೆಗೆ ವಿವರಣೆಗೆ ಅವಕಾಶವಿರುವ ಇನ್ನೂ ಹಲವು ಸಂಗತಿಗಳಿವೆ. ನಿದರ್ಶನ ಬಾಹುಳ್ಯವೂ ಅಪೇಕ್ಷಣೀಯ. ಇದರಿಂದ ವಿಷಯ ಸ್ಪಷ್ಟನೆಗೆ ಮತ್ತು ನೆಲೆಗಳನ್ನು ಅರಿಯುವುದಕ್ಕೆ ಅನುಕೂಲವಾಗುವುದೆಂಬುದು ನಿಜ. ಆದರೆ ಮಿತ ಅವಕಾಶದಲ್ಲಿ ಕೆಲವು ನಿದರ್ಶನಗಳನ್ನು ಮಾತ್ರ ಇಲ್ಲಿ ನೀಡಲಾಗಿದೆ.

ಬಹುಭಾಷಿಕತೆ ಎಂಬುದು ಪ್ರತ್ಯೇಕ ಚರ್ಚೆಗೆ ಗುರಿಪಡಿಸಬೇಕಾದ ಸಂಗತಿ ಎನಿಸಿದರೂ ಇಲ್ಲಿ ಹೇಳಲಾದ ಎಷ್ಟೋ ಸಂಗತಿಗಳು ಬಹುಭಾಷಿಕತೆಗೂ ಅನ್ವಯವಾಗುತ್ತವೆ, ಭಾರತದಂಥ ದೇಶದಲ್ಲಿ ದ್ವಿಭಾಷಿಕತೆ ಮತ್ತು ಬಹುಭಾಷಿಕತೆಗಳು ಸಮುದಾಯಗಳ ನಿತ್ಯವ್ಯವಹಾರದ ಭಾಗವಾಗಿವೆ. ಇಲ್ಲಿನ ವಿವರಗಳ ಮೂಲಕವೇ ಭಾಷಾಶಾಸ್ತ್ರಜ್ಞರು ಕಂಡುಕೊಳ್ಳಬೇಕಾದ ತಾತ್ತ್ವಿಕ ನೆಲೆಗಳಿವೆ. ಈ ನಿಟ್ಟಿನಲ್ಲಿ ಪ್ರಯತ್ನಗಳು ನಡೆಯಬೇಕು.

# ಭಾಷೆ ಮತ್ತು ಸಾಹಿತ್ಯ

ಭಾಷೆ ಮತ್ತು ಸಾಹಿತ್ಯಗಳ ಸಂಬಂಧವನ್ನು ಬಹು ಹಿಂದಿನಿಂದಲೂ ಚರ್ಚೆಗೆ ಗುರಿಮಾಡಲಾಗಿದೆ. ಸಂಸ್ಕೃತ ಅಲಂಕಾರಿಕರ ಮುಖ್ಯ ಪರಿಕಲ್ಪನೆಗಳಾದ ಅಲಂಕಾರ, ರೀತಿ, ಧ್ವನಿ ಇವು ಒಂದಿಲ್ಲೊಂದು ಬಗೆಯಲ್ಲಿ ಸಾಹಿತ್ಯದ ಭಾಷೆಯನ್ನು ವಿವೇಚಿಸಿವೆ. ಸಾಹಿತ್ಯಶಾಸ್ತ್ರದ ವಿವಿಧ ಹಂತದ ಬೆಳವಣಿಗೆಗಳನ್ನು ಗಮನಿಸಿದರೆ ಜಾಗತಿಕ ನೆಲೆಯಲ್ಲೂ ಸಾಹಿತ್ಯ ಮತ್ತು ಭಾಷೆಗಳ ಸಂಬಂಧದ ವಿನ್ಯಾಸಗಳನ್ನು ಗುರುತಿಸುವುದೇ ಎಲ್ಲ ಕಾಲದ ಸಾಹಿತ್ಯ ಚಿಂತಕರ ಮುಖ್ಯ ಆಸಕ್ತಿಗಳಲ್ಲಿ ಒಂದಾಗಿರುವುದನ್ನು ಕಾಣಬಹುದು. ಇಪ್ಪತ್ತನೆಯ ಶತಮಾನದ ನಡುಭಾಗದಲ್ಲಿ ಸಾಹಿತ್ಯದ ಭಾಷೆಯನ್ನು ಹೊಸ ಪರಿಭಾಷೆ ಮತ್ತು ಹೊಸ ಪರಿಕಲ್ಪನೆಗಳಲ್ಲಿ ಇರಿಸಿ ವಿವೇಚಿಸುವ ವಿಧಾನವೊಂದು ಬೆಳೆಯುತ್ತ ಬಂತು. ಸಾಮಾನ್ಯವಾಗಿ ಶೈಲಿಶಾಸ್ತ್ರ ಎಂದು ಈಗ ನಾವು ವ್ಯವಹರಿಸುವ ಶಾಸ್ತ್ರದ ವ್ಯಾಪ್ತಿಯಲ್ಲಿ ಈ ಚಿಂತನಗಳು ಬೆಳೆಯುತ್ತ ಬಂದಿವೆ. ಈ ಶಾಸ್ತ್ರಶಾಖೆಯ ನಿಜ ವಾರಸುದಾರರು ಸಾಹಿತ್ಯಮೀಮಾಂಸಕರೋ ಅಥವಾ ಭಾಷಾಶಾಸ್ತ್ರಜ್ಞರೋ ಎಂಬುದು ಬಗೆಹರಿಯಲಾಗದ ಪ್ರಶ್ನೆಯಾಗಿದೆ. ಅಥವಾ ಈ ಎರಡೂ ನೆಲೆಗಳಿಂದ ಸಮಸ್ಯೆಯನ್ನು ನೋಡುವ ವಿಧಾನದಲ್ಲೂ ವ್ಯತ್ಯಾಸಗಳಿವೆ ಎಂದೂ ತಿಳಿಯಲು ಸಾಧ್ಯ.

ಸಾಹಿತ್ಯದ ಮಾಧ್ಯಮ ಭಾಷೆ ಎಂದು ಹೇಳುವುದು ಒಂದು ಪರಿಪಾಠ. ಮಾಧ್ಯಮ ಎಂದರೇನು? ನೀರು ಹರಿಯಲು ಕೊಳವೆ ಮಾಧ್ಯಮ ಎಂದಾಗ ನೀರಿಗೂ ಕೊಳವೆಗೂ ಇರುವ ಸಂಬಂಧದ ಸ್ವರೂಪವೇ ಸಾಹಿತ್ಯಕ್ಕೂ ಭಾಷೆಗೂ ಇರುವುದೆಂದು ತಿಳಿಯಬೇಕೆ? ಹಾಗಲ್ಲ ಎಂಬುದಂತೂ ಖಂಡಿತ. ಕೊಳವೆಯನ್ನು ಹೊರತು ಪಡಿಸಿಯೂ ನೀರಿಗೆ ಪ್ರತ್ಯೇಕ ಅಸ್ತಿತ್ವವಿದೆ. ಆದರೆ ಹಾಗೆ ಭಾಷೆಯನ್ನು ಹೊರತುಪಡಿಸಿ ಸಾಹಿತ್ಯ ಕೃತಿಗೆ ಬೇರೊಂದು ಅಸ್ತಿತ್ವವಿದೆಯೆಂದು ಸಾಧಿಸಲು ಬರುವುದಿಲ್ಲ. 'ಮಾಧ್ಯಮ' ಎಂದು ನಾವು ಪರಿಗಣಿಸುತ್ತಿರುವ ಭಾಷೆಯ ಮೂಲಭೂತ ಗುಣ ಮತ್ತು ಉದ್ದೇಶಗಳು ಅದು ಸಾಹಿತ್ಯ ಕೃತಿಯಲ್ಲಿ ಬಳಕೆಯಾದಾಗಲೂ ಉಳಿದುಕೊಳ್ಳುತ್ತವೆ. ಆದ್ದರಿಂದ ಭಾಷೆಯೇ ಸಾಹಿತ್ಯವಾಗಿ ಪರಿವರ್ತಿತವಾಗುತ್ತದೆಂದು ಹೇಳುವುದು ಹೆಚ್ಚು ಸಹಜವಾದುದು.

ಭಾಷೆಯ ಹತ್ತಾರು ಬಗೆಯ ಬಳಕೆಗಳಲ್ಲಿ ಅದು ಸಾಹಿತ್ಯವಾಗಿ ರೂಪುತಳೆಯುವ ಕ್ರಮವೂ ಒಂದೆಂದು ತಿಳಿಯಬಹುದೆ? ಹೌದೆಂದು ಕೆಲವರು ವಾದಿಸುತ್ತಾರೆ. ಅವರ

ಪ್ರಕಾರ ಭಾಷೆಯ ವಿವಿಧ ಬಳಕೆಗಳನ್ನು ವಿವರಿಸುವ ವಿಧಾನದಿಂದಲೇ ಸಾಹಿತ್ಯ ಭಾಷೆಯನ್ನು ವಿವರಿಸುವುದು ಸಾಧ್ಯ ಮತ್ತು ಸೂಕ್ತ, ಆದರೆ ಈ ವಾದವನ್ನು ಒಪ್ಪದವರು. ಭಾಷೆಯ ವಿವಿಧ ಬಳಕೆಗಳಿಗಿಂತ ಗುಣಾತ್ಮಕವಾಗಿ ಭಿನ್ನವೆಂದು ತಿಳಿದಾಗ ಮಾತ್ರ ಹೀಗೆ ಸಾಹಿತ್ಯಭಾಷೆಯನ್ನು ವಿವರಿಸಲು ಬೇರೆಯೇ ಪರಿಕಲ್ಪನೆಗಳು ಅವಶ್ಯವೆನ್ನುತ್ತಾರೆ. ಹೀಗಾಗಿ ಸಾಹಿತ್ಯಭಾಷೆಯ ಹೊಸ ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುವ ಅವಶ್ಯಕತೆ ಉಂಟಾಗುತ್ತದೆ.

**ಗುಣಾತ್ಮಕ ಭಿನ್ನತೆಯ ನೆಲೆಗಳು**

**1. ಅಭಿವ್ಯಕ್ತಿಯ ಅನನ್ಯತೆ:**

ಇತರ ಅಭಿವ್ಯಕ್ತಿಗಳನ್ನು ಗುಮನಿಸಿದಾಗ ಮೂಲಅರ್ಥಕ್ಕೆ ಧಕ್ಕೆಯಾಗದಂತೆ ಅವುಗಳ ಭಾಷಿಕರೂಪವನ್ನು ಬೇರೆಯಾಗಿ ಹೇಳಲು ಸಾಧ್ಯವಿರುತ್ತದೆ. ಅಂದರೆ ಶಾಬ್ದಿಕ ಆಕಾರ ಅವುಗಳಲ್ಲಿ ಅನಿವಾರ್ಯವಲ್ಲ. ಉಕ್ತಿಪರ್ಯಾಯಗಳಲ್ಲಿ ಅಭಿವ್ಯಕ್ತಿ ಸಾಧ್ಯ. ಆದರೆ ಸಾಹಿತ್ಯ ಕೃತಿಗಳಲ್ಲಿ ಭಾಷೆ ಮತ್ತು ಅರ್ಥಗಳ ಸಹಿತತ್ವ ಅವಿನಾರೂಪದಲ್ಲಿರುತ್ತದೆ. ಅವೆರಡನ್ನು ಬೇರೆ ಮಾಡುವುದೆಂದರೆ ದೇಹ ಮತ್ತು ಪ್ರಾಣಗಳನ್ನು ಬೇರೆ ಮಾಡಿದಂತೆ. ಅಥವಾ ಹಾಗೆ ಅನ್ಯ ಪರ್ಯಾಯಗಳಲ್ಲಿ ಹೇಳಿದರೆ ಅದು ಬೇರೊಂದು ಕೃತಿಯಾಗಬಹುದೇ ಹೊರತು ಮೂಲಕೃತಿಯ ಜಾಗವನ್ನು ಅದು ತುಂಬಲಾರದು; ಮೂಲಕೃತಿಗೆ ಬದಲಾಗಿ ಕೆಲಸ ಮಾಡಲಾರದು.

**2. ಪುನಸ್ಸಂಯೋಜನೆ**

ಸಾಹಿತ್ಯ ಕೃತಿಗಳಲ್ಲಿ ಭಾಷೆಯನ್ನು ಒಡೆದು ಮತ್ತೆ ಅದಕ್ಕೊಂದು ರಚನೆಯನ್ನು ಕೊಡಲಾಗುತ್ತದೆ. ಅಥವಾ ಹಾಗೆ ಮಾಡಲಾಗಿದೆ ಎಂಬಂತೆ ಭಾಸವಾಗುತ್ತದೆ. ಬೇರೆ ಬೇರೆ ಸಾಹಿತ್ಯ ಪ್ರಕಾರಗಳಲ್ಲಿ ಇದು ಸಂಭವಿಸುವ ರೀತಿ ಬೇರೆ ಬೇರೆ ರೀತಿಯಲ್ಲಿ ಇರಬಹುದಾದರೂ ಯಥಾನುಕ್ರಮದ ಭಾಷೆಯ ಬಳಕೆ ಸಾಹಿತ್ಯ ಕೃತಿಗಳಲ್ಲಿ ಗೌಣ. ಈ ಪುನಸ್ಸಂಯೋಜನೆ ನವಪದ ನಿರ್ಮಾಣದಲ್ಲಿ, ರೂಪಕಗಳನ್ನು ಕಟ್ಟುವಲ್ಲಿ ಕಾಣಿಸಿಕೊಳ್ಳಬಹುದು. ಅಥವಾ ಸಂಕಥನಗಳನ್ನು ಕಟ್ಟುವ ಬಗೆಯಲ್ಲಿ ಮೈತಳೆಯಬಹುದು. ಇದರ ಅವತಾರಗಳಿಗೆ ಹಲವು ಹಾದಿಗಳಿವೆ.

**3. ಸ್ವಾಭಿಮುಖತೆ ಅಥವಾ ಅಪಾರದರ್ಶಕತೆ**

ಸಾಹಿತ್ಯ ಕೃತಿಗಳಲ್ಲಿ ಭಾಷೆಯು ತನ್ನ ಮೂಲಕ ನೋಡಲು ಅವಕಾಶ ನೀಡುತ್ತಿರುವಂತೆ ತನ್ನ ಕಡೆಗೆ ನೋಡಲೂ ಒತ್ತಾಯಿಸುತ್ತದೆ. ಹಾಗಾಗಿ ಇಲ್ಲಿ ಭಾಷೆ ಸ್ವಾಭಿಮುಖಿ. ಅಪಾರದರ್ಶಕವಾಗುವುದು ಎಂದರೆ ಭಾಷೆಯ ಕಡೆಗೆ ಸಂಪೂರ್ಣ ಗಮನ ಹರಿಯುವಂತಾಗುವುದು. ಅರ್ಥಕ್ಕಿಂತ, ಕೃತಿಯಾಚೆಗಿನ ಲೋಕಕ್ಕಿಂತ ಕೃತಿಯ ಭಾಷಿಕ ಲೋಕವೇ ಪರಿಭಾವನೆಗೆ ವಸ್ತುವಾಗುವುದು. ಇತರ ಭಾಷಿಕ ಅಭಿವ್ಯಕ್ತಿಗಳಲ್ಲಿ ಅರ್ಥಕ್ಕೆ ಅನುವು ಮಾಡಿಕೊಟ್ಟು ಭಾಷಿಕ ರೂಪ ಹಿಂದೆ ಸರಿಯುತ್ತದೆ. ಹಾಗೆ ಭಾಷೆ

ಕೇವಲ ಮಾಧ್ಯಮವಾಗುವುದೇ ಆ ಬಗೆಯ ಭಾಷಾಬಳಕೆಗಳಲ್ಲಿ ಉತ್ತಮ ಮಾದರಿ. ಆದರೆ ಸಾಹಿತ್ಯ ಕೃತಿಗಳಲ್ಲಿ ಭಾಷೆಯ ಹಾದಿ ಮೇಲೆ ಹೇಳಿದಂತೆ ಭಿನ್ನ.

**4. ಆಯ್ಕೆ ಮತ್ತು ಸಂಯೋಜನೆ**

ಪದಗಳನ್ನು ಆಯ್ಕೆ ಮಾಡುವಲ್ಲಿ ಸಾಹಿತ್ಯ ಕೃತಿಗಳ ಭಾಷೆ ವಿಶೇಷ ಎಚ್ಚರವನ್ನು ವಹಿಸುವುದಷ್ಟೆ. ಈ ಆಯ್ಕೆಯ ನೆಲೆಯೊಡನೆ ಸಂಯೋಜನೆಯ ನೆಲೆಯೊಂದು ಕೂಡಾ ಕಾರ್ಯಪ್ರವೃತ್ತವಾಗಿರುತ್ತದೆ. ಆಯ್ಕೆಯ ನೆಲೆಯನ್ನು ಮುಖ್ಯವಾಗಿ ವಾಕ್ಯಗಳ ನಡುವೆ ಗುರುತಿಸಬಹುದು. ಎರಡು ವಾಕ್ಯಗಳ ನಡುವಣ ಸಂಬಂಧವನ್ನು ವಿಶೇಷ ರೀತಿಯಲ್ಲಿ ಪರಿಭಾವಿಸಲು ಅನುಕೂಲವಾಗುವಂತೆ ನಿರ್ದಿಷ್ಟ ಪದಗಳನ್ನು ಆಯ್ಕೆ ಮಾಡಲಾಗುತ್ತದೆ. ಸಂಯೋಜನೆಯ ನೆಲೆ ಸಾಮಾನ್ಯವಾಗಿ ವಾಕ್ಯದೊಳಗೆ ಸಂಭವಿಸುವಂಥದು. ವ್ಯಾಕರಣದ ನಿಯಮಗಳನ್ನು ಇಲ್ಲಿ ಪಾಲಿಸಲಾಗುತ್ತದೆ. ಸಾಹಿತ್ಯ ಕೃತಿಗಳಲ್ಲಿ (1) ಆಯ್ಕೆಯ ನೆಲೆಯಲ್ಲಿ ಸಂಯೋಜನೆಯ ಸಾಧ್ಯತೆಗಳನ್ನು ಮತ್ತು (2) ಸಂಯೋಜನೆಯ ನೆಲೆಯಲ್ಲಿ ಆಯ್ಕೆಯ ಸಾಧ್ಯತೆಗಳನ್ನು ರೂಪಿಸಲು ಯತ್ನಿಸಲಾಗುತ್ತದೆ. ಇದರಿಂದ ಇಡೀ ರಚನೆಯೇ ಒಂದು ಮಹಾವಾಕ್ಯವಾಗಿ ರೂಪಿತವಾಗುತ್ತದೆ. ಏಕೆಂದರೆ ವಾಕ್ಯಗಳ ನಡುವೆಯೂ ವಾಕ್ಯವೊಂದರ ನಡುವಣ ನಿಯಮಗಳು ಪ್ರವೃತ್ತವಾಗಿರುತ್ತವೆ.

**5. ಬಂಧ ಮತ್ತು ಮುಕ್ತತೆ**

ಸಾಹಿತ್ಯ ಕೃತಿಕಾರರು ಭಾಷೆಯ ವಿಷಯದಲ್ಲಿ ಸ್ವಾತಂತ್ರ್ಯವನ್ನು ವಹಿಸುತ್ತಾರೆಂಬುದು ಸಾಮಾನ್ಯ ತಿಳುವಳಿಕೆ. ಕೃತಿಕಾರರು ಭಾಷೆಯ ನಿಯಮಗಳನ್ನು ಮುರಿಯುತ್ತಾರೆಂದೂ ಅವರಿಗಾಗಿಯೇ ಅವಶ್ಯವಾದ ನಿಯಮಗಳನ್ನು ಮಾಡಿಕೊಳ್ಳುವರೆಂದೂ ಹೇಳಲಾಗುತ್ತದೆ. ಮೇಲುನೋಟಕ್ಕೆ ಈ ಮಾತು ನಿಜವೆಂದು ಅನ್ನಿಸಿದರೂ ವಾಸ್ತವದಲ್ಲಿ ಇಡೀ ಕೃತಿಯಲ್ಲಿ ಕೃತಿಕಾರರು ಸಾಮಾನ್ಯ ಭಾಷಾಬಳಕೆಯ ನಿಯಮಗಳನ್ನು ಮುರಿಯುವ ಅವಕಾಶಗಳನ್ನು ಬಳಸುತ್ತಿರುವಂತೆಯೇ, ತಮಗೆ ಲಭ್ಯವಿರುವ ಹಲವಾರು ಬಳಕೆಯ ಅವಕಾಶಗಳನ್ನು ಬಿಟ್ಟುಕೊಡುತ್ತಿರುತ್ತಾರೆ. ಅಂದರೆ ಏಕಕಾಲಕ್ಕೆ ನಿಯಮಗಳನ್ನು ಮೀರುವುದು ಮತ್ತು ಕಟ್ಟುಪಾಡುಗಳನ್ನು ಹಾಕಿಕೊಳ್ಳುವುದು ಈ ಎರಡೂ ಪ್ರವೃತ್ತಿಗಳನ್ನು ಸಾಹಿತ್ಯ ಕೃತಿಗಳಲ್ಲಿ ಗಮನಿಸಲು ಸಾಧ್ಯವಿದೆ. ಸರಳ ನಿದರ್ಶನವನ್ನು ನೀಡುವುದಾದರೆ ಕವಿತೆಯಲ್ಲಿ ಅಲಂಕಾರೋಕ್ತಿಗಳನ್ನು ರಚಿಸುವಾಗ ಮುಕ್ತ ನೆಲೆಯನ್ನು ಅವಲಂಬಿಸಿದರೆ ಛಂದಸ್ಸಿಗೆ ಸಂಬಂಧಿಸಿದ ನಿಯಮಗಳನ್ನು ಅನುಸರಿಸುವಾಗ ಬಂಧದ ನೆಲೆಯನ್ನು ಅನುಸರಿಸಲಾಗುತ್ತದೆ. ದೀರ್ಘ ಸಂಕಥನಗಳಲ್ಲೂ ಈ ಪರಸ್ಪರ ವಿರುದ್ಧ ಪ್ರವೃತ್ತಿಗಳು ಬೇರೆ ಬೇರೆ ರೀತಿಗಳಲ್ಲಿ ಮೈದಳೆಯುತ್ತವೆ. ವರ್ಣನೆ, ವ್ಯಾಖ್ಯಾನ ಮತ್ತು ನಿರೂಪಣೆಗಳಿಗೆ ಯಾವ ಬಗೆಯ ಭಾಷಾಮಾದರಿಯನ್ನು ಬೇಕಾದರೂ ಆಯ್ಕೆ ಮಾಡುವ ಮುಕ್ತ ಸಾಧ್ಯತೆಗಳಿರುತ್ತವೆ. ಆದರೆ ಒಮ್ಮೆ ಆಯ್ಕೆ ಮಾಡಿಯಾದ ಮೇಲೆ ಕಥನಕಾರ ತನ್ನ ಆಯ್ಕೆಗೆ ಕಟ್ಟು ಬೀಳುವುದು ಅನಿವಾರ್ಯ. ಇದಲ್ಲದೆ ಇನ್ನೂ ಹಲವು ನೆಲೆಗಳಲ್ಲಿ ಈ ಪ್ರವೃತ್ತಿಗಳ ನಡುವಣ ತುಯ್ತ ಕೃತಿಯಲ್ಲಿ ಪ್ರಕಟಗೊಳ್ಳುವುದು ಸಾಧ್ಯ.

### 6. ಕನಿಷ್ಠ ನಿರುಪಯುಕ್ತತೆ

ಭಾಷೆ ಒಂದು ವ್ಯವಸ್ಥೆಯಷ್ಟೆ. ಎಲ್ಲ ವ್ಯವಸ್ಥೆಗಳಲ್ಲೂ ಅಂಗಾಂಗಿ ಸಂಘಟನೆಯಲ್ಲಿ ಹಲವು ಉಪಯುಕ್ತವೆನಿಸಿದರೆ ಮತ್ತೆ ಕೆಲವು ನಿರುಪಯುಕ್ತ ಎನಿಸುತ್ತವೆ. ನಾನು ಹೇಳುತ್ತಿರುವ ವಿಚಾರಗಳನ್ನು ಹೇಳಲು ಈಗ ನಾನು ಬಳಸುತ್ತಿರುವ ಎಲ್ಲ ಪದಗಳು, ಪದ ಸಮುಚ್ಚಯಗಳು, ವಾಕ್ಯಗಳು ಅತ್ಯವಶ್ಯವೆಂದು ಹೇಳಬರುವುದಿಲ್ಲ. ಯಾವುದು ಉಪಯುಕ್ತ ಯಾವುದು ನಿರುಪಯುಕ್ತ ಎಂಬುದು ಸಂವಹನದ ನೆಲೆಯಲ್ಲಿ ನಿರ್ಣಯವಾಗುತ್ತದೆ. ಇದು ಭಾಷೆಯಲ್ಲಿ ಸಹಜ ವ್ಯಾಪಾರ. ಆದರೆ ಸಾಹಿತ್ಯ ಕೃತಿಗಳಲ್ಲಿ ಭಾಷೆ ಬಳಕೆಯಾದಾಗ ಅದರಲ್ಲಿ ನಿರುಪಯುಕ್ತತೆಯ ನೆಲೆಯನ್ನು ಕನಿಷ್ಠಗೊಳಿಸಲಾಗುತ್ತದೆ. ಅಂದರೆ ಆ ಭಾಷಾಶರೀರದಲ್ಲಿ ಬೇಡವಾದದ್ದು ಎಂಬುದು ಅತಿ ಕಡಿಮೆ ಪ್ರಮಾಣದಲ್ಲಿರುತ್ತದೆ. ಕೃತಿಯ ಭಾಷಾಶರೀರ ಹೀಗೆ ಸಂವಹನದ ನೆಲೆಯಲ್ಲಿ ಕೇವಲ ಅನಿವಾರ್ಯ ಭಾಷಾಂಶಗಳನ್ನು ಹೊಂದಿರುತ್ತದೆ.

### 7. ಅರ್ಥ ಸಂವಹನ ಮತ್ತು ಭಾವ ಸಂವಹನಗಳ ಬೆಸೆತ

ಸಾಹಿತ್ಯ ಕೃತಿಗಳ ಭಾಷೆಯು ಅರ್ಥವನ್ನು ಸಂವಹಿಸುವ ಹೊತ್ತಿನಲ್ಲೇ ಭಾವವನ್ನೂ ಸಂವಹಿಸುತ್ತಿರುತ್ತದೆ. ಅನ್ಯ ಭಾಷಾಬಳಕೆಗಳಲ್ಲೂ ಈ ಬಗೆಯ ಸಾಧ್ಯತೆ ಇರುತ್ತದೆ. ಆದರೆ ಅಲ್ಲಿ ಅರ್ಥ ಮತ್ತು ಭಾವಗಳ ಸಂವಹನದ ಬೆಸೆತ ಬೇರೊಂದು ಸಾಮಾಜಿಕ ನೆಲೆಯ ಗುರಿಯನ್ನು ಸಾಧಿಸಲು ಉಪಕರಣವಾಗುತ್ತದೆ. ಆದರೆ ಸಾಹಿತ್ಯ ಕೃತಿಗಳಲ್ಲಿ ಈ ಬೆಸೆತಕ್ಕೆ ಬೇರೊಂದು ಗುರಿಯಿಲ್ಲ. ಇದು ತನ್ನಲ್ಲೇ ಪರಿಪೂರ್ಣ. ಈ ನೆಲೆಯ ವಿಚಾರಗಳನ್ನು ಆನಂದವರ್ಧನ ತನ್ನ ಧ್ವನ್ಯಾಲೋಕದಲ್ಲಿ ಮಂಡಿಸುತ್ತಾನೆ. ವ್ಯಂಗ್ಯಾರ್ಥವೆಂಬುದು ಆನಂದವರ್ಧನನ ಪ್ರಕಾರ 'ಅರ್ಥ'ವಲ್ಲ; ಅದು ರಸಾದಿ. ಪರ್ಯಾಯವಾಗಿ ಹೇಳುವುದಾದರೆ ಅದು ಭಾವಗಳ ನೆಲೆಯ ಸಂವಹನ. ಸಾಹಿತ್ಯ ಕೃತಿಗಳ ಪರಮಗುರಿ ಈ ವಾಚ್ಯ ಮತ್ತು ವ್ಯಂಗ್ಯಗಳನ್ನು ಏಕತ್ರಗೊಳಿಸಿ ಸಂವಹನಿಸುವುದೇ ಆಗಿರಬೇಕು.

### ಸಾಹಿತ್ಯ ಕೃತಿಯ ಭಾಷೆ ಅಥವಾ ಸಾಹಿತ್ಯವೆಂಬ ಭಾಷೆ

ಸಾಹಿತ್ಯ ಕೃತಿಯ ಭಾಷೆ ಎಂಬ ಚೌಕಟ್ಟಿನಲ್ಲಿ ವ್ಯವಹರಿಸುವಾಗ ನಾವು ಭಾಷೆಗೆ ಸಂಬಂಧಿಸಿದ ಚರ್ಚೆಯ ವಲಯವನ್ನು ಆಧರಿಸಿಯೇ ಮಾತಾಡುವುದು ಅನಿವಾರ್ಯ. ಒಂದು ವೇಳೆ ಸಾಹಿತ್ಯವನ್ನೇ ಒಂದು ಪ್ರತ್ಯೇಕ ಭಾಷೆಯೆಂದು ಪರಿಗಣಿಸಿದರೆ ಆಗ ನಮ್ಮ ಚರ್ಚೆಯ ಸ್ವರೂಪವೇ ಬದಲಾಗುವುದು ಸಾಧ್ಯ. ಸಾಹಿತ್ಯವನ್ನು ಒಂದು ಭಾಷೆಯೆಂದು ಪರಿಗಣಿಸುವುದು ಎಂದರೇನು? ಸಹಜ ಭಾಷೆಯ ಲಕ್ಷಣಗಳನ್ನು ಹೊಂದಿರುವ ಅನೇಕ ಸಂಕೇತ-ಸಂವಹನ ವ್ಯವಸ್ಥೆಗಳು ಮಾನವರಲ್ಲಿ ಬಳಕೆಯಲ್ಲಿವೆ. ಅವುಗಳಲ್ಲಿ ಕೆಲವು ಶಾಬ್ದಿಕವಾಗಿದ್ದರೆ ಮತ್ತೆ ಕೆಲವು ಅಶಾಬ್ದಿಕ. ಸಾಮಾನ್ಯ ಮಾನವ ಸಂಕೇತ-ಸಂವಹನ ವ್ಯವಸ್ಥೆಯ ಲಕ್ಷಣಗಳು ಸಾಹಿತ್ಯ ಕೃತಿಗೂ ಇರುತ್ತವೆಂದು ತಿಳಿದರೆ ಆಗ ಸಾಹಿತ್ಯವನ್ನೇ ಒಂದು ಭಾಷೆಯೆಂದು ತಿಳಿಯುವುದು ಸಾಧ್ಯ. ಈ ಭಾಷೆ

ಮಾನವ ಭಾಷೆಯ ಪರಿಕರಗಳನ್ನು ಬಳಸಿಕೊಂಡು ತನ್ನದೇ ಆದ ಬೇರೆ ವ್ಯವಸ್ಥೆಯೊಂದನ್ನು ಕಟ್ಟಿಕೊಳ್ಳುತ್ತದೆ. ಅಂತಹ ಸಾಧ್ಯತೆಗಳಲ್ಲಿ ಕೆಲವನ್ನು ಮುಂದೆ ಚರ್ಚಿಸಲಾಗುತ್ತದೆ.

ಸಂಕೇತ ವ್ಯವಸ್ಥೆಯಲ್ಲಿ ಸಂಕೇತ ಮತ್ತು ಅದರಿಂದ ಸಂಕೇತವಾಗುವ ಅರ್ಥ ಎಂಬ ಎರಡು ನೆಲೆಗಳು ಇರುತ್ತವೆ. ಅಲ್ಲದೆ ಸಂಕೇತಗಳ ಸ್ವರೂಪ, ಆ ಸಂಕೇತಗಳಿಗೂ ಅವು ಸಂಕೇತಿಸುವ ಅರ್ಥಕ್ಕೂ ಇರುವ ಸಂಬಂಧದ ಸ್ವರೂಪ, ಸಂಕೇತಗಳ ನಡುವಣ ಅಂತರ್ಸಂಬಂಧ ಇವೆಲ್ಲವೂ ವಿವೇಚನೆಗೆ ಒಳಪಡುವ ಇನ್ನಿತರ ವಿಷಯಗಳು, ಸಾಹಿತ್ಯ ಕೃತಿಗಳಲ್ಲಿ ಭಾಷೆಯ ಶಬ್ದಗಳು (ವಾಚಕಗಳು) ಮತ್ತು ಕೆಲವೊಮ್ಮೆ ಆ ಶಬ್ದಗಳು ಪ್ರತಿನಿಧಿಸುವ ಅರ್ಥಗಳು (ವಾಚ್ಯಾರ್ಥ) ಸಂಕೇತಗಳಾಗುತ್ತವೆ. ಇವು ಬೇರೆ ಬೇರೆಯಾಗಿರಬಹುದು, ಅಥವಾ ಒಟ್ಟಾಗಿಯೂ ವ್ಯವಹರಿಸಬಹುದು.

ಸಾಹಿತ್ಯಕೃತಿಗಳು ರೂಪಿಸುವ ಅರ್ಥಜಗತ್ತು, ವಾಸ್ತವ ಜಗತ್ತಿನ ಪ್ರತಿನಿಧೀಕರಣ ಮಾತ್ರವಲ್ಲ; ಅದಕ್ಕೆ ಅದರದೇ ಆದ ಅಸ್ತಿತ್ವ ಮತ್ತು ವ್ಯವಹಾರಗಳಿರುತ್ತವೆ. ವಾಸ್ತವ ಜಗತ್ತಿನ ಕೆಲವು ನಿಯಮಗಳನ್ನು ಉಳಿಸಿಕೊಂಡೂ ಅದು ತನ್ನದೇ ಆದ ನಿಯಮ ವ್ಯವಸ್ಥೆಯನ್ನು ಹೊಂದುವುದು ಸಾಧ್ಯ. ಈ ಮಾತು ಸಾಹಿತ್ಯದ ಎಲ್ಲ ಪ್ರಕಾರಗಳಿಗೂ ಬೇರೆ ಬೇರೆ ರೀತಿಯಲ್ಲಿ ಅನ್ವಯವಾಗುತ್ತದೆ. ಹಾಗಾಗಿ ಸಾಹಿತ್ಯಕೃತಿಯ ಜಗತ್ತನ್ನು ಸಂಕೇತಿಸುವ ವ್ಯವಸ್ಥೆಯನ್ನು ಪ್ರತ್ಯೇಕವೆಂದು ಪರಿಗಣಿಸುವುದು ಸರಿಯಾಗಿಯೇ ಇದೆ.

ಸಾಹಿತ್ಯಕೃತಿಯಲ್ಲಿ ಸಂಕೇತವೆಂದು ಪರಿಗಣಿತವಾಗುವ ಜಗತ್ತು, ತಾನು ಸಂಕೇತಿಸುವ ಅರ್ಥಜಗತ್ತಿನ ಹಂಗಿಲ್ಲದೆಯೂ ಪರಿಪೂರ್ಣವಾಗಿರುತ್ತದೆ. ಅಂದರೆ ಆ ಕೃತಿಗಳನ್ನು ಪರಿಭಾವಿಸುವ ನಾವು ಅರ್ಥದ ಪರಿವೆಯೂ ಇಲ್ಲದೆ ಆ ಸಂಕೇತಗಳಲ್ಲೇ ಲೀನವಾಗುವುದೂ ಸಾಧ್ಯ. ಸಂಕೇತ ಶಾಸ್ತ್ರಜ್ಞರು ಇದನ್ನು ವಿಘಟಿತ ಪರಿಸ್ಥಿತಿ ಎಂದು ಪರಿಗಣಿಸಿದರೂ ಮಾನವ ಸಂಸ್ಕೃತಿಗೆ ಇದು ಅಪರಿಚಿತವಾದ ಸನ್ನಿವೇಶವೇನಲ್ಲ. ನಮ್ಮ ಹಲವಾರು ಧಾರ್ಮಿಕ ಸಂಕೇತವ್ಯವಸ್ಥೆಗಳೂ ಹೀಗೆ ತಮ್ಮಲ್ಲೇ ತಾವು ಅನನ್ಯವಾಗಿರುವುದನ್ನು ನಾವು ಕಾಣುತ್ತೇವೆ.

ಮೇಲಿನ ವಿವರಣೆಯ ಹಿನ್ನೆಲೆಯಲ್ಲಿ ಸಾಹಿತ್ಯವೆಂಬ ಭಾಷೆಯ ವಿವೇಚನೆ ಎರಡು ನೆಲೆಗಳಲ್ಲಿ ನಡೆಯುವುದು ಅವಶ್ಯವಾಗುತ್ತದೆ. ಸಂಕೇತಗಳು ಮತ್ತು ಅವುಗಳು ಸಂಕೇತಿಸುವ ಜಗತ್ತಿನ ನಡುವಣ ಸಂಬಂಧವನ್ನು ಚರ್ಚಿಸುವುದು ಒಂದು ನೆಲೆ. ಸಂಕೇತಗಳು ತಮಗೆ ತಾವೇ ಪರಿಪೂರ್ಣವಾಗಿರುವ ಸಂದರ್ಭದ ಸಾಧ್ಯತೆಯನ್ನು ಪರಿಗಣಿಸುವುದು ಇನ್ನೊಂದು ನೆಲೆ. ಎರಡನೆಯ ನೆಲೆಯನ್ನು ಕೇವಲ ಒಂದು ತಾಂತ್ರಿಕ ಸಾಧ್ಯತೆಯನ್ನಾಗಿ ಮಾತ್ರ ಪರಿಗಣಿಸಬಾರದು. ಸಂಸ್ಕೃತಿಯ ಬೆಳವಣಿಗೆಯಲ್ಲಿ ಈ ವಿಘಟನೆಗಳು ಉಂಟಾಗುವ ವಿಧಾನ ಮತ್ತು ಈ ವಿಘಟನೆಗಳನ್ನು ನಿವಾರಿಸಿಕೊಂಡು ಕಡಿದು ಹೋದ ಅರ್ಥಜಗತ್ತಿನ ಸಂಬಂಧವನ್ನು ಮರಳಿ ಸ್ಥಾಪಿಸಿಕೊಳ್ಳಲು ನಡೆಯುವ ಯತ್ನ ಇತ್ಯಾದಿಗಳನ್ನು ಪರಿಗಣಿಸುವುದು ಸೂಕ್ತ.

ಸಂಕೇತದ ರೂಪ (ಶರೀರ) ಮತ್ತು ಅರ್ಥ (ಪ್ರಾಣ)ಗಳ ನಡುವೆ ಸಂಭವಿಸುವ ಸಾಂಸ್ಕೃತಿಕ ತುಯ್ತಕ್ಕೆ ಬಹು ದೊಡ್ಡ ಚರಿತ್ರೆ ಇದೆ. ಕಾಳಿದಾಸ ವಾಕ್ ಮತ್ತು ಅರ್ಥಗಳು ಕಾವ್ಯದಲ್ಲಿ ಪಾರ್ವತಿ ಪರಮೇಶ್ವರರ ಹಾಗೆ ಬೆರೆತುಕೊಳ್ಳಬೇಕು ಎಂದು ಹೇಳಿದಾಗಲೇ ನಮ್ಮೆದುರು ಸಮಸ್ಯೆಯೊಂದನ್ನು ಪೃಥಕ್ಕರಿಸಿದಂತಾಯ್ತು. ವಾಗರ್ಥಗಳು ಸಂಯೋಗಗೊಳ್ಳಬೇಕೆಂದು ಹೇಳಿದ್ದು ಮಾತ್ರವಲ್ಲ ದಾಂಪತ್ಯದ ಮಾದರಿಯೊಂದನ್ನು ಮುಂದಿಟ್ಟು ಅದರಂತೆ ಸಂಯೋಗಗೊಳ್ಳಬೇಕೆಂದು ಹೇಳಿದ್ದು ಮತ್ತಷ್ಟು ಗಮನಾರ್ಹವಾಗಿದೆ. ಇದರಿಂದಾಗಿ ದಾಂಪತ್ಯದಲ್ಲಿನ ಗಂಡು ಹೆಣ್ಣುಗಳ ಸಂಬಂಧದ ಎಲ್ಲ ನೆಲೆಗಳನ್ನೂ ಸಾಹಿತ್ಯಕೃತಿಯ ಶಬ್ದಾರ್ಥಗಳಿಗೆ ರವಾನಿಸಲಾಗಿದೆ. ಒಂದಾಗುವಿಕೆ ಮತ್ತು ಬೇರ್ಪಡುವಿಕೆಗಳು ಎರಡು ಅವಸ್ಥೆಗಳು, ಎರಡೂ ನಿರಂತರವಾಗಿ ಒಂದನ್ನೊಂದು ನಿರಾಕರಿಸುತ್ತಿರುತ್ತವೆ. ಸಾಹಿತ್ಯಕೃತಿಯ ಭಾಷಿಕನೆಲೆಯಲ್ಲಿ ಈ ಲಕ್ಷಣಗಳನ್ನು ಗುರುತಿಸುವುದು ಮುಖ್ಯ.

# ಭಾಷಾಶಾಸ್ತ್ರದ ಜವಾಬ್ದಾರಿ

ಈಚೆಗೆ ಸಂಭವಿಸಿದ ಸೂರ್ಯಗ್ರಹಣ ಸಂದರ್ಭದಲ್ಲಿ ಜನತೆಗೆ ಆಕಾಶಕಾಯಗಳ ಚಲನವಲನಗಳ ಬಗೆಗೆ ಹತ್ತಾರು ಮಾಹಿತಿಗಳನ್ನು ನೀಡಲಾಯಿತು. ವೈಜ್ಞಾನಿಕ ಚಿಂತನೆಯನ್ನು ಬೆಳೆಸಿಕೊಳ್ಳಲು ಸೂಚಿಸಲಾಯಿತು. ಸಾಮಾನ್ಯರಿಗೆ ಗ್ರಹಣವನ್ನು ಕುರಿತು ಎಷ್ಟು ವಿಚಾರಗಳು ತಿಳಿದಿರಬೇಕೋ ಅದೆಲ್ಲವನ್ನು ತಿಳಿಸಿಕೊಟ್ಟರು ಜಗತ್ತಿನ ಖಗೋಳಶಾಸ್ತ್ರಜ್ಞರು ಈ ಗ್ರಹಣದ ಗಳಿಗೆಯಲ್ಲಿ ನೂರಾರು ಇನ್ನಿತರ ಮಾಹಿತಿಗಳನ್ನು ಸಂಗ್ರಹಿಸಲು ಹಲವಾರು ತಿಂಗಳುಗಳಿಂದ ಸನ್ನದ್ಧರಾಗಿದ್ದರು. ಇನ್ನು ಹಲವು ವರ್ಷಗಳ ಕಾಲ ಈಗ ದೊರೆತ ಮಾಹಿತಿಯನ್ನು ವಿಶ್ಲೇಷಿಸುತ್ತ ಖಗೋಳಶಾಸ್ತ್ರದ ಜ್ಞಾನಸಂಚಯಕ್ಕೆ ಇವರೆಲ್ಲ ನೆರವಾಗುತ್ತಾರೆ. ಇದು ನಮ್ಮ ಅಧ್ಯಯನದ ಒಂದು ಪ್ರಮುಖ ಮಾದರಿಯನ್ನು ಪ್ರತಿನಿಧಿಸುತ್ತದೆ. ಈ ಬಗೆಯ ಅಧ್ಯಯನಗಳು ತಾವು ಯಾವ ಸಂಗತಿಗಳನ್ನು ಕುರಿತು ಅಧ್ಯಯನ ಮಾಡುತ್ತಿರುತ್ತವೋ ಆ ಸಂಗತಿಗಳ ಸ್ವರೂಪದಲ್ಲಿ ಯಾವ ಬದಲಾವಣೆಯನ್ನೂ ಮಾಡಲಾರವು. ಅಂಥ ಆಸಕ್ತಿಗಳು ಈ ಬಗೆಯ ಅಧ್ಯಯನಗಳಿಗೆ ಇಲ್ಲ. ಬೇಕೆಂದಾಗ ಗ್ರಹಣ ಸಂಭವಿಸುವಂತೆ ಮಾಡುವುದು ನಮಗೆ ಸಾಧ್ಯವೇ? ಅಂದರೆ ನಾವು ಪಡೆಯುವ ತಿಳುವಳಿಕೆ ಯಾವ ರೀತಿಯಲ್ಲೂ ಆ ತಿಳುವಳಿಕೆಗೆ ಕಾರಣವಾದ ಸನ್ನಿವೇಶವನ್ನು ಪ್ರಭಾವಿಸಲಾರದು. ಇನ್ನೊಂದು ಬಗೆಯ ಅಧ್ಯಯನದ ಮಾದರಿಯಲ್ಲಿ ಇದಕ್ಕೆ ವಿರುದ್ಧವಾದ ಹಾದಿಯನ್ನು ಹಿಡಿಯಲಾಗುತ್ತದೆ. ಅಲ್ಲಿ ಯಾವ ವಲಯದಿಂದ ಮಾಹಿತಿಯನ್ನು ಪಡೆಯಲಾಗುತ್ತದೋ, ಆ ವಲಯವನ್ನು ಪ್ರಭಾವಿಸಲೆಂದು ಆ ಮಾಹಿತಿಯನ್ನು ಬಳಸಲಾಗುತ್ತದೆ. ನಮ್ಮ ದೇಹರಚನೆ, ಕಾರ್ಯವಿಧಾನ, ಏರುಪೇರುಗಳನ್ನು ಕುರಿತು ನಡೆಸುವ ಅಧ್ಯಯನ ಮರಳಿ ಆ ದೇಹರಚನೆಯನ್ನು ಹೇಗಾದರೂ ಪ್ರಭಾವಿಸಲು ಬಳಕೆಯಾಗುತ್ತವೆ.

ಈ ಎರಡು ಮಾದರಿಗಳಲ್ಲಿ ಭಾಷಾಧ್ಯಯನಗಳು ಮೊದಲ ಮಾದರಿಯನ್ನು ಅನುಸರಿಸಲು ಹವಣಿಸುತ್ತವೆ. ಅಥವಾ ಮಾದರಿಯನ್ನು ಅನುಸರಿಸುವಂತೆ ಎಲ್ಲ ಭಾಷಾಧ್ಯಯನಕಾರರೂ ಶಪಥ ಮಾಡುವಂತೆ ಪ್ರೇರೇಪಿಸಲಾಗುತ್ತದೆ. ಭಾಷೆಯನ್ನು ಅಧ್ಯಯನ ಮಾಡುವುದೆಂದರೆ ಅದರ ಬಗೆಗೆ ಎಲ್ಲ ಬಗೆಯ ಮಾಹಿತಿಯನ್ನೂ ಪಡೆಯುವುದು. ಆ ಮಾಹಿತಿಯನ್ನು ಶುದ್ಧಜ್ಞಾನವನ್ನಾಗಿ ಅಭ್ಯಾಸಮಾಡುತ್ತ ಹೋಗುವುದು. ಇದಿಷ್ಟೇ ಭಾಷಾಧ್ಯಯನಕಾರರ ಕೆಲಸವೆಂದು ತಿಳಿಯಲಾಗುತ್ತಿದೆ. ಐವತ್ತರ ಅನಂತರ

ಭಾರತಕ್ಕೆ ಆಮದಾಗಿ ಬಂದ ಭಾಷಾಶಾಸ್ತ್ರವೆಂಬ ಜ್ಞಾನಶಾಖೆಯು ನಾಲ್ಕು ದಶಕಗಳು ಕಳೆದರೂ ನಮ್ಮ ಸಾಮಾಜಿಕ ವಲಯದಲ್ಲಿ ತನ್ನ ಜವಾಬ್ದಾರಿ ಏನೆಂಬುದನ್ನು ಗುರುತಿಸಿಕೊಳ್ಳಲು ಸಾಧ್ಯವಾಗಿಲ್ಲ.

ವಿಶ್ವವಿದ್ಯಾಲಯಗಳಲ್ಲಿ ಸಾವಿರಾರು ಸ್ನಾತಕರು ಭಾಷಾಶಾಸ್ತ್ರದಲ್ಲಿ ಉನ್ನತ ವ್ಯಾಸಂಗವನ್ನು ಮಾಡುತ್ತಿದ್ದಾರೆ. ಪದವಿಗಳನ್ನು ಪಡೆಯುತ್ತಿದ್ದಾರೆ. ಭಾಷಾಧ್ಯಯನಗಳಿಗೆ ಮೀಸಲಾದ ಹತ್ತಾರು ಸಂಸ್ಥೆಗಳು ನಾಡಿನಲ್ಲಿ ಕಾರ್ಯನಿರ್ವಹಿಸುತ್ತಿವೆ. ಆದರೂ ಭಾಷಾಶಾಸ್ತ್ರದೊಡನೆ ನಮಗೆ ಬಳಕೆ ಬೆಳೆದಿಲ್ಲ. ಕಾರಣವಿಷ್ಟೇ. ಈ ಶಾಸ್ತ್ರವು ನಮ್ಮ ಸಾಮಾಜಿಕ ಸಂದರ್ಭಕ್ಕೆ ತನ್ನನ್ನು ತಾನು ಹೊಂದಿಸಿಕೊಂಡಿಲ್ಲ.

ಹಾಗೆ ನೋಡಿದರೆ ಹಳೆಗಾಲದ ಭಾಷಾಧ್ಯಯನಗಳೆಂದರೆ ವ್ಯಾಕರಣ, ನಿಘಂಟುಗಳ ರಚನೆ. ಇವು ಭಾಷೆಯಲ್ಲಿ ಸರಿತಪ್ಪುಗಳನ್ನು ಗುರುತಿಸಲು ಹಿಂಜರಿಯುತ್ತಿರಲಿಲ್ಲ. ವೈಯಾಕರಣಿಗಳ ಈ ದೃಷ್ಟಿಕೋನವನ್ನು ನಮ್ಮ ಇಂದಿನ ಭಾಷಾಶಾಸ್ತ್ರ ಒಪ್ಪುವುದಿಲ್ಲ. ಇದಕ್ಕೆ ಆ ಶಾಸ್ತ್ರದ ತಾತ್ವಿಕ ನಿಲುವು ಎಷ್ಟು ಕಾರಣವೋ ಪ್ರಜಾಪ್ರಭುತ್ವದ ಕೆಲವು ಒಪ್ಪಿತ ನೆಲೆಗಳೂ ಅಷ್ಟೇ ಕಾರಣ. ಸಮಾನತೆಯು ಪ್ರಜಾಪ್ರಭುತ್ವದ ಅಂಥ ಒಂದು ನೆಲೆ. ಹಾಗಾಗಿ ಭಾಷೆಯ ವಿವಿಧ ಪ್ರಭೇದಗಳಲ್ಲಿ, ಪ್ರಯೋಗಗಳಲ್ಲಿ ಇದು ಸರಿ ಇದು ತಪ್ಪು ಎನ್ನುವುದಾಗಲೀ, ಇದು ಸ್ವೀಕಾರಾರ್ಹ ಇದು ತ್ಯಾಜ್ಯ ಎನ್ನುವುದಾಗಲೀ ಸರಿಯಲ್ಲ. ಹಾಗಾಗಿ ಭಾಷಾಧ್ಯಯನಕಾರರು ಭಾಷೆಯನ್ನು, ಅದರ ಬೆಳವಣಿಗೆಯನ್ನು 'ಗಮನಿಸುವುದು, ವರ್ಣಿಸುವುದು ಮತ್ತು ಸಾಧ್ಯವಿರುವೆಡೆಯಲ್ಲಿ ಕಾರಣಗಳನ್ನು ಹುಡುಕುವುದು' ಇದಿಷ್ಟು ಮಾತ್ರ ತಮ್ಮ ಕೆಲಸವೆಂದು ತಿಳಿದರು. ಉದಾಹರಣೆಗೆ ಕನ್ನಡ ಮತ್ತು ತುಳು ಎರಡನ್ನೂ ಮಾತನಾಡುವವರ ಕನ್ನಡವನ್ನು ಅಧ್ಯಯನ ಮಾಡುವವರು ಆ ಕನ್ನಡವು ಇತರ ಕನ್ನಡಗಳೊಡನೆ ಹೊಂದಿರುವ ಸಂಬಂಧಾಂತರಗಳನ್ನು ಗುರುತಿಸುವ ಕೆಲಸವನ್ನು ಮಾತ್ರ ವಹಿಸಿಕೊಳ್ಳುತ್ತಾರೆ. ಈ ಸಂಬಂಧಾಂತರಗಳು ಭಾಷೆಯ ಬಳಕೆಯನ್ನು ಪ್ರಭಾವಿಸುವ ಬಗೆ, ಭಾಷಾಕಲಿಕೆಯ ಮೇಲೆ ಈ ಅಂಶಗಳ ಪರಿಣಾಮ ಇತ್ಯಾದಿ ಸಂಗತಿಗಳು ಅವರ ಆಸಕ್ತಿಯ ಆಚೆಗೆ ಉಳಿಯುತ್ತವೆ.

ಭಾಷಾಧ್ಯಯನಗಳು ಸರಿತಪ್ಪುಗಳನ್ನು ಸೂಚಿಸುವ, ಯೋಗ್ಯ ಮಾದರಿಗಳನ್ನು ಸೂಚಿಸುವ ಕೆಲಸದಿಂದ ದೂರ ಉಳಿಯಬೇಕೆಂದು ಹೇಳುವವರಲ್ಲಿ ಎರಡು ವಿಧ: ಭಾಷೆಯು ತನ್ನದೇ ಆದ ನಿಯಮಗಳಿಗನುಗುಣವಾಗಿ ಬೆಳೆಯುತ್ತದೆಯಾಗಿ ಅದರಲ್ಲಿ 'ತಲೆತೂರಿಸಿ' ಸರಿತಪ್ಪುಗಳನ್ನು ಹೇಳುವುದು, ಯೋಗ್ಯ ಪ್ರಯೋಗಗಳನ್ನು ಸೂಚಿಸುವುದು ಅಸಾಧ್ಯವೆನ್ನುವುದು ಒಂದು ವಾದ. ಈ ವಾದವನ್ನು ನಂಬುವವರು, ಭಾಷೆಯನ್ನು ತಿದ್ದುವುದು ಎಂದರೆ ಹವಾಮಾನವನ್ನು ಬದಲಾಯಿಸಲು ಹೊರಟಂತೆ ಎನ್ನುತ್ತಾರೆ. ಹವಾಮಾನವನ್ನು ಅಧ್ಯಯನ ಮಾಡಿ 'ಅರಿತು' ಕೊಳ್ಳಬಹುದೇ ಹೊರತು ಬದಲಾಯಿಸಲು ಸಾಧ್ಯವಿಲ್ಲವಷ್ಟೆ? ಹಾಗೆಯೇ ಭಾಷೆಯ ಅಧ್ಯಯನ ಕೂಡ.

ಎರಡನೆಯ ವಾದದಂತೆ ಭಾಷೆಯಲ್ಲಿ ಎಲ್ಲ ಪ್ರಯೋಗಗಳಿಗೂ, ಎಲ್ಲ ಬಳಕೆಗಳಿಗೂ ಅದರದೇ ಆದ ನಿಯಮಗಳಿರುವುದರಿಂದ ಎಲ್ಲವೂ ಸಮರ್ಥನೀಯವೇ ಆಗಿರುತ್ತದೆ. ಆದ್ದರಿಂದ ಅವುಗಳಲ್ಲಿ ಆಯ್ಕೆಯನ್ನು ಮಾಡುವುದು ಅನೈತಿಕವೆಂದು ಈ ವಾದವನ್ನು ಮಂಡಿಸುವವರ ನಿಲುವು. ಹೀಗೆ ಆಯ್ಕೆ ಮಾಡಲು ಹೊರಟಾಗ ಸಾಮಾಜಿಕವಾಗಿ ಇರುವ ಶ್ರೇಣೀಕರಣವನ್ನು ಪರೋಕ್ಷವಾಗಿ ಸಮರ್ಥಿಸಿದಂತಾಗುತ್ತದೆಂದು ಈ ವಾದವನ್ನು ಮಂಡಿಸುವವರು ತಿಳಿಯುತ್ತಾರೆ. ಭಾಷೆಯ ಬೆಳವಣಿಗೆಯಲ್ಲಿ 'ತಲೆತೂರಿಸುವುದು' ಅಶಕ್ಯವೆನ್ನುವವರು ಶಾಸ್ತ್ರಶುದ್ಧತೆಗೆ ಕಟ್ಟು ಬಿದ್ದವರು. ಇಲ್ಲವೇ ಹೀಗೆ 'ತಲೆ ತೂರಿಸುವುದು' ಅನೈತಿಕವೆನ್ನುವವರು ಪ್ರಜಾಪ್ರಭುತ್ವದ ಸಮಾನತೆಯ ನೆಲೆಗೆ ಕಟ್ಟು ಬಿದ್ದವರು. ಈ ವಾದಗಳನ್ನು ನಾವಿಲ್ಲಿ ಸಾರಾಸಗಟಾಗಿ ತಳ್ಳಿಹಾಕುತ್ತಿಲ್ಲ. ಹಾಗಾದರೆ ಭಾಷಾಧ್ಯಯನಗಳಿಗೆ ಸಾಮಾಜಿಕವಾದ ಯಾವ ಹೊಣೆಗಾರಿಕೆಯೂ ಇಲ್ಲವೇ ಎಂಬ ಪ್ರಶ್ನೆಯನ್ನು ಮಾತ್ರ ಕೇಳಬೇಕಾಗಿದೆ.

ಭಾಷಾಧ್ಯಯನಗಳಿಗೆ ಸಾಮಾಜಿಕ ನೆಲಗಟ್ಟನ್ನು ಒದಗಿಸಬೇಕೆಂದು ಹವಣಿಸುವವರೂ ಇದ್ದಾರೆ. ಅವರಲ್ಲಿ ಬಹುಪಾಲು ಜನರ ಅಧ್ಯಯನಗಳು ಭಾಷಿಕ ವಿಕಲ್ಪಗಳಿಗೂ ಸಾಮಾಜಿಕ ಪ್ರಕ್ರಿಯೆಗಳಿಗೂ ಸಂಬಂಧಗಳನ್ನು ಹುಡುಕಲು ಯತ್ನಿಸುತ್ತವೆ. ಉದಾಹರಣೆಗೆ ಕನ್ನಡದ ಒಂದು ವಿಕಲ್ಪದಲ್ಲಿ ಮಹಾಪ್ರಾಣಗಳು ಲೋಪಗೊಳ್ಳುವುದು, ಶ ಷ ಗಳ ಬದಲು ಸಕಾರವನ್ನು ಬಳಸುವುದು, ಹಕಾರವನ್ನು ಲೋಪಗೊಳಿಸುವುದು ಕಂಡುಬರುತ್ತವೆಂದು ಕೊಳ್ಳೋಣ. ಸಾಮಾಜಿಕ ಭಾಷಾಶಾಸ್ತ್ರಜ್ಞರು ಈ ವಿಕಲ್ಪಕ್ಕೂ ಸಾಮಾಜಿಕ ಸಂದರ್ಭಕ್ಕೂ ಸಂಬಂಧವಿರುವುದನ್ನು ತಮ್ಮ ಅಧ್ಯಯನದ ಫಲಿತಾಂಶವನ್ನಾಗಿ ಹೇಳುತ್ತಾರೆ. ಅಂದರೆ ಈ ವಿಕಲ್ಪವನ್ನು ಕೆಳಜಾತಿಯವರು ಮತ್ತು ಔಪಚಾರಿಕ ಶಿಕ್ಷಣವನ್ನು ಪಡೆದವರು ಬಳಸುತ್ತಾರೆಂದು ತೋರಿಸಿಕೊಡುತ್ತಾರೆ.

ಭಾಷಾಧ್ಯಯನಗಳಿಗೆ ಸಾಮಾಜಿಕ ನೆಲೆಗಳನ್ನು ಒದಗಿಸುವ ಈ ಯತ್ನಗಳೂ ಕೂಡ ಅನ್ಯ ಸಾಮಾಜಿಕ ಅಧ್ಯಯನಗಳಿಗೆ ಪೂರಕವಾಗಿ ಕಾರ್ಯ ನಿರ್ವಹಿಸುತ್ತಿರುತ್ತವೆ. ಸಮಾಜಶಾಸ್ತ್ರಜ್ಞರು ಬೇರೆ ಬಗೆಯಿಂದ ನಿರೂಪಿಸಿದ್ದ ಸಂಗತಿಗಳನ್ನು ಭಾಷೆಯ ಮಾಹಿತಿಯ ಮೂಲಕ ಈ ಭಾಷಾಧ್ಯಯನಕಾರರು ಸಮರ್ಥಿಸುತ್ತಿರುತ್ತಾರೆ. ಅಂದರೆ ಭಾಷಾಸಂಚಲನೆಗಳು ಸಾಮಾಜಿಕ ಸಂಚಲನೆಗಳಿಗೆ ಸೂಚಕಗಳಾಗಿರುತ್ತವೆಂಬ ನಿಲುವಿನ ಅಧ್ಯಯನಗಳಿವು. ಇಲ್ಲಿಯೂ ಭಾಷಾವಿಕಲ್ಪಗಳನ್ನು ಸಮರ್ಥಿಸುವ ವಿಧಾನವೇ ಮುಸುಕಿನಲ್ಲಿ ಮುಂದುವರಿಯುತ್ತದೆಂಬುದನ್ನು ಗಮನಿಸಬೇಕು.

**ಹಾಗಿದ್ದರೇನು ಮಾಡಬೇಕು?**

ಭಾಷೆಯಲ್ಲಿ ಯಾವುದು ಸರಿ ಯಾವುದು ತಪ್ಪು, ಯಾವುದು ಯುಕ್ತ ಯಾವುದು ಅಲ್ಲವೆಂಬುದನ್ನು ನಾವು ಹೇಳುವುದಿಲ್ಲವೆಂದು ಭಾಷಾಶಾಸ್ತ್ರಜ್ಞರು ವ್ರತ ಹಿಡಿದು ಕುಳಿತಿರಲಿ. ಆದರೆ ಇಂಥಾ ಆಯ್ಕೆಗಳು ನಿರ್ದೇಶನಗಳು ಭಾಷೆಗೆ ದೊರಕುತ್ತಲೇ ಇರುತ್ತವೆ. ವಿಪರ್ಯಾಸದ ಸಂಗತಿಯೆಂದರೆ ಇಂಥ ನಿರ್ದೇಶನಗಳನ್ನು ನೀಡುವವರು

ಭಾಷೆಯ ರಚನೆಯನ್ನು ಅದರ ಬೆಳವಣಿಗೆಯ ನೆಲೆಗಳನ್ನು ಅರಿತವರಾಗಿರುವುದಿಲ್ಲ. ಈ ಕಾರಣದಿಂದ ಭಾಷಾಶಾಸ್ತ್ರಜ್ಞರ ಹೊಣೆ ಮತ್ತಷ್ಟು ಹೆಚ್ಚಾಗುತ್ತದೆ. ರೋಗನಿದಾನ, ನಿವಾರಣೆಗಳನ್ನು ಅರಿತಿಲ್ಲದ ಹುಸಿವೈದ್ಯರು ಜನಾರೋಗ್ಯದ ಹೊಣೆಹೊರಲು ಹೊರಟಾಗ ಎಲ್ಲ ಬಲ್ಲ ವೈದ್ಯನ ಹೊಣೆ ಹೆಚ್ಚಾಗುತ್ತದಷ್ಟೆ. ತನ್ನ ತಜ್ಞತೆಯನ್ನು ಶುದ್ಧವಾಗಿರಿಸಿಕೊಳ್ಳುವ ಸಲುವಾಗಿ ಸಾಮಾಜಿಕ ಹೊಣೆಗಾರಿಕೆಯನ್ನು ಬಿಟ್ಟುಕೊಡುವುದು ಒಂದು ಅಪರಾಧವೇ ಆಗುವುದು. ಭಾಷಾಶಾಸ್ತ್ರಜ್ಞರು ಈ ಅಂಶವನ್ನು ಗಮನಿಸಬೇಕು.

ಅಲ್ಲದೆ ಹಿಂದೆ ಭಾಷೆಯ ಬೆಳವಣಿಗೆಯನ್ನು ನಿರ್ದೇಶಿಸಲು ಹೊರಟವರ ಯತ್ನಗಳ ವೈಫಲ್ಯವನ್ನು ಈಗ ನಿದರ್ಶನವನ್ನಾಗಿ ಕೊಡುವುದು ಸರಿಯಾಗಲಾರದು. ಏಕೆಂದರೆ ಹಿಂದೆ ಆ ಕೆಲಸವನ್ನು ಮಾಡಲು ಹೊರಟವರು ರಾಜಾಶ್ರಯದಲ್ಲಿಯೋ ಮಠಮಾನ್ಯಗಳ ಆಶ್ರಯದಲ್ಲಿಯೋ ತಮ್ಮ ಕಾರ್ಯವನ್ನು ನಿರ್ವಹಿಸುತ್ತಿದ್ದರು. ಹೀಗಾಗಿ, ಅವರ ತಜ್ಞತೆಯ ಉಪಯೋಗ ಕೆಲಮಟ್ಟಿಗೆ ಕುಂಠಿತಗೊಂಡಿರುವುದೂ ಸಾಧ್ಯ. ಆದರೆ ಈಗ ಹಾಗಿಲ್ಲ. ಭಾಷಾಶಾಸ್ತ್ರಜ್ಞರಿಗೆ ಹತ್ತಾರು ಬಗೆಯ ಸಾಮಾಜಿಕ ಸಂಸ್ಥೆಗಳು ಬೆಂಬಲವಾಗಿರುತ್ತವೆ. ತಾವು ಯೋಜಿಸಿದ ಮಾದರಿಗಳನ್ನು ಪರೀಕ್ಷಿಸಿನೋಡಲು ಹಲವಾರು ವೇದಿಕೆಗಳು ಅವರಿಗೆ ಉಪಲಬ್ಧವಿವೆ. ತಪ್ಪುಗಳಾಗದಂತೆ ನೋಡಿಕೊಳ್ಳಲು ಇವೆಲ್ಲ ಸೌಲಭ್ಯಗಳಿರುವಾಗ ಭಾಷಾಧ್ಯಯನಕಾರರು ತಮ್ಮ ಹೊಣೆಯನ್ನು ನಿರ್ವಹಿಸಲು ಹಿಂಜರಿಯಬಾರದೆಂದು ತೋರುತ್ತದೆ.

ಜಗತ್ತಿನ ಹಲವು ಭಾಷಾಸಂದರ್ಭಗಳನ್ನು ಗಮನಿಸಿದರೆ ಅಲ್ಲಿ ಭಾಷಾಧ್ಯಯನಕಾರರು ಇಂಥ ಹೊಣೆಯನ್ನು ಹೊರಲು ಹಿಂಜರಿದಿಲ್ಲವೆಂಬ ಸಂಗತಿ ಗೊತ್ತಾಗುತ್ತದೆ. ಅವರು ಭಾಷಾಶಾಸ್ತ್ರದ ಈ ಶತಮಾನದ ಹಿಂಜರಿಕೆಗಳಿಗೆ ಕಟ್ಟುಬೀಳದೆ, ಭಾಷೆಯ ಬೆಳವಣಿಗೆಗೆ ನಿರ್ದೇಶಕ ಸೂತ್ರಗಳನ್ನು ನೀಡಿದ್ದಾರೆ. ಅದರಿಂದ ಆ ಭಾಷೆಗಳು ಹೊಸ ಜವಾಬ್ದಾರಿಗಳಿಗೆ ಸನ್ನದ್ಧವಾಗಿವೆ. ಕನ್ನಡದ ಮಟ್ಟಿಗೆ ಈ ಯತ್ನಗಳು ವ್ಯವಸ್ಥಿತವಾಗಿ ನಡೆದಿಲ್ಲ. ಕನ್ನಡ ಕನ್ನಡ ನಿಘಂಟು ರಚನೆ, ಕನ್ನಡ ವಿಶ್ವಕೋಶ ರಚನೆ ಮುಂತಾದ ಬೃಹತ್ ಪ್ರಮಾಣದ ಸಾಂಸ್ಥಿಕ ಯೋಜನೆಗಳು ಹೇಗೋ ಪ್ರಾರಂಭಗೊಂಡು ಸಾಗಿವೆ. 1896ರ ಸುಮಾರಿನಲ್ಲಿಯೇ ಕನ್ನಡ ಭಾಷೆಯ ಅಭಿವೃದ್ಧಿಯನ್ನು ಕುರಿತು ಯೋಜನೆಗಳನ್ನು ಹಾಕಿಕೊಳ್ಳಲು ಮೈಸೂರಿನಲ್ಲಿ ಸಾಂಸ್ಥಿಕ ಪ್ರಯತ್ನಗಳನ್ನು ಮಾಡಲಾಗಿದೆ. 1911 ರಲ್ಲಿ ಬಿ.ಎಂ.ಶ್ರೀಯವರು ಧಾರವಾಡದಲ್ಲಿ ಮಾಡಿದ 'ಕನ್ನಡ ಮಾತು ತಲೆ ಎತ್ತುವ ಬಗೆ' ಎಂಬ ಭಾಷಣ ಇಂಥ ಚಿಂತನೆಗಳಿಗೊಂದು ಆಕಾರವನ್ನು ನೀಡಿದೆ. ಇವುಗಳ ಹಿಂದೆ ಭಾಷಾಭಿವೃದ್ಧಿಯ ಬಗೆಗೆ ಸಾಮುದಾಯಿಕವಾಗಿ ಬೆಳೆದಿದ್ದ ಕಾಳಜಿಗಳು ಪ್ರಧಾನ ಪಾತ್ರವಹಿಸಿವೆ. ಆದರೆ ಆಧುನಿಕ ಭಾಷಾಶಾಸ್ತ್ರದ ನೆಲೆಗಳಲ್ಲಿ ತರಬೇತು ಪಡೆದವರು ಈ ಬಗೆಯ ತೊಡಗುವಿಕೆಯಿಂದ ದೂರವೇ ಉಳಿದಿದ್ದಾರೆ. ಅಥವಾ ಹೀಗೂ ಹೇಳಬಹುದೇನೋ. ಆಧುನಿಕ ಭಾಷಾಶಾಸ್ತ್ರದಿಂದ ದೊರೆತ ಅರಿವು ಭಾಷಾಭಿವೃದ್ಧಿಯ ವ್ಯವಸ್ಥಿತ ಪ್ರಯತ್ನಗಳಿಗೆ ಪೂರ್ಣ ಪ್ರಮಾಣದಲ್ಲಿ ದೊರೆತಿಲ್ಲ.

ಕನ್ನಡದಲ್ಲಿ ಬರೆಯುವವರು, ಕನ್ನಡವನ್ನು ಓದುವವರು ದಿನೇದಿನೇ ಹೆಚ್ಚುತ್ತಿದ್ದಾರೆ. ಬರೆಯುವವರು ಮತ್ತು ಓದುವವರು ಇವರ ನಡುವಣ ಸಂಬಂಧ ಕೂಡ ದಿನಕಳೆದಂತೆ

ಹೊಸ ನೆಲೆಗಳಿಗೆ ದಾಟುತ್ತಿದೆ. ಕನ್ನಡವನ್ನು ಬಳಸಬೇಕಾದ ವಲಯಗಳೂ ವಿಸ್ತಾರಗೊಳ್ಳುತ್ತಿವೆ. ಕನ್ನಡವನ್ನು ಓದಲು, ಕೇಳಲು ಒದಗಿಸುವ ವಿಧಾನಗಳೂ ಕೂಡ ಬದಲಾಗುತ್ತಿವೆ. ಇವೆಲ್ಲ ಬದಲಾವಣೆಗಳು ದಿನದಿನದ ಕನ್ನಡ ಬಳಕೆಯಲ್ಲಿ ನೂರಾರು ತೊಡಕುಗಳನ್ನು ತಂದಿವೆ; ಗೊಂದಲಗಳನ್ನು ಬೆಳೆಸಿವೆ. ಈ ಸಂದರ್ಭದಲ್ಲಿ ಕನ್ನಡ ಭಾಷಿಕರಿಗೆ ಲಭ್ಯವಿರುವ ಒಂದು ಬಗೆಯ ಅಂತಸ್ಥ ತಿಳುವಳಿಕೆಯನ್ನು ನೆಮ್ಮಿ ಹೇಗೋ ಆಗುವುದೆಲ್ಲ ಒಳ್ಳೆಯದಕ್ಕೇ ತಾನೇ ಎಂದು ಸುಮ್ಮನಿರಬಹುದು, ಅಥವಾ ತಜ್ಞರಲ್ಲದವರು ಭಾಷೆಯ ಅಭಿವೃದ್ಧಿ ಯೋಜನೆಗಳನ್ನು ರೂಪಿಸಿ ಜಾರಿಗೆ ತರುವುದನ್ನು ನೋಡುತ್ತ ಕೂರಬಹುದು. ಇವೆರಡೂ ಆರೋಗ್ಯಕರ ಬೆಳವಣಿಗೆಗಳಿಗೆ ಕಾರಣವಾಗಲಾರವು. ಭಾಷಾಶಾಸ್ತ್ರಜ್ಞರು ಈಗ ತಮ್ಮ ಸಾಮಾಜಿಕ ಹೊಣೆಗಾರಿಕೆಯನ್ನು ನಿರ್ವಹಿಸಲು ಸಿದ್ಧರಾಗಬೇಕು. ಈ ಕಾಲಘಟ್ಟ ಅವರಿಗೆ ಒದಗಿಸಿರುವ ಸವಾಲುಗಳನ್ನು ಎದುರಿಸಿ ಕನ್ನಡವನ್ನು ಯೋಜಿತ ಮಾದರಿಯಲ್ಲಿ ರೂಪಿಸಲು ನೆರವಾಗಬೇಕು. ಈಗ ತಮ್ಮ ಶಾಸ್ತ್ರದ ತಾತ್ವಿಕ ನೆಲೆಗಳಿಗೆ ಜೋತುಬಿದ್ದು ಹಿಂಜರಿದರೆ ಮತ್ತೆ ಹಾದಿಹತ್ತುವ ಅವಕಾಶಗಳು ದೊರಕುವ ಸಂಭವ ಕಡಿಮೆಯೆಂದು ತೋರುತ್ತದೆ.

# ನುಡಿಬೆರಕೆ

ಸಾಮಾನ್ಯವಾಗಿ ಕನ್ನಡ ಭಾಷೆಯ ಬಳಕೆಯ ಬಗೆಗೆ ಮಾತನಾಡುವವರು ಹಲವಾರು ನಗೆಚಾಟಿಕೆಗಳನ್ನು ತಮ್ಮ ಸಂಗ್ರಹದಲ್ಲಿ ಇರಿಸಿಕೊಂಡಿರುತ್ತಾರೆ. ಇವುಗಳಲ್ಲಿ ಎರಡು ಮಾದರಿಗಳಿರುತ್ತವೆ. ಒಂದು ಮಾದರಿಯ ಜೋಕುಗಳು ತೀನಂಶ್ರೀಯವರು ಬರೆದ 'ಕಾಸಿನ ಸಂಘ' ಎಂಬ ಲಲಿತ ಪ್ರಬಂಧದಲ್ಲಿ ಇಲ್ಲವೇ ಗೊರೂರರ 'ನಮ್ಮ ಊರಿನ ರಸಿಕರು' ಕೃತಿಯ ರಂಗೇಗೌಡನ ಪ್ರಸಂಗದಲ್ಲಿ ಬರುವ ಮಾದರಿಯವು. ಇಲ್ಲಿ ಕನ್ನಡವನ್ನು ಅನ್ಯಭಾಷೆಯೊಡನೆ ಬೆರಸದೆ ಮಾತನಾಡಲು ಹೊರಡುವುದರಿಂದ ಉಂಟಾಗುವ ಪೇಚಿನ ಪ್ರಸಂಗಗಳನ್ನು ಗೇಲಿಮಾಡಲಾಗುತ್ತದೆ. ಇನ್ನೊಂದು ಮಾದರಿಯ ಜೋಕುಗಳಲ್ಲಿ ಅಪ್ಪಟ ಕನ್ನಡಾಭಿಮಾನಿಗಳ ಮಾತುಗಳಲ್ಲಿ ಒಂದೇ ಸಮನೆ ಅನ್ಯ ಬಾಷೆಯ ಪದಗಳು ಬೆರಕೆಯಾಗುವುದನ್ನು ಗೇಲಿಮಾಡಲಾಗುತ್ತದೆ. ಇವೆರಡೂ ಒಂದು ನೆಲೆಯಲ್ಲಿ ಕನ್ನಡದ ಆಡುನುಡಿಯಲ್ಲಿ ನುಡಿಬೆರಕೆ ಅನಿವಾರ್ಯವೆಂಬುದನ್ನು ಒಪ್ಪುತ್ತವೆ.

ಈ ನುಡಿಬೆರಕೆಯಲ್ಲಿ ಕನ್ನಡದೊಡನೆ ಇಂಗ್ಲಿಶ್ ಬೆರಕೆಯಾಗುವುದೋ, ತಮಿಳು ಬೆರಕೆಯಾಗುವುದೋ, ತೆಲುಗು ಬೆರಕೆಯಾಗುವುದೋ ಅಥವಾ ಉರ್ದು ಬೆರಕೆಯಾಗುವುದೋ ಎಂಬುದು ಆಯಾ ಸಂದರ್ಭ ಸನ್ನಿವೇಶಗಳನ್ನು ಅವಲಂಬಿಸಿದೆ. ಕೈಲಾಸಂ ಈ ಎಲ್ಲ ಮಾದರಿಗಳನ್ನು ತಮ್ಮ 'ತಾವರೆಕೆರೆ' ಕೃತಿಯಲ್ಲಿ ಬಳಸಿ ನೋಡಿದ್ದಾರೆ. ಈ ಎಲ್ಲ ನುಡಿಬೆರಕೆಗಳಿಗೂ ಅವುಗಳದ್ದೇ ಆದ ಸಾಮಾಜಿಕ ಜವಾಬ್ದಾರಿ ಇದೆ ಎಂಬುದನ್ನು ಸದ್ಯ ನಾವು ಗಮನಿಸಬೇಕು. ಆದರೆ ಅದಕ್ಕಿಂತ ಭಿನ್ನವಾದ ಮತ್ತು ಅಷ್ಟೇ ಮುಖ್ಯವಾದ ಸಂಗತಿಯ ಕಡೆಗೆ ಗಮನ ಸೆಳೆಯಲು ಮುಂದಿನ ಟಿಪ್ಪಣಿಯಲ್ಲಿ ಪ್ರಯತ್ನಿಸಲಾಗಿದೆ.

ಕನ್ನಡದ ಆಡುರೂಪ ಮತ್ತು ಬರವಣಿಗೆಯ ರೂಪಗಳ ನಡುವೆ ಒಂದು ಬಗೆಯ ವಿಚಿತ್ರವಾದ ತುಯ್ತ ಏರ್ಪಟ್ಟಿದೆ. ಆಡುಮಾತಿನ ಹತ್ತಾರು ರೂಪಗಳು ಬಳಕೆಯಾಗುತ್ತವೆ. ಪ್ರಾದೇಶಿಕವಾದ ಉಪಭಾಷೆಗಳು, ಸಾಮಾಜಿಕ ಪ್ರಭೇದಗಳು ಮಾತ್ರವಲ್ಲದೆ ಹಲವಾರು ಬಗೆಯ ನುಡಿಬೆರಕೆಯ ಸಂದರ್ಭಗಳು ಆಡುಮಾತಿನಲ್ಲಿ ಸಹಜವೆಂಬಂತೆ ಬಳಕೆಯಾಗುತ್ತವೆ. ಆದರೆ ಬರೆಹದಲ್ಲಿ ಈ ಎಲ್ಲ ಸಾಧ್ಯತೆಗಳೂ ನಿರಾಕರಣಗೊಂಡು ಕೇವಲ ಪ್ರಮಾಣಿತ ರೂಪ ಮಾತ್ರ ಬಳಕೆಯಾಗುವದು. ಸೃಜನಶೀಲ ಕೃತಿಗಳಲ್ಲಿ ಸಕಾರಣವಾಗಿಯೇ ಲಿಖಿತರೂಪಕ್ಕೆ ಬರುವ ಆಡುಮಾತಿನ ಹತ್ತಾರು ಬಗೆಗಳನ್ನು ಹೊರತುಪಡಿಸಿದರೆ ಸಾಮಾನ್ಯವಾಗಿ ಬರೆವಣಿಗೆಗೆ ಬರುವುದು ಒಂದೇ ಒಂದು ರೂಪ.

ಅದು ಪ್ರಮಾಣಿತ ಕನ್ನಡ. ಏಕರೂಪತೆ ಕಂಡು ಬರುವಷ್ಟು, ಏಕರೂಪತೆ ಸಾಧ್ಯವಾಗುವಷ್ಟು ಕನ್ನಡದ ಪ್ರಮಾಣಿತರೂಪ ಸಿದ್ಧವಾಗಿದೆಯೇ ಎಂಬುದು ಪ್ರತ್ಯೇಕ ಪ್ರಶ್ನೆ. ಆದರೆ ಪ್ರಯತ್ನವಂತೂ ಆ ಕಡೆಗೆ ಇದೆ ಎಂಬುವಷ್ಟೇ ನಮಗಿಲ್ಲಿ ಮುಖ್ಯ.

ಮೇಲೆ ಹೇಳಿದ ಜೋಕುಗಳ ಪ್ರಸಂಗಗಳನ್ನು ಗಮನಿಸಿದರೆ ಆಡುಮಾತಿನಲ್ಲಿ ಶುದ್ಧಗನ್ನಡವನ್ನು ಅಸಾಧ್ಯವೆಂದು ಒಮ್ಮೆ ತಿಳಿದರೆ ನುಡಿಬೆರಕೆಯ ಕನ್ನಡ ನಿಜಗನ್ನಡವಲ್ಲವೆಂದು ಇನ್ನೊಮ್ಮೆ ತಿಳಿಯಲಾಗುತ್ತದೆ. ಅಂದರೆ ಆಡುಗನ್ನಡದ ನುಡಿಬೆರಕೆಯ ಬಗೆಗೆ ನಮ್ಮದೇ ಆದ ಅಪೇಕ್ಷೆಗಳು ಇವೆಯೆಂದಾಯಿತು. ಈ ಇಬ್ಬಂದಿ ನಿಲುವಿನಿಂದ ಉಂಟಾಗಿರುವ ಪರಿಣಾಮಗಳು ಗಮನಾರ್ಹ. ಕನ್ನಡವನ್ನು ಈಗ ಹತ್ತಾರು ವಿವಿಧ ವಲಯಗಳಲ್ಲಿ ಬಳಸುತ್ತಿದ್ದೇವೆ. ಹೊಸ ಜಗತ್ತಿನ ಅಪೇಕ್ಷೆಗಳಿಂದಾಗಿ ಹೀಗೆ ಕನ್ನಡವನ್ನು ಬೇರೆಬೇರೆ ವಲಯಗಳಲ್ಲಿ ಬಳಸುವುದು ಸಹಜವಾಗುತ್ತಿದೆ. ಆದರೆ ಹೀಗೆ ಬಳಸುವಲ್ಲಿ ಹಿಂಜರಿಕೆಯೂ ಇದೆ. ಹಲವಾರು ಶಾಸ್ತ್ರಗಳಲ್ಲಿ ಪರಿಣತರಾದವರು ತಮ್ಮ ಶಾಸ್ತ್ರವಿಷಯಗಳನ್ನು ಕನ್ನಡದಲ್ಲಿ ಹೇಳುವಾಗ ನುಡಿಬೆರಕೆಯ ಕನ್ನಡವನ್ನು ಬಳಸುವುದು ಸಹಜ. ಆದರೆ ಹಾಗೆ ಬಳಸುವುದಕ್ಕೆ ಅವರಿಗೆ ಹಿಂಜರಿಕೆಯುಂಟು. ಏಕೆಂದರೆ ತಮ್ಮ ಕನ್ನಡವನ್ನು ಯಾರಾದರೂ ಗೇಲಿಮಾಡಿಯಾರೆಂಬ ಅನಿಸಿಕೆ ಅವರನ್ನು ಕಾಡುತ್ತದೆ. ಹಾಗಾಗಿ ಅವರು ಹಲವು ನೆವಗಳನ್ನು ಹೇಳಿ ತಮ್ಮ ವಿಚಾರಗಳನ್ನು ಹೇಳಲು ಇಂಗ್ಲಿಶ್ ಅನ್ನು ಮೊರೆಹೋಗುತ್ತಾರೆ. ನುಡಿಬೆರಕೆಯ ಕನ್ನಡವನ್ನು ಬಳಸುವುದು ಸಹಜವೆಂದು ತಿಳಿದರೆ ಅವರಿಗೆ ತಮ್ಮ ವಿಚಾರಗಳನ್ನು ಕನ್ನಡದಲ್ಲಿ ಹೇಳಲು, ಚರ್ಚೆಗಳಲ್ಲಿ ಕನ್ನಡವನ್ನು ಬಳಸಲು ಸಹಜವಾಗಿಯೇ ಉಮೇದು ಬರುತ್ತದೆ. ಈ ಹುನ್ನಾರವನ್ನು ನಾವೀಗ ಒಪ್ಪಿಕೊಳ್ಳದಿದ್ದರೆ ನಷ್ಟ ನಿಜವಾಗಿಯೂ ಕನ್ನಡಕ್ಕೇ ಸರಿ.

ಹಾಗೆ ನೋಡಿದರೆ ಈ ನುಡಿಬೆರಕೆಯ ಕನ್ನಡವನ್ನು ಶಾಸ್ತ್ರವಿಷಯಗಳನ್ನು ಕುರಿತು ಮಾತನಾಡುವಾಗ ಅನೌಪಚಾರಿಕವಾಗಿ ಬಳಸಲಾಗುತ್ತಿದೆ. ವಿಜ್ಞಾನ, ತಂತ್ರಜ್ಞಾನದ ತರಗತಿಗಳಲ್ಲಿ ಉಪಾಧ್ಯಾಯರು ಸಂವಹನದ ತಂತ್ರವನ್ನಾಗಿ ಈ ನುಡಿಬೆರಕೆಯ ಕನ್ನಡವನ್ನು ಬಳಸುತ್ತಲೇ ಇದ್ದಾರೆ. ಇಂಗ್ಲಿಶ್‌ನಲ್ಲಿ ಹೇಳಿದ್ದನ್ನೇ ಮತ್ತೆ ಕನ್ನಡದಲ್ಲಿ ಅದೂ ಧಾರಾಳವಾಗಿ ಇಂಗ್ಲಿಶ್ ಬೆರೆತ ಕನ್ನಡದಲ್ಲಿ ಹೇಳುತ್ತಾರೆ. ಕಲಿಯುವವರೂ ತಮ್ಮ ತಮ್ಮಲ್ಲೇ ನಡೆಸುವ ಶಾಸ್ತ್ರವಿಷಯಕ ಮಾತುಕತೆಗಳಲ್ಲಿ, ವಿಚಾರ ವಿನಿಮಯಗಳಲ್ಲಿ ಕನ್ನಡವನ್ನು ಬಳಸುತ್ತಲೇ ಇದ್ದಾರೆ. ಆದರೆ ಇಂಥ ಬಳಕೆಗಳಿಗೆ ಅಧಿಕೃತತೆಯನ್ನು ಒದಗಿಸಿಕೊಡಬೇಕಾಗಿದೆ.

ಬರವಣಿಗೆಯ ಕನ್ನಡದಲ್ಲಿಯೂ ನುಡಿಬೆರಕೆ ಎಂಬುದು ಇದ್ದೇ ಇದೆ. ಆದರೆ ಅದನ್ನು ನಾವು ನುಡಿಬೆರಕೆ ಎಂದು ಗುರುತಿಸುವುದಿಲ್ಲ. ಹಲವಾರು ಶಾಸ್ತ್ರವಿಷಯಕ ಬರವಣಿಗೆಯನ್ನು ಗಮನಿಸಿದರೆ ಅವುಗಳಲ್ಲಿ ನೂರಕ್ಕೆ ಐವತ್ತಕ್ಕೂ ಮಿಗಿಲಾಗಿ ಸಂಸ್ಕೃತ ಪದ, ಪದರಚನೆಗಳು ಧಾರಾಳವಾಗಿ ಬಳಕೆಯಾಗುತ್ತಿರುತ್ತವೆ. ಹೀಗೆ ಬಳಕೆಯಾಗುವುದೆಂದು ಹೇಳಿದ್ದರಲ್ಲಿ ಹಾಗೂ ಈ ಬಳಕೆಯ ಶೇಕಡಾವಾರು ಪ್ರಮಾಣದಲ್ಲಿ ಉತ್ಪ್ರೇಕ್ಷೆ ಇಲ್ಲ. ಆದರೆ ಆ ಕನ್ನಡವನ್ನು ನಾವು ಪ್ರಮಾಣಿತ ಕನ್ನಡವೆಂದು ಒಪ್ಪಿ ಬಳಸುತ್ತಿದ್ದೇವೆ.

ಮತ್ತಾವುದೇ ಭಾಷೆಯೊಡನೆ ಕನ್ನಡ ಬರೆಯುವುದನ್ನು ಮಾತ್ರ ಕಲಬೆರಕೆಯೆಂದು ತಟ್ಟನೆ ಗುರುತಿಸಿಬಿಡುತ್ತೇವೆ.

ಕನ್ನಡದ ಆಡುಮಾತಿನಲ್ಲಿ ಅನೌಪಚಾರಿಕವಾಗಿರುವ ಬಗೆಯನ್ನು ಹೆಚ್ಚು ಅಧಿಕೃತಗೊಳಿಸುವ ಮೂಲಕ ಕನ್ನಡದ ವಿವಿಧ ವಲಯದ ಬಳಕೆಯನ್ನು ಹೆಚ್ಚು ಮಾಡಲು ಸಾಧ್ಯವಿರುವಂತೆ ನುಡಿಬೆರಕೆಯ ಅವಕಾಶಗಳನ್ನು ಬರವಣಿಗೆಯ ಕನ್ನಡದಲ್ಲಿ ವಿಸ್ತರಿಸುವುದರಿಂದ ಕನ್ನಡದ ಬಳಕೆಯ ಸಾಧ್ಯತೆಗಳನ್ನು ಹೆಚ್ಚಿಸುವ ಅವಕಾಶಗಳಿವೆ. ಸಂಸ್ಕೃತ ನುಡಿಬೆರಕೆಗೆ ಒಂದು ವಿಶೇಷ ಸೌಲಭ್ಯವಿದೆ. ನಾವು ಬಳಸುವ ಕನ್ನಡದ ಲಿಪಿ ಕನ್ನಡ ಬರೆಯಲು ಮಾತ್ರ ರೂಪಗೊಂಡುದಲ್ಲ. ಹಾಗೆ ನೋಡಿದರೆ ಸಂಸ್ಕೃತವನ್ನು ಕನ್ನಡದಲ್ಲಿ ಬರೆಯಲು ಈ ಲಿಪಿ ಹೆಚ್ಚು ಅವಕಾಶಗಳನ್ನು ಒದಗಿಸಿಕೊಡುತ್ತದೆ. ಒಂದೆರಡು ಅಪವಾದಗಳನ್ನು ಹೊರತು ಪಡಿಸಿದರೆ ಸಂಸ್ಕೃತವನ್ನು ಕನ್ನಡ ಲಿಪಿಯಲ್ಲಿ ಯಾವ ತೊಂದರೆಯೂ ಇಲ್ಲದಂತೆ ಬರೆದು ಓದಬಹುದು. ಕನ್ನಡ ಬರೆವಣಿಗೆಯಲ್ಲಿ ಅನ್ಯಭಾಷೆಯ ನುಡಿಬೆರಕೆಯನ್ನು ಒಪ್ಪುವುದಾದರೆ ಇದೇ ಕ್ರಮವನ್ನು ಅನುಸರಿಸಬೇಕಾಗುತ್ತದೆ. ಅಂದರೆ ಕನ್ನಡ ಲಿಪಿಯಲ್ಲಿ ಅನ್ಯಭಾಷೆಯ ರೂಪಗಳನ್ನು ಅದರಲ್ಲೂ ಇಂಗ್ಲಿಶ್‌ನ ರೂಪಗಳನ್ನು ಬರೆಯಲು ತಕ್ಕ ಸಿದ್ಧತೆಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ನಮ್ಮ ಪ್ರತಿಕೆಗಳ ಭಾಷೆಯಲ್ಲಿ ನೂರಾರು ಇಂಗ್ಲಿಶ್‌ನ ನಾಮರೂಪಗಳು ಹೀಗೆ ಕನ್ನಡ ಲಿಪಿಯಲ್ಲಿ ಲಿಖಿತವಾಗುತ್ತಿವೆ. ಇದನ್ನು ಇನ್ನಿತರ ವಲಯಗಳಿಗೂ ವಿಸ್ತರಿಸಬೇಕಾಗುತ್ತದೆ. ಲೇಖನಕ್ಕೆ ಅನಸ್ರವಾದ ನಿಯಮಗಳನ್ನು ರಚಿಸಿಕೊಳ್ಳಬೇಕಾಗುತ್ತದೆ.

ಶಾಸ್ತ್ರವಿಷಯಕ ಬರೆಹಗಳಲ್ಲಿ ಪಾರಿಭಾಷಿಕ ಪದಗಳನ್ನು ಅನುವಾದಿಸಿಕೊಳ್ಳುವುದರ ಬದಲು ಅವುಗಳನ್ನು ಮೂಲದ ರೂಪದಲ್ಲಿಯೇ ಉಳಿಸಿಕೊಳ್ಳುವ ಕ್ರಮವನ್ನು ಈಗಾಗಲೇ ಹಲವರು ಪ್ರತಿಪಾದಿಸುತ್ತಲೇ ಬಂದಿದ್ದಾರೆ. ಪಾರಿಭಾಷಿಕ ಪದಗಳಿಗೆ ಅನ್ವಯಿಸುವ ಈ ಮಾತನ್ನು ಸಂಕಥನದ ನಿಯೋಗಾತ್ಮಕ ಪದಗಳಿಗೂ ಅನ್ವಯಿಸಿದರೆ ಆಗ ಕನ್ನಡದ ಬಳಕೆ ಇನ್ನೂ ಶಕ್ತಗೊಳ್ಳುತ್ತದೆ. ಇದನ್ನು ಬಿಟ್ಟು ಸಂಸ್ಕೃತ ಕೇಂದ್ರಿತ ನುಡಿಬೆರಕೆಯನ್ನು ಮಾತ್ರ ಅವಲಂಬಿಸಿದ ಪ್ರಮಾಣಿತ ಮಾದರಿಗೆ ಕಟ್ಟು ಬಿದ್ದರೆ ಆಗ ಬರವಣಿಗೆಯ ಕನ್ನಡವು ಸಂವಹನದ ಕೊರತೆಯಿಂದ ನರಳುತ್ತದೆ. ಏಕೆಂದರೆ ಅನೌಪಚಾರಿಕವಾದ ಬಳಕೆಯಲ್ಲಿ ಕನ್ನಡ ಇನ್ನಿತರ ಬಗೆಯ ನುಡಿಬೆರಕೆಗಳಿಗೆ ಒಗ್ಗಿಕೊಳ್ಳುತ್ತ ಹೋದಂತೆ ಆ ಕನ್ನಡವನ್ನು ಇಂಗ್ಲಿಶ್ ಮೂಲದ ಸಂಕಥನಗಳ ಗ್ರಹಿಕೆಗೆ ನೆರವಾಗುವಮಟ್ಟಿಗೆ ಬಳಸಿಕೊಳ್ಳಲಾಗುತ್ತಿದೆ. ತರಗತಿಗಳಲ್ಲಿ ಅಧ್ಯಾಪಕರು ಇದೇ ತಂತ್ರವನ್ನು ಬಳಸುತ್ತಾರೆ. ಆದರೆ ಅಧಿಕೃತವಾಗಿ ಇಂಗ್ಲಿಶ್ ಸಂಕಥನ ಮಾತ್ರ ಉಳಿದುಕೊಳ್ಳುತ್ತದೆ. ಕನ್ನಡವು ಸದಾ ಸಂವಹನದ ಕೊರತೆಯನ್ನು ತುಂಬಲು ನೆರವಾಗುವ ಭಾಷೆಯಾಗಿ ಮಾತ್ರ ಬಳಕೆಯಾಗುತ್ತದೆ. ಕನ್ನಡದಂತಹ ಭಾಷೆಗೆ ಇದಿಷ್ಟೇ ಕೆಲಸವಾಗುವ ದಿನಗಳು ಬಂದರೆ ಅದಕ್ಕಿಂತ ದುರ್ದೈವ ಬೇರೊಂದಿಲ್ಲ.

## ಹೆಸರು: ತಾತ್ತ್ವಿಕತೆ

ವ್ಯಕ್ತಿ, ಪ್ರಾಣಿ, ಸಸ್ಯ ಮತ್ತು ವಸ್ತು ಪರಿಸರದ ಪ್ರತಿ ಸದಸ್ಯರಿಗೂ ಹೆಸರಿರುತ್ತದೆ. ಕೆಲವೊಮ್ಮೆ ಈ ಹೆಸರುಗಳು ಒಂದೊಂದು ಗುಂಪನ್ನು ಪ್ರತಿನಿಧಿಸಬಹುದು (ಮರ, ಹುಲಿ,ಬೆಟ್ಟ ಎಂಬಂತೆ)ಅಥವಾ ಒಂದು ಪ್ರತ್ಯೇಕ ಘಟಕವನ್ನು ಸೂಚಿಸಬಹುದು (ಜೋಳದರಾಶಿ ಗುಡ್ಡ, ಯಗಚಿ ಎಂಬಂತೆ). ಹೆಸರು ಏನೇ ಇರಲಿ; ಹೆಸರಿಸಿದ್ದು ಮಾನವರು. ಈ ಹೆಸರುಗಳು ವಾಸ್ತವವಾಗಿ ಭಾಷಿಕ ರಚನೆಗಳು. ಇತರ ಭಾಷಿಕ ರಚನೆಗಳಿಗೆ ಅನ್ವಯವಾಗುವ ನಿಯಮಗಳು ಈ ರಚನೆಗಳಿಗೂ ಅನ್ವಯವಾಗುತ್ತವೆ. ಉದಾ. ಆಯಾ ಭಾಷೆಯ ಧ್ವನಿ ಸಂಯೋಜನೆಯ ನಿಯಮಗಳನ್ನು ಹೆಸರುಗಳು ಉಲ್ಲಂಘಿಸಲಾರವು. ಅಂದರೆ ಹೆಸರುಗಳು ವಾಸ್ತವವಾಗಿ ಪದಕೋಶದ ಅಂಗಗಳಾಗಿರುತ್ತವೆ.

ಪದಗಳಿಗೆ ಅರ್ಥವಿರುತ್ತದೆ. ಈ ಪದ ಪದಾರ್ಥಗಳ ಸಂಬಂಧವನ್ನು ಯಾದೃಚ್ಛಿಕವೆಂದು ಭಾಷಾಶಾಸ್ತ್ರ ಹೇಳುತ್ತದೆ. ಅಂದರೆ ಪದದ ಧ್ವನಿಗಳು ಮತ್ತು ಅವುಗಳ ರಾಚನಿಕ ಸಂಬಂಧಕ್ಕೂ, ಆ ಪದದ ಅರ್ಥಕ್ಕೂ ಯಾವ ಬಗೆಯ ತಾರ್ಕಿಕ ಸಂಬಂಧವೂ ಇರುವುದಿಲ್ಲವೆಂದು ತಿಳಿಯಬೇಕಾಗುತ್ತದೆ. ಈ ವ್ಯಾಖ್ಯಾನ ಹೆಸರುಗಳಿಗೂ ಒಪ್ಪುವುದೋ?

ಸೂರ್ಯ, ಸೂರ, ಆದಿತ್ಯ, ಐತ, ರವಿ, ಭಾನು ಮುಂತಾದ ಹೆಸರುಗಳನ್ನು ಹೊಂದಿರುವ ವ್ಯಕ್ತಿಗಳು ಬೇರೆ ಬೇರೆ ಇರುವುದು ಸಾಧ್ಯ. ಈ ಎಲ್ಲ ಪದಗಳ ವ್ಯಾಚ್ಯಾರ್ಥ ಒಂದೇ ಆಗಿದ್ದರೂ ಆ ಹೆಸರುಗಳ ವ್ಯಕ್ತಿಗಳು ಬೇರೆ ಬೇರೆ. ಅಷ್ಟೇಕೆ ಆದಿತ್ಯ ಎಂಬ ಹೆಸರಿನ ವ್ಯಕ್ತಿಗಳೇ ಹಲವರು ಇರಬಹುದು. ಆದ್ದರಿಂದ ಹೆಸರುಗಳಿಗೆ ಎರಡು ಅರ್ಥದ ನೆಲೆಗಳನ್ನು ಕಲ್ಪಿಸಬೇಕಾಗುತ್ತದೆ. ಒಂದು ಅದರ ಪದಾರ್ಥ. ಇನ್ನೊಂದು ಅದರ ನಾಮಾರ್ಥ. ಕೆಲವೊಮ್ಮೆ ಪದಾರ್ಥವೊಂದು ಇರುವಂತೆ ಅದು ಪುರಾಣದ ವ್ಯಕ್ತಿಯ ಹೆಸರೂ ಆಗಿರುತ್ತದೆ. ಈಗ ಆ ಪದ ಸಮಕಾಲೀನ ವ್ಯಕ್ತಿಯ ಹೆಸರು ಆದಾಗ ಅದಕ್ಕೆ ಮೂರು ಅರ್ಥಚಾಚುಗಳು ಲಭಿಸಿದಂತಾಯಿತು. ಪ್ರಸಂಗಾನುಸಾರ ಆ ಅರ್ಥಚಾಚುಗಳಲ್ಲಿ ಯುಕ್ತವಾದುದನ್ನು ಆಯ್ಕೆ ಮಾಡಿಕೊಳ್ಳುತ್ತೇವೆ.

ಈಗ ನಮ್ಮ ಮೂಲ ಸಮಸ್ಯೆಗೆ ಹೋಗೋಣ. ಹೆಸರಿಗೂ ಅದರ ಧ್ವನಿಸ್ತರಕ್ಕೂ ಅದನ್ನು ಹೊಂದಿರುವ ವ್ಯಕ್ತಿಗೂ ಯಾವ ಸಂಬಂಧವಿದೆ? ಕನಿಷ್ಠ ಸಂಬಂಧ

ನಿರ್ದೇಶಾತ್ಮಕವಾದುದು. A ಎಂಬ ವ್ಯಕ್ತಿಗೆ X ಎಂಬ ಹೆಸರಿದೆಯೆನ್ನಿ. X ಯಾವಾಗಲೂ A ಯನ್ನು ನಿರ್ದೇಶಿಸುತ್ತದೆ. ಈ ತಿಳುವಳಿಕೆಗೆ ಕಾಲದೇಶಗಳ ಮಿತಿಯಿದೆ. ಕಾಲದೇಶಗಳು ಬದಲಾದರೆ X ನಿರ್ದೇಶಿಸುವ ವ್ಯಕ್ತಿ A ಮಾತ್ರ ಆಗಬೇಕಿಲ್ಲ. ಈ ನಿಯಮದ ಪಾಲನೆ ಮತ್ತು ಉಲ್ಲಂಘನೆಗೆ ಖಚಿತವಾದ ಶರತ್ತುಗಳು ಇರುತ್ತವೆ.

ಹೆಸರು ವ್ಯಕ್ತಿಗೆ ನಿರ್ದೇಶಕವಾಗಿ ಮಾತ್ರ ಕೆಲಸ ನಿರ್ವಹಿಸುವುದೋ ಅಥವಾ ಕೆಲವು ಲಕ್ಷಣಗಳನ್ನು ಸೂಚಿಸುತ್ತದೋ ಎನ್ನುವುದೊಂದು ಪ್ರಶ್ನೆ. ಹಳೆಯ ನಗೆಚಾಟಿಕೆಗಳು ವ್ಯಕ್ತಿಗೂ ಅವರ ಹೆಸರಿಗೂ ಇಂಥ ಲಕ್ಷಣ ಸೂಚಕ ಸಂಬಂಧಗಳಿಲ್ಲವೆಂದೇ ತಿಳಿದಿವೆ. ಹೆಸರು ಭೀಮ ನೋಡಲು ಹಂಚಿಕಡ್ಡಿ; ಕ್ಷೀರಸಾಗರಶಯನನ ಮನೆಯಲ್ಲಿ ಕುಡಿಯಲು ಬೊಗಸೆ ಮಜ್ಜಿಗೆ ಇಲ್ಲ; ಸಂಪತ್ತುವಿನ ಮನೆಯಲ್ಲಿ ಊಟಕ್ಕೂ ತತ್ವಾರ ಇತ್ಯಾದಿ ನುಡಿಗಳನ್ನು ಗಮನಿಸಿ. ಈ ಲಕ್ಷಣ ಸಂಬಂಧ ಇಲ್ಲದಿದ್ದರೆ ಕೆಲವು ಹೆಸರುಗಳನ್ನು ಬಳಸಲು ಜನರು ಹಿಂಜರಿಯುವುದೇಕೆ? ಕೀಚಕ, ದುಶ್ಶಾಸನ, ಶಕುನಿ, ಮಂಥರೆ ಮುಂತಾದ ಹೆಸರುಗಳು ಬಳಕೆಯಲ್ಲಿರುವ ಸಾಧ್ಯತೆಗಳು ಕಡಿಮೆ. ಎಂದರೆ ಹೆಸರುಗಳು ಕೆಲವೊಮ್ಮೆ ಲಕ್ಷಣಸೂಚಕ ವಿವಕ್ಷೆಯಿಂದ ಬಳಕೆಯಾಗುತ್ತವೆ ಎಂದಾಯ್ತು. ಇವೆರಡು ನಿದರ್ಶನಗಳು ಸಮುದಾಯದ ನಂಬಿಕೆಯನ್ನು ಆಧರಿಸಿವೆ. ಹಾಗಿಲ್ಲದೆಯೂ ಹೆಸರುಗಳು ಕನಿಷ್ಠ ಲಿಂಗಸೂಚಕಗಳಾಗಿ ಕೆಲಸ ಮಾಡುವುದುಂಟು. ತಿಮ್ಮ ಎಂದರೆ ಗಂಡಸು, ತಿಮ್ಮಿ ಎಂದರೆ ಹೆಂಗಸು; ಸೋಫಿಯಾ, ಸೋನಿಯಾ, ಅನಾ ಮುಂತಾದವರು ಹೆಂಗಸರು; ಜಾನ್, ಬರ್ನಾಡ್, ಎಡ್ವರ್ಡ್, ವಿಲಿಯಂ ಮುಂತಾದವರು ಗಂಡಸರು. ಹೀಗೆ ತಿಳಿಯಲು ಆ ಹೆಸರುಗಳಿಂದ ವ್ಯಕ್ತಿಗಳನ್ನು ನಾವು 'ನೋಡಿರ' ಬೇಕೆಂದಿಲ್ಲ. ಆ ಹೆಸರುಗಳಲ್ಲೇ, ಅವುಗಳ ಧ್ವನಿಯೋಜನೆಯಲ್ಲೇ ಅವಶ್ಯ ಸೂಚನೆಯಿದೆ. ಎಲ್ಲ ಭಾಷೆಗಳಲ್ಲಿ ಇಂಥ ಸಾಧ್ಯತೆಗಳಿರಬಹುದಾದರೂ ಈ ಭಾಷೆ ತೀರಾ ಅಪರಿಚಿತವಾದರೆ ಆ ಸಾಧ್ಯತೆ ನಮಗೆ ಗೊತ್ತಾಗದಿರಬಹುದು. ಒಂದು ಚೈನಿಸ್ ಹೆಸರು ಕೇಳಿದ ಕೂಡಲೇ ಅದು ಹೆಂಗಸೇ ಅಥವಾ ಗಂಡಸೇ ಎಂಬುದು ಗೊತ್ತಾಗಲಾರದು. ಆದರೆ ಅಂಥ ಸೂಚನೆ ಆ ಹೆಸರಿನಲ್ಲಿ ಅದರ ಧ್ವನಿರಚನೆಯಲ್ಲಿ ಇರುವುದನ್ನು ನಿರಾಕರಿಸಲು ಬಾರದು. ಎಂದರೇನಾಯ್ತು? ಹೆಸರುಗಳಿಗೆ ಲಕ್ಷಣಸೂಚಕ ಸ್ತರದಲ್ಲಿಯೂ ಜವಾಬ್ದಾರಿಯಿದೆ ಎಂಬುದನ್ನು ಒಪ್ಪಬೇಕಾಗುತ್ತದೆ.

ಪದ_ಪದಾರ್ಥಗಳ ಸಂಬಂಧಗಳನ್ನು ಚರ್ಚಿಸುವ ತಾರ್ಕಿಕರು 'ಹೆಸರು' ಮತ್ತು 'ವ್ಯಾಖ್ಯೆ' ಎಂಬ ಎರಡು ಪರಿಕಲ್ಪನೆಗಳನ್ನು ಮುಂದಿಡುತ್ತಾರೆ. ಸಾಮಾನ್ಯವಾಗಿ 'ಹೆಸರು' ಎಂಬ ಪದದ ವ್ಯಾಪ್ತಿಯಲ್ಲಿ ವ್ಯಕ್ತಿನಾಮಗಳಲ್ಲದೆ ಇನ್ನಿತರ ನಾಮಪದಗಳೂ ಸೇರುತ್ತವೆ. ಬೆಟ್ಟ, ಮಾವು, ನದಿ, ಬೇವು, ಎಲೆ ಇವೆಲ್ಲವೂ ಹೆಸರುಗಳೇನು? ಹಾಗಿದ್ದಲ್ಲಿ ಆಯಾ ಪದಗಳು ಯಾವ ವಸ್ತು ಸಂಕೀರ್ಣವನ್ನು ಸೂಚಿಸುತ್ತವೊ ಆ ವಸ್ತುವನ್ನು ವ್ಯಾಖ್ಯಾನ ಮಾಡುತ್ತವೆಂದು ತಿಳಿಯಬೇಕಾಗುತ್ತದೆ. ಏಕೆಂದರೆ ಈ ಪದಗಳಿಗೆ ಕೆಲವು ಲಕ್ಷಣಗಳನ್ನು ಪಟ್ಟಿಮಾಡಿ ಹೇಳಲು ಸಾಧ್ಯ, ಮತ್ತು ಆ ಲಕ್ಷಣಗಳು ಸೂಚಿತವಸ್ತುಗಳಲ್ಲಿ ಇರಬೇಕೆಂದು

ಒಂದು ಶರತ್ತು. ಆದರೆ ವ್ಯಕ್ತಿನಾಮಗಳಿಗೆ ಬಂದಾಗ ಈ ವ್ಯಾಖ್ಯೆಯ ನೆಲೆ ಮಾಯವಾಗುತ್ತದೆ. ವ್ಯಕ್ತಿ ಮತ್ತು ಹೆಸರು ಬೆಸೆದುಕೊಳ್ಳುವುದು ವ್ಯಾಖ್ಯಾನ ಪೂರ್ವನೆಲೆ. 'ಹೆಸರಿಸಿ'ದ ಅನಂತರ ವ್ಯಾಖ್ಯೆ, ಅವಶ್ಯವಿದ್ದಲ್ಲಿ, ಮೊದಲಾಗಬಹುದು.

ಹೆಸರು ಮತ್ತು ವ್ಯಕ್ತಿ ಇವುಗಳಲ್ಲಿ ಅನುಪೂರ್ವಿ ಯಾವುದು? ಸಾಮಾನ್ಯ ತಿಳುವಳಿಕೆಯಂತೆ ವ್ಯಕ್ತಿ-> ಹೆಸರು ಎಂಬುದೇ ಅನುಪೂರ್ವಿ. ಇದನ್ನು ನಿರಾಕರಿಸುವಂತಿಲ್ಲ. ಆದರೆ ಸಮಾನಾಂತರವಾಗಿ ಹೆಸರು-> ವ್ಯಕ್ತಿ ಎಂಬ ಅನುಪೂರ್ವಿಯೂ ಇರುವುದನ್ನು ಗಮನಿಸಬೇಕು. ಹೆಸರು ಸಿದ್ಧಗೊಂಡು ಅನಂತರ ಆ ಹೆಸರನ್ನು ಹೊಂದಿದ ವ್ಯಕ್ತಿಯ ಚಹರೆಗಳನ್ನು ವ್ಯಾಖ್ಯಾನಿಸುವ ಪ್ರಕ್ರಿಯೆ ಸಂಸ್ಕೃತಿಗೆ ಹೊಸದೇನಲ್ಲ. ಅಂದರೆ ವ್ಯಕ್ತಿಯ ಚರಿತ್ರೆ ಆ ಹೆಸರಿನಿಂದ ಮೊದಲಾಗುತ್ತದೆ. ಧಾರ್ಮಿಕ ಆವರಣದಲ್ಲಿ ಹಲವು ದೇವತೆಗಳಿಗೆ ನೂರಾರು ಹೆಸರುಗಳಿರುತ್ತವೆ. ಸಹಸ್ರನಾಮಾವಳಿ ಎಂಬ ಕಲ್ಪನೆಯನ್ನೇ ನೋಡಿ. ಅಲ್ಲಿನ ಪ್ರತಿ ಹೆಸರೂ ನಿರ್ದೇಶಾತ್ಮಕವಾಗಿರದೆ, ವರ್ಣನಾತ್ಮಕವಾಗಿರುತ್ತದೆ. ಆ ಹೆಸರುಗಳ ವ್ಯಾಖ್ಯೆ ಬಹು ದೀರ್ಘವಾದ ಸಂಕಥನವನ್ನು ನಿರ್ಮಿಸುತ್ತದೆ. 'ತ್ರಿಪುರಾರಿ', 'ಮಧುಸೂದನ' 'ಸಹಸ್ರಾಕ್ಷ', 'ವಹ್ನಿಕೇಶಿ', 'ಅಂಬುಜನಾಭ' ಮುಂತಾದವು ಹೆಸರುಗಳಾದರೆ ಅವು ವ್ಯಾಖ್ಯಾನಗಳಾಗಿ ಕೆಲಸ ಮಾಡುತ್ತವೆ; ವಿವಿಧ ಸಂಕಥನಗಳನ್ನು ಪ್ರತಿನಿಧಿಸುತ್ತವೆ.

ವರ್ಣನಾತ್ಮಕ ಹೆಸರುಗಳಿಗೆ ಆಧುನಿಕ ಪ್ರವೃತ್ತಿಗಳಿವೆ. ವ್ಯಕ್ತಿನಾಮದ ವಿಸ್ತರಣೆಯಾಗಿ ಅಥವಾ ವ್ಯಕ್ತಿನಾಮಗಳಿಗೆ ಪರ್ಯಾಯವಾಗಿ ಬಳಕೆಯಾಗುವ ಕುಟುಂಬನಾಮ, ಪದನಾಮ ಮತ್ತು ಅಡ್ಡಹೆಸರುಗಳು ವರ್ಣಿಸುತ್ತವೆ. ವೃತ್ತಿನಾಮಗಳೂ ಈ ಗುಂಪಿಗೆ ಸೇರುತ್ತವೆ. ಕೆಲವೊಮ್ಮೆ ವ್ಯಕ್ತಿ ಮತ್ತು ಹೆಸರುಗಳ ನಡುವಣ ಯಾದೃಚ್ಛಿಕತೆಯನ್ನು ನಿವಾರಿಸಲು ಈ ವಿಸ್ತರಣೆಗಳು ಅಥವಾ ಪರ್ಯಾಯನಾಮಗಳು ನೆರವಾಗುತ್ತವೆ. ಆದರೆ ಅಂಕಿತನಾಮಗಳ ಗಣದಲ್ಲಿ ಅಮಿತ ಸಂಖ್ಯೆಯ ಹೆಸರುಗಳಿದ್ದರೆ ವರ್ಣನಾತ್ಮಕ ವಿಸ್ತರಣೆಗಳಲ್ಲಿ ಬಳಕೆಯಾಗುವ ಹೆಸರುಗಳ ಸಂಖ್ಯೆ ಸೀಮಿತವಾಗಿದೆ. ಎಂದರೆ ಈ ಸೀಮಿತ ಸಂಖ್ಯೆಯ ಹೆಸರುಗಳು ವ್ಯಕ್ತಿಯನ್ನು ನಿರ್ದೇಶಿಸುವ ಕೆಲಸವನ್ನು ಎಷ್ಟು ಖಚಿತವಾಗಿ ನಿರ್ವಹಿಸಬಲ್ಲವೆಂಬುದು ಒಂದು ಪ್ರಶ್ನೆಯಾಗಿಯೇ ಉಳಿಯುತ್ತದೆ.

ಅ. ಹೆಸರುಗಳು ಕೇವಲ ಅಭಿಧಾರ್ಥದ ನೆಲೆಯಲ್ಲಿ ಕೆಲಸ ಮಾಡುತ್ತವೆಂದು ತಿಳಿಯುವುದರಲ್ಲಿ ಸಮಸ್ಯೆಗಳಿವೆ.

1. ರಾಮನೆಂದರೆ ರಾಮ 2. ರಾಮನೆಂದರೆ ದಶರಥ ಎಂಬ ಎರಡು ಪ್ರಸ್ತಾವಗಳನ್ನು ಗಮನಿಸಿ. ಮೊದಲವಾಕ್ಯ ಪದದ ಹಂತ ಮತ್ತು ಪದಾರ್ಥದ ಹಂತದಲ್ಲಿ ನಿಜ. ಆದರೆ ಎರಡನೇ ವಾಕ್ಯದಲ್ಲಿ ಪದದ ಹಂತದಲ್ಲಿ ಸತ್ಯವಿಲ್ಲ; ಪದಾರ್ಥದ ಹಂತದಲ್ಲಿ ಲೋಕಸತ್ಯವಿರುವುದು. ಅಂದರೆ ಹೆಸರುಗಳು ಯಾವಾಗಲೂ ವಸ್ತು ಅರ್ಥಸೂಚಕಗಳಾಗಿಯೇ ಕೆಲಸ ಮಾಡುತ್ತವೆಂದು ಹೇಳಲು ಬರುವುದಿಲ್ಲ.

ಆ. ಹೆಸರೊಂದನ್ನು ಹೇಳಿ ಆ ಹೆಸರಿನ ವ್ಯಕ್ತಿ ಇದ್ದರೋ ಇಲ್ಲವೋ ಎಂಬುದನ್ನು ವಿವರಿಸುವ ವಾಕ್ಯಗಳನ್ನು ಗಮನಿಸಿ.

1. ಪಂಪ ಜೀವಿಸಿದ್ದನು
2. ಕವಿಕಾಮ ಇರಲೇ ಇಲ್ಲ.

ಹೆಸರಿನ ಅಸ್ತಿತ್ವ ಆ ಹೆಸರನ್ನು ಹೊಂದಿದ್ದ ವ್ಯಕ್ತಿಯ ಅಸ್ತಿತ್ವದೊಡನೆ ಯಾವ ಸಂಬಂಧವನ್ನೂ ಹೊಂದಿಲ್ಲ. ಕಾದಂಬರಿಗಳಲ್ಲಿ ಬರುವ ಹೆಸರುಗಳನ್ನು ನಿದರ್ಶನಗಳನ್ನಾಗಿ ನೋಡಬಹುದು. ನಮ್ಮ ಭಾಷಿಕ ವ್ಯವಹಾರಗಳಲ್ಲಿ ಬರುವ ಹೆಸರುಗಳು ವ್ಯಕ್ತಿಸಹಿತ ಪರಿಕಲ್ಪನೆಗಳಾಗಿಯೇ ಬಳಕೆಯಾಗುತ್ತವೆ. ಆದರೆ ಆ ಹೆಸರುಗಳು ಯಾರನ್ನಾದರೂ ಖಚಿತವಾಗಿ ಸೂಚಿಸುವುದು ಲೋಕಸತ್ಯದ ದೃಷ್ಟಿಯಿಂದ ಅಸಾಧ್ಯ.

**ಹೆಸರು: ಸಾಂಸ್ಕೃತಿಕ ನೆಲೆಗಳು**

ವ್ಯಕ್ತಿಗಳು ಮತ್ತು ಹೆಸರುಗಳು ಬೇರೆ ಬೇರೆ ವಲಯಗಳು. ವ್ಯಕ್ತಿಗೆ ಕನಿಷ್ಠ ಒಂದು ಹೆಸರು ಆಯ್ಕೆಯಾಗುತ್ತದೆ. ಆದರೆ ಎಲ್ಲ ಹೆಸರುಗಳಿಗೂ ವ್ಯಕ್ತಿಯೊಬ್ಬರು ವಾಸ್ತವವಾಗಿ ಇರಲೇ ಬೇಕೆಂದಿಲ್ಲ. ಪುರಾಣಗಳ ಹೆಸರುಗಳು, ಇಂದಿನ ಸಾಹಿತ್ಯ ಕೃತಿಗಳ ಹೆಸರುಗಳು ಹೀಗೆ ಪ್ರತಿನಿಧಿಸುವ ವ್ಯಕ್ತಿಗಳನ್ನು ಹೊಂದಿರುವುದು ಅವಶ್ಯವಿಲ್ಲ. ವ್ಯಕ್ತಿ ಮತ್ತು ಹೆಸರು ಬೆಸೆದುಕೊಳ್ಳುವ ಸಂದರ್ಭ ಸಂಸ್ಕೃತಿಗಳಲ್ಲಿ ಬಹುಮುಖ್ಯ ಘಟನೆ. ಮಾನವಶಾಸ್ತ್ರಜ್ಞರು ಹೆಸರಿಡುವ ಪ್ರಸಂಗವನ್ನು ಹೊಸ ಸದಸ್ಯರಿಗೆ ಅಧಿಕೃತ ಮನ್ನಣೆ ನೀಡುವ ಸಂದರ್ಭವೆಂದು ಗುರುತಿಸುತ್ತಾರೆ. ಮುಂದುವರೆದು ವ್ಯಕ್ತಿಯನ್ನು ಸಮುದಾಯ ತನ್ನ ಹಿಡಿತಕ್ಕೆ ತೆಗೆದುಕೊಳ್ಳುವ ಘಟನೆ ಎನ್ನುತ್ತಾರೆ. ಹೆಸರಿಟ್ಟ ಕೂಡಲೇ ಸಮುದಾಯಕ್ಕೆ ವ್ಯಕ್ತಿಯ ಮೇಲೆ ಅಧಿಪತ್ಯ ಸ್ಥಾಪಿಸಲು ಒಂದು ಉಪಕರಣ ದೊರೆತಂತೆ. ಬುಡಕಟ್ಟುಗಳಲ್ಲಿ ಈ ಅಂಶ ಪ್ರಧಾನವಾಗಿದೆ. ವ್ಯಕ್ತಿಗೆ ಹೆಸರಿನಿಂದಾಗಿ ಇರುವ ಈ ಬಂಧವನ್ನು ಮುರಿಯಲೆಂದೇ ನಿಜನಾಮಗಳನ್ನು ಎಷ್ಟೋ ಬುಡಕಟ್ಟುಗಳಲ್ಲಿ ಗೋಪ್ಯವಾಗಿ ಇರಿಸಲಾಗುವುದು.

ಪೌರಸಮಾಜಗಳಲ್ಲಿ ಹೆಸರುಗಳು ವ್ಯಕ್ತಿಯ ಜೀವನದ ಉದ್ದಕ್ಕೂ ಅಧಿಕೃತತೆಯನ್ನು ಒದಗಿಸಲು ಬಳಕೆಯಾಗುತ್ತದೆ. ಆಡಳಿತದಲ್ಲಿ, ಶಾಲೆಯಲ್ಲಿ, ನ್ಯಾಯಾಲಯದಲ್ಲಿ, ವ್ಯವಹಾರಗಳಲ್ಲಿ ವ್ಯಕ್ತಿಯ ಅಧಿಕೃತನಾಮಕ್ಕೆ ವ್ಯಕ್ತಿಗಿಂತಲೂ ಹೆಚ್ಚಿನ ಮನ್ನಣೆಯಿದೆ; ಒಪ್ಪಿಗೆ ಇದೆ. ವ್ಯಕ್ತಿಯ ಗೈರುಹಾಜರಿಯಲ್ಲೂ ಹೆಸರು ಅಧಿಕೃತ ಪ್ರತಿನಿಧಿಯಾಗುತ್ತದೆ. ಮತದಾನ ಕೇಂದ್ರಗಳಲ್ಲಿ ಹೆಸರನ್ನು ಬಳಸುವ ಬಗೆಯನ್ನು ತಿಳಿದರೆ ಈ ಮೇಲಿನ ಅಂಶ ಗೊತ್ತಾಗುತ್ತದೆ. ಹೆಸರು ವ್ಯಕ್ತಿಯ ಪರವಾಗಿ ನಿಲ್ಲುವ ಮತ್ತು ವ್ಯಕ್ತಿಗಿಂತ ಅಧಿಕೃತವಾಗುವ ಇಂಥ ಸಾಧ್ಯತೆಗಳು ಅನೇಕ.

ವ್ಯಕ್ತಿಯನ್ನು ಉಲ್ಲೇಖಿಸಲು ಮತ್ತು ವ್ಯಕ್ತಿಯನ್ನು ಸಂಬೋಧಿಸಲು ಹೀಗೆ ಎರಡು ಉದ್ದೇಶಕ್ಕಾಗಿ ಹೆಸರುಗಳನ್ನು ಬಳಸುತ್ತೇವೆ. ಆದರೆ ಎಲ್ಲ ಸಂಸ್ಕೃತಿಗಳೂ ಈ ಎರಡೂ

ಸಂದರ್ಭಗಳಲ್ಲಿ ವ್ಯಕ್ತಿಯ ಹೆಸರನ್ನು ಉಲ್ಲೇಖಿಸಲು ಒಪ್ಪುವುದಿಲ್ಲ. ಸಂಬೋಧನೆಯಲ್ಲಿ ವ್ಯಕ್ತಿನಾಮದ ಬಳಕೆ ಕೆಲವು ಸಂಸ್ಕೃತಿಗಳಲ್ಲಿ ನಿಷಿದ್ಧ. ಉಲ್ಲೇಖಿಸಲು ವ್ಯಕ್ತಿಯ ಹೆಸರನ್ನು ಬಳಸಲು ಅಡ್ಡಿಯಾಗದಿದ್ದರೂ ನೇರ ಸಂಬೋಧನೆಯಲ್ಲಿ ಹೆಸರನ್ನು ಬಳಸುವಂತಿಲ್ಲ. ಹೆಸರನ್ನು ಹಿಡಿದು ಸಂಬೋಧಿಸುವುದಿರಲಿ ಹೆಸರನ್ನು ಕೇಳುವುದೂ ಕೂಡ ಕೆಲವು ಜನಾಂಗಗಳಲ್ಲಿ ನಿಷಿದ್ಧ. ಸಂಬೋಧನೆಗೆ ಸಂಬಂಧವಾಚಿಗಳನ್ನು, ಪದನಾಮಗಳನ್ನು ವ್ಯಾಪಕವಾಗಿ ಬಳಸುವುದು ಕಂಡುಬರುತ್ತದೆ.

ಹೆಸರಿನ ವ್ಯಾಪ್ತಿ ಮತ್ತು ಬಳಕೆಗಳ ಬಗ್ಗೆ ಇರುವ ನಿಯಂತ್ರಣ, ನಿರ್ದೇಶನಗಳನ್ನು ಗಮನಿಸಿದರೆ ಹೆಸರು ವ್ಯಕ್ತಿಯ ಹಿಡಿತದಲ್ಲಿರುವುದಿಲ್ಲವೆಂದು ಗೊತ್ತಾಗುತ್ತದೆ; ಅದು ಸಮಾಜದ ಹಿಡಿತದಲ್ಲಿರುತ್ತದೆ. ಆಯಾ ಕಾಲದೇಶದ ಸಾಮಾಜಿಕ ನಿಯಮಗಳು ಹೆಸರಿನ ನಿಯಂತ್ರಣ ಮಾಡುತ್ತಿರುತ್ತವೆ. ಈ ನಿಯಂತ್ರಣ ಹೆಸರಿನ ಬಳಕೆಗೆ ಮಾತ್ರ ಸೀಮಿತವಾಗಿರದೆ, ಹೆಸರಿನ ಸ್ವರೂಪವನ್ನೂ ಒಳಗೊಳ್ಳುತ್ತದೆ. ಅಂದರೆ ಯಾರು, ಯಾವಾಗ ಯಾವ ಹೆಸರನ್ನು ಹೇಗೆ ಬಳಸಬೇಕೆಂಬ ಬಗ್ಗೆ ನಿಯಂತ್ರಣವಿರುವಂತೆ ಹೆಸರು ಮತ್ತು ಅದರ ಆಯ್ಕೆಯನ್ನು ಸಾಮಾಜಿಕ ವ್ಯವಹಾರಗಳು ನಿಯಂತ್ರಿಸುತ್ತವೆ. ಈ ನಿಯಂತ್ರಣಗಳು ಕೆಲವೊಮ್ಮೆ ಗಮನಕ್ಕೆ ಬರುವಂತಿದ್ದರೆ, ಮತ್ತೆ ಕೆಲವು ಗೊತ್ತಾಗದಂತೆ ಪ್ರವೃತ್ತವಾಗಿರುತ್ತವೆ. ಕೆಲವನ್ನು ಗಮನಿಸೋಣ. ಹೆಸರಿನ ಬಳಕೆಯ ಹ್ರಸ್ವೀಕರಣದಲ್ಲಿ ಬಳಕೆಯಾಗುವ ನಿಯಮಗಳು ಸಾರ್ವತ್ರಿಕವಾಗಿರುವಂತೆ, ಸಾಮಾಜಿಕ ವ್ಯವಹಾರಗಳಿಗೆ ಅತೀತವಾಗಿರುತ್ತೆ. ಈ ವಿವರಣೆ ಹೆಸರುಗಳ ಉಚ್ಚಾರಣೆಗೆ ಹೆಚ್ಚು ಅನ್ವಯವಾಗುತ್ತದೆ. ಆದರೆ ಹೆಸರುಗಳ ಸರಣಿ (ವ್ಯಕ್ತಿಗೆ ದತ್ತವಾಗಿರುವ ಹೆಸರುಗಳ ಗ್ರಂಥಿ)ಯಲ್ಲಿ ನಡೆಯುವ ಆಯ್ಕೆಯು ಸಾಮಾಜಿಕ ವ್ಯವಹಾರಗಳಿಗೆ ಬದ್ಧ. ಇದಕ್ಕೆ ಹತ್ತಾರು ನಿದರ್ಶನಗಳನ್ನು ಬೇರೆ ಬೇರೆ ಸಂಸ್ಕೃತಿಗಳಿಂದ ನೀಡಬಹುದು.

ಹೆಸರುಗಳ ಭಾಗವಾಗುವ ಸಂಬಂಧವಾಚಿಗಳು ವಾಸ್ತವ ಸಂಬಂಧ ಸೂಚಕಗಳಲ್ಲ. ಆದರೆ ವ್ಯಕ್ತಿಯ ಹೆಸರಿನಲ್ಲಿ ವೈಯಕ್ತಿಕ ಮತ್ತು ಸಾಮಾಜಿಕ ಸಂಬಂಧಗಳನ್ನು ಬೆಳೆಸುವ ವಿಧಾನವದು. ಆದರೆ ಬಳಕೆಯಲ್ಲಿ ಈ ಸಂಬಂಧವಾಚಿಯನ್ನು ಕೈಬಿಡುವ ಪ್ರವೃತ್ತಿ ಇದೆ. ಇದು ವ್ಯಕ್ತಿಯ ಸಾಮಾಜಿಕ ನೆಲೆಯನ್ನು ಸುಲಿಯುವಂಥದು. ಅಂದರೆ ಆ ವ್ಯಕ್ತಿಯನ್ನು ಏಕಾಂಗಿಯನ್ನಾಗಿ ಮಾಡುವುದು. ಇದಕ್ಕೆ ಪರ್ಯಾಯವಾಗಿ ವೈಯಕ್ತಿಕ ನೆಲೆಯ ಹೆಸರನ್ನು ಬಳಸಲು ನಿಷೇಧಗಳಿದ್ದು ಸಂಬಂಧವಾಚಿಯನ್ನೇ ಸಂಬೋಧನೆಯಲ್ಲಿ ಬಳಸಬೇಕಾದ ಸಂದರ್ಭಗಳೂ ಇವೆ. ಇಲ್ಲಿಯೂ ವ್ಯಕ್ತಿಯ ಸಾಮಾಜಿಕ ವ್ಯಾಪ್ತಿಗೆ ಅವಕಾಶ ದೊರೆತು ವ್ಯಕ್ತಿಗತ ನೆಲೆಗಳು ಹಿನ್ನೆಲೆಗೆ ಸರಿಯುತ್ತದೆ. ಉದಾ. ಅಪ್ಪ, ಅವ್ವ, ಅಯ್ಯ, ಅಯ್ಯನವರು, ಸ್ವಾಮಿ/ಬುದ್ಧಿ, ಯಜಮಾನರೇ, ಮಾನ್ಯರೇ, ಸರ್, ಸಾಹೇಬರು, ಜನಾಬ್, ಹಾಜಿ, ಮಿ.

ಹೆಸರುಗಳ ಆಯ್ಕೆಯಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರವೃತ್ತಿಯೆಂದರೆ ಹಿರಿಯರ ಹೆಸರು ಮುಂದಿನ ತಲೆಮಾರುಗಳಿಗೆ ದಾಟುವಂಥದ್ದು, ಹೆಚ್ಚು ಸಾಂಪ್ರದಾಯಿಕ

ಸಮಾಜಗಳಲ್ಲಿ ಇದು ಕಟ್ಟುನಿಟ್ಟಾಗಿ ಪಾಲನೆಯಾಗುತ್ತದೆ. ಆದರೆ ಕೆಲವು ಸಮುದಾಯಗಳಲ್ಲಿ ಬೇರೊಂದು ಪ್ರವೃತ್ತಿ ಕಂಡುಬರುತ್ತದೆ. ಬಿಮಾನೆಸ್ ಎಂಬ ಸಮುದಾಯದಲ್ಲಿ ಮಕ್ಕಳು ಹುಟ್ಟಿದಾಗ ತಂದೆತಾಯಂದಿರ ಹೆಸರು ಬದಲಾಗುತ್ತದೆ. ಅಥವಾ ಆ ಮಗುವಿನ (ಹೆಸರು) ತಂದೆ ತಾಯಿ ಎಂದು ಸೂಚಿಸುವ ಹೆಸರನ್ನು ಅವರು ಪಡೆಯುತ್ತಾರೆ. ಇದು ಇಲ್ಲಿಗೆ ನಿಲ್ಲುವುದಿಲ್ಲ. ಅವರು ಅಜ್ಜ ಅಜ್ಜಿಯರಾದಾಗ ಮತ್ತೆ ಅವರ ಹೆಸರು ಬದಲಾಗುತ್ತದೆ. ಇಂಥ ಮಗುವಿನ (ಹೆಸರು) ಅಜ್ಜ>/ಅಜ್ಜಿ ಎಂದು ಸೂಚಿಸುವ ಹೆಸರನ್ನು ಪಡೆಯುತ್ತಾರೆ. ಕ್ಯಾವಂತೆ ಎಂಬ ಇನ್ನೊಂದು ಸಮುದಾಯದಲ್ಲಿ ಗಂಡು ಮಕ್ಕಳಿಗೆ ಸೋದರಮಾವನ ಹೆಸರನ್ನು ಇಡುತ್ತಾರೆ. ಅದರೆ ಆಗ ಸೋದರಮಾವನ ಹೆಸರು ಸಾಮಾಜಿಕ ಆಸ್ತಿ. ಅವುಗಳನ್ನು ಹಂಚಿಕೊಳ್ಳಬೇಕೇ ಹೊರತು ವೈಯಕ್ತಿಕವಾಗಿ ಸಂಗ್ರಹಿಸಲು ಸಾಧ್ಯವಿಲ್ಲ. ಇದೂ ಒಂದು ಸಾಮಾಜಿಕ ವ್ಯವಹಾರ ನಿರ್ದೇಶನ. ವೈಯಕ್ತಿಕತೆಯ ನಿರಾಕರಣೆ ಮಾತೃಮೂಲೀಯವಾಗಿದ್ದು ವ್ಯಕ್ತಿಗೆ ಸ್ವಾತಂತ್ರ್ಯವಿಲ್ಲ. ಹೆಂಗಸು ತನ್ನ ಗಂಡ ಮತ್ತು ಸೋದರರ ನಡುವೆ ವ್ಯಾಜ್ಯವಿದ್ದಾಗ ಸೋದರನ ಪರ ನಿಲ್ಲುತ್ತಾಳೆ. ಹೀಗೆ ಇದೊಂದು ಈ ಒತ್ತಡದಿಂದ ಬಿಡುಗಡೆ ಪಡೆಯಲು ನಡೆಸುವ ತಂತ್ರ. ಕೆರೊಲಿನ್ ದ್ವೀಪಗಳಲ್ಲಿರುವ ಟ್ರಕ್ ಜನರಲ್ಲಿ (ಸುಮಾರು 793 ಜನರಿದ್ದಾರೆ) ಯಾವ ಹೆಸರೂ ಪುನರಾವರ್ತನೆಯಾಗುವುದಿಲ್ಲ. ಇವರು ಹೆಸರುಗಳನ್ನು ವೈಯಕ್ತಿಕ ಆಸ್ತಿಯೆಂದು ಪರಿಗಣಿಸುತ್ತಾರೆ. ಆದರೆ ನ್ಯೂ ಬ್ರಿಟನ್ ದ್ವೀಪಗಳ ಲಕಲಾಯ್ ಜನರಲ್ಲಿ ಪ್ರತಿಯೊಬ್ಬರಿಗೂ ಇರುವ ಹೆಸರುಗಳಲ್ಲಿ ಒಂದು ಭಾಗ ಬೇರೆ ಯಾರ ಹೆಸರಿನಲ್ಲಾದರೂ ಇದ್ದೇ ಇರುತ್ತದೆ. ಪರಿಚಿತವಿರುವ ನಿದರ್ಶನವನ್ನೇ ಗಮನಿಸಿದರೆ ಸೋಲಿಗರಲ್ಲಿ ಗಂಡಸರಿಗೆ ಇರುವ ಹೆಸರು ಮುಖ್ಯವಾಗಿ ನಾಲ್ಕು ಮಾತ್ರ: ಜಡೆಯ, ರಂಗ, ಮಾದ, ಕೇತ.

ಹೆಸರು ಮತ್ತು ವ್ಯಕ್ತಿಯ ನಡುವೆ ಒಂದು ನಿರಂತರ ಅಸಮತೋಲವಿರುತ್ತದೆ. ಎರಡೂ ಒಂದು ಇನ್ನೊಂದಕ್ಕೆ ಸಮ ಅಥವಾ ಪರ್ಯಾಯವೆಂದು ತಿಳಿಯುವ ಸ್ಥಿತಿ ಸಾಧ್ಯವಾಗದು. ವ್ಯಕ್ತಿಯನ್ನು ನಿರ್ದೇಶಿಸಲು ಹಲವು ಹೆಸರುಗಳನ್ನು ಪೌರಸಮಾಜಗಳು ಬಳಸುತ್ತವೆ. ಹಾಗೆಯೇ ಅಧಿಕೃತತೆಯನ್ನು ಒತ್ತಿ ಹೇಳುವುದನ್ನು ಗಮನಿಸುತ್ತೇವೆ. ನಿಗದಿಯಾದ ಹೆಸರನ್ನು ವ್ಯಕ್ತಿಯೇ ಬದಲಾಯಿಸಿಕೊಳ್ಳುವುದನ್ನು ಒಪ್ಪುವುದಿಲ್ಲ. ಆದರೆ ಬದಲು ಹೆಸರುಗಳನ್ನು ವರ್ಣನಾತ್ಮಕ ನೆಲೆಯಲ್ಲಿ ಸಾಮಾಜಿಕರು ವ್ಯಕ್ತಿಗೆ ನೀಡುತ್ತಿರಬಹುದು. ಇದು ಛಿದ್ರಗೊಂಡ ಅಸ್ಮಿತೆಯನ್ನು ಸೂಚಿಸಬಹುದು, ಅಥವಾ ಅಸ್ಪಷ್ಟ ಅಸ್ಮಿತೆಯ ಸೂಚಕವೂ ಆಗಿರುವುದು ಸಾಧ್ಯ

## ಸರಿಯಾದ ಭಾಷೆ ಎಂಬುದುಂಟೆ?

ನಕ್ಷತ್ರಗಳನ್ನು ನಾವು ಬಲ್ಲೆವು; ಹೂವುಗಳನ್ನು ಕಂಡಿದ್ದೇವೆ; ಹೀಗಿದ್ದರೂ ನಕ್ಷತ್ರ ಎಂದರೇನು, ಹೂವು ಎಂದರೇನು ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಲು ಹೊರಟಾಗ ಅವುಗಳನ್ನು ಕುರಿತ ನಮ್ಮ ತಿಳುವಳಿಕೆ ಉಪಯುಕ್ತವಾಗಲಾರದು. ಖಗೋಳಶಾಸ್ತ್ರ, ಜೀವಶಾಸ್ತ್ರಗಳು ಆಯಾ ವಸ್ತುಗಳನ್ನು ಅರಿಯಲು ನಮಗೆ ಹೊಸ ಪರಿಕರಗಳನ್ನು ಒದಗಿಸುತ್ತವೆ. ಭಾಷೆಯ ಸ್ವರೂಪವನ್ನು ಅರಿಯಲು ಹೊರಟವರ ಪರಿಸ್ಥಿತಿ ಇದಕ್ಕಿಂತ ಕೊಂಚ ಭಿನ್ನ. ಏಕೆಂದರೆ ನಾವೆಲ್ಲರೂ ಭಾಷೆಯನ್ನು ಬಳಸುವವರು. ಭಾಷೆಯ ಲಕ್ಷಣ, ಸ್ವರೂಪದ ಬಗ್ಗೆ ನಮ್ಮದೇ ಆದ ತಿಳುವಳಿಕೆಯನ್ನು ಹೊಂದಿರುವವರು. ಈ ತಿಳುವಳಿಕೆಗಳಲ್ಲಿ ಕೆಲವು, ಸಾಮಾಜಿಕ ಮನ್ನಣೆಯೂ ಪಡಿದಿರುತ್ತವೆಯಲ್ಲದೆ ಬಹುಕಾಲದಿಂದಲೂ ಭಾಷಿಕರ ನಂಬಿಕೆಯಲ್ಲಿ ಸೇರಿರುತ್ತದೆ. ಆದ್ದರಿಂದ ಭಾಷೆಯ ಸ್ವರೂಪವನ್ನು ತಿಳಿಯ ಹೊರಡುವ ಯಾವುದೇ ಹೊಸ ಪ್ರಯತ್ನವಾದರೂ ಈ ಪಾರಂಪರಿಕ ತಿಳುವಳಿಕೆಗಳಿಂದಲೇ ಮೊದಲಾಗುವುದು ಅನಿವಾರ್ಯ. ಇದೇ ಸೂಕ್ತ ಮಾರ್ಗ.

ಭಾಷೆಯ ಸ್ವರೂಪವನ್ನು ನಾವು ಹುಟ್ಟಿನಿಂದಲೇ ಅರಿತಿರುವುದಿಲ್ಲ. ಸಮಾಜದಲ್ಲಿ ಬೆಳೆಯುತ್ತ ಅಲ್ಲಿ ಪ್ರಚಲಿತವಿರುವ ತಿಳುವಳಿಕೆಯನ್ನು ಪಡೆದುಕೊಳ್ಳುತ್ತೇವೆ. ಶಿಕ್ಷಣ ಮತ್ತಿತರ ಸಾಮಾಜೀಕರಣ ಪ್ರಕ್ರಿಯೆಗಳೂ ನಮಗೆ ಇಂಥ ತಿಳುವಳಿಕೆಯನ್ನು ಒದಗಿಸುತ್ತವೆ. ಈ ತಿಳುವಳಿಕೆಯನ್ನು ವಿವರಿಸಿಕೊಳ್ಳುವುದು ಮುಖ್ಯ. ನಮಗೆಷ್ಟು ಗೊತ್ತು ಎಂದು ತಿಳಿಯುವ ಮೂಲಕವೇ ನಮಗೆಷ್ಟು ಗೊತ್ತಿಲ್ಲವೆಂಬುದರ ಅರಿವು ಮೂಡುತ್ತದೆ. ಆಗಲೇ ನಮಗೆ ಗೊತ್ತಿರುವುದರಲ್ಲಿ ಎಷ್ಟು ಸರಿ ಎನ್ನುವುದೂ ತಿಳಿಯುತ್ತದೆ.

ಭಾಷೆಯ ಅಧ್ಯಯನ ಸುಲಭವಲ್ಲ. ಅದರಲ್ಲೂ ನಿರ್ಮಮವಾಗಿ, ವ್ಯವಸ್ಥಿತವಾಗಿ ಅಧ್ಯಯನ ಮಾಡುವುದಂತೂ ಇನ್ನೂ ಕಷ್ಟ. ಈ ಅಧ್ಯಯನದಲ್ಲಿ ಮಂಡಿತವಾದ ಸಂಗತಿಗಳ ಚರ್ಚೆ ಉದ್ವೇಗಕ್ಕೆ, ವಾಗ್ವಾದಗಳಿಗೆ ಅವಕಾಶ ನೀಡುವ ಸಂದರ್ಭಗಳೇ ಹೆಚ್ಚು. ಭಾಷೆ ನಮ್ಮ ಸ್ವತ್ತು ಎಂದು ತಿಳಿದ ಎಲ್ಲರೂ ಭಾಷೆಯನ್ನು ವ್ಯಾಖ್ಯಾನಿಸುವ, ನಿರ್ದಿಷ್ಟ ಅಭಿಪ್ರಾಯವನ್ನು ಹೊಂದುವ ಹಕ್ಕು ತಮಗಿದೆಯೆಂದು ತಿಳಿಯುತ್ತಾರೆ. ಆದ್ದರಿಂದ ಭಿನ್ನಾಭಿಪ್ರಾಯ ಸಾಧ್ಯ; ಅಲ್ಲದೆ ಸಹಜ. ಅಂದರೆ ವಾಗ್ವಾದಗಳು ಬೆಳೆಯಲು ಅವಕಾಶ ಉಂಟು. ಶಿಕ್ಷಣ ಮಾಧ್ಯಮ ಯಾವುದಾಗಬೇಕು, ನಮ್ಮ ಶಾಲೆಗಳಲ್ಲಿ

ಯಾವ ಭಾಷೆ ಯಾವಾಗ ಕಲಿಸಬೇಕು, ವಾರ್ತಾಪ್ರಸಾರದಲ್ಲಿ ಹೇಗೆ ಭಾಷೆಯನ್ನು ಉಚ್ಚರಿಸಬೇಕು ಎಂಬಿವೇ ಪ್ರಶ್ನೆಗಳನ್ನು ಚರ್ಚಿಸತೊಡಗಿದ ಕೂಡಲೇ ಅಭಿಪ್ರಾಯ ಭೇದಗಳು ಮುನ್ನೆಲೆಗೆ ಬರುತ್ತವೆ. ನಿಲುಗಡೆಯಿಲ್ಲದ ವಾಗ್ವಾದ ಮೊದಲಾಗುತ್ತದೆ.

ಭಾಷೆಯನ್ನು ಬಳಸುವವರು ವ್ಯಕ್ತಿಗಳೇ ಆದರೂ ಅವರೆಲ್ಲರೂ ಒಂದಿಲ್ಲೊಂದು ಸಾಮಾಜಿಕ ಸಂದರ್ಭಗಳಲ್ಲಿಯೇ ಅದನ್ನು ಬಳಸುತ್ತಾರೆ. ಆದ್ದರಿಂದ ಭಾಷೆಯ ಉಪಯೋಗಕ್ಕೆ ಸಾಮಾಜಿಕ ಆಯಾಮಗಳಿರುತ್ತವೆ. ಯಾವುದು ಸಾಮಾಜಿಕವೋ ಅದು ಚರ್ಚೆಗೆ ಗ್ರಾಸವಾಗುತ್ತದೆ. ಅಲ್ಲದೆ ಭಾಷೆಯ ಬಳಕೆಯಲ್ಲಿ ನಾವು ಸುಲಭವಾಗಿ ಭಾಗಿಗಳಾಗುವುದರಿಂದ ವ್ಯಕ್ತಿಗಳ ವ್ಯಕ್ತಿತ್ವ, ಬುದ್ಧಿವಂತಿಕೆ, ಸಾಮರ್ಥ್ಯ ಇತ್ಯಾದಿಗಳನ್ನು ಗ್ರಹಿಸುವಾಗ ನಮ್ಮ ತೀರ್ಮಾನಗಳನ್ನು ಆಯಾ ಸಂದರ್ಭದ ಭಾಷಾಬಳಕೆ ಪ್ರಭಾವಿಸುತ್ತಿರುತ್ತದೆ. ಹೆಚ್ಚು ಮಾತಾಡುವ, ಹಿಂಜರಿಕೆಯಿಲ್ಲದೆ ಮಾತಾಡುವ ಹೆಂಗಸನ್ನು ಗಂಡುಬೀರಿ ಎನ್ನುತ್ತೇವೆ. ಮಾತುಗಾರರನ್ನು ಜಾಣರೆಂದು ನಂಬುತ್ತೇವೆ. 'ಮಾತುಬಲ್ಲವರಿಗೆ ಜಗಳವಿಲ್ಲ'ವೆನ್ನುತ್ತೇವೆ. ಮಾತಾಡದವರನ್ನು ಮುಖೇಡಿಗಳೆನ್ನುತ್ತೇವೆ. ನಮ್ಮ ಇಂಥ ತಿಳುವಳಿಕೆಗಳನ್ನು ಬಳಸಿಯೇ ಸಾಮಾಜಿಕ ವ್ಯವಹಾರಗಳನ್ನು ನಾವು ನಡೆಸುತ್ತೇವೆ.

ವ್ಯಕ್ತಿಗಳಿಗೂ ಅವರು ಬಳಸುವ ಭಾಷೆಯ ಸ್ವರೂಪಕ್ಕೂ ಒಂದು ಬಗೆಯ ನಂಟಿದೆಯೆಂದು ನಾವು ತಿಳಿಯುವುದರಿಂದಾಗಿ, ವ್ಯಕ್ತಿಗಳನ್ನು ಹೊಗಳಲು, ನೋಯಿಸಲು, ಉದ್ವಿಗ್ನಗೊಳಿಸಲು ಅವರ ಭಾಷಾಬಳಕೆಯ ವಿಶಿಷ್ಟಾಂಶಗಳನ್ನೇ ಬಳಸುತ್ತೇವೆ.

ನಮಗೂ ಭಾಷೆಗೂ ಇರುವ ಸಂಬಂಧವನ್ನು ಮೂರು ಹಂತಗಳಲ್ಲಿ ವಿವರಿಸಿಕೊಳ್ಳಬಹುದು. ಭಾಷೆಯನ್ನು ವ್ಯಾವಹಾರಿಕವಾಗಿ ದಿನನಿತ್ಯವೂ ಬಳಸುವುದು ಮೊದಲಹಂತ. ಭಾಷೆಯ ಸ್ವರೂಪವನ್ನು ಅರಿಯುತ್ತಾ ಹೋದಂತೆ ಕೆಲವು ನಿರ್ಣಯಗಳಿಗೆ ಕಟ್ಟುಬೀಳುವುದು ಎರಡನೆಯ ಹಂತ. ಈ ಹಂತದಲ್ಲಿನ ನಮ್ಮ ನಿರ್ಣಯಗಳು ಬಲವಾದ ಅಭಿಪ್ರಾಯಗಳೂ ಆಗಿರುತ್ತವೆ. ಈ ನಿರ್ಣಯಗಳನ್ನು ಯಾರಾದರೂ ಪ್ರಶ್ನಿಸಿದರೆ, ನಿರ್ಣಯಗಳಿಗೆ ವಿರುದ್ಧವಾಗುವ ಪ್ರಸಂಗಗಳು ಒದಗಿದರೆ, ಆಗ ನಮ್ಮ ಪ್ರತಿಕ್ರಿಯೆ ಮೂರನೆಯ ಹಂತದ್ದಾಗಿರುತ್ತದೆ. ಕನ್ನಡವನ್ನು ದಿನವೂ ಬಳಸುವುದು ಮೊದಲ ಹಂತ. ಕನ್ನಡದ ಮೂಲಕವೇ ಮಕ್ಕಳಿಗೆ ಶಿಕ್ಷಣ ನೀಡುವುದು ಸೂಕ್ತವೆಂದು ತಿಳಿಯುವುದು ಎರಡನೇ ಹಂತ. ಕನ್ನಡದ ಬದಲು ಬೇರೆ ಯಾವುದೇ ಭಾಷೆಯನ್ನು ಶಿಕ್ಷಣಮಾಧ್ಯಮ ಮಾಡಿದಾಗ ಅಥವಾ ಮಾತೃಭಾಷೆಯ ಮೂಲಕ ಕಲಿಯುವುದು ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಅಡ್ಡಿಯೆಂದು ಯಾರಾದರೂ ವಾದಿಸಿದಾಗ ವಾಗ್ವಾದಕ್ಕಿಳಿಯುವುದು, ಚಳುವಳಿ ನಡೆಸುವುದು ಮೂರನೆಯ ಹಂತ.

ಒಂದು ಭಾಷೆಗೆ ಹಲವು ವಿಕಲ್ಪಗಳಿರುತ್ತವೆ. ಭೌಗೋಳಿಕವಾಗಿ ಒಂದು ಪ್ರದೇಶದ ಜನರು ಬಳಸುವ ಆ ಭಾಷೆಯ ಸ್ವರೂಪಕ್ಕೂ ಇನ್ನೊಂದು ಪ್ರದೇಶದಲ್ಲಿ ಅದೇ ಭಾಷೆಯ ಸ್ವರೂಪಕ್ಕೂ ಎದ್ದು ಕಾಣುವ ವ್ಯತ್ಯಾಸಗಳಿರುತ್ತವೆ. ಇಂಥ ಹಲವು ಪ್ರಭೇದಗಳಲ್ಲಿ ಯಾವುದಾದರೊಂದನ್ನು ಶುದ್ಧವೆಂದು, ಅನುಸರಣೀಯ ಮಾದರಿಯೆಂದು ಸಿದ್ಧಾಂತ

ಮಾಡುವ ಪ್ರವೃತ್ತಿ ಕಂಡುಬರುತ್ತದೆ. ಇಂಥ ಚಿಂತನೆಯನ್ನು ನಿರ್ದೇಶಾತ್ಮಕ ಪರಂಪರೆಯೆಂದು ಗುರುತಿಸಬಹುದು. ಹೀಗೆ ಶುದ್ಧವೆಂದು ಪರಿಗಣಿಸಿದ ಮಾದರಿಯನ್ನು ಎಲ್ಲ ಭಾಷಿಕರೂ ಬಳಸಬೇಕೆನ್ನಲಾಗುತ್ತದೆ. ಪದಕೋಶ ಮತ್ತು ವ್ಯಾಕರಣದ ಕೆಲವು ನಿಯಮಗಳಿಗೆ ಮಾತ್ರವಲ್ಲದೆ ಉಚ್ಚಾರಣೆಯ ಬಗೆಗಳಿಗೂ ಶುದ್ಧ ಮಾದರಿಯನ್ನು ಆದರ್ಶವನ್ನಾಗಿ ಸೂಚಿಸಲಾಗುತ್ತದೆ. ಈ ಶುದ್ಧಮಾದರಿಯು ಸಾಮಾನ್ಯವಾಗಿ ಲಿಖಿತರೂಪದ ಶಿಷ್ಟಭಾಷೆಯಾಗಿರುತ್ತದೆ. ಲಿಖಿತ ಸಾಹಿತ್ಯಕೃತಿಗಳಲ್ಲಿ ಔಪಚಾರಿಕವಾದ ಮಾತುಕತೆಗಳಲ್ಲಿ ಈ ಮಾದರಿಯ ನಿದರ್ಶನಗಳು ಸಿಗುತ್ತವೆ. ಈ ಶುದ್ಧ ಮಾದರಿಗೆ ಹೊರತಾದ ಎಲ್ಲ ಪ್ರಭೇದಗಳನ್ನು ಗ್ರಾಮ್ಯವೆನ್ನಲಾಗುತ್ತದೆ. ಹಾಗೂ ಅಂಥ ಗ್ರಾಮ್ಯಮಾದರಿಗಳನ್ನು ಬಿಟ್ಟುಕೊಡುವಂತೆ ಮಾಡುವುದು ಶಿಕ್ಷಣದ ಮುಖ್ಯಗುರಿಯಾಗಿರುತ್ತದೆ. ಬಹುಪಾಲು ಲಿಪಿಯುಳ್ಳ ಭಾಷೆಗಳಿಗೆ ಬರೆಯಲಾದ ವ್ಯಾಕರಣಗಳು ನಿರ್ದೇಶಾತ್ಮಕ ಪರಂಪರೆಗೆ ಸೇರುತ್ತವೆ. ನಿಘಂಟುಗಳೂ ಕೂಡ ಆಯ್ದ ಶಿಷ್ಟ ಪ್ರಭೇದದ ಪದಕೋಶ ಮತ್ತು ಅರ್ಥವಿವರಣೆಯನ್ನು ನೀಡುತ್ತವೆ. ನಾಗವರ್ಮ, ಕೇಶಿರಾಜ ಮತ್ತು ಭಟ್ಟಾಕಳಂಕ ಇವರು ರಚಿಸಿದ ಕನ್ನಡ ಭಾಷೆಯ ವ್ಯಾಕರಣಗಳನ್ನು, ಹಳಗನ್ನಡ ನಿಘಂಟುಗಳನ್ನು ನೋಡಿದರೆ ಅಲ್ಲಿ ಶಿಷ್ಟ ಪ್ರಭೇದದ ಪರವಾದ ನಿಲುವುಗಳು ಗಮನಕ್ಕೆ ಬರುತ್ತವೆ. ಮೊದಮೊದಲು ವ್ಯಾಕರಣಗಳನ್ನು ಬರೆದವರು ಆಯಾ ಭಾಷೆಯ ಸ್ವರೂಪವನ್ನು ಸೂತ್ರೀಕರಿಸಲು ಯತ್ನಿಸಿದರು. ಹೀಗೆ ಸೂತ್ರೀಕರಿಸುವಾಗ ಭಾಷೆಯ ಬಳಕೆಯ ಅನಂತ ವೈವಿಧ್ಯಗಳ ನಡುವೆ ಸಮಾನವಾದ ನಿಯಮ ವ್ಯವಸ್ಥೆಯೊಂದಿದೆಯೆಂದು ತೋರಿಸಲು ಯತ್ನಿಸುತ್ತಾರೆ. ಯಾವ ಪ್ರಯೋಗ ಸರಿ ಯಾವುದು ತಪ್ಪು ಎಂಬ ವಿವಾದಗಳಲ್ಲಿ ನಿರ್ಣಯಗಳನ್ನು ನೀಡಲು ಸಿದ್ಧರಾಗುತ್ತಾರೆ. ತಪ್ಪುಗಳಿಗೆ ಪರ್ಯಾಯವಾಗಿ ಸರಿಯಾದ ಪ್ರಯೋಗಗಳನ್ನು ಸೂಚಿಸುತ್ತಾರೆ. ಹೀಗೆ ತಪ್ಪುಗಳನ್ನು ತಿದ್ದಿಕೊಂಡಾಗ ಭಾಷೆಯ ಬಳಕೆ ಶುದ್ಧವಾಗುತ್ತದೆ, ಸೂಕ್ತವಾಗುತ್ತದೆ ಎಂದು ನಿರ್ಣಯಿಸುತ್ತಾರೆ. ವ್ಯಾಕರಣದ ಸೂತ್ರಗಳು ಭಾಷಾಬಳಕೆಯನ್ನು ನಿರ್ದೇಶಿಸುವ ನಿಯಮಗಳಾಗುತ್ತವೆ. ಅನುಸರಣೀಯ ಪ್ರಭೇದದ ರೀತಿಗಳನ್ನು ಕಲಿಸಲಾಗುತ್ತದೆ; ಗ್ರಾಮ್ಯರೂಪಗಳನ್ನು ನಿವಾರಿಸಲು ತರಬೇತು ನೀಡಲಾಗುತ್ತದೆ.

ಈ ಚಿಂತನಾ ಪರಂಪರೆಯ ಜತೆಗೆ ಇನ್ನೊಂದು ಚಿಂತನೆಯೂ ಬೆಳೆದು ಬರುತ್ತಿದೆ. ಭಾಷೆಯ ಪ್ರಭೇದ ವೈವಿಧ್ಯಗಳಲ್ಲಿ ಸರಿತಪ್ಪುಗಳ ವಿಭಜನೆಗಿಂತ ಎಲ್ಲ ಪ್ರಭೇದಗಳನ್ನು ವರ್ಣಿಸುವುದು ಸೂಕ್ತ ವಿಧಾನವೆಂದು ಈ ಚಿಂತನೆ ಹೇಳುತ್ತದೆ. ನಿರ್ದೇಶನಾತ್ಮಕ ಪರಂಪರೆಯ ಬೇರುಗಳು ಇನ್ನೂ ಸಡಿಲವಾಗಿಲ್ಲ. ನಮ್ಮ ಸಾಮಾಜಿಕ ಆಚರಣೆ, ಶಿಕ್ಷಣ ಪದ್ಧತಿಗಳಲ್ಲಿ ಇನ್ನೂ ಅದರ ಪ್ರಭಾವವಿದೆ. ಆದರೂ ಪರ್ಯಾಯವಾದ ಚಿಂತನೆ ಬಲಗೊಳ್ಳುತ್ತಿದೆ. ವೈವಿಧ್ಯವನ್ನು ನಿರಾಕರಿಸುವ, ಪರಿವರ್ತನೆಗಳಿಗೆ ಅಡ್ಡಿ ತರುವ ನಿರ್ದೇಶನಗಳಿಗಿಂತ ವಸ್ತುಸ್ಥಿತಿಯ ಸಮಗ್ರ ಗ್ರಹಿಕೆ ಸೂಕ್ತವೆಂಬುದು ಈ ವರ್ಣನಾತ್ಮಕ ಪರಂಪರೆಯ ಚಿಂತನೆಯ ಸಾರ. ಆಡುನುಡಿಯ ವೈವಿಧ್ಯಗಳಿಗೆಲ್ಲ ಅನುವು ಮಾಡಿಕೊಡುವ ಈ ಚಿಂತನೆ ಹಳೆಯದಾದರೂ ಬಲವಾಗಿ ಬೇರುಬಿಟ್ಟಿಲ್ಲ.

ನಿರ್ದೇಶನಾತ್ಮಕ ಪರಂಪರೆಯ ವ್ಯಾಕರಣಕಾರರು ಭಾಷೆಯ ಬೆಳವಣಿಗೆಯ ತುಡಿತಗಳಿಗೆ ಗಮನ ಕೊಡದೆ ಅದನ್ನು ನಿರ್ಲಕ್ಷಿಸುತ್ತಾರೆ. ಆದರೆ ಭಾಷೆ ಅವರನ್ನು ನಿರ್ಲಕ್ಷಿಸಿ ತನ್ನ ಪಾಡಿಗೆ ತಾನು ವೈವಿಧ್ಯಗಳನ್ನು ಕಾಯ್ದುಕೊಳ್ಳುತ್ತದೆ.

ಭಾಷೆಯ ವೈವಿಧ್ಯಗಳಲ್ಲಿ 'ಶುದ್ಧ'ವಾದುದರ ಪರವಾಗಿ ನಿಲ್ಲುವ 'ದಂಡಧಾರಿ'ಗಳು ಮತ್ತು ಭಾಷೆಯ ಎಲ್ಲ ವೈವಿಧ್ಯಗಳನ್ನು ವರ್ಣಿಸಿ ಬೆಳಕು ಚೆಲ್ಲುವ 'ದೀಪಧಾರಿ'ಗಳ ನಡುವೆ ಚರ್ಚೆಗಳು ಮುಂದುವರೆದಿವೆ. ಎರಡೂ ಪಕ್ಷಗಳ ಪರಸ್ಪರ ಆರೋಪ ಪ್ರತ್ಯಾರೋಪಗಳನ್ನು ಮಾಡುತ್ತಿದ್ದಾರೆ. ವರ್ಣನಾತ್ಮಕ ಪರಂಪರೆಯವರು ಅರಾಜಕತೆಯನ್ನು ಪ್ರೇರೇಪಿಸುತ್ತಾರೆಂದು ಒಂದು ಪಕ್ಷದವರು ಹೇಳಿದರೆ, ನಿರ್ದೇಶನಾತ್ಮಕ ಪರಂಪರೆಯವರು ಕಣ್ಣಿಪಟ್ಟಿಕಟ್ಟಿದ ಕುದುರೆಯಂತಿದ್ದಾರೆಂದೂ, ವಾಸ್ತವದ ಸಮಗ್ರ ಗ್ರಹಿಕೆಗೆ ದೂರವಾಗಿದ್ದಾರೆಂದೂ ಆರೋಪಿಸಲಾಗಿದೆ.

ಈ ವಾದ ಪ್ರತಿವಾದಗಳ ಮಾತನ್ನು ದೂರವಿರಿಸಿ ಎರಡೂ ಚಿಂತನೆಗಳನ್ನು ಪರಿಶೀಲಿಸಿದರೆ ಎರಡರಲ್ಲೂ ಸ್ವೀಕಾರ ಯೋಗ್ಯವಾದ ವಿಚಾರಗಳಿರುವುದು ತಿಳಿಯುತ್ತದೆ. ಮಾತ್ರವಲ್ಲ ನಾವು ತಿಳಿದುಕೊಂಡಂತೆ ಅಥವಾ ವಾದವಿವಾದಗಳಲ್ಲಿ ಮಂಡಿತವದಂತೆ ಎರಡು ಪಕ್ಷಗಳಲ್ಲಿ ಭಿನ್ನಾಭಿಪ್ರಾಯವಿರುವಷ್ಟೇ ಸಮಾನಾಂಶಗಳಿರುವುದೂ ಕಾಣುತ್ತದೆ. ಭಾಷೆಯ ಬಳಕೆಯಲ್ಲಿ ಸುಭಗತೆ, ಗ್ರಾಹ್ಯತೆ, ನಿರ್ದುಷ್ಟತೆ ಇರಬೇಕೆಂಬ ವಿಷಯದಲ್ಲಿ ಈ ಎರಡೂ ಪಕ್ಷಗಳ ನಡುವೆ ವಿವಾದಗಳಿರುವುದು ಸಾಧ್ಯವಿಲ್ಲ. ಶುದ್ಧವಾದುದು ಯಾವುದೆಂದು ನಿರ್ಣಯಿಸುವುದು ಹೇಗೆ? ಇರುವ ಎಲ್ಲ ಪ್ರಭೇದಗಳನ್ನು ಪರಿಶೀಲನೆ ಮಾಡುವುದು; ಅವುಗಳಲ್ಲಿ ಭಾಷೆಯ ಮೂಲಭೂತ ಅವಶ್ಯಕತೆಗಳಿಗೆ ಅಡ್ಡಿಯಾಗುವ ಅಂಶಗಳನ್ನು ಕಂಡುಕೊಳ್ಳುವುದು; ಅನಂತರವೇ ಸರ್ವಗ್ರಾಹ್ಯವಾದ ಪ್ರಭೇದವನ್ನು, ಅದರ ಸಾಧ್ಯತೆಗಳನ್ನು ರೂಪಿಸುವುದು ಸಾಧ್ಯ. ಹೀಗಾಗಿ ದೀಪಧಾರಿಗಳ ವಿಧಾನ ಅತ್ಯವಶ್ಯ. ದಂಡಧಾರಿಗಳು ಮೇಲುನೋಟಕ್ಕೆ ನಿಯಮಪಾಲಕರಂತೆ, ವೈವಿಧ್ಯಗಳ ನಿವಾರಕರಂತೆ ಕಂಡರೂ ಅವರ ಚಿಂತನೆಗಳು ಸಾಮಾಜಿಕ ಸಂರಚನೆಗಳನ್ನು ಸಂಕೇತಿಸುತ್ತವೆ, ಹಾಗೂ ಇವರ ನಿಲುವುಗಳನ್ನು ಅರಿಯುವ ಮೂಲಕವೇ ಸಮಾಜದ ಅಧ್ಯಯನದ ನೆಲೆಗಳು ಪೂರ್ಣಗೊಳ್ಳುತ್ತವೆ. ಇಂದಿನ ದಿನಗಳಲ್ಲಿ ಭಾಷಾಧ್ಯಯನಕಾರರು ನಿರ್ದೇಶನಾತ್ಮಕ ಚಿಂತನೆಗಳನ್ನು ನಿರ್ಲಕ್ಷಿಸುವ ಬದಲು ಆ ಚಿಂತನೆಗಳ ಮೂಲಕ ಅವುಗಳನ್ನು ರೂಪಿಸಿದ ಸಾಮಾಜಿಕ ಸಂರಚನೆಗಳನ್ನು ಅಭ್ಯಾಸ ಮಾಡತೊಡಗಿದ್ದಾರೆ.

ನಿರ್ದೇಶಾತ್ಮಕ ಪರಂಪರೆ ಕಾರ್ಯಶೀಲವಾಗುವ ವಿಧಾನಗಳಲ್ಲಿ ಭಾಷಾಪರಿಷತ್ತುಗಳ ನಿರ್ಮಾಣವೂ ಒಂದು. ಭಾಷಿಕರು ತಮ್ಮ ಭಾಷೆಯನ್ನು, ಅದರ ಬಳಕೆಯನ್ನು ಗಮನಿಸತೊಡಗಿದ ಕೂಡಲೇ ತಂತಮ್ಮ ಭಾಷೆಗಾಗಿ ಭಾಷಾಪರಿಷತ್ತುಗಳನ್ನು ರಚಿಸಿಕೊಳ್ಳುತ್ತಾರೆ. 1896ರಲ್ಲಿ ಮೈಸೂರಿನಲ್ಲಿ 'ಭಾಷೋಜ್ಜೀವಿನಿ ಸಭಾ' ಎಂಬೊಂದು ಸಂಸ್ಥೆ ಮೊದಲಾಯಿತು. ಅದಕ್ಕೂ ಮೊದಲು 1881ರಲ್ಲಿ ಧಾರವಾಡದಲ್ಲಿ ಮೊದಲಾದ 'ಕರ್ನಾಟಕ ವಿದ್ಯಾವರ್ಧಕ ಸಂಘ' ಮತ್ತು 1916ರಲ್ಲಿ ಪ್ರಾರಂಭಗೊಂಡ 'ಕರ್ನಾಟಕ

ಸಾಹಿತ್ಯ ಪರಿಷತ್ತು' ಇವೆಲ್ಲವೂ ಒಂದಿಲ್ಲೊಂದು ಬಗೆಯಲ್ಲಿ ಕನ್ನಡ ಭಾಷಾ ಪರಿಸ್ಥಿತಿಯನ್ನು ಉತ್ತಮಗೊಳಿಸುವ ಉದ್ದೇಶವನ್ನು ಹೊಂದಿದ್ದವು. ಇಂಥವೇ ಪರಿಸ್ಥಿತಿಯನ್ನು ಎಲ್ಲ ದೇಶಗಳಲ್ಲೂ ನೋಡಬಹುದಾಗಿದೆ. 1582ರಲ್ಲಿ 'ಅಕಾಡೆಮಿಯಾದೆಲ್ಲ ಕ್ರುಸ್ಕ' ಎಂಬ ಸಂಸ್ಥೆ ಇಟಲಿಯಲ್ಲಿ ಪ್ರಾರಂಭಗೊಂಡಿತು. 1635ರಲ್ಲಿ 'ಅಕಾಡೆಮಿ ಫ್ರಾಂಕ್ಸಾ' ಎಂಬ ಸಂಸ್ಥೆಯನ್ನು ಕಾರ್ಡಿನಲ್ ರಿಚ್ಲೂ ಸ್ಥಾಪಿಸಿದನು. ಉದ್ದೇಶ ನಮ್ಮ ಭಾಷೆಗೆ ನಿರ್ದಿಷ್ಟವಾದ ನಿಯಮಗಳನ್ನು ನೀಡಲು ಎಚ್ಚರಿಕೆಯಿಂದ ನಿಯತವಾದ ಕ್ರಮಗಳನ್ನು ಕೈಗೊಳ್ಳುವುದು. ಭಾಷೆಗೆ ಎಲ್ಲ ಬಗೆಯ ಅಭಿವ್ಯಕ್ತಿಗಳೂ ಸಾಧ್ಯವಾಗುವಂತೆ ಶುದ್ಧಗೊಳಿಸುವುದು, ಸರಳಗೊಳಿಸುವುದು. ಈ ಅಕಾಡೆಮಿ ಇಂದೂ ಇದೆ. ಚರ್ಚ್, ಶ್ರೀಮಂತವರ್ಗ ಮತ್ತು ಸೇನೆಯಿಂದ ಆಯ್ದ ನಲವತ್ತು ಜನರು ಅದರ ಸದಸ್ಯರು. 1694ರಲ್ಲಿ ಈ ಅಕಾಡೆಮಿ ಮೊದಲ ನಿಘಂಟನ್ನು ಪ್ರಕಟಿಸಿತು.

ಫಿಲಿಪ್.ವಿ ಎಂಬಾತ 1713ರಲ್ಲಿ ಸ್ಪ್ಯಾನಿಶ್ ಅಕಾಡೆಮಿಯನ್ನು ಸ್ಥಾಪಿಸಿದನು. ದಕ್ಷಿಣ ಅಮೆರಿಕದ ಸ್ಪಾನಿಶ್ ವಸಾಹತುಗಳಲ್ಲಿ ಅನಂತರದ ಇನ್ನೂರ ವರ್ಷಗಳೊಳಗೆ ಈ ಅಕಾಡೆಮಿಯ ಶಾಖೆಗಳು ಸ್ಥಾಪನೆಯಾದವು. 1786ರಲ್ಲಿ ಸ್ವೀಡಿಶ್ ಅಕಾಡೆಮಿ ಸ್ಥಾಪನೆಯಾಯಿತು. ಸಿರಿಯಾ, ಇರಾಕ್ ಮತ್ತು ಈಜಿಪ್ಟ್ ಹೀಗೆ ಮೂರು ಕಡೆ ಅರಾಬಿಕ್ ಅಕಾಡೆಮಿಗಳು ಸ್ಥಾಪನೆಯಾದವು. 1830ರಲ್ಲಿ ಹಂಗೇರಿಯನ್ ಭಾಷಾ ಸಮಿತಿ ಮೊದಲಾಯಿತು. ಹಿಬ್ರೂ ಅಕಾಡೆಮಿಯು ಈಚೆಗೆ 1952ರಲ್ಲಿ ಸ್ಥಾಪನೆಯಾಯಿತು.

ಜಾನ್ ಡ್ರೈಡನ್ ಮತ್ತು ಡೇನಿಯಲ್ ಡಫೋ 17ನೇ ಶತಮಾನದಲ್ಲಿ ಇಂಗ್ಲೆಂಡ್‌ನಲ್ಲಿ ಇಂಥದೊಂದು ಸಂಸ್ಥೆಯ ಸದಸ್ಯರು. ಈ ಸಂಸ್ಥೆಯು ಭಾಷೆಯ ಬಳಕೆಯ ಸರಿತಪ್ಪುಗಳ ಬಗ್ಗೆ ನಿರ್ಣಯ ನೀಡುವಂತಿರಬೇಕೆಂದೂ, ಅಪ್ಪಣೆಯಿಲ್ಲದೆ ಯಾರಾದರೂ ಹೊಸಪದಗಳನ್ನು ರೂಪಿಸುವುದು ಬದಲಿ ನಾಣ್ಯಗಳನ್ನು ಮುದ್ರಿಸುವ ಬಗೆಯ ಅಪರಾಧವೆಂದೂ ಇವರು ಹೇಳುತ್ತಾರೆ.

1712ರಲ್ಲಿ ಜೋನಾಥನ್ ಸ್ವಿಫ್ಟ್, ಅರ್ಲ್ ಆಫ್ ಆಕ್ಸ್‌ಫರ್ಡ್_ಈತ ಇಂಗ್ಲೆಂಡಿನ ಖಜಾಂಚಿ–ಗೆ ನೀಡಿದ ಅಹವಾಲು (ಪ್ರಪೋಸಲ್ ಫಾರ್ ಕರೆಕ್ಟಿಂಗ್, ಇಂಪ್ರೂವಿಂಗ್ ಅಂಡ್ ಅಸರ್ಟೈನಿಂಗ್ ಇಂಗ್ಲಿಷ್ ಟಂಗ್)ನಲ್ಲಿ ಹೀಗೆಂದಿದ್ದಾನೆ: 'ನಮ್ಮ ಭಾಷೆ ಮೇಳ ತಪ್ಪಿದೆ, ಅದರಲ್ಲಿ ದಿನವಹಿ ನಡೆಯುತ್ತಿರುವ ತಿದ್ದುಪಾಟುಗಳಿಗಿಂತ ಹೆಚ್ಚಾಗಿ ದಿನದಿನವೂ ದೋಷಗಳು ಸಂಭವಿಸುತ್ತವೆ. ತಿದ್ದುವ ಹೊಣೆಹೊತ್ತವರು ಮತ್ತಷ್ಟು ಕುಲಗೆಡಿಸಿದ್ದಾರೆ. ಭಾಷೆ ಅಪರಿಪೂರ್ಣವಾಗಿದ್ದರೂ ಚಿಂತೆಯಿಲ್ಲ; ನಿರಂತವಾಗಿ ಪರಿವರ್ತನೆಯಾಗುವುದನ್ನು ತಡೆಯಬೇಕು' ಈ ನಿಲುವಿಗೆ ಸಹಮತ ದೊರಕಲಿಲ್ಲ. ಮುಂದಿನ ದಶಕಗಳಲ್ಲಿ ಈ ನಿಲುವನ್ನು ನಿರಾಕರಿಸುವ ಪ್ರವೃತ್ತಿ ಮೊದಲಾಯಿತು. ಫ್ರಾನ್ಸ್, ಇಟಲಿಗಳಲ್ಲಿ ಶುದ್ಧೀಕರಣ ಯತ್ನ ಯಶಸ್ಸು ಪಡೆದಿಲ್ಲವೆಂಬುದನ್ನು ಅರಿತವರು ಭಾಷೆಯ ಬೆಳವಣಿಗೆ ಸಹಜವೆಂದು ತಿಳಿದರು. ಇಂಗ್ಲಿಶ್ ಭಾಷೆಯ ಮಹಾನ್ ನಿಘಂಟುಕಾರ ಜಾನ್‌ಸನ್ ಕಟ್ಟುಪಾಡುಗಳನ್ನು ಸೂಚಿಸುವ ಸಂಸ್ಥೆಗಳು ನಿರುಪಯುಕ್ತವೆಂದು ತಿಳಿದಿದ್ದನು. ಬದಲಾಗದ ಭಾಷೆಗಳಿಲ್ಲ. ಹಾಗಾಗಿ

ನಿಘಂಟುಕಾರನೊಬ್ಬ ತನ್ನ ಭಾಷೆಯನ್ನು ಭ್ರಷ್ಟಗೊಳ್ಳುವುದರಿಂದ, ನಾಶದಿಂದ ತಡೆಯುತ್ತೇನೆನ್ನುವುದು, ಭಾಷೆಯ ಅಂತರ್ಗತ ಗುಣಗಳನ್ನು ಬದಲಾಯಿಸುತ್ತೇನೆನ್ನುವುದು, ಎಲ್ಲ ದೋಷಗಳಿಂದ ಮುಕ್ತಗೊಳಿಸುವೆನೆನ್ನುವುದು ಹುಚ್ಚುತನವೆಂದು ಆತನ ತಿಳುವಳಿಕೆ. ಹಾಗಾಗಿ ಇಂಗ್ಲೆಂಡ್‌ನಲ್ಲಾಗಲೀ ಇಂಗ್ಲಿಶ್ ಭಾಷೆಗಾಗಲೀ ಯಾವುದೇ ಭಾಷಾಪರಿಷತ್ತು ಸ್ಥಾಪನೆಯಾಗಲಿಲ್ಲ. ಅನಂತರದ ಪ್ರಯತ್ನಗಳೂ ನೆಲೆಗಾಣಲಿಲ್ಲ. ಆದ್ದರಿಂದಲೇ ವ್ಯಾಕರಣಗಳನ್ನು, ನಿಘಂಟುಗಳನ್ನು, ಭಾಷಾಕೈಪಿಡಿಗಳನ್ನು ರಚಿಸುವ ಹೊಣೆಗಾರಿಕೆಯನ್ನು ವ್ಯಕ್ತಿಗಳೇ ನಿರ್ವಹಿಸಿದ್ದಾರೆ. ಭಾಷೆಯಲ್ಲಿ ಆಗುವ ಪರಿವರ್ತನೆಗಳು ಸುಲಭವಾಗಿ ಆಯಾ ಭಾಷಿಕರ ಗಮನವನ್ನು ಸೆಳೆಯುತ್ತವೆ. ಎಲ್ಲ ತಲೆಮಾರಿನವರೂ ತಮಗಿಂತ ಕಿರಿಯರ ಭಾಷಾ ಬಳಕೆಯನ್ನು ಕೇಳಿ ಭಾಷೆಗೆ ಒದಗಿರುವ ದುಃಸ್ಥಿತಿಯನ್ನು ಹೇಳಿಕೊಂಡು ಮರುಗುತ್ತಾರೆ. ಭಾಷೆಯ ಮಟ್ಟ ಕುಸಿದಿದೆಯೆಂದು ಹಲಬುತ್ತಾರೆ. ಅಂದರೆ ಬಹುಮಟ್ಟಿಗೆ ಬದಲಾವಣೆಯನ್ನು ಹೀನಸ್ಥಿತಿಯತ್ತ ಇಟ್ಟ ಹೆಜ್ಜೆಯೆಂದೇ ತಿಳಿಯುತ್ತಾರೆ. ಶಾಲೆಗಳಲ್ಲಿ ಮಕ್ಕಳಿಗೆ ಉತ್ತಮ ಭಾಷಾಲಕ್ಷಣಗಳನ್ನು ಬೋಧಿಸುತ್ತಿಲ್ಲವೆಂದು ಹೇಳುತ್ತಾರೆ. ಜನಸಂಪರ್ಕ ಮಾಧ್ಯಮಗಳ ಭಾಷಾಬಳಕೆಯಲ್ಲಿ ಭಾಷಾಮಟ್ಟ ಕೆಳಗಿಳಿದಿದೆಯೆಂದು ವಾದಿಸುತ್ತಾರೆ. ವಾರ್ತಾಪ್ರಸಾರ, ಚರ್ಚೆ, ವರದಿಗಳ ಭಾಷೆಯಲ್ಲಿ ಈಗಾಗಲೇ ಸಾಮಾನ್ಯವಾಗಿ ಒಪ್ಪಿತವಾಗಿರುವ ಭಾಷೆಯ ಲಕ್ಷಣಗಳನ್ನು ಸ್ವಲ್ಪ ಬದಲಾಯಿಸಿದರೂ ಅದನ್ನು ಚರ್ಚೆಗೆ ಗುರಿಪಡಿಸುತ್ತಾರೆ.

ಜನಭಾಷೆಯಲ್ಲಾಗುವ ಪರಿವರ್ತನೆಗಳನ್ನು ಎಷ್ಟೇ ವಿರೋಧಿಸಿದರೂ ಅವು ಸಂಭವಿಸುತ್ತಲೇ ಇರುತ್ತವೆ. ಇಂಥ ಪರಿವರ್ತನೆಗಳನ್ನು ಅಸಹನೆಯಿಂದ ನೋಡಿ ತಿರಸ್ಕರಿಸಲು, ದೂರವಿಡಲು ಯತ್ನಿಸಿದರೂ ಭಾಷೆ ನಿರಂತರವಾಗಿ ಬದಲಾಗುವುದನ್ನು ತಡೆಯಲಾಗುವುದಿಲ್ಲ. ಎಲ್ಲ ಕಾಲದಲ್ಲೂ ಸ್ವರೂಪಗಳು ಭಿನ್ನವಾಗಿರಬಹುದು. ಬದಲಾವಣೆಗಳು ಹೀಗೆ ನಡೆಯುತ್ತ ಹೋದರೆ ಒಂದಿಲ್ಲೊಂದು ದಿನ ಭಾಷೆ ನಾಶವಾಗುವುದೆಂದು ಕಣಿ ಹೇಳಿರುವ ಪ್ರಸಂಗಗಳಿವೆ. ಏನೇ ಆಗಲಿ. ಬದಲಾವಣೆ ಹೊಂದುವುದರಿಂದಲೇ ಭಾಷೆ ನಾಶವಾಗುವುದೆಂಬ ನಂಬಿಕೆಗೆ ಆಧಾರಗಳಿಲ್ಲ. ಬದಲಾಗುವುದೇ ಭಾಷೆಯ ಮುಖ್ಯ ಲಕ್ಷಣ.

ರಾಜಕೀಯ ಸಂದರ್ಭ, ತೀವ್ರ ಸಂಪರ್ಕ, ವಾಣಿಜ್ಯ ಸನ್ನಿವೇಶಗಳಿಂದಾಗಿ, ಕೆಲವೊಮ್ಮೆ ಒಂದು ಭಾಷಾಸಮುದಾಯದ ಯಾವುದಾದರೊಂದು ವಲಯದಲ್ಲಿ ನಡೆಯುವ ಬದಲಾವಣೆಗಳು ಅಲ್ಲಿನ ಭಾಷೆಯನ್ನು ಎಷ್ಟು ಪರಿವರ್ತಿಸಿಬಿಡುತ್ತವೆಂದರೆ ಇನ್ನೊಂದು ವಲಯದ ಜನರಿಗೆ ಅದು ಅರ್ಥವಾಗದೇ ಹೋಗಬಹುದು; ಅಸ್ಪಷ್ಟತೆ, ಅರ್ಥಸಂದಿಗ್ಧತೆಗಳು ಕಾಣುವುದು ಸಾಧ್ಯ. ಆದರೆ ಇಂಥ ಅತಿರೇಕ ಪರಿಸ್ಥಿತಿಗಳು ಅಪರೂಪ. ಸಾಮಾನ್ಯವಾಗಿ ಬದಲಾವಣೆಗಳು ನಿಧಾನವಾಗಿ ಸಂಭವಿಸುತ್ತವೆ ಮತ್ತು ಭಾಷೆಯ ಯಾವುದೋ ಒಂದು ಅಂಶವನ್ನು ಪ್ರಭಾವಿಸುತ್ತಿರುತ್ತವೆ. ಬದಲಾವಣೆಯಿಂದ ಪ್ರಭಾವಿತವಾಗದ ಭಾಷೆಗಳ ಪ್ರಮಾಣ ಅಧಿಕವಾಗಿರುತ್ತದೆ. ಹಾಗಾಗಿ ತೀವ್ರಗೊಳ್ಳದ ಯಾವ ಪರಿವರ್ತನೆಯೂ ಜನರ ಗಮನವನ್ನು ಸೆಳೆಯಲಾರದು. ಕನ್ನಡದಲ್ಲಿ 'ಟಿ'

ಮತ್ತು 'ಳ' ಧ್ವನಿಗಳನ್ನು ಭಿನ್ನವಾಗಿ ಉಚ್ಚರಿಸಲಾಗುತ್ತಿತ್ತು. ಸುಮಾರು ಒಂದು ಸಾವಿರ ವರ್ಷದ ಹಿಂದೆ ಇವೆರಡೂ ಧ್ವನಿಗಳನ್ನು ಉಚ್ಚರಿಸುವ ವಿಧಾನದಲ್ಲಿ ಬದಲಾವಣೆ ಮೊದಲಾಯಿತು. ಎರಡನ್ನೂ 'ಳ'ಕಾರದಂತೆಯೇ ಉಚ್ಚರಿಸಲು ತೊಡಗಿದ್ದಾರೆ. ಸುಮಾರು ಒಂದು ಶತಮಾನದ ಕಾಲ ಈ ಪಲ್ಲಟ ನಡೆದು ಕೊನೆಗೆ ೞಕಾರದ ಉಚ್ಚಾರಣೆ ಸಂಪೂರ್ಣ ನಿಂತುಹೋಗಿದೆ. ಈಗ ಕನ್ನಡದ ಮೂರ್ಧನ್ಯ ಧ್ವನಿಗಳಾದ ಟ,ಠ, ಡ, ಢ, ಣಗಳನ್ನು ವರ್ತ್ಸ್ಯ ಧ್ವನಿಗಳನ್ನಾಗಿ ಉಚ್ಚರಿಸುವ ಪ್ರವೃತ್ತಿ ಬೆಳೆಯುತ್ತಿದೆ. ಈ ಬದಲಾವಣೆ ಎಚ್ಚರಿಕೆಯಿಂದ ಗಮನಿಸಿದ ಹೊರತು ಗೊತ್ತಾಗುವುದೇ ಇಲ್ಲ. ಇದು ಸ್ಥಿರಗೊಳ್ಳಲು ಹಲವಾರು ದಶಕಗಳೇ ಬೇಕಾಗಬಹುದು. ಈಗ ಯಾರೂ ಆ ಧ್ವನಿಗಳನ್ನು ಮೂರ್ಧನ್ಯಗಳನ್ನಾಗಿ ಉಚ್ಚರಿಸಲು ಒತ್ತಾಯಿಸುತ್ತಿಲ್ಲ.

ಭಾಷಿಕ ಸಮುದಾಯಗಳು ಭಾಷಾಪರಿವರ್ತನೆಗಳನ್ನು ಒಪ್ಪಿಕೊಂಡರೂ ಇಡೀ ಸಮುದಾಯದ ನಡುವೆ ಭಾಷಿಕ ಸಾಮರಸ್ಯವನ್ನು ಕಾಯ್ದುಕೊಳ್ಳಲು, ಮತ್ತು ಸಾಮಾಜಿಕ ಸ್ಥಿರತೆಯನ್ನು ಸಾಧಿಸಲು ಪರಿವರ್ತನೆಗಳ ದಿಕ್ಕು ಮತ್ತು ವೇಗಗಳನ್ನು ನಿಯಂತ್ರಿಸುವುದು ಅವಶ್ಯ. ಈ ಶತಮಾನದಲ್ಲಿ ಈ ನೆಲೆಯಲ್ಲಿ ಸಾಕಷ್ಟು ಯತ್ನಗಳು ನಡೆದಿವೆ. ಈ ಯತ್ನಗಳು ಬದಲಾವಣೆಗಳನ್ನು ನಿರಾಕರಿಸಲು ಉದ್ದೇಶಿತವಾಗಿರುವುದಿಲ್ಲ; ಬದಲಾವಣೆಗಳ ಸ್ವರೂಪವನ್ನು ಗ್ರಹಿಸಿ ಅವುಗಳನ್ನು ಯೋಜಿತ ರೀತಿಯಲ್ಲಿ ಅಳವಡಿಸುವ ಗುರಿ ಹೊಂದಿರುತ್ತವೆ.

ಭಾಷೆಗೆ ಸಾಮಾಜಿಕ ಆಯಾಮವಿದೆ. ಸಮಾಜದಲ್ಲಿ ಸಂಭವಿಸುವ ಹಲವು ಪರಿವರ್ತನೆಗಳು ಭಾಷೆಯ ಮೇಲೂ ಪರಿಣಾಮ ಬೀರುತ್ತವೆ; ಭಾಷೆಯಲ್ಲಿ ಪರಿವರ್ತನೆಗಳನ್ನು ಉಂಟುಮಾಡುತ್ತವೆ. ಸಮಾಜದ ಬದಲಾವಣೆಯನ್ನು ತಡೆಯುವುದು ಸಾಧ್ಯವಿಲ್ಲ. ತಡೆಯುವ ಯತ್ನಗಳು ನಿರರ್ಥಕ. ಆದರೆ ಬದಲಾವಣೆಗಳನ್ನು ಯೋಜಿತ ರೀತಿಯಲ್ಲಿ ನಿಯಂತ್ರಿಸಬಹುದು. ಅಂದರೆ ಆಗ ಪರೋಕ್ಷವಾಗಿ ಭಾಷಾ ಪರಿವರ್ತನೆಗಳಿಗೂ ನಿರ್ದಿಷ್ಟ ದಿಕ್ಕು ಒದಗಿದಂತಾಗುತ್ತದೆ. ಆಧುನಿಕ ಸಮಾಜಗಳಲ್ಲಿ ಬಹುಭಾಷಾ ಸಮುದಾಯಗಳಿವೆ. ಹಾಗೇ ಒಂದು ಭಾಷಿಕ ಸಮುದಾಯದಲ್ಲಿ ಜನಾಂಗಗಳು, ಬುಡಕಟ್ಟುಗಳು, ಜಾತಿಗಳು ಬೆರೆತಿರುತ್ತವೆ. ಸಾಮಾಜಿಕ ಪರಿವರ್ತನೆಯ ಸಂಕಷ್ಟಗಳನ್ನು ಎಲ್ಲ ಸಮಾಜಗಳೂ ಅನುಭವಿಸುತ್ತವೆ. ಇದನ್ನು ಎದುರಿಸಲು ಸಿದ್ಧವಾಗುವಾಗ ಭಾಷಾಪರಿವರ್ತನೆಗಳ ಸ್ವರೂಪವನ್ನು ಗ್ರಹಿಸುವುದು ಅನಿವಾರ್ಯ. ಸಮಾಜಗಳ ಸಹಬಾಳ್ವೆಯನ್ನು ಯೋಜಿಸುವಾಗ ಭಾಷಿಕ ಸಹಬಾಳ್ವೆಯನ್ನು ಬೆಳೆಸಬೇಕಾಗುತ್ತದೆ. ಶಾಲೆಗಳು ಭಾಷೆಯ ವೈವಿಧ್ಯವನ್ನು ಒಪ್ಪಿಕೊಳ್ಳುತ್ತಲೇ ಪ್ರಮಾಣಭಾಷೆಯ ಉಪಯುಕ್ತತೆಯ ಕಡೆಗೆ ಗಮನ ಸೆಳೆಯಬೇಕು. ಇವೆರಡನ್ನೂ ಎದುರುಬದುರು ನಿಲ್ಲಿಸುವಂತಿಲ್ಲ. ಭಾಷೆಯಲ್ಲಿ ನಡೆಯುತ್ತಿರುವ ಬದಲಾವಣೆಗಳು ಧ್ವನಿ, ಉಚ್ಚಾರಣೆ, ಪದಕೋಶ, ವ್ಯಾಕರಣ ಹೀಗೆ ಯಾವುದೇ ಹಂತದಲ್ಲಿಯಾದರೂ ಸಂಭವಿಸಲಿ, ಅವುಗಳನ್ನು ಒಪ್ಪಿ ಅಳವಡಿಸಿಕೊಳ್ಳುವ ಮನೋಭಾವವನ್ನು ಬೆಳೆಸಬೇಕಾಗುತ್ತದೆ. ಆ ಬದಲಾಣೆಗಳು ಸ್ವರೂಪವನ್ನು ಅಧ್ಯಯನ ಮಾಡಿ ಅವುಗಳ

ಅನಿವಾರ್ಯತೆಯನ್ನು ಗ್ರಹಿಸಿ ವಿವರಿಸಬೇಕಾಗುತ್ತದೆ. ಪರೋಕ್ಷವಾಗಿ ಇದರಿಂದ ಸಾಮಾಜಿಕ ಕ್ಷೋಭೆಗಳ ತೀವ್ರತೆ ಕಡಿಮೆಯಾಗುವುದು ಸಾಧ್ಯ.

ಭಾಷೆಯನ್ನು ಜೀವಂತ ವ್ಯವಸ್ಥೆಯೆಂದು ಪರಿಗಣಿಸುವ ಕೆಲವರು ಜೀವಂತ ವ್ಯವಸ್ಥೆಯ ಹುಟ್ಟು-ಬೆಳವಣಿಗೆ-ಸಾವು ಸರಣಿಯನ್ನು ಭಾಷೆಗೂ ಅನ್ವಯಿಸುತ್ತಾರೆ. ವ್ಯವಸ್ಥೆಗಳು ಬೆಳೆಯುತ್ತ ಹೋದಂತೆ ಸರಳತೆಯಿಂದ ಸಂಕೀರ್ಣತೆಯ ಕಡೆಗೆ ಹೋಗುವಂತೆ ಭಾಷೆಯಲ್ಲೂ ಸಂಭವಿಸುವುದೆಂದು ತಿಳಿಯುತ್ತಾರೆ. ಭಾಷೆಗಳು ಬೆಳೆದು ಬಳಕೆಯಿಂದ ಮುದಿಯಾಗಿ ಕೊನೆಗೊಮ್ಮೆ ಸಾಯುತ್ತವೆಂದು ತಿಳಿಯಲು ಯಾವ ಆಧಾರಗಳೂ ಇಲ್ಲ. ಭಾಷೆಗಳಲ್ಲಿ ನಡೆಯುವ ಯಾವ ಬದಲಾವಣೆಯೂ ಪೂರ್ವ ನಿದರ್ಶನಗಳನ್ನು ಹೊಂದಿರಬೇಕಿಲ್ಲ. ಒಂದು ಭಾಷೆ ಮಹಾಪ್ರಾಣಗಳನ್ನು ಕೈಬಿಡುತ್ತಿದ್ದರೆ ಇನ್ನೊಂದು ಭಾಷೆ ಆ ಧ್ವನಿಗಳನ್ನು ಹೊಸದಾಗಿ ಪಡೆದುಕೊಳ್ಳುತ್ತಿರಬಹುದು. ಅಂದರೆ ಬದಲಾವಣೆಗಳು ಏಕಮುಖಿಯಲ್ಲ. ಭಾಷೆಯಲ್ಲಿ ಬದಲಾವಣೆಗಳು ನಡೆದರೂ ವ್ಯವಸ್ಥೆಯ ಸಮತೋಲನ ಮಾತ್ರ ಉಳಿದುಕೊಂಡಿರುತ್ತದೆ. ಭಾಷೆಗಳು ನಾಶವಾದರೆ ಅದಕ್ಕೆ ಬದಲಾವಣೆಗಳು ಕಾರಣವಲ್ಲ. ರಾಜಕೀಯ, ಸಾಮಾಜಿಕವಾದ ಪ್ರಸಂಗಗಳು ಅಲ್ಲಿ ಪ್ರಭಾವ ಬೀರುತ್ತಿರುತ್ತವೆ.

# ಭಾಷೆಯಲ್ಲಿ ಸರಿ–ತಪ್ಪು

ಕನ್ನಡ ಭಾಷೆಯನ್ನು ಹಲವರು 'ಕಗ್ಗೊಲೆ' ಮಾಡುತ್ತಿರುವ ಬಗೆಗೆ ದಿನವೂ ಒಂದಲ್ಲ ಒಂದು ದೂರನ್ನು ನಾವು ಕೇಳುತ್ತಿರುತ್ತೇವೆ. ಈ ದೂರುಗಳಲ್ಲಿ ಕೆಲವು ಸಮಾನ ನೆಲೆಗಳಿರುತ್ತವೆ. ಮಾತಾಡುವಾಗ ಬಳಸುವ ಕನ್ನಡ 'ಹಾಳಾಗುತ್ತಿದೆ' ಎಂದು ದೂರುವವರು ಉಚ್ಚಾರಣೆಗಳ ಬಗೆಗೆ ಇಲ್ಲವೇ ಇಂಗ್ಲಿಶ್ ಭಾಷೆಯ ಪದಗಳನ್ನು 'ಎಗ್ಗಿಲ್ಲದೆ' ಬೆರಸುವ ಬಗೆಗೆ ದೂರುತ್ತಿರುತ್ತಾರೆ. ಸದ್ಯ ಈ ಎರಡನೆಯ ದೂರನ್ನು ಕುರಿತು ಕೊಂಚ ನೋಡೋಣ. ಈಚೆಗೆ ಕನ್ನಡವನ್ನು ಹೆಚ್ಚು ಜನರಿಗೆ ಕೇಳಿಸುವ ಪರಿಸರದಲ್ಲಿ ಮಾತಾಡುವ ಪ್ರಸಂಗಗಳು ಹೆಚ್ಚಾಗಲು ಟಿವಿ ಮತ್ತು ಎಫ್ ಎಮ್ ಚಾನೆಲ್ ರೇಡಿಯೋ ಕೇಂದ್ರಗಳು ಕಾರಣವಾಗಿವೆ. ಇಲ್ಲಿ ಮಾತಾಡುವಾಗ ಆ ಮಾತಿಗೆ ನಿರಂತರವಾಗಿ ಉಳಿಯುವ ಬಯಕೆ ಇರುವುದಿಲ್ಲ. ಈಗ ಮತ್ತು ಇಲ್ಲಿ ಎಂಬುದು ಆ ಮಾತುಗಳ ಗುರಿ. ಹಾಗಾಗಿ ಅಲ್ಲಿ ನುಡಿಯ ಬಳಕೆಯಲ್ಲಿ ಏಕೆ ಇಂಗ್ಲಿಶ್ ಪದಗಳ ಬಳಕೆ ಹೆಚ್ಚಾಗುತ್ತಿದೆ ಎಂಬ ಪ್ರಶ್ನೆಯನ್ನು ಎಚ್ಚರದಿಂದ ಕೇಳಿಕೊಳ್ಳಬೇಕಾಗಿದೆ. ಇದಕ್ಕೆ ಹಲವು ಕಾರಣಗಳಿದ್ದರೂ ಕೆಲವನ್ನು ಮಾತ್ರ ಇಲ್ಲಿ ಗಮನಿಸುತ್ತೇನೆ. ಹೀಗೆ ಬೆರಸದೆ 'ಅಚ್ಚಗನ್ನಡ'ದಲ್ಲಿ ಮಾತಾಡಲು ಬೇಕಾದ ಸಿದ್ಧತೆ ಇಲ್ಲದಿರುವುದು ಒಂದು ಕಾರಣವಿರಬಹುದು. 'ಕನ್ನಡ 'ಪದಗಳ ಬದಲು 'ಇಂಗ್ಲಿಶ್' ಪದಗಳನ್ನು ಬಳಸುವುದರಿಂದ ಉಂಟಾಗುವ ಪರಿಣಾಮಗಳು ಬೇರೆ ಎಂದು ಹೀಗೆ ಬಳಸುವವರು ತಿಳಿಯುತ್ತಿರಬೇಕು. ಈ ತಿಳುವಳಿಕೆ ಸರಿಯೋ ತಪ್ಪೋ ಎಂಬುದನ್ನು ಈಗ ಚರ್ಚಿಸುವುದು ಬೇಡ. ಆದರೆ ಹೀಗೆ ಎಷ್ಟೇ ಬೆರಸಿ ಮಾತನಾಡಿದರೂ ಅವರು ಮಾತನಾಡುತ್ತಿರುವುದು ಇಂಗ್ಲಿಶ್ ಆಗುವುದಿಲ್ಲ. ಅದನ್ನು 'ಒಂದು ಬಗೆಯ' ಕನ್ನಡವೆಂದು ನಾವು ತಿಳಿಯುತ್ತೇವಷ್ಟೆ. ಅಂದರೆ ಮಾತನಾಡುತ್ತಿರುವವರು ತಾವು ಕನ್ನಡವನ್ನು ಮಾತಾಡುತ್ತಿದ್ದೇವೆ ಎಂದು ತಿಳಿದಿರುತ್ತಾರೆ. ಕೇಳಿಸಿಕೊಳ್ಳುವವರಿಗೆ ಆ ಕನ್ನಡ ಇಷ್ಟವಾಗದಿದ್ದರೂ ಅದು ಕನ್ನಡವಲ್ಲ. ಕೆಟ್ಟ ಇಂಗ್ಲಿಶ್ ಎಂದು ಹೇಳಲಾರರು. ಇದು ಹೇಗೆ ಸಾಧ್ಯ? ಅಂದರೆ ಹೀಗೆ ಕನ್ನಡದಲ್ಲಿ ಇಂಗ್ಲಿಶ್ ಬೆರಸಿದರೂ ಅದರಿಂದ ಮೂಲ ಕನ್ನಡದ ನಿಯಮಗಳನ್ನು ಮೀರುವುದು ಸಾಧ್ಯವಾಗುವುದಿಲ್ಲ ಎಂದಾಯ್ತು. ಕೊನೆಗೂ ಅವರು ಮಾತನಾಡುವ ವಾಕ್ಯಗಳ ನಿಯಮಗಳು ಕನ್ನಡಕ್ಕೆ ಬದ್ಧವಾಗಿಯೇ ಉಳಿಯಬೇಕು.

ನಾವು ಸಾಮಾನ್ಯವಾಗಿ ಕೇಳಿಸಿಕೊಳ್ಳಲು ಮುಜುಗರಪಡುವ 'ಕಂಗ್ಲಿಶ್' ಮಾತಾಡುವವರು ಕೂಡ ಗೊತ್ತಾದ ನಿಯಮವನ್ನು ಪಾಲಿಸುತ್ತಿರುತ್ತಾರೆ. ಬೇಕಾಬಿಟ್ಟಿಯಾಗಿ

ಇಂಗ್ಲಿಶನ್ನು ಕನ್ನಡದೊಳಕ್ಕೆ ಸೇರಿಸಲು ಆಗುವುದಿಲ್ಲ. ಕನ್ನಡ ತನ್ನೊಳಗೆ ಹೀಗೆ ಸೇರಿಸಲು ಅವಕಾಶ ನೀಡುವ ಕಡೆಗಳಲ್ಲಿ ಮಾತ್ರ ಇಂಗ್ಲಿಶ್ ಪದಗಳನ್ನು ಸೇರಿಸಲು ಸಾಧ್ಯ. ಕೈಲಾಸಂ ತಮ್ಮ ನಾಟಕಗಳಲ್ಲಿ ಬಳಸಿದ ಮಾದರಿಯಲ್ಲಿ ಇಂಗ್ಲಿಶ್ ಬೆರೆಸಿದ ಕನ್ನಡವನ್ನು ನಾವು ಈಗ ಮಾತಿನಲ್ಲಿ ಕೇಳಿಸಿಕೊಳ್ಳುವುದಿಲ್ಲ. ಇಂಗ್ಲಿಶ್ ಬೆರೆಸಿದ ಕನ್ನಡವನ್ನು ಎಚ್ಚರಿಕೆಯಿಂದ ಗಮನಿಸಿದರೆ ಹೆಚ್ಚಾಗಿ ಗುಣವಾಚಕಗಳು, ಕ್ರಿಯಾವಿಶೇಷಣಗಳು ಇಂಗ್ಲಿಶ್ ಪದಗಳಾಗಿರುವುದು ಗೊತ್ತಾಗುತ್ತದೆ. ನಾಮಪದಗಳಲ್ಲಿ ಸಂಖ್ಯಾವಾಚಕಗಳು, ಬಣ್ಣಗಳನ್ನು ಹೇಳುವ ಪದಗಳು, ದಿಕ್ಕುಗಳನ್ನು ಹೇಳುವ ಪದಗಳು ಬಂದು ಸೇರಿಕೊಳ್ಳುತ್ತವೆ. ನಗೆಯುಕ್ಕಿಸುವ ಉದ್ದೇಶವಿಲ್ಲದಿದ್ದಲ್ಲಿ ಸಾಮಾನ್ಯವಾಗಿ ಇಂಗ್ಲಿಶ್ ಭಾಷೆಯ ಪ್ರತ್ಯಯಗಳನ್ನು ಕನ್ನಡಪದಗಳಿಗೆ ಸೇರಿಸುವುದಿಲ್ಲ. ಉದಾ.ಗೆ ಕೆಲವರು ತಿನ್ನಬಲ್, ನೋಡಬಲ್, ಓದಬಲ್ ಎಂಬ ಪ್ರಯೋಗಗಳನ್ನು ನಗೆಬರೆಹಗಳಲ್ಲಿ ಬಳಸುವುದುಂಟು. ಸಾಮಾನ್ಯವಾಗಿ ಹೀಗಾಗುವುದಿಲ್ಲ. ಕ್ರಿಯಾಪದಗಳನ್ನು ಸೇರಿಸುವಾಗ ಬಹಳ ಕಠಿಣವಾದ ನಿಯಮಗಳಿವೆ. ಉದಾಹರಣೆಗೆ ಸಿ,ರೀಡ್, ಹಿಯರ್, ಈಟ್ ಮುಂತಾದ ಕ್ರಿಯಾಪದಗಳನ್ನು ಕನ್ನಡ ವಾಕ್ಯಗಳಲ್ಲಿ ಸೇರಿಸಲು ನೋಡಿ. ಹಾಗೆಯೇ ಜಂಪ್, ಸ್ಕಿಪ್, ಡ್ರೈವ್, ಪಾಸ್ ಮುಂತಾದ ಪದಗಳನ್ನು ಬೆರೆಸಲು ನೋಡಿ. ವ್ಯತ್ಯಾಸ ಗೊತ್ತಾಗುತ್ತದೆ. ಎರಡನೆಯ ಗುಂಪಿನ ಕ್ರಿಯಾಪದಗಳನ್ನು ಕನ್ನಡದಲ್ಲಿ ಬೆರೆಸಿದಷ್ಟು ಸುಲಭವಾಗಿ ಮೊದಲಿನ ಗುಂಪಿನ ಕ್ರಿಯಾಪದಗಳನ್ನು ಸೇರಿಸಲು ಸಾಧ್ಯವಾಗುವುದಿಲ್ಲ. ಕ್ರಿಯಾಪದಗಳಲ್ಲೂ ಅವು ಮೂಲದಲ್ಲಿ ಇರುವಂತೆ ಬೆರೆಸುವುದಕ್ಕೂ ಅವುಗಳಿಂದ ಪಡೆದ ಬೇರೆಬೇರೆ ರೂಪಗಳನ್ನು ಬೆರೆಸುವುದಕ್ಕೂ ಬೇರೆ ಬೇರೆ ನಿಯಮಗಳಿವೆ. ಅಂದರೆ ಇಂಗ್ಲಿಶ್ ಪದಗಳನ್ನು ನಾವು ಬೇಕಾಬಿಟ್ಟಿ ಬೆರೆಸುತ್ತಿಲ್ಲ. ಅದರಲ್ಲೂ ಗೊತ್ತಾದ ನಿಯಮಗಳಿವೆ.

ಈಗ ಇನ್ನೊಂದು ಪ್ರಶ್ನೆ ಮುಂದಾಗುತ್ತದೆ. ಸರಿ, ನಿಯಮಗಳ ಮಾತು ಹಾಗಿರಲಿ. ಹೀಗೆ ಇಂಗ್ಲಿಶ್ ಪದಗಳನ್ನು ಬೆರೆಸದೆ ಮಾತಾಡಬಾರದೇಕೇ? ಇದೀಗ ಕೇವಲ ಭಾಷೆಯ ಮಾತಾಗಿ ಉಳಿದಿಲ್ಲ. ಕೆಲವೊಮ್ಮೆ ಇಂಗ್ಲಿಶ್ ಪದಗಳ ಬಳಕೆಯಿಂದ ತಾವು ಹೇಳಬೇಕಾಗಿರುವ ವಿಷಯಕ್ಕೆ ಹೆಚ್ಚಿನ ಗಹನತೆ ಬರುತ್ತದೆ ಎಂಬ ತಿಳುವಳಿಕೆ ಮಾತಾಡುವವರಲ್ಲಿ ಇರುತ್ತದೆ. ಅಲ್ಲದೆ ಮಾತಿನ ಸಂದರ್ಭ ಕೂಡ ಅನೌಪಚಾರಿಕವಾಗಿದ್ದಾಗ ಹೀಗೆ ಇಂಗ್ಲಿಶ್ ಪದಗಳನ್ನು ಬೆರೆಸುವುದರಿಂದ ಹೆಚ್ಚು ಔಪಚಾರಿಕವಾಗದಂತೆ ತಡೆಯುವುದು ಸಾಧ್ಯವೆಂದು ತಿಳಿಯುವುದುಂಟು. 'ಈ ಕನ್ನಡ ಚಲನಚಿತ್ರದಲ್ಲಿ ಅತ್ಯದ್ಭುತವಾದ ದೃಶ್ಯಗಳಿವೆ' ಎಂಬ ವಾಕ್ಯವನ್ನು 'ಈ ಕನ್ನಡ ಫಿಲ್ಮ್‌ನಲ್ಲಿ ಸೂಪರ್ ಸೀನ್ಸ್ ಇವೆ" ಎಂದು ಹೇಳಿದರೆ ಈ ಔಪಚಾರಿಕತೆಯ ವ್ಯತ್ಯಾಸ ಗೊತಾಗುತ್ತದೆ. ಇಲ್ಲಿ ಯಾವುದು ಸರಿ ಯಾವುದು ತಪ್ಪು ಎನ್ನುವುದು ಮುಖ್ಯವಲ್ಲ. ಮಾತಿನ ಸಂದರ್ಭ ಯಾವ ಬಗೆಯ ವಾಕ್ಯ ರಚನೆಯನ್ನು ಬಯಸುತ್ತದೆ ಎನ್ನುವುದು ಮುಖ್ಯವಾಗುತ್ತದೆ.

ಅನೌಪಚಾರಿಕ (ಕ್ಯಾಶುಯಲ್) ಆಗಿರುವಾಗಲೂ ಕೆಲವೊಮ್ಮೆ 'ಅಚ್ಚಗನ್ನಡ'ದಲ್ಲಿ ಮಾತನಾಡಲು ಕೆಲವರು ಪ್ರಯತ್ನಿಸುವುದುಂಟು. ಟಿವಿ ಪ್ರದರ್ಶನಗಳಲ್ಲಿ ನಾವು

ಕೇಳಿಸಿಕೊಳ್ಳುವ ಕೆಲವು ವಾಕ್ಯಗಳನ್ನು ಈ ನಿಟ್ಟಿನಿಂದ ಗಮನಿಸೋಣ. 'ನೀವು ಎಲ್ಲಿಂದ ಬಂದಿದೀರಿ?'. ಎಂಬ ಪ್ರಶ್ನೆಗೆ 'ನಾನು ತುಮಕೂರಿಂದ ಬಂದಿದೀನಿ' ಎಂಬ ಉತ್ತರ ಬರುತ್ತದೆ. 'ನಿಮ್ಮ ಮೊದಲನೆ ಪ್ರಶ್ನೆ ', 'ನೀವು ಗೆದ್ದಿರೋದು ನಾಲ್ಕು ಗ್ರಾಂ ಬಂಗಾರ'.'ಈ ವಿಳಾಸಕ್ಕೆ ಬರೆಯಿರಿ' 'ಈ ನಂಬರಿಗೆ ಕರೆ ಮಾಡಿ' ಇದೇ ಬಗೆಯ ವಾಕ್ಯಗಳು ಮುಂದುವರೆಯುತ್ತವೆ. ಈ ವಾಕ್ಯಗಳ ಬಗೆಗೆ ಯಾರೂ ತಕರಾರು ಮಾಡುವುದನ್ನು ನಾನು ಕಂಡಿಲ್ಲ. ಇಲ್ಲಿ ಕಂಗ್ಲಿಶ್ ಇಲ್ಲ. ಆದರೆ ವಾಕ್ಯಗಳೇ ಇಂಗ್ಲಿಶ್‌ನ ಜಾಯಮಾನವನ್ನು ಹಿಂಬಾಲಿಸಿವೆ. ಅಂದರೆ ನಾವು ಕನ್ನಡದಲ್ಲಿ ನೇರವಾಗಿ ಇಂಗ್ಲಿಶ್ ಪದಗಳನ್ನು ಬೆರೆಸಿದಾಗ ಮುಜುಗರ ಪಡುತ್ತೇವೆಯೇ ಹೊರತು, ಇಂಗ್ಲಿಶ್ ಭಾಷೆಯ ಪ್ರಭಾವ ಬೇರೆಬೇರೆ ಬಗೆಯಲ್ಲಿ ಆದಾಗ ಅಷ್ಟು ಗಮನ ನೀಡುವುದಿಲ್ಲ. ಅದರಲ್ಲೂ ನಮ್ಮ ಬರೆಹದ ಭಾಷೆಯಲ್ಲಿ ಇಂಗ್ಲಿಶ್ ಮೂಲಕ ಬಂದ ಉಕ್ತಿ ವಿಧಾನಗಳನ್ನು ಇರುವಂತೆಯೆ ಅನುವಾದಿಸಿ ಬರೆಯುವ ಪರಿಪಾಟವಿದೆ. 'ಹಸಿರು ನಿಶಾನೆ ತೋರಿಸಿದರು' 'ಸ್ಪಷ್ಟ ನುಡಿಗಳಲ್ಲಿ ಖಂಡಿಸಿದರು', ' ಈ ಬಗೆಗೆ ಬೆಳಕು ಚೆಲ್ಲಿದರು' ಮುಂತಾದ ದಿನಬಳಕೆಯ ಬರಹದ ಮಾತುಗಳಲ್ಲಿ ಈ ಅಂಶ ಗೊತ್ತಾಗುವಂತಿದೆ. ಇದಕ್ಕೆ ಕೆಲವು ಬೇರೆ ಕಾರಣಗಳಿವೆ.

ಕನ್ನಡದ ಬರವಣಿಗೆ ಮತ್ತು ಮಾತು ಬೇರೆ ಬೇರೆಯ ಮಾದರಿಗಳನ್ನು ಅನುಸರಿಸುತ್ತವೆ. ಬರೆದ ಹಾಗೆ, ಅದರಲ್ಲೂ ಓದಿಕೊಳ್ಳಲು ಅನುಕೂಲವಾಗುವಂತೆ ಬರೆದ ಹಾಗೆ ಮಾತಾಡಲು ಆಗುವುದಿಲ್ಲ. ಸುಮ್ಮನೆ ಈಚೆಗೆ ಪತ್ರಿಕೆಯೊಂದರಲ್ಲಿ ಬಂದ ಕನ್ನಡ ವಾಕ್ಯವೊಂದನ್ನು ನೋಡಿ. "ರಾಜ್ಯದಲ್ಲಿ ವಿಭಾಗಾಧಿಕಾರಿ ಕಚೇರಿಗಳನ್ನು ರದ್ದುಪಡಿಸಿದ ನಂತರ ಕಂದಾಯ ಇಲಾಖೆಯಲ್ಲಿ ಉಂಟಾದ ಕೆಲಸದ ಒತ್ತಡವನ್ನು ಕಡಿಮೆ ಮಾಡಿ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯನ್ನು ಜಾರಿಗೆ ತರುವ ದೃಷ್ಟಿಯಿಂದ ಕಳೆದ ವರ್ಷದ ಸೆಪ್ಟೆಂಬರ್‌ನಲ್ಲಿ ಗುಲ್ಬರ್ಗ, ಬೆಳಗಾವಿ, ಮೈಸೂರು ಹಾಗೂ ಬೆಂಗಳೂರಿನಲ್ಲಿ ನಾಲ್ಕು ಪ್ರಾದೇಶಿಕ ಕಚೇರಿಗಳನ್ನು ಆರಂಭಿಸಲಾಯಿತಾದರೂ ಇದುವರೆಗೆ ಆಯುಕ್ತರಿಗೆ ಶಾಸನಬದ್ಧ ಅಧಿಕಾರವನ್ನು ನೀಡದೇ ಇರುವುದರಿಂದ ಪ್ರಾದೇಶಿಕ ಆಯುಕ್ತರ ಕಚೇರಿಗಳ ಸ್ಥಿತಿ ಲೆಕ್ಕಕ್ಕುಂಟು ಆಟಕ್ಕಿಲ್ಲ ಎಂಬಂತಾಗಿದೆ." ಈ ಉದ್ದದ ವಾಕ್ಯದಲ್ಲಿ ನಲವತ್ನಾಲ್ಕು ಪದಗಳಿವೆ. ಇದರಲ್ಲಿ ಕಡಿಮೆಯೆಂದರೆ ಏಳು ವಾಕ್ಯಗಳನ್ನು ಜೋಡಿಸಿ ಬರೆಯಲಾಗಿದೆ. ಸುಮಾರು ಇಪ್ಪತ್ತೊಂದು ಕನ್ನಡದ್ದಲ್ಲದ ಪದಗಳಿವೆ. ಇಡೀ ವಾಕ್ಯವೇ ಕನ್ನಡಕ್ಕೆ ಹೊಂದಿಕೊಳ್ಳದ ಮಾದರಿಯಲ್ಲಿದೆ. ಆದರೆ ಇಂತಹ ವಾಕ್ಯಗಳನ್ನು ದಿನವೂ ಪತ್ರಿಕೆಗಳಲ್ಲಿ ನಾವು ಓದುತ್ತಲೇ ಇದ್ದೇವೆ. ಈ ವಾಕ್ಯಗಳ ಬಗೆಗೆ ಹೆಚ್ಚು ತಕರಾರನ್ನು ಎತ್ತುವುದಿಲ್ಲ. ಆದರೆ ಮಾತಾಡುವಾಗ ಒಂದುವೇಳೆ ನಮ್ಮ ವಾಕ್ಯರಚನೆ ಈ ಮಾದರಿಯಲ್ಲಿದ್ದರೆ ( ಉರುಹಚ್ಚಿದ ಹೊರತು ಇದು ಆಗದ ಮಾತು) ಆಗ ನಮಗೆ ಅದರ ತಲೆಬುಡವೇ ಗೊತ್ತಾಗುವುದಿಲ್ಲ. ಅಂದರೆ ನಾವು ಮಾತಾಡಿದಂತೆ ಬರೆಯುವುದಿಲ್ಲ ಎನ್ನುವುದಕ್ಕಿಂತ, ಬರೆದಂತೆ ಮಾತಾಡಲಾಗುವುದಿಲ್ಲ ಎನ್ನುವುದು ಹೆಚ್ಚು ಸರಿಯಾದ ಮಾತು.

ಕನ್ನಡದ ಬರೆವಣಿಗೆ ಮತ್ತು ಮಾತಿನ ರೂಪಗಳನ್ನು ಹೆಚ್ಚು 'ಶುದ್ಧ'ವಾಗಿರಿಸಬೇಕೆಂಬ ನಮ್ಮ ಹಠದಿಂದಾಗಿ ಕನ್ನಡದ ಕೆಲವು ಪ್ರಭೇದಗಳಲ್ಲಿರುವ ಮಾತಿನ ಸಾಧ್ಯತೆಗಳನ್ನು

ನಾವು ಬಿಟ್ಟುಕೊಟ್ಟಿದ್ದೇವೆ. ಇದರಿಂದಾಗಿಯೂ ಈ ಶುದ್ಧ ಕನ್ನಡಕ್ಕೆ ಮಿತಿಗಳು ಉಂಟಾಗಿವೆ. ಅಲ್ಲದೆ ಕನ್ನಡವನ್ನು ಸಾರ್ವಜನಿಕವಾಗಿ ಬಳಸುವಾಗಲೂ ಹೆಚ್ಚು ಔಪಚಾರಿಕವಾಗಿ ಇರಬೇಕಿಲ್ಲದ ಸಂದರ್ಭಗಳು ಈಗ ಹೆಚ್ಚಾಗಿ ರೂಪುಗೊಳ್ಳುತ್ತಿವೆ. ರೇಡಿಯೋ, ಟಿವಿಗಳು ಇದಕ್ಕೆ ಬೇಕಾದ ತೆರಪುಗಳನ್ನು ರೂಪಿಸಿಕೊಟ್ಟಿವೆ. ಈ ತೆರಪುಗಳಿಗೆ ಬೇಕಾದ ರೀತಿಯ ಕನ್ನಡವನ್ನು , ಅದರ ಉಕ್ತಿವಿಧಾನವನ್ನು, ಪದಗಳನ್ನು ನಾವು ಇನ್ನೂ ರೂಪಿಸಿಕೊಂಡಿಲ್ಲ. ಆದ್ದರಿಂದ ಅಲ್ಲಿ ಮಾತಾಡಲೇ ಬೇಕಾದವರು ಬೇರೆ ದಾರಿಯಿಲ್ಲದೆ ಇಂಗ್ಲಿಶ್ ಭಾಷೆಯ ಪದಗಳನ್ನು ಕನ್ನಡದಲ್ಲಿ ಬೆರೆಸುವ ಮಾದರಿಯನ್ನು ಆಯ್ದುಕೊಂಡಿದ್ದಾರೆ.

ನಮ್ಮ ಮುಂದಿನ ಪ್ರಶ್ನೆ ಸರಳವಾಗಿದೆ. ಹೀಗೆ ಮಾಡುವುದು ಕನ್ನಡಕ್ಕೆ ಕುತ್ತಲ್ಲವೇ? ಇದಕ್ಕೆ ಎರಡು ಬಗೆಯ ಉತ್ತರಗಳಿವೆ. ಕನ್ನಡದಲ್ಲಿ ದಿಟವಾಗಿಯೂ ಇರುವ ಮಾತಿನ ವರಸೆಗಳನ್ನು ತೆರೆದು ತೋರಿಸುವ ಕೆಲಸವನ್ನು ನಾವು ಮಾಡುತ್ತಿಲ್ಲ. ಸುಮ್ಮನೆ ಸಾಹಿತಿಗಳನ್ನು ಹೊಗಳಿ ಅವರಿಗೆ ಬಗೆಬಗೆಯ ಮನ್ನಣೆಗಳನ್ನು ನೀಡುತ್ತೇವೆ. ಅವರು ಬಳಸಿದ ಕನ್ನಡದಲ್ಲಿ ಇರುವ ಮಾತಿನ ಎಣೆಯಿಲ್ಲದ ಮಾದರಿಗಳನ್ನು ತೆಗೆದು ತೋರಿಸಿಕೊಡಬೇಕು. ಇದರಿಂದ ಈಗ ಬಳಸುವವರಿಗೆ ತಕ್ಕ ದಾರಿ ತೋರಿಸಿದಂತಾಗುತ್ತದೆ. ಹಾಗೆ ಮಾಡದೇ ಕನ್ನಡದಲ್ಲೇ ಇರುವ ಉಕ್ತಿ ಬಗೆಗಳನ್ನು ಗೇಲಿ ಮಾಡುತ್ತಾ ಹೋದರೆ ಅದರಿಂದ ಏನೂ ಮಾಡಿದಂತಾಗುವುದಿಲ್ಲ. ಇನ್ನೊಂದು ದಿಕ್ಕಿನಿಂದ ನೋಡಿದಾಗ ಕನ್ನಡಕ್ಕೆ ಈ ಬೆರಕೆಗೊಳ್ಳುವ ಬಗೆಯಿಂದ ಏನೂ ಕುತ್ತಾಗದು ಎಂದೂ ಹೇಳಬಹುದು. ಹೀಗೆ ಬೆರೆಸುವ ಬಗೆ ಮಾತಿನಲ್ಲಿ ಮಾತ್ರ ಹೆಚ್ಚಾಗಿ ಕಾಣುತ್ತದೆ. ಈ ಮಾತುಗಳು ಅನೌಪಚಾರಿಕ ನೆಲೆಗಳಲ್ಲಿವೆ. ಈ ಅನೌಪಚಾರಿಕ ನೆಲೆಗಳಿಗೆ ತಕ್ಕ ಕನ್ನಡವನ್ನು ನಾವು ಕಟ್ಟಿಕೊಳ್ಳಬೇಕಾಗುತ್ತದೆ. ಅದು ಸಾಧ್ಯವಾಗುವ ಒಂದು ದಿಸೆಯೆಂದರೆ ಹೀಗೆ ಬೆರೆಸಿದ ಕನ್ನಡವೊಂದನ್ನು ರೂಪಿಸಿ ಕನ್ನಡದ ತಾಳುವಿಕೆಯನ್ನು ಪರೀಕ್ಷಿಸುವುದು. ನಾನು ಮೊದಲಲ್ಲೇ ಹೇಳಿದಂತೆ ಎಷ್ಟೇ ಇಂಗ್ಲಿಶ್ ಬೆರೆಸಿದರೂ, ಮೂಲ ವಾಕ್ಯ ಮಾತ್ರ ಕನ್ನಡದ ಚೌಕಟ್ಟನ್ನು ಮೀರುವುದಿಲ್ಲ. ಆ ವಾಕ್ಯವನ್ನು ಇಂಗ್ಲಿಶ್ ಎಂದು ಕರೆಯಲಾಗುವುದಿಲ್ಲ. ಅಂದರೆ ಕನ್ನಡ ವಾಕ್ಯದ ತಾಳಿಕೆ ಹೀಗೆ ಪರೀಕ್ಷೆಗೆ ಸಿಲುಕುತ್ತಿದೆ. ಇದೂ ಒಂದು ರೀತಿಯಲ್ಲಿ ಸವಾಲೇ ಸರಿ. ಮುಂದೇನಾಗುವುದೋ ನೋಡೋಣ.

# ಎಲ್ಲಾ ಭಾಷೆಗಳೂ ಸಮಾನ

ಪ್ರತಿಯೊಂದು ಭಾಷೆಯೂ ಆಯಾ ಭಾಷಿಕರ ಅಭಿವ್ಯಕ್ತಿಯ ಅವಶ್ಯಕತೆಗಳನ್ನು ಪೂರೈಸಲೆಂದು ರೂಪುಗೊಂಡಿದೆ. ಹಾಗಾಗಿ ಎಲ್ಲ ಭಾಷೆಗಳೂ ಈ ನಿಟ್ಟಿನಲ್ಲಿ ಸಮಾನ. ಅವುಗಳ ನಡುವೆ ತರತಮಭಾವ ಸಲ್ಲದು. ಭಾಷಾಶಾಸ್ತ್ರಜ್ಞರು ಈ ಸಮಾನತೆಯನ್ನು ಒಪ್ಪಿದರೂ, ಭಾಷೆಗಳ ಬಗ್ಗೆ ಸಾಮಾನ್ಯ ತಿಳುವಳಿಕೆ ಹೊಂದಿದ ಜನರು ದುರ್ಬಲ ಭಾಷೆಗಳೆಂಬ ವಿಭಜನೆಯನ್ನು ಪ್ರತಿಪಾದಿಸುತ್ತಾರೆ. ಆಧುನಿಕ ಕಾಲದ ನಾವು ಎಲ್ಲ ಮನುಷ್ಯರೂ ಸಮಾನರೆಂದೂ ಅವರ ನಡುವೆ ತರತಮ ಭಾವನೆ ಸಲ್ಲದು ಎಂದೂ ನಂಬುತ್ತೇವೆ. ಈ ನಂಬಿಕೆಯನ್ನು ಆಚರಿಸಲು ಯತ್ನಿಸುತ್ತೇವೆ. ಈ ನಂಬಿಕೆಗೆ ಧಕ್ಕೆ ಬಿದ್ದಾಗ ಮರುಗುತ್ತೇವೆ. ಪ್ರತಿಭಟಿಸುತ್ತೇವೆ. ಭಾಷೆಗೆ ಸಂಬಂಧಿಸಿದಂತೆಯೂ ಈ ಪರಿಸ್ಥಿತಿಯಿದೆ. ಪ್ರತಿಯೊಂದು ಭಾಷೆಯೂ ಒಂದರಿಂದ ಇನ್ನೊಂದು ಭಿನ್ನ. ಅವುಗಳನ್ನು ಕೆಲವು ವಂಶಗಳಲ್ಲಿ (ಇಂಡೋ ಯುರೋಪಿಯನ್, ಸೆಮೆಟಿಕ್, ದ್ರಾವಿಡ ಎಂಬ ವರ್ಗಗಳಲ್ಲಿ)ಅಳವಡಿಸಿ ಗುಂಪುಗಳಲ್ಲಿರಿಸಲಾಗುತ್ತದೆ. ಅಲ್ಲದೆ ಎಲ್ಲ ಭಾಷೆಗಳೂ ಸಮಾನ. ಅವುಗಳ ನಡುವೆ ತರತಮ ಭಾವ ಇಲ್ಲ; ಅಂಥ ಭಾವನೆ ಸಲ್ಲದು ಎಂದು ಹೇಳಲಾಗುತ್ತದೆ.

'ಸಮಾನ'ಎಂದರೇನು? ಭಾಷೆಗೂ ಸಮುದಾಯಗಳಿಗೂ ನಿಕಟ ಸಂಬಂಧವಿದೆ. ಸಮಾನವಾಗಿರುವ ಈ ಭಾಷೆಗಳಲ್ಲಿ ನಮಗೆ ಬೇಕಾದುದನ್ನು ಆಯ್ಕೆ ಮಾಡಿಕೊಳ್ಳಲು ಬರುವುದಿಲ್ಲ. ಪ್ರತಿಯೊಂದು ಭಾಷೆಗೂ ಅದರದೇ ಆದ ಲಕ್ಷಣಗಳಿವೆ. ಈ ಲಕ್ಷಣಗಳಲ್ಲಿ ಎಲ್ಲ ಭಾಷೆಗಳಿಗೂ ಸಮಾನವಾದವು ಯಾವುವು ಎಂದು ತಿಳಿಯಲು ಯತ್ನಗಳು ನಡೆದಿವೆ. ಒಂದು ಭಾಷೆ ಸರಳವೋ, ಸಂಕೀರ್ಣವೋ ಎಂದು ಚರ್ಚಿಸುವ ಪ್ರವೃತ್ತಿಯುಂಟು. ವಿಕಸನಶೀಲ ಸ್ಥಿತಿಗಳನ್ನೂ ಕೆಲವರು ಕಾಣಲು ಯತ್ನಿಸುತ್ತಾರೆ. ಹಾಗೆಯೇ ಭಾಷೆಗಳ 'ಸಾಮರ್ಥ್ಯ'ದಲ್ಲಿ ತರತಮತೆಯನ್ನು ಆರೋಪಿಸಲಾಗುತ್ತದೆ. ಇದೇನೇ ಇರಲಿ, ಎಲ್ಲ ಭಾಷೆಗಳೂ ಸಾಮಾಜಿಕ ಸಂಪರ್ಕವೆಂಬ ಕನಿಷ್ಠ ಉದ್ದೇಶವನ್ನು ಪೂರೈಸಲೆಂದೇ ಇವೆಯಾಗಿ ಅವುಗಳ ನಡುವೆ ಆ ನೆಲೆಯಲ್ಲಿ ವ್ಯತ್ಯಾಸಗಳೂ ಇಲ್ಲ. ಆಯಾ ಭಾಷಿಕ ಸಮುದಾಯಗಳ ಕಾಲದೇಶಗಳ ಅವಶ್ಯಕತೆಯನ್ನು ಪೂರೈಸಲು ಅವು ಶಕ್ತವಾಗಿವೆ. ಹಾಗಾಗಿ ಅವು ಸಮಾನ. ಅಧ್ಯಯನ ಮಾಡುವವರಿಗೆ ಯಾವ ಭಾಷೆಯಾದರೂ ಅಗಣಿತ ವೈವಿಧ್ಯಗಳನ್ನು ಒದಗಿಸಬಲ್ಲದು. ಮಾನವ ಸ್ವಭಾವ ಹಾಗೂ ಸಮಾಜಗಳ ಸ್ವರೂಪವನ್ನು ಅರಿಯಲು ನೆರವಾಗುತ್ತವೆ. ಹಾಗಾಗಿ ಯಾವ ಭಾಷೆಯಾದರೂ ಒಂದೇ. ಎಲ್ಲ ಭಾಷೆಗಳೂ ಸಮಾನ.

**'ಆದಿಮ' ಭಾಷೆಗಳು/ 'ಪ್ರಾಕೃತ'ಭಾಷೆಗಳು**

ಐರೋಪ್ಯ ನವೋದಯ ಕಾಲದಲ್ಲಿ ಜಗತ್ತಿನ ಹಲವು ಖಂಡಾಂತರಗಳು ಮತ್ತೆ ಜಗತ್ತಿನ ಭೂಪಟದಲ್ಲಿ ಕಾಣಿಸಿಕೊಂಡವು. ಅಲ್ಲಿ ನೆಲಸಿದ ಐರೋಪ್ಯರಿಗೆ ಮೂಲ ನಿವಾಸಿಗಳು ಭಿನ್ನವಾಗಿ ಕಂಡರು. ಅಲ್ಲದೆ 'ಆದಿಮ'ರಾಗಿ, 'ಪ್ರಾಕೃತ'ರಾಗಿ ಕಂಡರು. ಅನಾಗರಿಕರಾಗಿ ತೋರಿದರು. ಅವರ ಭಾಷೆಗಳೂ 'ಆದಿಮ'ವೆನಿಸಿದವು. ಈ ತಿಳುವಳಿಕೆ ಎಷ್ಟು ಬಲವಾಗಿ ಬೇರೂರಿದೆಯೆಂದರೆ ಈಗಲೂ 'ಆದಿಮ' ಭಾಷೆಗಳಿವೆಯೆಂದು ನಂಬುವವರಿದ್ದಾರೆ. ಆ ಭಾಷೆಗಳು ಸರಳ, ವಾಕ್ಯಗಳು ಸರಳ; ಸೀಮಿತ ಪದಕೋಶ. ಕೇವಲ ಮೂರ್ತಜಗತ್ತಿನ ಅನುಭವಗಳಷ್ಟೇ ಆ ಭಾಷೆಯಲ್ಲಿ ಮಂಡಿತವಾಗುತ್ತವೆ. ಸಂವಹನ ಪೂರ್ಣಗೊಳ್ಳಲು ಇಂಥ ಭಾಷೆಯನ್ನಾಡುವ ಜನರು ಅಶಾಬ್ದಿಕ ಸಾಮಗ್ರಿಯಿಂದ ಆಂಗಿಕ ಚಲನವಲನಗಳನ್ನು ಆಶ್ರಯಿಸುತ್ತಾರೆ. ಅಮೂರ್ತ ಜಗತ್ತು ಅವರ ಭಾಷೆಯಲ್ಲಿ ಅಳವಡದು. ಅತೀತವಾದ ಅನುಭವಗಳ ಅಭಿವ್ಯಕ್ತಿಯಂತೂ ದೂರದ ಮಾತು ಎಂದು ತಿಳಿಯಲಾಗುತ್ತದೆ. ಅಂಥ ಭಾಷೆಯನ್ನಾಡುವವರನ್ನು ಸಹಾನೂಭೂತಿಯಿಂದ ನೋಡಲು, ಅವರ ಮಿತಿಗಳನ್ನರಿತು ವ್ಯವಹರಿಸಲು ಸೂಚಿಸಲಾಗುತ್ತದೆ.

ನಾಗರಿಕತೆಯ ಮಾನದಂಡಗಳನ್ನೇ ಭಾಷೆಗೂ ಅನ್ವಯಿಸುವ ಮೇಲಿನ ಚಿಂತನೆಗಳಿಗೆ ಆಧಾರಗಳಿಲ್ಲ. ವಿಕಾಸವಾದದ ತಾತ್ತ್ವಿಕತೆಯನ್ನು ಅನ್ವಯಿಸಿ ಭಾಷೆಗೂ ವಿಕಾಸದ ಹಂತಗಳನ್ನು ಆರೋಪಿಸಲಾಗುತ್ತದೆ. ಅಂದರೆ ಇನ್ನೂ ವಿಕಾಸಗೊಳ್ಳದ ಭಾಷೆಗಳು ಇವೆಯೆಂದೂ, ನಾವು ಆಡುವ ಭಾಷೆ ವಿಕಸಿತವಾದದ್ದೆಂದೂ ನಂಬುವುದು ವ್ಯಾಪಕವಾಗಿದ್ದರೂ ಇದು ವಸ್ತುಸ್ಥಿತಿಯೊಡನೆ ಹೊಂದಿಕೆಯಾಗುವುದಿಲ್ಲ. ಸಮುದಾಯಗಳು ಸಂಸ್ಕೃತಿ ಇಲ್ಲವೇ ನಾಗರಿಕತೆಗಳ ನೆಲೆಯಲ್ಲಿ ವಿವಿಧ ಹಂತಗಳನ್ನು ದಾಟಿ ಬಂದಿರುವುದು ನಿಜ. ಆದರೆ ಭಾಷೆಗಳಿಗೆ ಈ ವಿಕಾಸದ ಹಂಗಿಲ್ಲ. ಯಾವುದೇ ಭಾಷೆಯಾದರೂ ಅದು ತಂತಾನೇ ಸ್ವಯಂಪೂರ್ಣವಾದ ಸುಭದ್ರವಾದ ವ್ಯವಸ್ಥೆಯಾಗಿರುತ್ತದೆ. ಪ್ರತಿಯೊಂದಕ್ಕೂ ನಿಯಮ, ವ್ಯವಸ್ಥೆಯಿರುತ್ತದೆ. ನಮ್ಮ ಭಾಷೆಯ ಲಕ್ಷಣಗಳಿಂದ ಮತ್ತೊಂದು ಭಾಷೆಯನ್ನು ನೋಡುವುದು ಸಾಧ್ಯವಿಲ್ಲ. ಉದಾಹರಣೆಗೆ ಪದಾದಿಯಲ್ಲಿ ವ್ಯಂಜನ ದ್ವಿತ್ವಗಳಿಗೆ ಅವಕಾಶ ನೀಡುವ A ಭಾಷೆಯನ್ನು ಅಂಥ ರಚನೆಯೇ ಇಲ್ಲದ B ಭಾಷೆಯೊಡನೆ ಹೋಲಿಸಿ ಅವುಗಳಲ್ಲಿ ಒಂದು ಸಂಕೀರ್ಣವೆಂದು ಇನ್ನೊಂದು ಸರಳವೆನ್ನಲು ಬರುವುದಿಲ್ಲ. ಭಾಷೆಯ ಮತ್ತೆ ಯಾವುದೋ ಅಂಶದಲ್ಲಿ ಈ ಗ್ರಹಿಕೆ ತಲೆಕೆಳಗಾಗುವುದೂ ಸಾಧ್ಯ. ಅಂದರೆ Bಯಲ್ಲಿರುವ ಒಂದು ರಾಚನಿಕ ಅಂಶ Aಯಲ್ಲಿ ಇಲ್ಲದಿರಬಹುದು.

ಭಾರತದ ಸಂದರ್ಭದಲ್ಲಿ ಸಂಸ್ಕೃತವನ್ನು ಸಮೃದ್ಧ ಹಾಗೂ ಪೂರ್ಣ ಸಮರ್ಥ ಭಾಷೆಯೆಂದು ಪರಿಗಣಿಸುವ ಚಿಂತನಾ ಪರಂಪರೆಯಿದೆ. ದೇಶೀಯ ಭಾಷೆಗಳಿಗೆ ಸಂಸ್ಕೃತದ ಸಾಮರ್ಥ್ಯವಿಲ್ಲವೆಂದೂ, ಹಾಗಾಗಿ ಅವು ಪೂರ್ಣಭಾಷೆಗಳಲ್ಲವೆಂದೂ

ತಿಳಿಯುವವರಿದ್ದಾರೆ. ಬಳಕೆಯ ಸಾಧ್ಯತೆ ಅಗಾಧವಾಗಿ ಅಬಾಧಿತವಾಗಿ ಸಂಸ್ಕೃತಕ್ಕೆ ಒದಗಿಬಂದಿದ್ದರಿಂದ ಅದು ಸಮೃದ್ಧವಾಗಿರುವಂತೆ ತೋರುತ್ತದೆ. ಉಳಿದ ದೇಶೀಯ ಭಾಷೆಗಳು ಬದಲಾಗಿರುವ ಸನ್ನಿವೇಶದಲ್ಲಿ ತಮಗೆ ಆರೋಪಿಸಲಾದ ಅಸಾಮರ್ಥ್ಯ ಹುಸಿಕಲ್ಪನೆಯೆಂದು ಸ್ಥಾಪಿಸಿತೋರಿಸುತ್ತಿವೆ.

ಭಾಷೆಯು ಹೆಚ್ಚು ಸಮರ್ಥವಾಗಲು ಅದರಲ್ಲಿ ಅನಾವಶ್ಯಕ ಸಂಕೀರ್ಣತೆ ಇರಬಾರದೆಂದೂ, ನಿಯಮಗಳ ನಿಯತತೆ ಪೂರ್ಣಪ್ರಮಾಣದಲ್ಲಿ ಇರಬೇಕೆಂದೂ ತಿಳಿಯಲಾಗುತ್ತದೆ. ಆದರೆ ಮಾನವರು ಬಳಸುವ ಯಾವುದೇ ಭಾಷೆಗೂ ಈ ಲಕ್ಷಣಗಳಿಲ್ಲ. ನಿಯಮಗಳಿರುತ್ತವೆ; ಆ ನಿಯಮಗಳಿಗೆ ವಿನಾಯತಿ ಪಡೆದ ಬಳಕೆಗಳೂ ಇರುತ್ತವೆ. ನಿಯಮಗಳು ಅತಿ ಸಂಕೀರ್ಣವಾಗಿರುವುದೂ ಉಂಟು. ನಿಯಮಗಳು ಸರಳಗೊಂಡು ಅವುಗಳ ಸಂಖ್ಯೆಯು ಕಡಿಮೆ ಇರುವ ನಿದರ್ಶನಗಳೆಂದರೆ ಪಿಜಿನ್ ಭಾಷೆಗಳು. ನಿಯಮಗಳಿಗೆ ವಿನಾಯತಿ ಇಲ್ಲದಿರುವ ಭಾಷಿಕ ವ್ಯವಸ್ಥೆಯೊಂದಿದ್ದರೆ ಅದು ಕೃತಕ ಭಾಷೆಗಳಲ್ಲಿ, ತಾಂತ್ರಿಕ ಭಾಷೆಗಳಲ್ಲಿ ಮಾತ್ರ. ಪಿಜಿನ್‌ಗಳಾಗಲೀ ತಾಂತ್ರಿಕ ಭಾಷೆಗಳಾಗಲೀ ನಿಯಮಗಳಿಗೆ ವಿನಾಯತಿಗಳು ಇರುತ್ತವೆ. ಆದರೆ ಅವುಗಳ ಸಂಖ್ಯೆ ಹಾಗೂ ಬಳಕೆ ಎರಡೂ ಸೀಮಿತ.

ಭಾಷೆಯ ನಿಯಮವ್ಯವಸ್ಥೆ ನಿಯತವಾದಷ್ಟೂ ಅದನ್ನು ಕಲಿಯುವುದು, ಕಲಿಸುವುದು ಸುಲಭವೆಂಬ ನಂಬಿಕೆಗೂ ಆಧಾರವಿಲ್ಲ. ಮಕ್ಕಳು ನಿಯಮಗಳ ಜತೆಗೆ ಅನಿಯತ ಬಳಕೆಯನ್ನೂ ಗ್ರಹಿಸುತ್ತಾರೆ. ಅನಿಯತತೆ ವಯಸ್ಕರಾಗಿ ಕಲಿಯುವಾಗ ಅಡ್ಡಿಯನ್ನುಂಟು ಮಾಡಬಹುದಾದರೂ ಅದರಿಂದ ಬಿಡುಗಡೆಯಿಲ್ಲ. ಏಕೆಂದರೆ ಈ ಅನಿಯತತೆ ಎಲ್ಲ ಭಾಷೆಗಳಲ್ಲೂ ಇರುವಂಥದೇ ಆಗಿದೆ.

ತಂತ್ರಜ್ಞಾನದ ಬೆಳವಣಿಗೆಯಲ್ಲಿ ಕೆಲವು ಭಾಷೆಗಳ ಬಳಕೆ ಹಾಗೂ ಅಳವಡಿಕೆಗೆ ವಿಶೇಷ ಅವಕಾಶ ಒದಗಿಬಂದುದರಿಂದ ಅವು ಹೆಚ್ಚು ಮುಂದುವರಿದಂತೆ ತೋರುತ್ತಿದೆ. ಉಳಿದ ಭಾಷೆಗಳು ಅವ್ಕಕಾಶವಂಚಿತ ಸ್ಥಿತಿಯಲ್ಲಿವೆ. ಈ ವಿಪರ್ಯಾಸಕ್ಕೆ ಪರಿಹಾರ ಸುಲಭವಲ್ಲ. ತಂತ್ರಜ್ಞಾನದ ವಿಕಾಸವೇ ಒಂದು ನಿರ್ದಿಷ್ಟ ಭಾಷೆಯ ಲಕ್ಷಣಗಳೊಡನೆ ನಿಕಟ ಹೊಂದಾಣಿಕೆ ಪಡೆದಿದ್ದರೆ ಪರ್ಯಾಯ ತಂತ್ರಜ್ಞಾನವನ್ನು ರೂಪಿಸುವ ಮೂಲಕ ಮಾತ್ರ ಇತರ ಭಾಷೆಗಳಿಗೂ ಅವಕಾಶ ಕಲ್ಪಿಸಲು ಸಾಧ್ಯ.

**ದೇವಭಾಷೆಗಳು**

ಪ್ರಾಕೃತ ಭಾಷೆಗಳ ಪರಿಕಲ್ಪನೆ ಒಂದು ತುದಿ. ದೇವಭಾಷೆಗಳದ್ದು ಇನ್ನೊಂದು ತುದಿ. ಸಂಸ್ಕೃತವನ್ನು; ಗೀರ್ವಾಣ ಭಾಷೆಯೆಂದು ದೇವಭಾಷೆಯೆಂದು ವಾದಿಸುವವರಿದ್ದಾರೆ. ಅದರಿಂದಾಗಿ ಭಾಷೆಗೆ ಪಾವಿತ್ರ್ಯ ಸಂದಿದೆಯೆಂದು ತಿಳಿಯುವರು. ಕ್ರೈಸ್ತರು ಲ್ಯಾಟಿನನ್ನು, ಮುಸ್ಲಿಂರು ಅರಾಬಿಕನ್ನು, ಯಹೂದಿಗಳು ಹಿಬ್ರೂವನ್ನು ಧಾರ್ಮಿಕ ವಲಯದ ಉನ್ನತೀಕರಣ ಮತ್ತು ಪಾವಿತ್ರವನ್ನು ಕಾಯ್ದುಕೊಳ್ಳಲು ಬಳಸುತ್ತಾರೆ. ಈ

ಉನ್ನತ ಭಾಷೆಗಳನ್ನು ಕಲಿಯುವುದು, ಬರೆಯುವುದು, ಓದುವುದು ಮಾತಾಡುವುದು ಸಮಾಜದ ಆಯ್ದ ಕೆಲವರ ಸ್ವತ್ತಾಗಿತ್ತು, ಈಗ ಇಂಥ ಕಟ್ಟುಪಾಡುಗಳಿಲ್ಲವಾದರೂ ಈ ಭಾಷೆಗಳಿಗೆ ಲಗತ್ತಾಗಿರುವ ಮಾನ್ಯತೆ ಶ್ರೇಷ್ಠತೆಯ ಚೀಟಿ ಮಾತ್ರ ಇನ್ನೂ ಉಳಿದಿದೆ. ಸಂಸ್ಕೃತ ನಾಟಕಗಳನ್ನು ಓದಿದಾಗ ಅಲ್ಲಿ ರಾಜರು, ಬ್ರಾಹ್ಮಣರು ಮಾತ್ರ ಸಂಸ್ಕೃತದಲ್ಲಿ ಮಾತನಾಡುವುದನ್ನು ನೋಡುತ್ತೇವೆ. ಉಳಿದ ಎಲ್ಲ ಸ್ತ್ರೀಪುರುಷರು ಪ್ರಾಕೃತದಲ್ಲಿ ಮಾತನಾಡಬೇಕು. ಮಂತ್ರಗಳ ಉಚ್ಚಾರಣೆಯ ಹಕ್ಕು ಕೆಲವರಿಗೆ ಮಾತ್ರ. ಅಲ್ಲದೆ ಅದನ್ನು ಕೇಳುವ ಹಕ್ಕು ಎಲ್ಲರಿಗೂ ಇಲ್ಲ. ಇಂಥ ಇಕ್ಕಟ್ಟಿನ ಪವಿತ್ರತೆಯ ಸ್ಥಿತಿ ಈಗ ಇಲ್ಲ. ಆದರೂ ಜನರ ನಂಬಿಕೆಯಲ್ಲಿ ಕೆಲವು ಭಾಷೆಗಳಿಗೆ ಇನ್ನೂ ಉನ್ನತ ಸ್ಥಾನಮಾನವಿದೆ.

ಜನರು ಕೆಲವೊಮ್ಮೆ ತಂತಮ್ಮ ಭಾಷೆಗಳು ಶ್ರೇಷ್ಠವೆಂದು ವಾದಿಸುವುದುಂಟು. ಅದಕ್ಕೆ ಅವರು ನೀಡುವ ಕಾರಣಗಳಲ್ಲಿ ವೈವಿಧ್ಯವಿದೆ. ತಮ್ಮದು ಅತಿ ಪ್ರಾಚೀನ ಭಾಷೆಯೆಂದು ಕೆಲವರು ಹೇಳಿದರೆ ಮತ್ತೆ ಕೆಲವರು ತಮ್ಮ ಭಾಷೆ ಹೆಚ್ಚು ನಿಯಮಬದ್ಧವಾಗಿದೆಯೆಂದು ವಾದಿಸುತ್ತಾರೆ. ಮತ್ತೆ ಕೆಲವರಿಗೆ ಅವರ ಭಾಷೆ ಸುಶ್ರಾವ್ಯವೆನಿಸಿದರೆ, ಕೆಲವರಿಗೆ ಅವರ ಭಾಷೆ ಓದಿಬರೆಯಲು ಸುಲಭವಾಗಿರುವುದೇ ಅದರ ಶ್ರೇಷ್ಠತೆಗೆ ಕಾರಣವಾಗಿ ತೋರುತ್ತದೆ. ಮತ್ತೆ ಕೆಲವರಿಗೆ ಅವರ ಭಾಷೆಯ ಲಿಪಿಯ ಸೌಂದರ್ಯವೇ ಆ ಭಾಷೆಯ ಶ್ರೇಷ್ಠತೆಗೆ ಕಾರಣವೆಂದು ಭಾವನೆ. ಈ ಎಲ್ಲ ಅನಿಸಿಕೆಗಳು ನಿಜ. ಹಾಗೂ ಆಯಾ ಭಾಷಿಕರ ನಂಬಿಕೆಗಳು ಬಲವಾಗಿರುತ್ತವೆ. ಆದರೆ ಈ ಯಾವುದೇ ಲಕ್ಷಣ ಒಂದು ಭಾಷೆಗೆ ಭಿನ್ನತೆಯನ್ನು ತರಬಹುದೇ ಹೊರತು ಶ್ರೇಷ್ಠತೆಯನ್ನು ತರಲಾರದು.

ಭಾಷೆಗಳ ಪ್ರಾಚೀನತೆಯನ್ನು ಸಾಧಿಸುವ ವಾದಗಳೆಲ್ಲ ಅನಿವಾರ್ಯವೆಂಬಂತೆ ದೈವಮೂಲವನ್ನು ಆಶ್ರಯಿಸುತ್ತವೆ. ಅರಾಬಿಕ್ ಭಾಷೆಯು, ಪ್ರವಾದಿಯ ಪ್ರಜ್ಞೆಯನ್ನು ವಿಸ್ತರಿಸಲು ದೇವರು ಆಯ್ದುಕೊಂಡ ಭಾಷೆಯೆನ್ನುತ್ತಾರೆ ಮುಸ್ಲಿಂರು. ಈಡನ್ ತೋಟದಲ್ಲಿ ಆಡಮನು ಮಾತನಾಡುತ್ತಿದ್ದುದು ಜರ್ಮನ್ ಭಾಷೆಯಂತೆ. ಮೂಲ ಜರ್ಮನರು ಬೈಬಲ್‌ನಲ್ಲಿ ಬರುವ ಬ್ಯಾಬಲ್ ಗೋಪುರದ ನಿರ್ಮಿತಿಯಲ್ಲಿ ಭಾಗಿಯಾಗಲಿಲ್ಲವಾಗಿ ಅವರ ಭಾಷೆ ಕಲುಷಿತವಾಗಲಿಲ್ಲ. ಅವರ ಭಾಷೆಯಲ್ಲಿದ್ದ ಹಳೆಯ ಒಡಂಬಡಿಕೆಯನ್ನು ದೇವರು ಅನಂತರ ಹೀಬ್ರೂಗೆ ಅನುವಾದಿಸಲು ಕಾರಣನಾದನು. ಇದೊಂದು ಕತೆ.

ಭಾಷೆಗಳಲ್ಲಿ ಮೇಲು ಕೀಳು ಎಂಬ ಭಾವ ಸಾಮಾಜಿಕ_ರಾಜಕೀಯ ಪರಿಸ್ಥಿತಿಯ ಪರಿಣಾಮವಷ್ಟೆ. ಜರ್ಮನಿಯ ರಾಜ ಐದನೆಯ ಚಾರ್ಲ್ಸ್ (1519–1558) ಗಂಡಸರೊಡನೆ ಫ್ರೆಂಚ್, ಹೆಂಗಸರೊಡನೆ ಇಟಾಲಿಯನ್ ಬಳಸಿ ಸಂಭಾಷಿಸಿದರೆ ದೇವರೊಡನೆ ಸ್ಪಾನಿಶ್‌ನಲ್ಲೂ, ಕುದುರೆಗಳೊಡನೆ ಜರ್ಮನ್‌ನಲ್ಲಿ ಮಾತನಾಡುತ್ತಿದ್ದನಂತೆ. ಸ್ವರ್ಗದಲ್ಲಿ ಆಡಮನು ಡೇನಿಶ್‌ನಲ್ಲೂ, ದೇವರು ಸ್ವೀಡಿಶ್‌ನಲ್ಲೂ, ಸರ್ಪವು ಫ್ರೆಂಚ್‌ನಲ್ಲೂ ಮಾತನಾಡಿತೆಂದು ಸ್ವೀಡಿಶ್ ಲೇಖಕನೊಬ್ಬ ಬರೆದಿದ್ದಾನೆ. ಇಂಥ ಎಲ್ಲ ಕತೆಗಳೂ ಸಾಮಾಜಿಕ ಸಂದರ್ಭದ ಸೂಚನೆಗಳನ್ನು ನೀಡುತ್ತವೆಯೇ ಹೊರತು ಭಾಷೆಗಳಲ್ಲಿನ ಮೇಲು ಕೀಳನ್ನು ಸಾಬೀತುಪಡಿಸುವುದಿಲ್ಲ.

ಭಾಷೆಗಳನ್ನು ಆಡುವ ಸಮುದಾಯಗಳು ಚರಿತ್ರೆಯಲ್ಲಿ ಅನುಭವಿಸಿದ ಏರುಪೇರುಗಳು ಆಯಾ ಭಾಷೆಗಳ ಮೇಲೂ ಪರಿಣಾಮ ಬೀರಿರುತ್ತವೆ. ಪ್ರಬಲ ಅಧಿಕಾರವುಳ್ಳ ಸಮುದಾಯದ ಭಾಷೆಗೆ ಮೊದಲ ಮಣೆ ದೊರಕುತ್ತದೆ. ಹಲವು ಹತ್ತು ಬಗೆಗಳಲ್ಲಿ ಆ ಭಾಷೆ ಬಳಕೆಯಾಗುತ್ತದೆ; ಬೆಳೆಯುತ್ತದೆ. ಬದಲಾದ ಸನ್ನಿವೇಶದಲ್ಲಿ ಅಧಿಕಾರದ ಹಸ್ತಾಂತರವಾದಾಗ ಬೇರೊಂದು ಭಾಷೆಗೆ ಆ ಮನ್ನಣೆ ಒದಗುವುದು. ಸಂಸ್ಕೃತ, ಪರ್ಸೋ–ಅರಾಬಿಕ್ ಮತ್ತು ಇಂಗ್ಲಿಶ್ ಭಾಷೆಗಳು ಭಾರತದ ಚರಿತ್ರೆಯಲ್ಲಿ ಪಡೆದ ಮನ್ನಣೆಗಳನ್ನು ಗಮನಿಸಿದರೆ ಭಾಷೆಯ ಶ್ರೇಷ್ಠತೆಗೂ, ಅದರಿಂದಾಗಿ ಅದಕ್ಕೆ ಒದಗುವ ಮನ್ನಣೆಗೂ, ಸಾಮಾಜಿಕ_ರಾಜಕೀಯ ಸಂದರ್ಭಗಳಿಗೂ ಸಂಬಂಧ ಗೋಚರವಾಗುತ್ತದೆ. ಅಲ್ಲದೆ ಆಯಾ ಭಾಷೆಯು ಪಡೆದ ಮನ್ನಣೆಗೆ ಅದರ ಅಂತರ್ಗತ ಲಕ್ಷಣಗಳಷ್ಟೇ ಕಾರಣವಲ್ಲವೆಂಬುದೂ ತಿಳಿಯುತ್ತದೆ.

ಚಾರಿತ್ರಿಕ ಕಾರಣಗಳಿಂದ ಕೆಲವು ಭಾಷೆಗಳು ವಿಶೇಷ ಅವಕಾಶ, ಸೌಲಭ್ಯಗಳನ್ನು ಪಡೆದು ಉಳಿದ ಭಾಷೆಗಳಿಗಿಂತ ಶ್ರೇಷ್ಠವೆಂಬ ಜನನಂಬಿಕೆಯ ಮನ್ನಣೆಯನ್ನು ಪಡೆದಿವೆ. ಆದರೆ ಈ ಶ್ರೇಷ್ಠತೆಯನ್ನು ನಿರ್ಧರಿಸಲು, ಗ್ರಹಿಸಲು ಭಾಷಾಶಾಸ್ತ್ರೀಯವಾದ ಯಾವ ಮಾನದಂಡವೂ ಈಗ ಲಭ್ಯವಿಲ್ಲ.

# ಭಾಷೆಯ ಕೆಲಸಗಳು

ನಮ್ಮ ನಿತ್ಯದ ವ್ಯವಹಾರಗಳಲ್ಲಿ ಭಾಷೆಯನ್ನು ಎಷ್ಟೊಂದು ಬಳಸುತ್ತೇವೆಂದರೆ ಯಾರಾದರೂ ಸುಮ್ಮನೆ 'ನೀವೇಕೆ ಭಾಷೆಯನ್ನು ಬಳಸುವಿರೆಂದು' ಕೇಳಿದರೆ ಒಂದೋ ತಬ್ಬಿಬ್ಬಾಗುತ್ತೇವೆ, ಇಲ್ಲವೇ ಪ್ರಶ್ನೆಯಲ್ಲಿ ಹುರುಳಿಲ್ಲವೆಂದು ತಿಳಿಯುತ್ತೇವೆ. ಭಾಷೆ ನಮ್ಮೊಡನೆ ಎಷ್ಟು ಸಹಜವಾಗಿ ಬೆರೆತಿರುವುದೆಂದರೆ ಅದನ್ನು ಕುರಿತು ಯೋಚಿಸುವ ಅವಕಾಶಗಳೇ ನಮಗೆ ಒದಗುವುದಿಲ್ಲ. ಎಷ್ಟೊಂದು ಬಗೆಯ ಬಳಕೆಗಳು ಭಾಷೆಗಿವೆಯೆಂದು ಲೆಕ್ಕಹಾಕಲು ಹೊರಟಾಗಲೂ ಗೊಂದಲಗಳಾಗುತ್ತವೆ. ಗೊಂದಲಕ್ಕೆ ಅಸ್ಪಷ್ಟತೆ ಕಾರಣವಲ್ಲ; ಭಾಷೆಗೆ ಇರುವ ಬಳಕೆಯ ಸಾಧ್ಯತೆಗಳು ಪಟ್ಟಿಮಾಡಿದಷ್ಟೂ ಉಳಿಯುತ್ತವೆ. ನಾವು ಭಾಷೆಯನ್ನು ಬಳಸುವಾಗ ನಮ್ಮಲ್ಲಿನ ಭಾಷಾಕೌಶಲಗಳು ಪ್ರಯುಕ್ತವಾಗುತ್ತವೆ. ಈ ಕೌಶಲಗಳು ಅಂಗಾಂಗ ಚಲನೆಯಷ್ಟೇ ಸಹಜ. ಮಾತ್ರವಲ್ಲ ಅತ್ಯಂತ ಜಟಿಲವೂ ಆಗಿರುತ್ತವೆ. ಆದರೆ ಈ ಜಟಿಲಕೌಶಲಗಳೂ ನಮ್ಮ ಭಾಷಿಕ ಸಾಮರ್ಥ್ಯದಲ್ಲಿ ಸೇರಿಕೊಂಡಿರುತ್ತದೆ. ಈ ಕೌಶಲಗಳು ಇಲ್ಲದಿದ್ದರೆ ಅಥವಾ ಇದ್ದರೂ ಬಳಸಲು ಸಾಧ್ಯವಾಗದಿದ್ದರೆ ಮಾತ್ರ ಅವುಗಳ ಮಹತ್ವ ನಮಗೆ ತಿಳಿಯುತ್ತದೆ.

ಭಾಷೆಯಿರುವುದು ಸಾಮಾಜಿಕ ಸಂಪರ್ಕಕ್ಕೆ, ಅಭಿಪ್ರಾಯ ಸಂವಹನಕ್ಕೆ ಎಂದು ಎಲ್ಲರೂ ಸಾಮಾನ್ಯವಾಗಿ ಒಪ್ಪುತ್ತಾರೆ. ನಾವು ಇನ್ನೊಬ್ಬರೊಡನೆ ಅಭಿಪ್ರಾಯ ಸಂವಹನಮಾಡಲು ಮಾತ್ರವಲ್ಲ, ಆ ಇನ್ನೊಬ್ಬರ ಅಭಿಪ್ರಾಯ ನಮಗೆ ಸಂವಹನಗೊಳ್ಳಲು ಭಾಷೆ ಅವಶ್ಯ. ಸುದ್ದಿಗಳನ್ನು ಹರಡಲು, ಯೋಗಕ್ಷೇಮ ವಿಚಾರಿಸಲು, ಮಾಹಿತಿಯನ್ನು ಪಡೆಯಲು ಮತ್ತು ಸರಳವಾದ ವ್ಯವಹಾರಗಳನ್ನು ನಡೆಸಲು ಹೀಗೆ ಭಾಷೆಯನ್ನು ಬಳಸುತ್ತೇವೆ. ಕುವೆಂಪು ಅವರು ಬಳಸಿದ ಮಾತಿನಲ್ಲಿ ಹೇಳುವುದಾದರೆ ಭಾಷೆ ಇಂಥ ಕಡೆಗಳಲ್ಲಿ 'ಲೋಕೋಪಯೋಗಿ'. ಇಲ್ಲಿ ಭಾಷೆಗೆ ವಾಚ್ಯಾರ್ಥ ಪ್ರತೀತಿಯೇ ಮುಖ್ಯವಾಗಿರುತ್ತದೆ. ಹಾಗೂ ಕೇಳಿದವರಿಗೆ, ಓದಿದವರಿಗೆ ನಿರ್ದಿಷ್ಟ ಸಂಗತಿಯನ್ನು ತಿಳಿಸುವ ಗುರಿ ಈ ಭಾಷೆಗೆ ಇರುತ್ತದೆ.

ಆದರೆ ಭಾಷೆಯನ್ನು ನಾವು ಎಷ್ಟು ವೈವಿಧ್ಯಯ ನೆಲೆಗಳಲ್ಲಿ ಬಳಸುತ್ತೇವೆಂದರೆ ಅವುಗಳಲ್ಲಿ 'ಲೋಕೋಪಯೋಗಿ' ಬಳಕೆಗೆ ಸ್ಥಾನ ಅತಿ ಕಡಿಮೆ. ಅದ್ದರಿಂದ ಅಭಿಪ್ರಾಯ ಸಂವಹನಕ್ಕೆ, ಸಾಮಾಜಿಕ ಸಂಪರ್ಕಕ್ಕೆ ಭಾಷೆಯನ್ನು ಬಳಸುತ್ತೇವೆನ್ನುವುದು ಸುಳ್ಳಲ್ಲವಾದರೂ, ಅದಷ್ಟೇ ಭಾಷೆಯ ಕೆಲಸವೆನ್ನಲು ಬಾರದು.

**ಭಾವೋಪಯೋಗಿ**

ನೀವು ರಸ್ತೆಯಲ್ಲಿ ನಡೆಯುತ್ತಿರುತ್ತೀರಿ. ಚಾಚಿಕೊಂಡಿರುವ ಚೂಪಾದ ಕಲ್ಲನ್ನು ಎಡವಿ ಬೆರಳಿಗೆ ನೋವಾಗುತ್ತದೆ. ಜತೆಗೆ ಚಪ್ಪಲಿ ಕಿತ್ತು ಹೋಗುತ್ತದೆ. ಬೇಸರದಿಂದ ಕಲ್ಲಿಗೋ ಚಪ್ಪಲಿಗೋ ಹಿಡಿಶಾಪ ಹಾಕುತ್ತೀರಿ. ಇಲ್ಲಿ ಭಾಷೆಯ ಕೆಲಸವನ್ನು 'ಅಭಿಪ್ರಾಯ ಸಂವಹನ' ಎನ್ನುವಂತಿಲ್ಲ. ಏಕೆಂದರೆ ಯಾರಿಗೆ ಅಭಿಪ್ರಾಯವನ್ನು ಸಂವಹನಗೊಳಿಸಲಾಗುತ್ತಿದೆ? ಅಲ್ಲಿ ಯಾರೂ ಇಲ್ಲ.

ಹೀಗೆ ಮೇಲೆ ಹೇಳಿದಂಥ ಸಂದರ್ಭಗಳಲ್ಲಿ ಮಾನಸಿಕ ಒತ್ತಡದಿಂದ ಬಿಡುಗಡೆ ಪಡೆಯಲು ನಾವು ಭಾಷೆಯ ನೆರವನ್ನು ಪಡೆಯುತ್ತಿರುತ್ತೇವೆ. ಕೋಪ, ದುಃಖ, ಉದ್ವೇಗ, ಭಯ ಮುಂತಾದ ಯಾವುದೇ ಭಾವದ ತೀವ್ರತೆಗೆ ಒಳಗಾದಾಗ ಒಂದಿಲ್ಲೊಂದು ಬಗೆಯಲ್ಲಿ ಭಾಷೆಯ ಬಳಕೆಯ ಮೂಲಕ ಆಯಾ ಭಾವದ ತೀವ್ರತೆಯನ್ನು ತೋರಿಸುತ್ತೇವೆ; ಆ ಭಾವದಿಂದ ಪರೋಕ್ಷವಾಗಿ ಬಿಡುಗಡೆಯನ್ನೂ ಪಡೆಯುತ್ತೇವೆ. ಇಂಥ ಸಂದರ್ಭದಲ್ಲಿ ಭಾಷೆ 'ಭಾವೋಪಯೋಗಿ'ಯಾಗಿರುತ್ತದೆ. ಭಾಷೆಯನ್ನು ಹೀಗೆ ಭಾವೋಪಯೋಗಿ ನೆಲೆಯಲ್ಲಿ ಬಳಸುವಾಗ ನಾವು ಒಂಟಿಯಾಗಿರಬಹುದು ಇಲ್ಲವೇ ಜತೆಯಲ್ಲಿ ಯಾರಾದರೂ ಇರಬಹುದು. ಗೊಣಗಾಟ, ಕಿರುಚಾಟ, ಬೈಗುಳಗಳ ರೀತಿಯಲ್ಲೇ ಉತ್ಸಾಹ, ಆನಂದಗಳನ್ನು ಭಾವೋಪಯೋಗಿ ಭಾಷೆಯಲ್ಲಿ ತೋರಿಸಬಹುದಾಗಿದೆ.

ಭಾಷೆ ಭಾವೋಪಯೋಗಿಯಾದಾಗ ಉಚ್ಚರಿಸುವವರ ಭಾವಸ್ಥಿತಿಯನ್ನು ಸೂಚಿಸುತ್ತಿರುವಂತೆ ಕೆಲವೊಮ್ಮೆ ಕೇಳುವವರಲ್ಲೂ ನಿರ್ದಿಷ್ಟ ಭಾವೋದ್ದೀಪನಕ್ಕೆ ಕಾರಣವಾಗುವುದು ಸಾಧ್ಯ. ಇಂಥಲ್ಲಿ ಅಭಿಪ್ರಾಯ ಸಂವಹನದ ಬದಲು ಭಾವಸಂವಹನ ನಡೆದಿರುತ್ತದೆ. ಸಾಮಾನ್ಯ ವ್ಯವಹಾರದ ಕೆಲವು ಸಂದರ್ಭಗಳಿಂದ ಹಿಡಿದು ಭಾಷೆಯಲ್ಲಿ ರಚನೆಗೊಳ್ಳುವ ಕಾವ್ಯದವರೆಗೆ ಈ ಬಗೆಯ ಸಂವಹನದ ವ್ಯಾಪ್ತಿ ಹರಡಿದೆ.

ಭಾವೋಪಯೋಗಿ ಭಾಷೆಯು ಅಯ್ಯೋ!, ಥತ್, ಛೇ, ಥೂ, ಮುಂತಾದ ಪದಗಳ ರೂಪದಲ್ಲಿರಬಹುದು. ಮಾತಿನ ನಡುವೆ ಬರುವ ಹಾಂ, ಊಂ ಮುಂತಾದ ಧ್ವನಿಗಳಾಗಿರಬಹುದು. ಮಾತಾಡುವ ವ್ಯಕ್ತಿಯ ಭಾವಸ್ಥಿತಿಯನ್ನು ಸೂಚಿಸುವ ಧ್ವನಿಯ ಏರಿಳಿತದ ರೂಪದಲ್ಲಿ ವ್ಯಕ್ತವಾಗಬಹುದು. ಇವು ದಿನವೂ ಎದುರಾಗುವ ಸಂದರ್ಭಗಳು. ಇವಲ್ಲದೆ ಭಾಷೆಯ ಕಲಾತ್ಮಕ ಉಪಯೋಗದ ವಲಯವಾದ ಕಾವ್ಯಗಳಲ್ಲಿ ಭಾವೋಪಯೋಗಿ ನೆಲೆಯ ಸೂಕ್ಷ್ಮ ಹಾಗೂ ಸಂಕೀರ್ಣ ಸ್ವರೂಪಗಳು ಕಾಣಸಿಗುತ್ತವೆ. ಆದರೆ ಸಾಮಾನ್ಯವಾಗಿ ಕಾವ್ಯಗಳಲ್ಲಿ ವಿಷಯಸಂವಹನಕ್ಕೆ ಅವಕಾಶಗಳಿರುತ್ತವೆ. ಭಾವ ಮತ್ತು ವಿಷಯಗಳಲ್ಲಿ ಯಾವುದು ಪ್ರಧಾನವೆಂಬ ಪ್ರಶ್ನೆ ಬಿಡಿಸಲಾಗದೆ ಹಾಗೇ ಉಳಿಯುತ್ತದೆ.

**ಸಾಮಾಜಿಕ ನೆಲೆ**

ಪರಿಚಿತರು ಎದುರು ಬಂದರೆ 'ನಮಸ್ಕಾರ ಚೆನ್ನಾಗಿದ್ದೀರಾ?' ಎನ್ನುತ್ತೇವೆ. ಅಥವಾ ಬೀಳ್ಕೊಡುವಾಗ 'ಹೋಗಿ ಬರ್ತೀರಾ?' ಎನ್ನುತ್ತೇವೆ. ಅಶುಭವೆನಿಸಿದ ಮಾತು ಬಂದಾಗ

'ಬಿಡ್ತು' ಎನ್ನುತ್ತೇವೆ. ಇಂಥ ನೂರಾರು ಸಂದರ್ಭಗಳಲ್ಲಿ ನಾವು ಭಾಗಿಗಳಾಗಿದ್ದೇವೆ. ಇಲ್ಲಿ ಭಾಷೆಯ ಉಪಯೋಗದ ನೆಲೆ ಯಾವುದು? ಕೇವಲ ಆರೋಗ್ಯದ ಮಾಹಿತಿಯನ್ನು ಪಡೆಯಲು ಮೊದಲ ಪ್ರಶ್ನೆಯನ್ನು ನಾವು ಕೇಳುವುದಿಲ್ಲ. ಒಂದು ಸಾಮಾಜಿಕ ಸಂಬಂಧಕ್ಕೆ ಧಕ್ಕೆಯೊದಗಿದಾಗ ಸಾಮಾನ್ಯವಾಗಿ ಈ ಬಗೆಯ ಮಾತುಕತೆಗಳೂ ಗೈರುಹಾಜರಾಗುತ್ತವೆ.

ವ್ಯಕ್ತಿಗಳ ನಡುವೆ ಇರುವ ಸಾಮಾಜಿಕ ಸಂಬಂಧದ ಸ್ವರೂಪ, ಒಂದು ಸಾಮಾಜಿಕ ಸಂದರ್ಭದಲ್ಲಿ ಭಾಗಿಗಳಾಗುವ ವ್ಯಕ್ತಿಗಳ ಪಾತ್ರ ಇವುಗಳಿಗೆ ಹಲವು ನೆಲೆಗಳಿರುತ್ತವೆ. ವಯಸ್ಸಿನ ಅಂತರವಿರುವವರು ಪರಸ್ಪರ ಭೇಟಿಯಾಗದಾಗ 'ನಮಸ್ಕಾರ'ಎನ್ನುವ ಪದವನ್ನು ಯಾರು ಬಳಸಬೇಕು ಎಂಬುದು ಖಚಿತವಿರುತ್ತದೆ. ಆದರೆ ಇಬ್ಬರು ಆಪ್ತರು, ಗೆಳೆಯರು ಭೇಟಿಯಾದಾಗ ಬಳಕೆಯಾಗುವ ನಿಯಮವೇ ಬೇರೆ. ಸಾಮಾಜಿಕ ಸಂದರ್ಭದಲ್ಲಿರುವ ವ್ಯಕ್ತಿಗಳ ನಡುವಣ ಸಂಬಂಧದ ಸಂಕೀರ್ಣತೆಯೂ ಕೂಡ ಅಲ್ಲಿನ ಭಾಷಾವ್ಯವಹಾರದ ವಿವಿಧ ನೆಲೆಗಳಲ್ಲಿ ಬೆರೆತುಕೊಂಡಿರುತ್ತದೆ.

ಈ ಮೇಲಿನ ಸಂದರ್ಭಗಳ ಭಾಷಾವ್ಯವಹಾರಗಳಲ್ಲಿ, ಮಾತುಗಳ ರಚನೆಯಲ್ಲಿ ಸಾಮಾನ್ಯವಾಗಿ ನಿರ್ದಿಷ್ಟ ರೂಪಗಳು ಆವರ್ತಗೊಳ್ಳುತ್ತಿರುತ್ತವೆ. ಆ ಮಾತುಗಳಿಗೆ ಎಷ್ಟೋ ವೇಳೆ ನಿರ್ದಿಷ್ಟ ಅರ್ಥವಿರುವುದಿಲ್ಲ. ಅರ್ಥವಿದ್ದರೂ ಆ ಸಂದರ್ಭದಲ್ಲಿ ಅದು ಮುಖ್ಯವಾಗಿರುವುದಿಲ್ಲ. ವಾಚ್ಯಾರ್ಥವನ್ನೇ ಪರಿಗಣಿಸಿದರೆ ಕೆಲವೊಮ್ಮೆ ಉಕ್ತಿಗಳು ಅಸಂಬದ್ಧವಾಗಿಯೂ ಕಾಣುತ್ತದೆ. ಬೆಳಿಗ್ಗೆ ಎದ್ದು ಎದುರಾದ ಪರಿಚಿತರಾದವರನ್ನು 'ಎದ್ದಿರಾ?' ಎಂದು ಕೇಳುತ್ತೇವೆ. ನಿದ್ರೆಯಿಂದ ಎದ್ದು ಎದುರಾಗಿರುವವರನ್ನು 'ಎದ್ದಿರಾ?' ಎಂದು ಕೇಳುವುದು ಅಸಹಜವೆಂದು ತೋರುತ್ತವೆ. ಆದರೆ ಸಹಜವಾಗಿ ಕೇಳುವ ವ್ಯಕ್ತಿ ಅಥವಾ ಕೇಳಲಾದ ವ್ಯಕ್ತಿ ಈ ಉಕ್ತಿಯನ್ನು ಅಹಜವೆಂದು ಭಾವಿಸುವುದಿಲ್ಲ. ಸಾಮಾಜಿಕ ವ್ಯವಹಾರವನ್ನು ಮೊದಲು ಮಾಡುವ, ಮುಂದುವರೆಸುವ ಹಾಗೂ ಕೊನೆಗೊಳಿಸುವ ಕ್ರಿಯೆಗಳಿಗೆ ಈ ಮಾದರಿಯ ಉಕ್ತಿಗಳು ಅತ್ಯವಶ್ಯಕವಾಗಿರುತ್ತವೆ. ಈ ಬಗೆಯ ಭಾಷೆಯ ಉಪಯೋಗವನ್ನು 'ಸಂಬಂಧೋಪಯೋಗಿ' ಎನ್ನಬಹುದು. ಏಕೆಂದರೆ ಇಂಥ ಮಾತುಗಳನ್ನು ಬಳಸಿದಾಗ ಸಾಮಾಜಿಕ ಸಂಬಂಧ_ಅದು ತೋರಿಕೆಯದ್ದಾದರೂ– ಇರುವುದು ಸ್ಪಷ್ಟವಾಗುತ್ತದೆ. ಈ ಮಾತುಗಳು ಇಲ್ಲದಿದ್ದರೆ, ಅಥವಾ ಸೂಕ್ತ ಭಾಷಿಕ ಪ್ರತಿಕ್ರಿಯೆ ಇಲ್ಲದಿದ್ದರೆ ಆಗ ಆ ಸಂಬಂಧಕ್ಕೆ ಧಕ್ಕೆಯೊದಗಿರುವುದು ಖಚಿತಗೊಳ್ಳುತ್ತದೆ.

ಭಾಷೆಯ ಸಂಬಂಧೋಪಯೋಗಿ ನೆಲೆಯು ಪ್ರತಿಯೊಂದು ಭಾಷೆಯಲ್ಲೂ ವಿಶಿಷ್ಟವಾದ ರೀತಿಯಲ್ಲೇ ಕಂಡುಬರುತ್ತದೆ. ಅಂದರೆ ಒಂದೊಂದು ಭಾಷಿಕ ಸಮುದಾಯವೂ ನಿರ್ದಿಷ್ಟ ಸಾಮಾಜಿಕ ಸಂದರ್ಭದಲ್ಲಿ ಬಳಕೆಯಾಗುವ ಉಕ್ತಿರೂಪವನ್ನು ತನ್ನದೇ ಆದ ರೀತಿಯಲ್ಲಿ ರೂಪಿಸಿಕೊಂಡಿರುತ್ತದೆ. ಒಂದು ಭಾಷೆಗೆ ವಿಶಿಷ್ಟವಾದ ಉಕ್ತಿಯನ್ನ ಇನ್ನೊಂದು ಭಾಷೆಯ ಸಂದರ್ಭದಲ್ಲಿ ಬಳಸಲು ಆಗುವುದಿಲ್ಲ; ಬಳಸಿದರೆ ಸಾಮಾಜಿಕ ಸಂಬಂಧಗಳು ಏರುಪೇರಾಗಲೂಬಹುದು. ಹಲೋ ಎಂಬ ಇಂಗ್ಲಿಶ್ ಉಕ್ತಿಗೆ ಈಗ ಸಾರ್ವತ್ರಿಕ ಬಳಕೆಯ ಸ್ವರೂಪ ದೊರಕಿದೆಯೆಂದು ತೋರಿದರೂ ಹಾಗಿಲ್ಲ. ದೂರವಾಣಿ ಸಂಭಾಷಣೆ ಮೊದಲಾಗುವಾಗ ಕರೆಯನ್ನು ಪಡೆದ ವ್ಯಕ್ತಿಯ

ಮೊದಲ ಮಾತು ಯಾವಾಗಲೂ ಹಲೋ ಆಗಿರುವುದೆಂದು ತಿಳುವಳಿಕೆ ಸರಿಯಲ್ಲ ಬೇರೆ ಬೇರೆ ಭಾಷಿಕರು ಬೇರೆ ಬೇರೆ ಭಾಷಿಕ ತಂತ್ರಗಳನ್ನು ಇದಕ್ಕೆ ಬಳಸುತ್ತಾರೆ. ಮಧ್ಯ ಆಫ್ರಿಕಾದ ಬುರುಂಡಿ ದೇಶದ ರುಂಡಿ ಜನಾಂಗದ ಹೆಂಗಸರು ಸಂಭಾಷಣೆಯ ಕೊನೆಗೆ ಮನೆಗೆ ಹೋಗುವಾಗ 'ಮನೆಗೆ ಹೋಗಬೇಕು, ಇಲ್ಲದಿದ್ದರೆ ನನ್ನ ಗಂಡ ಹೊಡೆಯುತ್ತಾನೆ' ಎಂಬ ಅರ್ಥದ ಮಾತನ್ನು ಹೇಳುವುದುಂಟು.

ಹೀಗೇಯೇ 'ಸಂಬಂಧೋಪಯೋಗಿ' ನೆಲೆಯಲ್ಲಿ ಭಾಷೆಯನ್ನು ಬಳಸುವ ಪ್ರಮಾಣ ಕೂಡ ಭಾಷಿಕರಿಂದ ಭಾಷಿಕರಿಗೆ ಬೇರೆ ಬೇರೆಯಾಗುತ್ತದೆ. ಸಾಮಾಜಿಕ ಸಂಬಂಧಗಳನ್ನು ಅತ್ಯಂತ ಕನಿಷ್ಠ ಉಕ್ತಿಗಳಿಂದ ನಿರ್ವಹಿಸುವ ಭಾಷಿಕ ಸಮುದಾಯಗಳೂ ಇವೆ.

**ನಾದಶಕ್ತಿ**

ಹಲವು ಕೆಲಸಗಾರರು ಒಟ್ಟಾಗಿ ಒಂದೇ ಕೆಲಸ ಮಾಡುವಾಗ ಐಸಾ ಕೂಗುವುದನ್ನು ಗಮನಿಸಿದ್ದೇವೆ. ಯಾರಾದರೊಬ್ಬ ವ್ಯಕ್ತಿ ಪದಗುಚ್ಛವೊಂದನ್ನು ಉಚ್ಚರಿಸಿದಾಗ ಉಳಿದವರೆಲ್ಲ ಐಸಾ ಎನ್ನುತ್ತಿರುತ್ತಾರೆ. ಮೊದಲು ಹೇಳುವ ಪದಗುಚ್ಛಕ್ಕೆ ಯಾವುದೇ ವಿಶೇಷ ಅರ್ಥ ಅಥವಾ ಮಹತ್ವ ಇರಬೇಕೆಂದಿಲ್ಲ. ಮಕ್ಕಳ ಆಟಗಳಲ್ಲಿ ಬರುವ ಪ್ರಾಸಬದ್ಧವಾದ ಸಾಲುಗಳನ್ನು ಗಮನಿಸಿದರೂ ಅಲ್ಲಿನ ಪದಗಳಿಗೆ ಯಾವುದೇ ವಿಶಿಷ್ಟ ಅರ್ಥವಿರುವಂತೆ ತೋರುವುದಿಲ್ಲ. ಅಥವಾ ಇರಬಹುದಾದ ಅರ್ಥ ಕೂಡ ಮಕ್ಕಳಿಗೆ ಮಹತ್ವದ್ದೆಂದು ಅನಿಸುವುದಿಲ್ಲ. ಅವರು ಪುನರಾವರ್ತನೆಯಾಗುವ ನಾದ ಹಾಗೂ ಲಯದೆಡೆಗೆ ಮಾತ್ರ ಆಕರ್ಷಿತರಾಗುತ್ತಾರೆ. ಅವರ ಕುಣಿತ, ಓಟ, ಆಟದ ಚಲನೆಗಳಿಗೆ ಅನುಗುಣವಾಗಿ ಉಚ್ಚರಿತವಾಗುವ ನಾದ ಇಲ್ಲಿ ಮುಖ್ಯ.

ತೋರಿಕೆಗೆ ಭಾಷೆಯ ಬಳಕೆಯಾಗುತ್ತಿದ್ದರೂ ಅರ್ಥ ಅಮುಖ್ಯವಾಗುವ ಪ್ರಸಂಗಗಳಲ್ಲಿ ಹಲವು ಬಗೆಗಳಿವೆ. ಆಚರಣೆಗಳಲ್ಲಿ ಬಳಕೆಯಾಗುವ ಘೋಷಗಳು, ಕೆಲಸಗಾರರಲ್ಲಿ ಉತ್ಸಾಹ ತುಂಬುವ ಕೂಗುಗಳು, ಮಕ್ಕಳ ಆಟದ ಹಾಡುಗಳು, ಬೃಹತ್ ಸಭೆಯ ಘೋಷಣೆಗಳು ಇವೆಲ್ಲ ಮೇಲೆ ಹೇಳಿದ ರೀತಿಯ ಬಳಕೆಗಳು. ಜನಪ್ರಿಯ ಗೀತೆಗಳನ್ನು ಹಾಡುವವರು ಮಾತುಗಳನ್ನು ಮರೆತರೂ ಗುನುಗುನಿಸುವ ವಿಧಾನ ಇನ್ನೊಂದು ನಿದರ್ಶನ. ಅಂಥ ಗೀತೆಗಳಲ್ಲಿ ಭಾಷೆ ಇರುತ್ತದೆ. ಆದರೆ ಆಕರ್ಷಣೆಗೆ ಕಾರಣವಾಗುವುದು ನಾದವೇ ಹೊರತು ಅರ್ಥವಲ್ಲ.

ತೋಂಡಿಯಲ್ಲಿರುವ ಕಾವ್ಯಗಳಲ್ಲಿ ಆವರ್ತಗೊಳ್ಳುವ ನಿರರ್ಥಕ ಪದಗುಚ್ಛಗಳಿರುತ್ತವೆ. ಹಾಗೆಯೇ ಒಂಟಿಯಾಗಿರುವ ವ್ಯಕ್ತಿ ಹಾಡಿಕೊಳ್ಳುವ ಹಾಡುಗಳಲ್ಲೂ ನಾದವೇ ಮುಖ್ಯ; ಅರ್ಥವಲ್ಲ. ಈ ಎಲ್ಲ ಸಂದರ್ಭಗಳನ್ನು ಗಮನಿಸಿದರೆ ಭಾಷೆಯ 'ನಾದೋಪಯೋಗಿ' ಲಕ್ಷಣ ಮನದಟ್ಟಾಗುತ್ತದೆ. ಭಾಷೆ ಇದ್ದರೂ ಇಲ್ಲದ ನೆಲೆಯಿದು.

ನಾಲಿಗೆಯ ಮೇಲೆ ಮಚ್ಚೆ ಇದ್ದವರು ನುಡಿದದ್ದೆಲ್ಲವೂ ನಿಜವಾಗುತ್ತದೆಂಬ ನಂಬಿಕೆ ಕೆಲವು ಪ್ರದೇಶದ ಜನರಲ್ಲಿದೆ. ಅಂಥವರನ್ನು ಕಂಡರೆ ಜನ ಹೆದರುತ್ತಾರೆ.

ಕೆಡುಕನ್ನು ನುಡಿಯದಿರಲೆಂದು ಬಯಸುತ್ತಾರೆ. ಈ ನಂಬಿಕೆ ನಿಜವಿರಲಿ, ಇಲ್ಲದಿರಲಿ, ಮಾತಿಗೆ ವಾಸ್ತವ ಜಗತ್ತನ್ನು ನಿಯಂತ್ರಿಸುವ ಶಕ್ತಿ ಇದೆಯೆಂದು ತಿಳಿದಿರುವುದಂತೂ ನಿಜ.

ವರ, ಹರಕೆ, ಶಾಪ, ಬೈಗುಳಗಳ ಬಳಕೆಯಲ್ಲಿ ಇದೇ ತರ್ಕವಿದೆ. ಪ್ರಾರ್ಥನೆಗಳ ಭಾಷೆಗೂ ಲೋಕಪರಿವರ್ತನೆಯ ಸಾಮರ್ಥ್ಯವಿದೆಯೆಂದು ತಿಳಿಯುತ್ತೇವೆ. ಅಲೌಕಿಕ ಶಕ್ತಿಯನ್ನು ಒಲಿಸಿಕೊಳ್ಳಲು, ಆ ಮೂಲಕ ವಿಶೇಷ ಸಾಮರ್ಥ್ಯವನ್ನು ಪಡೆದುಕೊಳ್ಳಲು ನಿರ್ದಿಷ್ಟ ಬಗೆಯ ಭಾಷಾರಚನೆಗಳನ್ನು ಬಳಸಲಾಗುತ್ತದೆ. ಪ್ರಾರ್ಥನೆಗಳಲ್ಲಿ ಇಂದ್ರಿಯಾತೀತವಾದ ಶಕ್ತಿಯೊಡನೆ ಸಂಭಾಷಿಸುವ ವಿಧಾನವಿರುತ್ತದೆ. ಹಾಗಾಗಿ ಅಲ್ಲಿ ಭಾಷೆ 'ಲೋಕೋಪಯೋಗಿ'ಯಾಗಿರುತ್ತದೆಂದು ತಿಳಿಯುವುದು ಸಾಧ್ಯ. ಆದರೆ ಈ ಸಂಭಾಷಣೆ ಏಕಮುಖೀ ನಿವೇದನೆಯ ರೂಪದಲ್ಲಿ ಇರುತ್ತದೆ. ಸಾಮಾನ್ಯ ಸಂಭಾಷಣೆಗಳಲ್ಲಿ ಕಾಣುವ ಭಾಷಿಕ ಪ್ರತಿಸ್ಪಂದನ ಇಲ್ಲಿ ಇರುವುದಿಲ್ಲ. ನಿವೇದಕರಿಗೆ ತಮ್ಮ ಪ್ರಾರ್ಥನೆಯ ಮಾನಸಿಕ ಅವಸ್ಥೆಯಲ್ಲಿ ಮಾತ್ರ ಕೇಳಿಸಿಕೊಳ್ಳುವ ಶಕ್ತಿಯಿರುತ್ತದೆ. ಹೀಗಾಗಿ ಇಲ್ಲಿ ಭಾಷೆ 'ಲೋಕೋಪಯೋಗಿ'ಯಾಗಿರುತ್ತದೆಂಬುದು ಕೇವಲ ಔಪಚಾರಿಕ.

ವರ/ಶಾಪ, ಹರಕೆ/ಬೈಗುಳಗಳಲ್ಲಿ ಮಾತಿಗೆ ಕ್ರಿಯಾತ್ಮಕವಾಗುವ 'ಕೆಲಸ ಮಾಡುವ' ಶಕ್ತಿ ಇದೆಯೆಂಬ ನಂಬಿಕೆ ಬಲವಾಗಿರುತ್ತದೆ. ಉಚ್ಚರಿಸುವ ವ್ಯಕ್ತಿ ಮತ್ತು ಕೇಳಿಸಿಕೊಳ್ಳುವ ವ್ಯಕ್ತಿ ಇಬ್ಬರೂ ಈ ನಂಬಿಕೆಯಲ್ಲಿ ಭಾಗಿಗಳು. ಈ ಬಗೆಯ ಭಾಷಾರಚನೆಗೆ ಕ್ರಿಯಾಶೀಲ ಸಾಮರ್ಥ್ಯವಿಲ್ಲವೆಂದು ವಾದಿಸುವವರು ಈ ನಂಬಿಕೆಯಿಂದ ಹೊರಬರಲು ಲೌಕಿಕವಾಗಿ ಪ್ರಯತ್ನಿಸುತ್ತಿರುತ್ತಾರೆ. ಆದರೆ ಭಾಷಾಸಮುದಾಯಗಳಲ್ಲಿ ಭಾಷೆಯ ಈ ಕ್ರಿಯಾಶೀಲ ಸಾಮರ್ಥ್ಯದ ಬಗೆಗೆ ಒಂದಿಲ್ಲೊಂದು ರೀತಿಯ, ಬೇರೆ ಬೇರೆ ಪ್ರಮಾಣದ ನಂಬಿಕೆ ಇದ್ದೇ ಇರುತ್ತದೆ.

### ಮಾಹಿತಿ ದಾಖಲೆ

ಕಾಳಗದಲ್ಲಿ ಮಡಿದ ವೀರರು, ಸತಿ ಹೋದ ಹೆಂಗಸರು ಇವರ ನೆನಪಿನಲ್ಲಿ ಶಾಸನಗಳನ್ನು ಬರೆಸುವ ಪದ್ಧತಿಯಿತ್ತು. ದಾನಶಾಸನಗಳೂ ಅಸಂಖ್ಯವಾಗಿವೆ. ಇತಿಹಾಸಕಾರರು, ಸಮಾಜಶಾಸ್ತ್ರಜ್ಞರು ತಮ್ಮ ಅಧ್ಯಯನಗಳಲ್ಲಿ ಈ ಶಾಸನಗಳನ್ನು ಆಕರಗಳನ್ನಾಗಿ ಬಳಸುತ್ತಾರೆ. ಭಾಷಾಶಾಸ್ತ್ರಜ್ಞರು ವಿವಿಧ ಕಾಲಮಾನದ ಭಾಷಾರೂಪಗಳ ಅಧ್ಯಯನದಲ್ಲಿ ಶಾಸನಗಳ ಪಾಠವನ್ನು ಗಮನಿಸುತ್ತಾರೆ. ಈ ದಾಖಲೆಗಳು ಸೃಷ್ಟಿಯಾದ ಉದ್ದೇಶಕ್ಕೂ ಈಗ ಅವು ಅಧ್ಯಯನಕ್ಕೆ ಆಕರವಾಗುತ್ತಿರುವುದಕ್ಕೂ ಸಂಬಂಧವಿಲ್ಲ. ಮುಂದೆ ಅಧ್ಯಯನಕ್ಕೆ ಮಾಹಿತಿ ನೀಡುವ ಉದ್ದೇಶ ಆ ಭಾಷಾರಚನೆಗಳ ಹಿಂದೆ ಇರುವುದಿಲ್ಲ.

ಮೇಲುನೋಟಕ್ಕೆ ಇಂಥ ದಾಖಲೆಗಳಲ್ಲಿ ಭಾಷೆ 'ಲೋಕೋಪಯೋಗಿ'ಯಾಗಿರುತ್ತದೆಂದು ತೋರುತ್ತದೆ. ಆದರೆ ಈ ದಾಖಲೆಗಳು ಯಾವುದೇ ನಿರ್ದಿಷ್ಟ ಕಾಲದೇಶದ ಓದುಗ/ಕೇಳುಗರಿಗಾಗಿ ರೂಪುಗೊಂಡಿರುವುದಿಲ್ಲ. ಎಂದರೆ ಇಲ್ಲಿ ಸಂಭಾಷಣೆಯ ಲಕ್ಷಣಗಳಿರುವುದಿಲ್ಲ. ಅಲ್ಲದೆ ದಾಖಲೆಯ ನಿರ್ಮಿತಿಯ ಉದ್ದೇಶವೇ ಬೇರೆ; ಭಿನ್ನ ಕಾಲದೇಶಗಳಲ್ಲಿ ದಾಖಲೆಯ ಭಾಷಾರೂಪವನ್ನು ಬಳಸುವ ಉದ್ದೇಶವೇ ಬೇರೆ; ಹಾಗಾಗಿ ಇಲ್ಲಿ ಭಾಷೆ ಕೇವಲ 'ಲೋಕೋಪಯೋಗಿ'ಯಲ್ಲ.

ಕಾಲದೇಶಗಳನ್ನು ದಾಟಿಬರುವ ಮತ್ತು ಭಿನ್ನ ಉದ್ದೇಶಗಳಿಗಾಗಿ ಬಳಕೆಯಾಗುವ ಇಂಥ ರಚನೆಗಳ ಸ್ವರೂಪ ವಿಶಿಷ್ಟವಾಗಿರುತ್ತದೆ. ವಿವರಗಳಲ್ಲಿ ಸ್ಪಷ್ಟತೆ, ಮಂಡನೆಯಲ್ಲಿ ನಿಯಮಬದ್ಧತೆ, ನಿರೂಪಣೆಯಲ್ಲಿ ನಿರ್ಮಮತೆ ಇವೆಲ್ಲವೂ ಇರಬೇಕಾಗುತ್ತದೆ. ಲಿಪಿಯುಳ್ಳ ಭಾಷೆಗಳಲ್ಲಿ ಇಂಥ ದಾಖಲೆಗಳು ಹಲವು ಬಗೆಯಲ್ಲಿ ಲಭ್ಯ. ಶಾಸನಗಳು, ಚಾರಿತ್ರಿಕ ದಾಖಲೆಗಳು, ಪ್ರವಾಸಿಯ ದಿನಚರಿಗಳು, ಸರ್ವೇಕ್ಷಣ ವರದಿಗಳು, ವೈಜ್ಞಾನಿಕ ವಿಷಯದ ವರದಿಗಳು, ಸರ್ಕಾರದ ಅಧಿನಿಯಮಗಳು ಇವೆಲ್ಲವೂ ಇಂಥ ದಾಖಲೆಗಳು. ಇವೆಲ್ಲವೂ ಸಮಾಜದ ಉನ್ನತಿಗೆ ಅವಶ್ಯವಾದ ಮಾಹಿತಿಯನ್ನು ತಲೆಮಾರಿನಿಂದ ತಲೆಮಾರಿಗೆ ವ್ಯವಸ್ಥಿತವಾಗಿ ದಾಟಿಸುತ್ತಿರುತ್ತವೆ.

**ಆಲೋಚನೆಯ ಸಾಧನ**

ಸುಮ್ಮನೆ ಕುಳಿತವರನ್ನು ನೋಡಿ 'ಏನು ಯೋಚಿಸುತ್ತಿದ್ದೀರಿ?'ಎನ್ನುತ್ತೇವೆ. ಅಥವಾ 'ಏನು ಸುಮ್ಮನೆ ಕುಳಿತಿರಿ?' ಎಂದು ನಾವು ಕೇಳಿದರೆ 'ಇಲ್ಲ ಯೋಚನೆ ಮಾಡುತ್ತಿದ್ದೆ' ಎಂಬ ಉತ್ತರ ದೊರಕಬಹುದು. ಯೋಚಿಸುವುದು ಎಂದರೇನು? ಯೋಚಿಸುವಾಗ ನಾವು ಏನು ಮಾಡುತ್ತಿರುತ್ತೇವೆ? ಕೆಲವರು ಯೋಚಿಸುತ್ತಿರುವಾಗ ಗಟ್ಟಿಯಾಗಿ ಮಾತಾಡುತ್ತಿರುತ್ತಾರೆ. ಮತ್ತೆ ಕೆಲವರಲ್ಲಿ ತುಟಿ ಚಲನೆ, ಆಂಗಿಕ ಚಲನೆಗಳು ತೋರುತ್ತವೆ. ಮತ್ತೆ ಹಲವರಲ್ಲಿ ಈ ಯಾವ ಸೂಚನೆಗಳೂ ಕಾಣದಿರಬಹುದು. ತಲೆಯ ಮೇಲೆ ಮೊಸರು ಗಡಿಗೆ ಹೊತ್ತು ಹೋಗುತ್ತಿದ್ದ ಹೆಂಗಸೊಬ್ಬಳ ಕತೆ ಹೀಗಿದೆ. 'ಈ ಮೊಸರನ್ನು ಮಾರುತ್ತೇನೆ. ಬಂದ ಹಣ ಕೂಡಿ ಹಾಕಿ ಮತ್ತಷ್ಟು ಹಸುಗಳನ್ನು ಕೊಳ್ಳುತ್ತೇನೆ. ಹಣ ಕೂಡಿಟ್ಟು ಒಡವೆ ಮಾಡಿಸಿಕೊಳ್ಳುತ್ತೇನೆ. ಶ್ರೀಮಂತರು ನನ್ನನ್ನು ವರಿಸಲು ಬರುತ್ತಾರೆ. ನಾನು ಹೀಗೆ ಕೈ ಕೊಸರಿಕೊಳ್ಳುತ್ತೇನೆ' ಎನ್ನುತ್ತ ನಿಜವಾಗಿಯೂ ಕೈಕೊಸರಿಕೊಳ್ಳುತ್ತಾಳೆ. ಗಡಿಗೆ ಕೆಳಗೆ ಬಿದ್ದು ಇದ್ದ ಮೊಸರೂ ಚೆಲ್ಲಿ ಹೋಯಿತಂತೆ. ಕತೆಯ ನೀತಿ ಏನೇ ಇರಲಿ. ಹೆಂಗಸು 'ಅಂದುಕೊಂಡ'ದ್ದು ಮಾತಿನ ರೂಪದಲ್ಲಿದೆ. ಅಂದರೆ ಯೋಚಿಸುವಾಗ ನಾವು ಭಾಷೆಯನ್ನು ಬಳಸುತ್ತೇವೆ ಎಂದಾಯ್ತು. ಅಥವಾ ಭಾಷೆಯಲ್ಲೇ ಯೋಚಿಸುತ್ತೇವೆ ಎನ್ನಬಹುದು.

ನಾವು ಯೋಚಿಸುತ್ತಿರುವುದೇನೆಂಬುದು ನಮಗೇ ಸ್ಪಷ್ಟಗೊಳ್ಳುವುದು ಅದಕ್ಕೊಂದು ಭಾಷಿಕ ರೂಪ ಬಂದಾಗಲೇ. 'ನಾಲಿಗೆ ತುದಿಯಲ್ಲಿದೆ ಹೇಳಲು ತೋಚುತ್ತಿಲ್ಲ' ಎಂಬ ಮಾತನ್ನು ಆಗಾಗ ಕೇಳುತ್ತೇವೆ. ಯೋಚನೆಗಳು ಭಾಷಿಕ ರೂಪವನ್ನು ತಳೆಯದಿರುವ ಸಂದರ್ಭವನ್ನು ಈ ಮಾತು ಸೂಚಿಸುತ್ತಿರಬಹುದು. ಭಾಷೇತರವಾದ ಯೋಚನೆಗಳು ಚಿಂತನೆಗಳು ಸಾಧ್ಯವೆಂದು ಕೆಲವರು ತಿಳಿಯುವುದುಂಟು. ಉದಾಹರಣೆಗೆ, ಲೆಕ್ಕಮಾಡುವುದು. ಸಾಮಾನ್ಯವಾಗಿ ಕೂಡುವುದು, ಕಳೆಯುವುದು, ಗುಣಿಸುವುದು ಮತ್ತು ಭಾಗಿಸುವುದು – ಈ ಕ್ರಿಯೆಗಳನ್ನು 'ಮೌನವಾಗಿ' ಮಾಡುವುದನ್ನು ಗಮನಿಸಿದ್ದೇನೆ. ಇಲ್ಲಿ ಭಾಷೆಯ ಕೆಲಸ ಇಲ್ಲವೆ? ಅಂಕಿಗಳನ್ನು ಬಳಸಿ ಗಣಿತದ ಕ್ರಿಯೆಯನ್ನೇ ವಾಕ್ಯಗಳನ್ನಾಗಿ ಮಾಡುತ್ತಿರುತ್ತೇವೆ. ಹಾಗಾಗಿ ಇಲ್ಲಿಯೂ ಭಾಷೆಯ ಬಳಕೆಯುಂಟು.

ಭಾಷೆಗೂ ಆಲೋಚನೆಗೂ ಸಂಬಂಧವಿದೆಯೆಂದು ತಿಳಿಯುವುದು ಸುಲಭ. ಆದರೆ ಆ ಸಂಬಂಧದ ಸ್ವರೂಪವೇನೆಂಬುದು ಇನ್ನೂ ಸ್ಪಷ್ಟವಾಗಿಲ್ಲ. ಮನಃಶಾಸ್ತ್ರಜ್ಞರು, ತತ್ವಶಾಸ್ತ್ರಜ್ಞರು ಈ ವಲಯದಲ್ಲಿ ತಮ್ಮ ಅಧ್ಯಯನಗಳನ್ನು ನಡೆಸಿದ್ದಾರೆ.

**ಸಮುದಾಯದೊಡನೆ ಬೆರೆಯುವ ನೆಲೆ**

ಕ್ರಿಕೆಟ್ ಆಟದ ಮೈದಾನದಲ್ಲಿ ನೆರೆದಿರುವ ಸಾವಿರಾರು ಪ್ರೇಕ್ಷಕರು ಆಟಗಾರ ಬಾರಿಸಿದ ಚೆಂಡು ವಿಕೆಟ್ ಕೀಪರನ ಕೈ ಸೇರಿತೆಂದು ತಿಳಿದು ಒಮ್ಮೆಗೇ ಕೂಗುತ್ತಾರೆ. ಮೆರವಣಿಗೆಯಲ್ಲಿ ಹೋಗುತ್ತಿರುವ ಜನರು 'ನ್ಯಾಯಬೇಕು', 'ಜೈ', 'ಜಿಂದಾಬಾದ್', 'ಮುರ್ದಾಬಾದ್' ಮುಂತಾದ ಘೋಷಣೆಗಳನ್ನು ಮಾಡುತ್ತಿರುತ್ತಾರೆ. ಹಾಗೆ ಅವರು ಕೂಗಲು ಅವಕಾಶ ನೀಡುವ ಬೇರೆ ಬೇರೆ ವಾಕ್ಯಗಳನ್ನು ನಾಯಕ ವ್ಯಕ್ತಿ ಘೋಷಿಸುತ್ತಿರುತ್ತಾನೆ. ಜತೆಗೆ ಕೂಗುವ ನೂರಾರು ಮಂದಿಯ ಈ ಉದ್ಗಾರಗಳಲ್ಲಿ ಭಾಷೆಯ ಕೆಲಸ ಏನು?

ಇಲ್ಲಿ ಮೇಲೆ ವಿವರಿಸಿದ ಭಾಷೆಯ ಹಲವು ಬಗೆಯ ಉಪಯೋಗಗಳ ಲಕ್ಷಣಗಳು ಮಿಳಿತಗೊಂಡಂತೆ ತೋರುತ್ತದೆ. ಆದರೆ ಅವೆಲ್ಲಕ್ಕಿಂತ ಕೊಂಚ ಭಿನ್ನವಾದ ಉದ್ದೇಶ ಇಲ್ಲಿನ ಭಾಷೆಗೆ ಇದೆ. ಇದು ವರ/ಶಾಪದ ಮಾದರಿಯಲ್ಲ. ಏಕೆಂದರೆ ಇಲ್ಲಿ ಸಮೂಹ ಭಾಗಿಯಾಗುತ್ತದೆ. ಇದು ಭಾವೋಪಯೋಗಿಯಷ್ಟೇ ಅಲ್ಲ. ಏಕೆಂದರೆ ಒಂದು ಸಾಮಾಜಿಕ ಸಂಚಲನೆಯೂ ಉದ್ದೇಶಿತವಾಗಿರುತ್ತದೆ. ಮುಖ್ಯವಾಗಿ ಇಲ್ಲಿನ ಭಾಷಾ ರೂಪಗಳ ಆಯ್ಕೆಯ ಅವಕಾಶ ವ್ಯಕ್ತಿಗೆ ಇಲ್ಲ. ಸ್ವಲ್ಪಮಟ್ಟಿಗೆ, ಸಾಮಾಜಿಕ ಸಂದರ್ಭದ ನಿರ್ಮಾಣದಲ್ಲಿ ಬಳಕೆಯಾಗುವ ಭಾಷೆಯ ಲಕ್ಷಣ ಇಲ್ಲಿದೆ. ಆದರೆ ಇಲ್ಲಿ ಉದ್ಗಾರವೆತ್ತುವ ವ್ಯಕ್ತಿ ಒಂದು ಸಮೂಹದ ಭಾಗ ತಾನೆಂಬುದನ್ನು ಸ್ಪಷ್ಟಪಡಿಸುವ ಗುರಿಯನ್ನು ಹೊಂದಿರುವುದು ಖಚಿತ.

ಈ ಬಗೆಯ ಭಾಷಾಬಳಕೆಗೆ ಕೇವಲ ಘೋಷಣೆಗಳು ಸೀಮಿತವಾಗಬೇಕಾಗಿಲ್ಲ. ದೀರ್ಘವಾದ ಭಾಷಣಗಳು, ಲೇಖನಗಳೂ ಇದೇ ಕೆಲಸವನ್ನು ಮಾಡಬಹುದು. ಸರ್ಕಾರದ ನೀತಿಯೊಂದನ್ನು ವಿರೋಧಿಸಿ ಮಾಡುವ ಹಲವು ಭಾಷಣಗಳನ್ನು ಗಮನಿಸಿ. ಅಲ್ಲಿ ನೀತಿಯನ್ನ ವಿರೋಧಿಸಲು ಇರುವ ವಿಚಾರಗಳು, ತರ್ಕಗಳು, ತಾತ್ತ್ವಿಕ ನೆಲೆಗಳು ಗೌಣವಾಗುತ್ತವೆ. ವಾಸ್ತವವಾಗಿ ಆ ವ್ಯಕ್ತಿ ತಾನು ಸರ್ಕಾರದ ವಿರೋಧಿಗಳ ಗುಂಪಿನೊಡನೆ ತನ್ನ ಚಹರೆಯನ್ನು ಬೆರಸಿಕೊಳ್ಳಲೆಂದು ಮಾಡಿದ ಪ್ರಯತ್ನವೇ ಈ ಭಾಷಣ. ಭಾಷೆಗೆ ಇಲ್ಲಿ ಈ 'ಸಾಮಾಜಿಕ ಹೊಣೆ'ಯೇ ಮುಖ್ಯವಾಗಿರುತ್ತದೆ.

# ಯೋಚಿಸುವುದೆಂದರೇನು?

ಭಾಷೆ ಮತ್ತು ಚಿಂತನೆಗಳಿಗೆ ಸಂಬಂಧವಿದೆಯೆಂದು ತೋರಿಸಿಕೊಡುವುದು ಸುಲಭ. ಹಾಗೆ ಅವೆರಡರ ನಡುವೆ ಸಂಬಂಧವಿರುವುದನ್ನು ಗ್ರಹಿಸುವುದೂ ಅಷ್ಟು ಕಷ್ಟವಲ್ಲ. ನಮ್ಮ ದಿನದಿನದ ನೂರಾರು ವ್ಯವಹಾರಗಳಲ್ಲಿ ಭಾಷೆಗಿರುವ ಪಾತ್ರವನ್ನು ಅರಿತರೆ ಆಗ ನಾವು ಚಿಂತಿಸುವ ಬಗೆಯಲ್ಲೂ ಭಾಷೆ ಹೇಗೆ ಭಾಗಿಯಾಗುವುದೆಂಬ ಸಂಗತಿ ಗೊತ್ತಾಗುತ್ತದೆ. ಆದರೆ ಈ ಸಂಬಂಧದ ಸ್ವರೂಪವೇನು? ಒಂದು ಇನ್ನೊಂದನ್ನು ಬಿಟ್ಟಿರುವುದು ಅಸಾಧ್ಯವೆನ್ನುವಷ್ಟು ನಿಕಟವೇ? ಭಾಷೆಯ ಗೊಡವೆಯಿಲ್ಲದ ಚಿಂತನೆಗಳು ಸಾಧ್ಯವೆ? ಚಿಂತನೆಯ ಸ್ಪರ್ಶವಿಲ್ಲದೆ ಭಾಷಾರೂಪಗಳನ್ನು ನಾವು ಉತ್ಪಾದಿಸಬಹುದೆ? ಭಾಷೆಗೂ ಚಿಂತನೆಗೂ ನಿಕಟಸಂಬಂಧವಿದೆಯಾಗಿ, ಭಾಷೆಗಳ ನಡುವೆ ಇರುವ ವ್ಯತ್ಯಾಸಗಳಿಂದಾಗಿ ಆಯಾಭಾಷೆಯ ಮೂಲಕ ನಡೆಯುವ ಚಿಂತನೆಯ ಸ್ವರೂಪದಲ್ಲಿ ವ್ಯತ್ಯಾಸ ಉಂಟಾಗುತ್ತದೆಯೇ? ನಮ್ಮ ಭಾಷೆಯೇ ನಮ್ಮ ಜಗತ್ತು ಎಂದು ಹೇಳುವುದರ ಅರ್ಥವೇನು? ಹೀಗೆ ಹತ್ತಾರು ಪ್ರಶ್ನೆಗಳನ್ನು ಕೇಳಿಕೊಳ್ಳುತ್ತಾ ಹೋಗಬಹುದು. ಈಪ್ರಶ್ನೆಗಳಿಗೆ ಸರಳವಾದ ಉತ್ತರಗಳಿಲ್ಲ. ನಮ್ಮ ಜ್ಞಾನವಿಕಾಸದ ವಿವಿಧ ಹಂತಗಳಲ್ಲಿ ಈ ಪ್ರಶ್ನೆಗಳಿಗೆ ಬಗೆಬಗೆಯಾದ ಉತ್ತರಗಳನ್ನು ನೀಡಲಾಗಿದೆ. ತತ್ತ್ವಶಾಸ್ತ್ರಜ್ಞರು, ಮೀಮಾಂಸಕರು, ಲೌಕಿಕರು, ನೈಯಾಯಿಕರು, ಮನಃಶಾಸ್ತ್ರಜ್ಞರು, ಭಾಷಾಶಾಸ್ತ್ರಜ್ಞರು ಮೊದಲಾಗಿ ಹಲವರು ಈ ಪ್ರಶ್ನೆಗಳಿಗೆ ಪರಿಹಾರ ಕಾಣಲು ಅಧ್ಯಯನ ನಡೆಸಿದ್ದಾರೆ. ಈ ಅವಿರತ ಯತ್ನ ಇನ್ನೂ ಮುಂದುವರೆದಿದೆ. ಹಾಗಾಗಿ ಭಾಷೆಗೂ ಚಿಂತನೆಗೂ ಇರುವ ಸಂಬಂಧದ ಎಲ್ಲ ನೆಲೆಗಳನ್ನೂ ಅರಿಯವುದು ಅಸಾಧ್ಯ. ಆದರೆ ಅವೆರಡರ ನಡುವಣ ಸಂಬಂಧ ಜಟಿಲಗೊಳ್ಳಲು ಇರುವ ವಿವಿಧ ಕಾರಣಗಳನ್ನು ತಿಳಿಯಲು ಸಾಧ್ಯ.

**ಚಿಂತನೆಯ ವಿಧಗಳು**

ದಾರಿಯಲ್ಲಿ ನಡೆಯುತ್ತಿರುವಾಗ ಎದುರಿಗೆ ಸರಕ್ಕನೆ ಸರಿಯುವ ಹಾವನ್ನು ಕಂಡರೆ 'ಹಾವು' ಎಂದೋ 'ಅಯ್ಯೋ' ಎಂದೋ ಕಿರುಚುತ್ತೇವೆ. ಹಿಂದಕ್ಕೆ ಹಾರುತ್ತೇವೆ. ಅಥವಾ ಇಂಥವೇ ಬೇರೆ ಬೇರೆಯ ಪ್ರತಿಕ್ರಿಯೆ ಸೂಚಿಸುತ್ತೇವೆ. ಅವುಗಳಲ್ಲಿ ಕೆಲವು ಭಾಷಿಕ. ಮತ್ತೆ ಕೆಲವು ಆಂಗಿಕ. ಈ ಎಲ್ಲ ಪ್ರತಿಕ್ರಿಯೆಯಗಳಿಗೂ ಮೂಲ ಕಾರಣ ಭಯ. ಇದೊಂದು ಭಾವ; ಮನಸ್ಸಿನ ಒಂದು ಸ್ಥಿತಿ. ಭಯವೇ ಮುಂತಾದ ಭಾವಗಳಿಗೂ ಅವು ಉಂಟಾದಾಗ ನಾವು ತೋರಿಸುವ ಭಾಷಿಕ ಪ್ರತಿಕ್ರಿಯೆಗೂ ಇರುವ ಸಂಬಂಧವೇನು? ಭಾವವನ್ನು 'ಚಿಂತಿಸಿ' ನಾವು ಪ್ರತಿಕ್ರಿಯಿಸುತ್ತೇವೆ. ಆಯಾ ಭಾವಗಳಿಗೆ ಈ ಪ್ರತಿಕ್ರಿಯೆಗಳು

ಸೂಚಕಗಳು ಮಾತ್ರ. ಅಥವಾ ಉಂಟಾದ ಬೇರೆ ಬೇರೆ ಭಾವಗಳನ್ನು ಕುರಿತು ನಾವು ಮಾತಾಡಬಹುದು; ಮನಸ್ಸಿನ ಸ್ಥಿತಿಯನ್ನು ವಿವರಿಸಬಹುದು. ಆದರೆ ಇವು ಯಾವುದೂ ಆ ಭಾವಕ್ಕೆ ಪರ್ಯಾಯಗಳಲ್ಲ. ಅಂದರೆ ಮನಸ್ಸಿನ ಭಾವಗಳು ಮೂಲಭೂತವಾಗಿ ಭಾಷೆಗೆ ಅತೀತವಾಗಿದ್ದು. ಅದರ ವ್ಯಾಪ್ತಿಗೆ ಹೊರತಾಗಿರುತ್ತವೆ.

ಹೀಗೆ ನಮ್ಮ ಮನಸ್ಸಿನ ವಿವಿಧ ಚಟುವಟಿಕೆಗಳಲ್ಲಿ ಎಷ್ಟೋ ಪಾಲನ್ನು ಚಿಂತನೆಯ ವ್ಯಾಪ್ತಿಯಿಂದ ಹೊರಗಿಡಬೇಕಾಗುತ್ತದೆ. ಕಲಾವಿದರು, ಅದರಲ್ಲೂ ಚಿತ್ರಕಲಾವಿದರು, ಸಂಗೀತಗಾರರು ತಮ್ಮ ಕಲೆಯ ಮಾನಸಿಕ ಅವಸ್ಥೆಗೂ ಭಾಷೆಗೂ ಸಂಬಂಧವಿದೆಯೆಂದು ತಿಳಿಯುವುದಿಲ್ಲ. ಅವರು ನಂಬುವ ಸ್ಫೂರ್ತಿಯಂತೂ ಚಿಂತನೆಯನ್ನು ನಿರಾಕರಿಸುತ್ತದೆ.

ಭಾಷೆಗೂ ಚಿಂತನೆಗೂ ಸಂಬಂಧವಿರುವ ಮನಸ್ಸಿನ ಚಟುವಟಿಕೆಗಳಲ್ಲೂ ಹಲವು ವಿಧಗಳಿವೆ. ಇವುಗಳಲ್ಲಿ ಮುಖ್ಯವಾದುದು 'ತಾರ್ಕಿಕ ಚಿಂತನೆ'. ನಮ್ಮ ದಿನದಿನದ ಸಮಸ್ಯೆಗಳನ್ನು ಅರಿಯಲು ಮತ್ತು ಪರಿಹರಿಸಲು 'ತಾರ್ಕಿಕ ಚಿಂತನೆ'ಯನ್ನು ಬಳಸುತ್ತೇವೆ; ಕೊಠಡಿಯಲ್ಲಿ ಕತ್ತಲಾಯಿತೆಂದರೆ ದೀಪದ ಸ್ವಿಚ್ ಒತ್ತುವುದು. ಹತ್ತದಿದ್ದರೆ ಬಲ್ಬ್ ಹಾಳಾಗಿದೆಯೇ, ಸ್ವಿಚ್ ಕೆಟ್ಟಿದೆಯೇ, ಫ್ಯೂಸ್ ಹೋಗಿದೆಯೇ ಅಥವಾ ವಿದ್ಯುತ್ ಸರಬರಾಜಿನಲ್ಲಿ ವ್ಯತ್ಯಯವಾಗಿದೆಯೇ ಎಂದು ತಿಳಿಯುವುದು; ಕೊನೆಗೆ ಬೆಂಕಿಕಡ್ಡಿ ಗಿರಿ ಮೇಣದಬತ್ತಿ ಬೆಳಗಿಸುವುದು –ಇವೆಲ್ಲ ತಾರ್ಕಿಕ ಚಿಂತನೆಯ ಫಲಗಳು. ಈ ಚಿಂತನೆಯಲ್ಲಿ ಬುದ್ಧಿಯ ಪಾತ್ರ ಹೆಚ್ಚು. ಕೆಲವು ಪೂರ್ವನಿರ್ಣಯಗಳನ್ನು, ಕಾರ್ಯಕಾರಣ ಸಂಬಂಧಗಳನ್ನು ಒಪ್ಪಿ ಈ ಚಿಂತನೆ ಮುಂದುವರೆಯುತ್ತದೆ. ಕಪ್ಪು ಮೋಡಗಳು ಕವಿದಿದ್ದರೆ ಮಳೆ ಬೀಳುವ ಸಾಧ್ಯತೆಯಿದೆಯೆಂಬುದು ಒಂದು ಪೂರ್ವ ನಿರ್ಣಯವನ್ನು ಒಪ್ಪಿ ನಡೆದ ಚಿಂತನೆ. ಈ ಬಗೆಯ ಚಿಂತನೆಗಳಿಗೆ ನಿರ್ದಿಷ್ಟ ಗುರಿ ಇರುತ್ತದೆ. ಸಮಸ್ಯೆಯನ್ನು ಬಿಡಿಸುವುದೇ ಮುಖ್ಯ ಗುರಿ. ಈ ಗುರಿಸಾಧನೆಗಾಗಿಯೇ ಚಿಂತನೆ ನಡೆಯುತ್ತದೆ. ಇಲ್ಲದಿದ್ದರೆ ದಾರಿ ತಪ್ಪುವುದುಂಟು.

ತಾರ್ಕಿಕ ಚಿಂತನೆಯಲ್ಲಿ ಅನುಗಮನ ವಿಧಾನ ಮತ್ತು ನಿಗಮನ ವಿಧಾನ ಎಂಬ ಎರಡು ಬಗೆಗಳನ್ನು ಸೂಚಿಸುತ್ತಾರೆ. ಬಿಡಿಬಿಡಿಯಾದ ಮಾಹಿತಿಗಳ ಮೂಲಕ ಸಮಸ್ಯೆಗಳನ್ನು ಅರಿತು ಬಿಡಿಸಲು ತೊಡಗುವುದು ಅನುಗಮನ ವಿಧಾನ. ಮನೆಯೊಂದನ್ನು ಹುಡುಕುತ್ತಿದ್ದೇವೆಂದುಕೊಳ್ಳೋಣ. ವಿಳಾಸ ನಮ್ಮ ಬಳಿಯಿದೆ. ಮೊದಲು ಊರಿಗೆ ಬಂದು, ಆಮೇಲೆ ವಿಸ್ತರಣಕ್ಕೆ ಹೋಗುತ್ತೇವೆ. ಅಲ್ಲಿಂದ ಬೀದಿಗೆ, ಬೀದಿಯಿಂದ ತಿರುವಿಗೆ, ತಿರುವಿನ ಎಡ ಅಥವಾ ಬಲಬದಿಯಲ್ಲಿರುವ, ನಮಗೆ ಬೇಕಾದ ಮನೆಗೆ ಕೊನೆಗೆ ತಲುಪುತ್ತೇವೆ. ಹೀಗೆ ಹುಡುಕುವಾಗ ವಿಳಾಸದ ಜತೆಗೆ ನಮಗೆ ಲಭ್ಯವಿರುವ ಮತ್ತೆ ಕೆಲವು ಗುರುತುಗಳನ್ನೂ ಬಳಸುತ್ತೇವೆ. ಅಂಗಡಿ, ಲೈಟುಕಂಬ, ಮರ ಹೀಗೆ ಹತ್ತಾರು ಅವಶ್ಯ ಮಾಹಿತಿಯನ್ನು ಜೋಡಿಸಿ ಕೊನೆಗೆ ಮನೆ ತಲುಪುತ್ತೇವೆ. ಇದು ಅನುಗಮನ ಚಿಂತನೆ. ನಿಗಮನ ವಿಧಾನದಲ್ಲಿ ಮೊದಲು ಸೂತ್ರರೂಪದ ಸಾಮಾನ್ಯ ನಿರ್ಣಯಗಳಿರುತ್ತವೆ; ಅವುಗಳನ್ನು ಆಧರಿಸಿ ಹೊರಟು ಒಂದು ವಿಶಿಷ್ಟ ಸಮಸ್ಯೆಯನ್ನು ಬಿಡಿಸುತ್ತೇವೆ. ಗಂಟೆಗೆ 15ಮೈಲಿ ವೇಗದಲ್ಲಿ ಚಲಿಸುವ ವಾಹನ 4ಗಂಟೆಗಳಲ್ಲಿ ಎಷ್ಟು

ದೂರ ಚಲಿಸುತ್ತದೆ? ಈ ಸಮಸ್ಯೆಯನ್ನು ಬಿಡಿಸಲು ಚಲಿಸಿದ ದೂರವು ವೇಗ ಮತ್ತು ಚಲಿಸಿದ ಅವಧಿಗಳ ಗುಣಲಬ್ಧಕ್ಕೆ ಸಮಾನವೆಂಬ ಸೂತ್ರವನ್ನು ಆಶ್ರಯಿಸುತ್ತೇವೆ. ಹಾಗೆ ನೋಡಿದರೆ ನಮ್ಮ ತಾರ್ಕಿಕ ಚಿಂತನೆಗಳನ್ನು ಹೀಗೆ ಅನುಗುಮನ ಮತ್ತು ನಿಗಮನವೆಂದು ಗೆರೆಯೆಳೆದು ಬೇರೆ ಮಾಡಲು ಬರುವುದಿಲ್ಲ. ಬಹಳ ಸಂದರ್ಭದಲ್ಲಿ ಎರಡೂ ವಿಧಾನಗಳನ್ನು ಬೇರೆ ಬೇರೆ ಪ್ರಮಾಣದಲ್ಲಿ ಒಟ್ಟಾಗಿ ಬಳಸುತ್ತಿರುತ್ತೇವೆ.

ತಾರ್ಕಿಕ ಚಿಂತನೆಗೆ ಭಾಷೆ ಅವಶ್ಯ. ಭಾಷೆಯ ರಾಚನಿಕ ವ್ಯವಸ್ಥೆಯನ್ನು ಬಳಸಿಯೇ ಈ ಚಿಂತನೆ ನಡೆದಿರುತ್ತದೆ. ಒಂದೊಂದು ಹಂತವನ್ನು ವಾಕ್ಯಗಳ ಮೂಲಕ ಪ್ರತಿನಿಧಿಸುವುದು ಸಾಧ್ಯ. ಈ ಕಾರಣದಿಂದಾಗಿ ಚಿಂತನೆಯೇ ಭಾಷಿಕವಾಗಿ ಸಂಭವಿಸಿರುವುದೆಂದು ತಿಳಿಯುವುದು ಅವಶ್ಯವಾಗುತ್ತದೆ.

**ಸಂಬಂಧ**

ಭಾಷೆ ಮತ್ತು ಚಿಂತನೆಗಳ ಸಂಬಂಧ ಎಷ್ಟು ನಿಕಟ? ಮತ್ತೆ ಮತ್ತೆ ಈ ಪ್ರಶ್ನೆ ಎದುರಾಗುತ್ತದೆ. ಈ ಪ್ರಶ್ನೆಗೆ ಉತ್ತರ ಕಂಡುಕೊಳ್ಳುವ ಮೊದಲು ಎರಡು ಪ್ರತ್ಯೇಕ ಸಾಧ್ಯತೆಗಳನ್ನು ಅರಿಯಬೇಕು. ಈ ಸಾಧ್ಯತೆಗಳು ಎರಡು ಅತಿರೇಕಗಳು. ಒಂದು ತುದಿಯ ಚಿಂತನೆಯಂತೆ ಭಾಷೆಯೆಂಬ ಚಟುವಟಿಕೆ ಮತ್ತು ಚಿಂತನೆ ಇವೆರಡೂ ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದಿವೆ. ಆದರೆ ಅವೆರಡರ ನಡುವೆ ಪರಸ್ಪರಾಶ್ರಯ ಸಾಧ್ಯವೆಂಬ ಇನ್ನೊಂದು ತುದಿಯ ಚಿಂತನೆಯ ಪ್ರಕಾರ ಭಾಷೆ ಮತ್ತು ಚಿಂತನೆಗಳು ಬೇರೆ ಬೇರೆಯಲ್ಲ. ಒಂದನ್ನು ಬಿಟ್ಟು ಇನ್ನೊಂದಕ್ಕೆ ಅಸ್ತಿತ್ವವೇ ಇಲ್ಲ. ಭಾಷೆಯನ್ನು ಬಿಟ್ಟುಕೊಟ್ಟ ತಾರ್ಕಿಕ ಚಿಂತನೆಯಾಗಲೀ, ಚಿಂತನೆಯ ಒತ್ತಾಸೆಯಿಲ್ಲದ ಭಾಷೆಯ ಬಳಕೆಯಾಗಲೀ ಅಸಾಧ್ಯ. ಈ ಎರಡು ಅತಿರೇಕಗಳ ನಡುವೆ ಸತ್ಯವಿರುವಂತಿದೆ.

ಭಾಷೆ, ಚಿಂತನೆಗಳು ಪ್ರತ್ಯೇಕವಾಗಿದ್ದು ಒಂದನ್ನೊಂದು ಆಶ್ರಯಿಸುತ್ತವೆಂದು ತಿಳಿಯುವವರಲ್ಲಿ ಸಾಮಾನ್ಯವಾಗಿ ಎರಡು ಬಗೆಗಳಿವೆ. ಭಾಷೆ, ಚಿಂತನೆಯನ್ನು ಆಶ್ರಯಿಸುತ್ತದೆ; ಭಾಷೆ ವಾಹಕ. ಚಿಂತನೆ ಅದರ ತಿರುಳು. ಇದು ಪಾರಂಪರಿಕ ದೃಷ್ಟಿ ಮೊದಲು ಚಿಂತನೆಗಳು ಮೂಡುತ್ತವೆ; ಅದಕ್ಕೆ ಭಾಷೆಯ ತೊಡುಗೆಯನ್ನು ನೀಡುತ್ತೇವೆ. ಚಿಂತನೆಯನ್ನು ಹರಿಸುವ ವಾಹಕವೇ ಭಾಷೆ. ಈ ದೃಷ್ಟಿಯನ್ನಿರಿಸಿಕೊಂಡವರ ವಾದದಂತೆ ಮಕ್ಕಳು ಮೊದಲು ಗ್ರಹಿಸುವುದನ್ನು ಕಲಿಯುತ್ತಾರೆ. ಅನಂತರ ಭಾಷೆಯನ್ನು ಕಲಿಯುತ್ತಾರೆ. ಆದ್ದರಿಂದ ಮೊದಲು ಚಿಂತನೆ; ಅನಂತರ ಭಾಷೆ. ಭಾಷೆ ಚಿಂತನೆಯ ಅಭಿವ್ಯಕ್ತಿಗೆ ಸಾಧನ.

ಎರಡನೆಯ ಬಗೆಯಲ್ಲಿ ಯೋಚಿಸುವವರ ಪ್ರಕಾರ, ಭಾಷೆಯೇ ಚಿಂತನೆಯ ಸ್ವರೂಪವನ್ನು ನಿಯಂತ್ರಿಸುತ್ತದೆ. ಜನರು ಭಾಷೆಯನ್ನು ಹೇಗೆ ಬಳಸುತ್ತಾರೋ ಅದಕ್ಕನುಗುಣವಾಗಿ ಮಾತ್ರ ಅವರ ಚಿಂತನೆಗಳು ಆಕಾರ ತಳೆಯುತ್ತವೆ. ಭಾರತೀಯ ಅಲಂಕಾರಿಕ ದಂಡಿಯೆಂಬಾತನು 'ಭಾಷೆಯಿಲ್ಲದಿದ್ದರೆ ಜಗತ್ತು ಅಂಧಕಾರದಲ್ಲಿ ಮುಳುಗಿರುತ್ತಿತ್ತು' ಎನ್ನುತ್ತಾನೆ. ಭಾಷೆ ನಮಗೆ ಜಗತ್ತನ್ನು ತೋರಿಸುತ್ತದೆ ಎಂದರೇನು?

ಆ ಮೂಲಕ ನಮಗೆ ಜಗತ್ತು ಹೇಗೆ ಕಾಣಬೇಕೆಂಬುದನ್ನು ನಮ್ಮ ಭಾಷೆ ನಿಯಂತ್ರಿಸುತ್ತದೆ. ಮಕ್ಕಳು ಭಾಷೆಯನ್ನು ಕಲಿಯುವಾಗಲೇ ಅವರಲ್ಲಿ ಜಗತ್ತನ್ನು ಕುರಿತ ಪರಿಕಲ್ಪನೆಗಳು ನಿಯಂತ್ರಿತವಾಗಿ ಆಕಾರ ತಳೆಯುತ್ತವೆ. ಆದ್ದರಿಂದ ಅವರ ಚಿಂತನಾಕ್ರಮವೆಲ್ಲ ಅವರ ಭಾಷೆಯಿಂದಲೇ ನಿರ್ದೇಶಿತವಾಗುತ್ತದೆ. ಸಪೀರ್ ಮತ್ತು ವೂರ್ಫ್ ಎಂಬುವವರು ಈ ವಾದವನ್ನು ಬಲವಾಗಿ ಪ್ರತಿಪಾದಿಸುತ್ತಾರೆ.

ಈ ಮೇಲೆ ಹೇಳಿದ ಎರಡು ಬಗೆಗಳಲ್ಲದೆ ಮೂರನೆಯ ಸಾಧ್ಯತೆಯೂ ಒಂದಿದೆ. ಭಾಷೆ ಮೊದಲೋ ಚಿಂತನೆ ಮೊದಲೋ ಎಂದು ವಾದಿಸುವ ಬದಲು ಅವೆರಡರ ಸ್ವತಂತ್ರ ಅಸ್ತಿತ್ವವನ್ನು ಮೊದಲು ಒಪ್ಪಬೇಕು. ಅನಂತರ ಅವೆರಡೂ ತಮ್ಮ ಸ್ವಂತಿಕೆಯನ್ನು ಕಳೆದುಕೊಳ್ಳದೆ ಒಂದನ್ನೊಂದು ಆಶ್ರಯಿಸುತ್ತವೆಂಬುದು ಮೂರನೆಯ ಸಾಧ್ಯತೆ. ಸ್ವಂತಿಕೆಯನ್ನು ಕಳೆದುಕೊಳ್ಳುವುದೆಂದರೆ ಅವೆರಡಕ್ಕೆ ಪ್ರತ್ಯೇಕ ಚಹರೆಯಿಲ್ಲ. ಭಾಷೆಯೆಂದರೆ ಮಾತಿನ ರೂಪದ ಚಿಂತನೆ, ಚಿಂತನೆಯೆಂದರೆ ಧ್ವನಿರೂಪ ತಳೆಯದ ಭಾಷೆ ಎಂದು ತಿಳಿಯುವುದು. ಆದರೆ ಈ ವಾದವನ್ನು ಈಗ ಸಮರ್ಥಿಸುವುದು ಕಷ್ಟ. ಏಕೆಂದರೆ ಮನುಷ್ಯರ ಮನಸ್ಸಿನಲ್ಲಿ ನಡೆಯುವ ಎಷ್ಟೋ ಚಟುವಟಿಕೆಗಳಿಗೆ ಭಾಷೆಯ ಹಂಗಿಲ್ಲವೆಂಬುದು ನಮಗೀಗ ಗೊತ್ತು. ಚಿತ್ರಗಳ ಮೂಲಕ ಜಗತ್ತನ್ನು ಗ್ರಹಿಸುವುದು ಸಾಧ್ಯ. ಕೆಲವೊಮ್ಮೆ ಅದೇ ಸುಲಭವೂ ಆಗಿರುತ್ತದೆ. ಹತ್ತು ಮಾತುಗಳಿಗೆ ಬದಲಾಗಿ ಒಂದು ಚಿತ್ರ ಪರಿಣಾಮಕಾರಿ ವಿವರಣೆ ನೀಡುವುದೆಂದು ತಿಳಿಯುತ್ತಾರೆ. ಈಗಂತೂ ಮಾಹಿತಿಯನ್ನು ಬಗೆಬಗೆಯ ನಕ್ಷೆಗಳ ಮೂಲಕ ಮಂಡಿಸುವುದು ವಾಡಿಕೆ. ಭಾಷೇತರವಾದ ಈ ವಿಧಾನದಿಂದ ನೇರ ಪರಿಣಾಮ ಸಾಧ್ಯ; ಸಂವಹನ ಗಾಢವಾಗಿರುತ್ತದೆ; ಕ್ಲುಪ್ತವಾಗಿರುತ್ತದೆ; ಸಮಯದ ಉಳಿತಾಯವೂ ಆಗುತ್ತದೆ. ಹೀಗೆ ಭಾಷೆಯ ನೆರವಿಲ್ಲದ ಚಿಂತನೆಗಳ ಸಾಧ್ಯತೆಯನ್ನು ಗಮನಿಸಿದಾಗ ಅವೆರಡೂ ಒಂದೇ ಎಂದು ತಿಳಿಯುವ ವಾದ ಕುಸಿಯುತ್ತದೆ.

ಅಲ್ಲದೆ ಭಾಷೇತರ ಚಿಂತನೆಯ ಸಾಧ್ಯತೆಗಳು ಅಗಾಧವಾಗಿವೆ. ಭಾಷೆಯ ನೆರವು ಅತ್ಯವಶ್ಯವೆನಿಸುವ ಚಿಂತನೆಗಳನ್ನು ಭಾಷೇತರ ಚಿಂತನೆಗಳ ಎದುರು ಇರಿಸಿದಾಗ ಅವುಗಳ ಸಂಬಂಧಾಂತರ ಗೋಚರಿಸುತ್ತದೆ. ಸದ್ಯ ನಮಗಿಲ್ಲಿ ಮುಖ್ಯವಾದುದೆಂದರೆ ಭಾಷೆ ಮತ್ತು ಚಿಂತನೆಗಳು ಪ್ರತ್ಯೇಕವಾದ ಅಸ್ತಿತ್ವವನ್ನು ಹೊಂದಿದ್ದೂ ಒಂದನ್ನೊಂದು ಪರಸ್ಪರ ಅವಲಂಬಿಸಿರುತ್ತವೆಂಬ ಸಂಗತಿ.

**ಸಪೀರ್ ಮತ್ತು ವೂರ್ಫ್ ಪ್ರಮೇಯ**

ಯುರೋಪಿನ ನವೋದಯದಲ್ಲಿ ಅಲ್ಲಿಯವರೆಗೆ ಅಪರಿಚಿತವಾಗಿದ್ದ ಲೋಕ, ಜನಾಂಗ, ಭಾಷೆಗಳು 'ಬೆಳಕಿಗೆ' ಬಂದವು. ಹೀಗೆ ಯುರೋಪಿನವರಿಗೆ ಒದಗಿಬಂದ ಮಾಹಿತಿಯ ಮುಖ್ಯವಾಗಿ ಎರಡು ರೀತಿಯಲ್ಲಿ ವಿವರಣೆಗೆ ಗುರಿಯಾಯಿತು. ವಿವಿಧ ಭಾಷೆ, ಜನಾಂಗಗಳ ಮಾಹಿತಿಯ ಮೂಲಕ ಸಾರ್ವತ್ರಿಕ ಮಾದರಿಯೊಂದರ ಹುಡುಕಾಟ ಮೊದಲಾಯಿತು. ವಿಶ್ವಾತ್ಮಕವಾದ ಆಕೃತಿಗಳನ್ನು ಕಂಡುಕೊಳ್ಳುವ ಯತ್ನ ಒಂದು

ಬಗೆಯದ್ದಾದರೆ, ಇನ್ನೊಂದು ವಿವರಣೆಯಂತೆ, ಸಂಸ್ಕೃತಿಯು ವಿಭಿನ್ನವಾದುದೂ ವಿಶಿಷ್ಟವಾದುದೂ ಆಗಿರಬೇಕೆಂಬ ನಿಲುವು ಬೆಳೆಯತೊಡಗಿತು. ಸಾಂಸ್ಕೃತಿಕ ವಿಶಿಷ್ಟತೆಯ ನೆಲೆಗಳ ಹುಡುಕಾಟ ಈ ನಿಟ್ಟಿನಲ್ಲಿ ಅವಶ್ಯವೆನಿಸತೊಡಗಿತು. ಈ ಎರಡನೆಯ ನೆಲೆಯನ್ನು ಒಪ್ಪಿದ ಮಾನವಶಾಸ್ತ್ರಜ್ಞರಲ್ಲಿ ಪ್ರಮುಖನದವರು ಎಡ್ವರ್ಡ್ ಸಪೀರ್ (1884–1936) ಹಾಗೂ ಬೆಂಜಮಿನ್ ಲೀ ವೂರ್ಫ್(1897–1941). ಇವರಿಬ್ಬರೂ ವಿವಿಧ ಜನಾಂಗಗಳ ವಿಶಿಷ್ಟತೆಯನ್ನು ಅಭ್ಯಾಸ ಮಾಡುತ್ತಿದ್ದವರು. ಈ ಶತಮಾನದಲ್ಲಿ ಹೆಚ್ಚು ವಾಗ್ವಾದಗಳಿಗೆ ಕಾರಣವಾದ ಭಾಷಾಸಿದ್ಧಾಂತವೊಂದನ್ನು ಇವರಿಬ್ಬರೂ ಮಂಡಿಸಿದರು.

ಇವರ ವಾದವನ್ನು ಸಪೀರ್–ವೂರ್ಫ್ ಪ್ರಮೇಯವೆಂದೇ ಸಾಮಾನ್ಯವಾಗಿ ಹೆಸರಿಸುವುದುಂಟು. ಈ ವಾದದಲ್ಲಿ ಮುಖ್ಯವಾಗಿ ಎರಡು ನಿರ್ಣಯಗಳಿವೆ. ಮೊದಲನೆಯದನ್ನು ಭಾಷಾ ವಿಧಿವಾದ ಎನ್ನಬಹುದು. ಅದರಂತೆ ನಮ್ಮ ಭಾಷೆಯೇ ನಮ್ಮ ಜಗತ್ತು. ನಾವು ಹೇಗೆ ಯೋಚಿಸಬೇಕೆಂಬುದನ್ನು ನಮ್ಮ ಭಾಷೆಯೇ ನಿರ್ದೇಶಿಸುತ್ತದೆ. ಎರಡನೆಯ ನಿರ್ಣಯವನ್ನು ಭಾಷಾ ಸಾಪೇಕ್ಷವಾದ ಎನ್ನಬಹುದು. ಪ್ರತಿಯೊಂದು ಭಾಷೆಗೂ ಅವರದ್ದೇ ಆದ ವಿಶಿಷ್ಟತೆ ಇರುತ್ತದೆ. ಒಂದು ಭಾಷೆಯ ಲೋಕಗ್ರಹಿಕೆಯ ವಿಧಾನ ಇನ್ನೊಂದು ಭಾಷೆಯದಕ್ಕಿಂತ ಭಿನ್ನ. ಎಷ್ಟು ಭಾಷೆಗಳೋ ಅಷ್ಟು ಬಗೆಯ ಲೋಕಗ್ರಹಿಕೆಗಳು. ವೂರ್ಫ್ ಹೇಳುವಂತೆ ನಮ್ಮ ಸುತ್ತಣ ಲೋಕವನ್ನು ನಾವು ನಮ್ಮ ಭಾಷೆಯು ಸೂಚಿಸುವ ಗೆರೆಗಳಿಗೆ ಅನುಗುಣವಾಗಿ ವಿಭಜಿಸಿ ಗ್ರಹಿಸುತ್ತೇವೆ. ಲೋಕದಲ್ಲಿ ಬಗೆಗಳು, ಮಾದರಿಗಳು, ಆಕಾರಗಳು ಅಂತರ್ಗತವಾಗಿರುವುದಿಲ್ಲ; ನೋಡುವವರಿಗೆ ತಂತಾನೇ ಗೋಚರಿಸುವಂತೆ ವಿಭಜಿತವಾಗಿರುವುದಿಲ್ಲ. ಕೆಲಿಡಿಯೋಸ್ಕೋಪನ್ನು ತಿರುಗಿಸಿದಂತೆ ಒಳಗಿನ ಚಿತ್ರದ ಆಕಾರಪಲ್ಲಟಗೊಳ್ಳುವಂತೆ ಲೋಕಗ್ರಹಿಕೆಯ ಹಲವು ಸಾಧ್ಯತೆಗಳಿಗೆ ಭಾಷೆ ಅನುವು ಮಾಡಿಕೊಡುವಂತೆ ಕಾಣುತ್ತದೆ. ನಮ್ಮ ಮನಸ್ಸಿನಲ್ಲಿರುವ ಭಾಷಾ ವ್ಯವಸ್ಥೆಯ ಸೂಚನೆಗಳಿಗೆ ಅನುಗುಣವಾಗಿ ನಾವು ಲೋಕದ ತೋರಿಕೆಯ ಆಕಾರಗಳನ್ನು ಗ್ರಹಿಸುತ್ತೇವೆ. ನಾವು ಆಡುವ ಭಾಷೆಯಲ್ಲಿ ಕೆಲವು ನಿಯಮಗಳು ಅಂತರ್ಗತವಾಗಿರುತ್ತವೆ. ಈ ನಿಯಮಗಳೆಲ್ಲವನ್ನು ನಮ್ಮ ಭಾಷಾಸಮುದಾಯ ಒಪ್ಪಿಕೊಂಡಿರುತ್ತದೆ. ಲೋಕವನ್ನು ಗ್ರಹಿಸಲು ಸೂತ್ರಗಳನ್ನು ಒದಗಿಸುವ ಈ ನಿಯಮಗಳಿಗೆ ಅನುಗುಣವಾಗಿಯೇ ನಾವು ಅರಿಯುತ್ತೇವೆ; ಪರಿಕಲ್ಪನೆಗಳನ್ನು ರೂಪಿಸಿಕೊಳ್ಳುತ್ತೇವೆ; ಆ ಪರಿಕಲ್ಪನೆಗಳಿಗೆ ಮಹತ್ವವನ್ನು ಪ್ರಧಾನ ಮಾಡುತ್ತೇವೆ. ಭಾಷಾಸಮುದಾಯದಲ್ಲಿರುವ ಈ ಒಪ್ಪಂದ ಲಿಖಿತವಲ್ಲ; ಯಾರೂ ಘೋಷಿಸಿದ್ದಲ್ಲ. ಆದರೆ ಅದನ್ನು ಅನುಸರಿಸಲೇಬೇಕು; ಕಡ್ಡಾಯ ಆಗದೆ ವಿಧಿಯಿಲ್ಲ. ಈ ಒಪ್ಪಂದ ನಿರ್ದೇಶಿಸುವ ಬಗೆಯಲ್ಲೇ ಮಾಹಿತಿಯನ್ನು ವರ್ಗೀಕರಿಸಿ ಅಳವಡಿಸಿಕೊಳ್ಳದೇ ಬೇರೆ ದಾರಿಯಿಲ್ಲ.

ಸರಳ ನಿದರ್ಶನಗಳಿಂದ ವೂರ್ಫ್‌ನ ಈ ನಿಲುವನ್ನು ಅರಿಯಲು ಯತ್ನಿಸಬಹುದು. ಕನ್ನಡದಲ್ಲಿ ಮಳೆಯ ವಿವಿಧ ರೀತಿಗಳನ್ನು ಹೇಳಲು ಬಳಸುವ ಪದಗಳು ಹೀಗಿವೆ. ಸೋನೆ ಮಳೆ, ಜಡಿಮಳೆ, ಹನಿಮಳೆ, ಬಿರುಮಳೆ, ಸುರಿಮಳೆ, ಜಿಪ್ರಿಮಳೆ ಇತ್ಯಾದಿ. ಇವೆಲ್ಲವೂ ಮಳೆ ಎಂಬ ಪದದಿಂದಲೇ ಕೊನೆಯಾಗುತ್ತವೆ. ಅಂದರೆ ಮಳೆಯ ಬಗೆಗಳು ಎಂಬ ಸೂಚನೆ ಆ ಪದಗಳಲ್ಲೇ ಇದೆ. ಆದರೆ ಎಲ್ಲ ಭಾಷೆಯಲ್ಲೂ ಹೀಗಿರಬೇಕೆಂದಿಲ್ಲ.

ಬೇರೆ ಬೇರೆ ಬಗೆಯ ಮಳೆಗಳಿಗೆ ಬೇರೆ ಬೇರೆ ಹೆಸರುಗಳೇ ಇರುವುದು ಸಾಧ್ಯ. ರೈನ್, ಡ್ರಿಸಲ್, ಸ್ಲಿಟ್, ಕ್ಲೌಡ್ ಬರ್ಸ್ಟ್ ಮುಂತಾದ ಪದಗಳು ಇಂಗ್ಲಿಶಿನಲ್ಲಿವೆ. ವೂರ್ಫ್ ನೀಡುವ ಉದಾಹರಣೆಯನ್ನೇ ನೋಡೋಣ. ಅಮೆರಿಕನ್ ಇಂಡಿಯನ್ ಭಾಷೆಗಳಲ್ಲಿ ಒಂದು 'ಹೋಪಿ'. ಈ ಭಾಷೆಯಲ್ಲಿ ಹಕ್ಕಿಯನ್ನುಳಿದು ಬೇರೆ ಎಲ್ಲ ಹಾರುವುದಕ್ಕೂ (ಜೀವಿ, ವಸ್ತು ಎಲ್ಲ ಸೇರಿ)ಒಂದೇ ಪದವಿದೆ. ಕೀಟ, ವಿಮಾನ, ಗಾಳಿಪಟ, ಪ್ಯಾರಾ ಚೂಟ್ ಎಲ್ಲದಕ್ಕೂ ಒಂದೇ ಪದ. ನಮ್ಮ ಪರಿಚಿತ ಭಾಷೆಯ ನಿಟ್ಟಿನಿಂದ ಗಮನಿಸಿದಾಗ ಇದು ವಿಚಿತ್ರವೆನ್ನಿಸಬಹುದು. ಆದರೆ ಹಾಗೇನಿಲ್ಲ. ಆಯಾ ಭಾಷಿಕರ ಲೋಕಗ್ರಹಿಕೆಯ ವಿಧಾನಗಳು ಈ ರೀತಿಯ ಭಾಷಿಕ ರೂಪಗಳಲ್ಲಿ ಬಿಂಬಿತವಾಗುತ್ತವೆ. ಸಪೀರ್-ವೂರ್ಫ್‌ರ ಚಿಂತನೆಯಂತೆ, ಭಾಷೆಯು ಭಾಷಿಕರ ಚಿಂತನೆಯ ವಿಧಾನವನ್ನು ನಿಯಂತ್ರಿಸುವುದರಿಂದ ಪರಸ್ಪರ ಬೇರೆ ಬೇರೆ ಭಾಷೆಗಳನ್ನಾಡುವವರ ನಡುವೆ ಸಂವಹನಕ್ಕೆ ಧಕ್ಕೆಯುಂಟಾಗುತ್ತದೆ; ಕೆಲವೊಮ್ಮೆ ತಪ್ಪುಗ್ರಹಿಕೆಗಳಿಗೂ ಅವಕಾಶವುಂಟಾಗುತ್ತದೆ.

ಇದೊಂದು ಆಕರ್ಷಕ ವಿಚಾರ ಪ್ರಣಾಲಿ. ಸಾಂಸ್ಕೃತಿಕ ವಿಶಿಷ್ಟತೆಯನ್ನು ಒಪ್ಪುವವರಿಗೆ ಇಲ್ಲಿನ ತರ್ಕ ಸರಿಯೆಂದು ತೋರುತ್ತದೆ. ಆದರೆ ಭಾಷೆಯು ಚಿಂತನೆಯನ್ನು ಇಷ್ಟು ತೀವ್ರವಾಗಿ ನಿಯಂತ್ರಿಸುವುದೆಂದು ತಿಳಿಯುವುದು ಈಗ ಕಷ್ಟವಾಗುತ್ತಿದೆ. ಏಕೆಂದರೆ ಒಂದು ಸಂಸ್ಕೃತಿಯಿಂದ ಇನ್ನೊಂದು ಸಂಸ್ಕೃತಿಗೆ ಚಿಂತನೆಗಳು ಅನುವಾದಗೊಳ್ಳುತ್ತಿವೆ. ಭಾಷೆಗಳ ವಿಶಿಷ್ಟತೆ ಎಷ್ಟೇ ಇದ್ದರೂ ಅನುವಾದ ಅಸಾಧ್ಯವೆನಿಸುವ ಪ್ರಸಂಗಗಳು ಕಡಿಮೆ. ಒಂದು ಭಾಷೆಗೆ ವಿಶಿಷ್ಟ ವಾದ ಪರಿಕಲ್ಪನೆಯನ್ನು, ಅಂದರೆ ಲೋಕಗ್ರಹಿಕೆಯನ್ನು ಇನ್ನೊಂದು ಭಾಷೆಯಲ್ಲಿ ವಿವರಿಸಬಹುದು. ಸಮಾನಾರ್ಥಕ ಪದಗಳು ಇಲ್ಲದಿದ್ದರೂ ವಿವರಿಸುವ ಮೂಲಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಲಾಗುತ್ತಿದೆ. ಭಾಷೆಗಳು ರೂಪಿಸುವ ಲೋಕಗ್ರಹಿಕೆಗಳು ವಿಶಿಷ್ಟವಾಗಿದ್ದರೂ, ಇನ್ನೊಂದು ಭಾಷೆಯನ್ನಾಡುವವರು ಗ್ರಹಿಸಲಾಗದಷ್ಟು ವಿಭಿನ್ನವಲ್ಲ.

ಭಾಷೆಗಳು ಚಿಂತನೆಯನ್ನು, ಲೋಕಗ್ರಹಿಕೆಯನ್ನು ನಿರ್ಧರಿಸುತ್ತವೆಂದು ವಾದಿಸುವವರು ಕೆಲವು ಭಾಷೆಗಳಲ್ಲಿ ನಿರ್ದಿಷ್ಟ ಸಂಗತಿಯೊಂದನ್ನು ಮಂಡಿಸಲು ಸೂಕ್ತ ಪದಗಳೇ ಇಲ್ಲದಿರುವುದನ್ನು ಉದಾಹರಿಸುತ್ತಾರೆ. ಪದಗಳ ಕೊರತೆಯಿದೆಯೆಂದ ಮಾತ್ರಕ್ಕೆ ಆ ಭಾಷಿಕರು ಆ ಸಂಗತಿಯನ್ನು ಗ್ರಹಿಸಲು ಅಸಮರ್ಥರು ಎನ್ನಲುಬಾರದು. ಸರಳ ನಿದರ್ಶನವೊಂದನ್ನು ಗಮನಿಸೋಣ. ಕನ್ನಡದ ಸಂಬಂಧವಾಚಕ ಪದಗಳಲ್ಲಿ ಅಣ್ಣ, ತಮ್ಮ ಎಂಬ ಪದಗಳಿವೆ. ಇಂಗ್ಲಿಶಿನಲ್ಲಿ ಇವೆರಡನ್ನೂ ಒಂದೇ ಪದದಿಂದ ನಿರ್ದೇಶಿಸಲಾಗುತ್ತದೆ. ಆದರೆ ಇಂಗ್ಲಿಶ್ ಮಾತನಾಡುವವರು ಅಣ್ಣ, ತಮ್ಮ ಪದಗಳ ನಡುವಣ ವ್ಯತ್ಯಾಸವನ್ನು ಗ್ರಹಿಸಬಲ್ಲರು. ಅಲ್ಲದೆ ಅದಕ್ಕನುಗುಣವಾಗಿ ಇಂಗ್ಲಿಶ್‌ನಲ್ಲಿ ವಿವರಣಾತ್ಮಕ ಪದಗಳನ್ನು ರಚಿಸಿಕೊಂಡು ಬಳಸಬಲ್ಲರು. ಕನ್ನಡ 'ನಿನ್ನೆ', 'ನಾಳೆ'ಗಳಿಗೆ ಹಿಂದಿಯಲ್ಲಿ 'ಕಲ್' ಎಂಬುದೊಂದೇ ಪದವಿದೆ. ಆದರೆ ಹಿಂದಿ ಭಾಷಿಕರು 'ನಿನ್ನೆ' ಮತ್ತು 'ನಾಳೆ'ಗಳು ಸೂಚಿಸುವ ವ್ಯತ್ಯಾಸವನ್ನು ತಮ್ಮ ಭಾಷೆಯಲ್ಲಿ ಮಂಡಿಸಲು ಅಸಮರ್ಥರು ಎನ್ನುವಂತಿಲ್ಲ. ಆದಿವಾಸಿ ಸಂಸ್ಕೃತಿಗಳನ್ನು ಅಧ್ಯಯನ ಮಾಡಿದ

ಕೆಲವರು ಅವರ ಭಾಷೆಗಳಲ್ಲಿ ಕೆಲವೊಮ್ಮೆ ಎಣಿಕೆಯ ಪದಗಳು ಇಲ್ಲದಿರುವುದನ್ನು ಗಮನಿಸಿ ಆ ಜನರಿಗೆ ಎಣಿಸಲು ಬಾರದೆಂದು, ಅವರು ದಡ್ಡರೆಂದು ತಿಳಿದದ್ದುಂಟು. ಆದರೆ ವಾಸ್ತವವಾಗಿ ಆ ಜನರ ಎಣಿಕೆಯ ವ್ಯವಸ್ಥೆ ಮತ್ತು ಅವಶ್ಯಕತೆಗಳೇ ಭಿನ್ನವಾಗಿವೆ. ಅವರು ಇನ್ನೊಂದು ಭಾಷೆಯನ್ನು ಕಲಿತಾಗ ಅವರು 'ಎಣಿಸಲು ಬಾರದ ದಡ್ಡ'ರಲ್ಲವೆಂಬುದು ಗೊತ್ತಾಗಿದೆ.

ಹೀಗಿದ್ದರೂ ಸಪೀರ್-ವೂರ್ಫ್ ವಿಚಾರ ಪ್ರಣಾಲಿಯನ್ನು ಒಂದು ಹಂತದವರೆಗೆ ಒಪ್ಪಲು ಕಾರಣಗಳಿವೆ. ಭಾಷೆ ಭಾಷಿಕರ ಚಿಂತನೆಯನ್ನು ಸಂಪೂರ್ಣವಾಗಿ ನಿಯಂತ್ರಿಸುವುದೆಂದು ಒಪ್ಪದಿದ್ದರೂ ಚಿಂತನೆಯನ್ನು ಪ್ರಭಾವಿಸುತ್ತದೆಂದು ಒಪ್ಪಬೇಕಾಗುತ್ತದೆ. ನಮ್ಮ ದಿನದಿನದ ಹತ್ತಾರು ವ್ಯವಹಾರಗಳಲ್ಲಿ ನಮ್ಮ ಭಾಷೆಯ ಪದಗಳ ಮೂಲಕವೇ ಸಂಗತಿಗಳನ್ನು ನೆನಪಿಡಲು ಅರ್ಥಮಾಡಿಕೊಳ್ಳಲು ಯತ್ನಿಸುತ್ತೇವೆ. ಬಣ್ಣಗಳಿಗೆ ಸಂಬಂಧಿಸಿದಂತೆ ನಮ್ಮ ಗ್ರಹಿಕೆಯು, ನಮ್ಮ ಭಾಷೆಯಲ್ಲಿ ಲಭ್ಯವಿರುವ ಪದಗಳಿಂದ ಹೇಗೆ ಪ್ರಭಾವಿತವಾಗುವುದೆಂಬ ಸಂಗತಿಯನ್ನು ಪರಿಶೀಲಿಸಿಕೊಳ್ಳಬಹುದು. ಇಂಥ ಪ್ರಭಾವಗಳ ಸ್ವರೂಪವನ್ನು ಮನಃಶಾಸ್ತ್ರಜ್ಞರು ಅಧ್ಯಯನ ಮಾಡುತ್ತಿದ್ದಾರೆ.

# ಭಾಷೆ ಮತ್ತು ಮೆದುಳು

ನಾವು ಮಾತಾಡುತ್ತೇವೆ; ಓದುತ್ತೇವೆ; ಮಾತು ಕೇಳಿ ಅರಿತುಕೊಳ್ಳುತ್ತೇವೆ ಮತ್ತು ನಾವೇ ಬರೆಯುತ್ತೇವೆ. ಇವೆಲ್ಲವೂ ನಮಗೆ ಹುಟ್ಟಿನೊಡನೆ ಬಂದ ಸಾಮರ್ಥ್ಯಗಳಲ್ಲ. ಮಾತಾಡುವುದನ್ನು ಮತ್ತು ಕೇಳಿ ಅರಿತುಕೊಳ್ಳುವುದನ್ನು ಬಹುಬೇಗನೆ ಅಂದರೆ ಹುಟ್ಟಿದ ಸುಮಾರು ಮೂರು ವರ್ಷದೊಳಗೆ 'ಕಲಿತುಕೊಳ್ಳು'ತ್ತೇವೆ. ಓದಿ ಬರೆಯುವದನ್ನು ಕಲಿಯುವುದು ತಡವಾಗಿ. ಎಷ್ಟೋ ಜನರು ಆ ಸಾಮರ್ಥ್ಯಗಳನ್ನು ಪಡೆಯದೆಯೂ ಇರಬಹುದು. ಪಡೆದರೂ ಹೆಚ್ಚಾಗಿ ಬಳಸದೇ ಹೋಗಬಹುದು. ಆದರೆ ಮೊದಲಿನ ಎರಡು ಸಾಮರ್ಥ್ಯಗಳ ಮಾತು ಹಾಗಲ್ಲ. ಬೇರೆ ಯಾವ ತೊಂದರೆಗಳಿಲ್ಲದಿದ್ದರೆ ಸಾಯುವವರೆಗೂ ಈ ಸಾಮರ್ಥ್ಯಗಳನ್ನು ನಾವು ಬಗೆಬಗೆಯಾಗಿ ಬಳಸುತ್ತಲೇ ಇರುತ್ತೇವೆ. ನಾವು ಹೊಸದಾಗಿ ಪಡೆದುಕೊಂಡ ಇಲ್ಲವೇ ಹುಟ್ಟಿನಿಂದಲೂ ಹೊಂದಿದ ಸಾಮರ್ಥ್ಯಗಳು, ನಮ್ಮ ದೇಹ ಯಾವುದಾದರೂ ಒಂದು ಅಥವಾ ಹೆಚ್ಚು ಅಂಗಗಳಲ್ಲಿ ನೆಲೆಗೊಂಡಿರುತ್ತವೆ. ಆ ಅಂಗಗಳಿಲ್ಲದಿದ್ದರೆ ಆ ಸಾಮರ್ಥ್ಯವನ್ನು ಬಳಸುವುದು ಸಾಧ್ಯವಾಗುವುದಿಲ್ಲ. ಉದಾಹರಣೆಗೆ ನಡಿಗೆ ಮತ್ತು ಕಾಲು; ನೋಡುವುದು ಮತ್ತು ಕಣ್ಣು ಹೀಗೆ. ಹಾಗಿದ್ದಲ್ಲಿ ಭಾಷೆಯೆಂಬ ಸಾಮರ್ಥ್ಯ ನಮ್ಮ ಯಾವ ಅಂಗದಲ್ಲಿ ನೆಲೆಗೊಂಡಿದೆ ಎನ್ನುವುದು ಒಂದು ಪ್ರಶ್ನೆ. ಮೇಲುನೋಟಕ್ಕೆ ಬಾಯಿ/ನಾಲಗೆ(ಮಾತಾಡುವ ಅಂಗಗಳು)ಮತ್ತು ಕಿವಿ ಇವೆರಡನ್ನೂ ನಾವು ಭಾಷೆಯೆಂಬ ಸಾಮರ್ಥ್ಯ ನೆಲೆಗೊಂಡ ಅಂಗಗಳು ಎಂದು ಹೇಳಬೇಕೆಂದು ಬಯಸಿದರೂ ( ನಮ್ಮ ವಾಡಿಕೆಯ ಮಾತುಗಳಲ್ಲಿ ಬಾಯಿ ಕಟ್ಟಿಹೋಗಿದೆ; ನಾಲಗೆ ಬಿದ್ದು ಹೋಗಿದೆ ಎಂದಾಗ ಮಾತಾಡುವ ಸಾಮರ್ಥ್ಯ ಕಳೆದುಹೋಗಿದೆ ಎಂದೇ ಅರ್ಥ) ಅದು ಸರಿಯಾಗದು. ಏಕೆಂದರೆ ಈ ಅಂಗಗಳ ನೆರವಿಲ್ಲದೆಯೂ ನಾವು ಭಾಷೆಯ ಸಾಮರ್ಥ್ಯವನ್ನು ಸಾಕಷ್ಟು ಶಕ್ತಿಯುತವಾಗಿಯೇ ಬಳಸಲು ಸಾಧ್ಯವಿದೆ.

ಹಾಗೆ ಭಾಷಾ ಸಾಮರ್ಥ್ಯ ನೆಲೆಗೊಂಡ ಅಂಗಗಳೆಂದು ಬಾಯಿ/ನಾಲಗೆ ಮತ್ತು ಕಿವಿಗಳನ್ನು ಪರಿಗಣಿಸದಿದ್ದಲ್ಲಿ ಈ ಸಾಮರ್ಥ್ಯದ ನೆಲೆಯಾಗಿ ನಾವು ಮೆದುಳು ಎಂದೇ ತಿಳಿಯುವುದು ಸರಿಯಾಗುತ್ತದೆ. ಇದಕ್ಕೆ ಪುರಾವೆಗಳೂ ಇವೆ. ಇಡೀ ಮೆದುಳಲ್ಲದಿದ್ದರೂ, ಮೆದುಳಿನ ಕೆಲವು ಗೊತ್ತಾದ ಭಾಗಗಳು ಸರಿಯಾಗಿ ಕೆಲಸ ಮಾಡದಿದ್ದರೆ ನಾವು ಭಾಷೆಯೆಂಬ ಸಾಮರ್ಥ್ಯವನ್ನು ಪಡೆದುಕೊಳ್ಳುವುದಕ್ಕೆ ಮತ್ತು ಪಡೆದುಕೊಂಡರೂ ಬಳಸುವುದಕ್ಕೆ ಆಗುವುದಿಲ್ಲ. ಆ ಭಾಗಗಳಿಗೆ ಆಘಾತವಾದ ಜನರು

ಮಾತಾಡುವ ಮತ್ತು ಕೇಳಿ ಅರಿತುಕೊಳ್ಳುವ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾರೆಂಬುದು ಈಗ ಗೊತ್ತಿರುವ ಸಂಗತಿಯಾಗಿದೆ. ಕೌಮಾರ್ಯಾವಸ್ಥೆಯನ್ನು ದಾಟಿದವರಲ್ಲಿ ಈ ಭಾಷಾ ಸಾಮರ್ಥ್ಯಗಳನ್ನು ನಿಯಂತ್ರಿಸುವ ಮೆದುಳಿನ ಭಾಗಗಳು ಮೆದುಳಿನ ಎಡಭಾಗದಲ್ಲಿರುತ್ತವೆ. ಈ ಎರಡೂ ಭಾಗಗಳನ್ನು ಪತ್ತೆ ಮಾಡಿದ ಪಾಲ್ ಬ್ರಾಕಾ(ಅಥವಾ ಬ್ರೊಕಾ-ಫ್ರಾನ್ಸ್) ಮತ್ತು ಕಾರ್ಲ್ ವರ್ನಿಕ್(ಜರ್ಮನಿ) ಇವರಿಬ್ಬರ ಹೆಸರಿನಲ್ಲೆ ಗುರುತಿಸುತ್ತೇವೆ. ಬ್ರಾಕಾ ಗುರುತಿಸಿದ ಜಾಗ ಎಡಮೆದುಳಿನ ಮುಂಬದಿಯಲ್ಲಿ ಹೆಚ್ಚು ಕಡಿಮೆ ನಮ್ಮ ಹಣೆಯ ಎಡಬದಿ ಮತ್ತು ಕಿವಿಯ ಮುಂಬದಿಗೆ ಸಮೀಪದಲ್ಲಿದೆ. ವರ್ನಿಕ್ ಗುರುತಿಸಿದ ಜಾಗ ಎಡ ಮೆದುಳಿನ ಹಿಂಬದಿಯಲ್ಲಿ ಕಿವಿಯ ಹಿಂದೆ ಇವೆ. ಇದು ಅಂದಾಜು ವಿವರಣೆ. ಇವೆರಡೂ ತುಂಬ ಚಿಕ್ಕ ಭಾಗಗಳು. ಇವೆರಡೂ ಭಾಗಗಳನ್ನು ಸೇರಿಸುವ ನರತಂತುಗಳ ಜಾಲವೊಂದಿದೆ.

ಬ್ರಾಕಾನ ತಾಣವು ನಮ್ಮ ಮಾತಿನ ಸಾಮರ್ಥ್ಯವನ್ನು ನಿಯಂತ್ರಿಸುತ್ತದೆ. ಅದಕ್ಕೆ ಧಕ್ಕೆ ಒದಗಿದರೆ ನಾವು ಮಾತಾಡಬೇಕೆಂದರೂ ಮಾತನಾಡಲಾರೆವು. ಬೇರೆಯವರು ಮಾತಾಡಿದ್ದು ನಮಗೆ ತಿಳಿಯುತ್ತಿರಬಹುದು. ಆದರೆ ಪ್ರತಿಯಾಗಿ ನಾವು ಮಾತನಾಡುವುದಕ್ಕೆ ಆಗುವುದಿಲ್ಲ. ಈ ಭಾಗಕ್ಕೆ ಒದಗಿದ ಧಕ್ಕೆ ತಾತ್ಕಾಲಿಕವಾಗಿದ್ದರೆ ಅದನ್ನು ಚಿಕಿತ್ಸೆಯ ಮೂಲಕ ಸರಿಪಡಿಸಲು ಬರುತ್ತದೆ ( ನಮ್ಮ ಚಲನ ಚಿತ್ರ ನಿರ್ದೇಶಕರಿಗೆ ಇದೊಂದು ಆಕರ್ಷಕ ಸಂಗತಿ. ಮಾತು ಕಳೆದುಕೊಂಡು ತಟಕ್ಕನೆ ಅದನ್ನು ಮರಳಿ ಪಡೆದುಕೊಳ್ಳುವ ಕಥಾಂಶವನ್ನು ಅವರು ಬಳಸುತ್ತಿರುತ್ತಾರೆ). ಹೀಗೆ ಧಕ್ಕೆಯಾದವರು ಕೆಲವೊಮ್ಮೆ ಮಾತಾಡಿದರೂ ಅವರ ಪದಗಳ ಜೋಡಣೆ, ವಾಕ್ಯ ರಚನೆ ಇವೆಲ್ಲವೂ ಕೇಳುವವರಿಗೆ ತಪ್ಪುತಪ್ಪೆಂದು ಅನ್ನಿಸುತ್ತಿರುತ್ತದೆ. ತುಂಡು ತುಂಡಾದ ವಾಕ್ಯಗಳು, ರಚನೆಯ ನಿಯಮಗಳೆಲ್ಲವನ್ನು ಸರಿಯಾಗಿ ಪಾಲಿಸದಿರುವಿಕೆ, ಇವೆಲ್ಲವೂ ಸಾಮಾನ್ಯವಾಗಿ ಇಂತಹವರ ಮಾತಿನಲ್ಲಿ ಕಂಡು ಬರುವ ಲಕ್ಷಣಗಳು . ಆದರೆ ಅವರಿಗೆ ತಾವೇನು ಹೇಳುತ್ತಿದ್ದೇವೆ ಎನ್ನುವುದು ಖಚಿತವಾಗಿ ಗೊತ್ತಿರುತ್ತದೆ. ಆದರೆ ಕೇಳಿಸಕೊಳ್ಳುವವರಿಗೆ ಬ್ರಾಕಾ ತಾಣಕ್ಕೆ ಆಘಾತ ಒದಗಿದವರ ಮಾತುಗಳು ಅಸ್ಪಷ್ಟವಾಗಿ ತೋರುತ್ತವೆ. ಕೆಲವೊಮ್ಮೆ ಅವರು ಮರೆಗುಳಿಗಳಂತೆ ತೋರಲೂಬಹುದು. ಅವರ ನೆನಪಿನಲ್ಲಿ ಪದಕೋಶಕ್ಕೆ ಆಘಾತ ಉಂಟಾಗಿರುತ್ತದೆ. ಒಂದು ಪದವನ್ನು ಹೇಳಲು ಹೊರಟು, ಬೇರೆ ಯಾವುದೋ ಪದವನ್ನು ಹೇಳುತ್ತಿರುತ್ತಾರೆ. ಆದರೆ ಅವರು ಹೇಳುವ ಪದಕ್ಕೂ ಹೇಳಬೇಕಾದ ಪದಕ್ಕೂ ಅರ್ಥದ ನೆಲೆಯಲ್ಲಿ ಸಂಬಂಧವಿರುತ್ತದೆ. ಕತ್ತೆ ಎನ್ನುವ ಬದಲು ಕುದುರೆ ಎಂದಾರು; ಅನ್ನದ ಬದಲು ರೊಟ್ಟಿ ಎನ್ನಬಹುದು. ಹೀಗೆ ಹೇಳುವ ಪದಕ್ಕೂ ಹೇಳಬೇಕಾದ ಪದಕ್ಕೂ ಒಂದು ಹೋಲಿಕೆಯ ನೆಲೆಯ ಸಂಬಂಧವಿರುತ್ತದೆ. (ಈ ಬಗೆಯ ತೊಂದರೆಗೆ ನಾವೆಲ್ಲರೂ ಒಂದಲ್ಲ ಒಂದು ಸಮಯದಲ್ಲಿ ಒಳಗಾಗಿರುತ್ತೇವೆಂಬುದನ್ನು ನೆನಪು ಮಾಡಿಕೊಳ್ಳಬಹುದು) ಇವರು ಪದಾರ್ಥವನ್ನು ನೆನಪಿನಲ್ಲಿಟ್ಟುಕೊಂಡಿದ್ದರೂ ಪದದ ನೆನಪು ಹಾರಿಹೋಗಿರುತ್ತದೆ. ನಾವು ಬಲ್ಲವರ ಮುಖ ಚಹರೆ ನಮ್ಮ ನೆನಪಿನಲ್ಲಿದ್ದರೂ,

ಅವರ ಹೆಸರು ಮರೆತು ಹೋಗುವ ಸಂದರ್ಭವನ್ನು ಗಮನಕ್ಕೆ ತಂದುಕೊಳ್ಳಿ. ಇವರ ತೊಂದರೆ ಅದೇ ಬಗೆಯದು.

ವರ್ನಿಕ್ ತಾಣ ನಾವು ಕೇಳಿದ್ದನ್ನು ಅರಿತುಕೊಳ್ಳುವಲ್ಲಿ ನೆರವಾಗುತ್ತದೆ. ಕೇಳಿದ ಮಾತುಗಳನ್ನು ವ್ಯಾಕರಣದ ನೆಲೆಯಲ್ಲಿ ವಿಶ್ಲೇಷಿಸಿ ಅದಕ್ಕೆ ತಕ್ಕ ಅರ್ಥವನ್ನು ಹೊಂದಿಸುವುದು ಇಲ್ಲಿ ನಡೆಯುವ ಕೆಲಸ. ಈ ತಾಣಕ್ಕೆ ಧಕ್ಕೆ ಒದಗಿದರೆ ಕೇಳಿಸಿಕೊಂಡದ್ದನ್ನು 'ಸರಿಯಾಗಿ' ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಕಳೆದು ಹೋಗುತ್ತದೆ. ಆದರೆ ಮಾತನಾಡುವ ಸಾಮರ್ಥ್ಯ ಕುಗ್ಗಿರುವುದಿಲ್ಲ. ಏಕೆಂದರೆ ಅದನ್ನು ನಿಯಂತ್ರಿಸುವ ಬ್ರಾಕಾನ ತಾಣಕ್ಕೆ ಇವರಲ್ಲಿ ಯಾವ ಧಕ್ಕೆಯೂ ಆಗಿರುವುದಿಲ್ಲ. ಈ ಬಗೆಯ ತೊಂದರಂಗೆ ಒಳಗಾದವರು ನಿರರ್ಗಳವಾಗಿ ಯಾವ ಅಡೆತಡೆಯೂ ಇಲ್ಲದೆ ಮಾತನಾಡಬಲ್ಲರು. ಅವರ ಮಾತುಗಳಲ್ಲಿ ವ್ಯಾಕರಣದ ನಿಯಮಗಳು ಸರಿಯಾಗಿ ಪಾಲನೆಯಾಗುತ್ತಿರುತ್ತವೆ. ಆದರೆ ಅವರಾಡುವ ಮಾತುಗಳಿಗೆ ಯಾವ ಅರ್ಥವೂ ಇರುವುದಿಲ್ಲ. ಒಂದೇ ಸಮನೆ ವಾಕ್ಯಗಳ ಸರಣಿಯನ್ನು ಉತ್ಪಾದಿಸಿ ಮಾತನಾಡುತ್ತಿದ್ದರೂ ಅವರ ಮಾತಿನಲ್ಲಿ ಹೊಂದಾಣಿಕೆ ಇರುವುದಿಲ್ಲ. ಆ ಸಂದರ್ಭಕ್ಕೆ ಹೊಂದಿಕೆಯಾಗುವ ಮಾತುಗಳನ್ನು ಆಡದೆಯೂ ಇರಬಹುದು. ಇವರು ಪದವನ್ನು ನೆನಪಿಟ್ಟುಕೊಂಡು ಪದಾರ್ಥವನ್ನು ಮರೆತ ಬಗೆಯವರು. ನಮ್ಮ ಪರಿಚಿತರ ಹೆಸರು ನೆನಪಿದ್ದರೂ ಅವರ ಮುಖ ಚಹರೆಗಳು ಮರೆತು ಹೋಗುವ ಸಂದರ್ಭವನ್ನು ಗಮನಕ್ಕೆ ತಂದುಕೊಳ್ಳಿ. ಇವರ ತೊಂದರೆ ಅದೇ ಬಗೆಯದು. ನಿರರ್ಗಳವಾಗಿ ಮಾತನಾಡುವ, ಆದರೆ ಅಷ್ಟೇ ನಿರರ್ಥಕವಾಗಿ ಮಾತನಾಡುವ ಇಂತಹವರ ತೊಂದರೆಗಳು ತಟಕ್ಕನೆ ಎಲ್ಲರ ಗಮನಕ್ಕೆ ಬರದೆಯೂ ಹೋಗಬಹುದು, (ಮಾತುಗಾರರು ಹೀಗೇ ಗೆಲ್ಲುವುದೆಂದು ತೋರುತ್ತದೆ). ಈ ತಾಣಕ್ಕೆ ಒದಗಿದ ಧಕ್ಕೆ, ಚಿಕಿತ್ಸೆಯಿಂದ ಸರಿಪಡಿಸಲಾಗದೇ ಹೋಗುವಂತಹುದಾದರೆ ಆಗ ಆ ಬಗೆಯ ತೊಂದರೆಗೆ ಒಳಗಾದವರು ಮಾತಾಡುವ ಶಕ್ತಿಯನ್ನು ಉಳಿಸಕೊಂಡರೂ, ತಮ್ಮ ಮಾತಿನ ಮೂಲಕ ಸಂವಹನ ಮಾಡುವ, ಇತರರಿಗೆ ತಿಳಿಸುವ ಸಾಮರ್ಥ್ಯವನ್ನು ಕಳೆದುಕೊಂಡುಬಿಡುತ್ತಾರೆ.

ಈ ಎರಡೂ ತಾಣಗಳ ನಡುವೆ ಸಂಪರ್ಕ ಕಲ್ಪಿಸುವ ನರತಂತುಗಳು ಕೂಡ ಸರಿಯಾಗಿ ಕೆಲಸ ಮಾಡಬೇಕು. ಇವುಗಳಿಗೆ ಧಕ್ಕೆಯಾದರೆ ಆಗ ಆ ತೊಂದರೆಗೆ ಒಳಗಾದವರು ಹೇಳಿದ್ದನ್ನು ಸರಿಯಾಗಿ ತಿಳಿದುಕೊಳ್ಳಬಲ್ಲರು; ಇತರರಿಗೆ ತಿಳಿಯುವ ಹಾಗೆ ಮಾತನಾಡಬಲ್ಲರು. ಆದರೆ ಅವರು ಹೇಳುವುದಕ್ಕೂ ಕೇಳಿಸಿಕೊಂಡದ್ದಕ್ಕೂ ಸಂಬಂಧ ತಪ್ಪಿಹೋಗಬಹುದು. ಸಂಭಾಷಣೆಯಲ್ಲಿ ಈ ಕೊರತೆ ಎದ್ದು ಕಾಣುತ್ತದೆ. ಒಬ್ಬರು ಏನೋ ಹೇಳಿದರೆ ಇವರು ತಾವೇನೋ ಹೇಳುತ್ತಿರುತ್ತಾರೆ. ಆದರೆ ತಾವು ಕೇಳಿಸಿಕೊಂಡದ್ದನ್ನು ಸರಿಯಾಗಿಯೇ ಅರ್ಥ ಮಾಡಿಕೊಂಡಿದ್ದರೂ, ಅವರ ಮಾತಿನಲ್ಲಿ ಈ ಕೊರತೆ ಉಳಿದುಬಿಡುತ್ತದೆ.

ಮೆದುಳಿನ ಈ ಭಾಗಗಳು ನಮ್ಮ ಭಾಷೆಯ ಸಾಮರ್ಥ್ಯಗಳನ್ನು ಹೀಗೆ ನಿಯಂತ್ರಿಸುತ್ತವೆ ಎನ್ನುವುದನ್ನು ತಿಳಿದ ಮೇಲೂ ನಮಗೆ ಎಲ್ಲವೂ ಗೊತ್ತಾಗಿದೆ

ಎಂದೇನಲ್ಲ. ಏಕೆಂದರೆ ಈ ತಾಣಗಳು ಸರಿಯಾಗಿ ಕೆಲಸ ಮಾಡದಿದ್ದರೆ ಉಂಟಾಗುವ ತೊಂದರೆಗಳಿಂದ ನಾವು ಈ ಎಲ್ಲ ವಿವರಗಳನ್ನು ತಿಳಿಯುತ್ತಿದ್ದೇವೆ. ಆದರೆ ಇದು ಅವುಗಳ ಕೆಲಸದ ಗೈರುಹಾಜರಿನ ತಿಳುವಳಿಕೆ ಮಾತ್ರ, ಇವು ಹೇಗೆ ಕೆಲಸಮಾಡುತ್ತವೆ ಎನ್ನುವುದನ್ನು ಅರಿಯುವುದು ಅಷ್ಟು ಸುಲಭವಲ್ಲ. ಇದನ್ನು ತಿಳಿದು ಮೆದುಳಿನ ಈ ತಾಣಗಳ ಪ್ರತಿರೂಪಗಳನ್ನು ರಚಿಸಲು ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ. ಆದರೆ ಈವರೆಗೆ ಅವರಿಗೆ ದೊರಕಿರುವ ಯಶಸ್ಸು ಪೂರ್ಣಪ್ರಮಾಣದಲ್ಲ. ಇದಕ್ಕೆ ಬೇಕಾದ ತಾತ್ವಿಕ ಮಾದರಿಯೊಂದನ್ನು ಮೊದಲಲ್ಲಿ ರೂಪಿಸಿಕೊಳ್ಳುವುದು ದೊಡ್ಡ ಸವಾಲಾಗಿದೆ. ಅಲ್ಲದೆ ಎಲ್ಲರಿಗೂ ಸಮ್ಮತವಾಗುವ ಒಂದೇ ತಾತ್ವಿಕ ಮಾದರಿಯೊಂದು ಇನ್ನೂ ಸಿದ್ಧವಾಗಿಲ್ಲ. ಈಚಿನ ದಿನಗಳಲ್ಲಿ ಸಂಪರ್ಕ ಮಾದರಿ( ಕನೆಕ್ಷನಿಸ್ಟ್ ಮಾದರಿ) ಹೆಚ್ಚು ಪ್ರಚಲಿತವಾಗುತ್ತಿದೆ. ಇದರ ವಿವರಗಳನ್ನು ಇಲ್ಲಿ ಚರ್ಚಿಸುವುದು ಆಗದ ಮಾತು.

# ಮಗುವಿನ ಭಾಷೆಯ ಅಧ್ಯಯನ

ಮಕ್ಕಳು ಆಡುವ ಮೊದಲ ನುಡಿಗಾಗಿ ಕಾತರಿಸುವ ತಂದೆತಾಯಂದಿರು ತಮ್ಮ ಮಗುವಿನೊಡನೆ ಏಕಮುಖ ಮಾತುಕತೆಗೆ ತೊಡಗುತ್ತಾರೆ. ಮಗುವಿನೊಡನೆ ಮುದ್ದು ಮಾತುಗಳನ್ನಾಡುತ್ತಾರೆ. ಮಗುವಿನ ಪ್ರತಿಕ್ರಿಯೆಗಳಿಗೆ ಅರ್ಥ ಹಚ್ಚುತ್ತಾರೆ. ಒಟ್ಟಾರೆ ಮಗು ಬೆಳೆಯುವಾಗ ಪಡೆದುಕೊಳ್ಳುವ ಹತ್ತಾರು ಸಾಮರ್ಥ್ಯಗಳಲ್ಲಿ 'ಮಾತಾಡುವುದು' ಒಂದು ಪ್ರಮುಖ ಹಂತ. ಈ ಸಾಮರ್ಥ್ಯಗಳನ್ನು ಪಡೆಯುವುದು ತಡವಾದರೆ, ವಿವಿಧ ಕಾರಣಗಳಿಂದಾಗಿ ಊನಗೊಂಡರೆ ತಂದೆತಾಯಂದಿರು ಖಿನ್ನರಾಗುತ್ತಾರೆ. ಹೀಗೆ ಮಗು ಭಾಷೆಯನ್ನು ಕಲಿಯುವ ಹಂತದಲ್ಲಿ ಗಮನವಿರಿಸುವ ಪ್ರವೃತ್ತಿ ಸಾಮಾನ್ಯ. ಆದರೆ ಈ ಕಲಿಕೆ ಹೇಗೆ ನಡೆಯುತ್ತದೆ ಎಂಬುದನ್ನು ಅರಿಯಲು, ಅಧ್ಯಯನ ಮಾಡಲು ತೊಡಗಿರುವ ಪ್ರಸಂಗಗಳು ನಮ್ಮಲ್ಲಿ ಇಲ್ಲವೆನ್ನುವಷ್ಟು ಕಡಿಮೆ.

ಮಗುವಿನ ಭಾಷಾಕಲಿಕೆ ತಟಕ್ಕನೆ ಸಂಭವಿಸುವುದಿಲ್ಲ. ತುಂಡುತುಂಡಾದ ಧ್ವನಿ ಸಮುಚ್ಚಯಗಳಿಂದ ಪೂರ್ಣಪ್ರಮಾಣದ ವಾಕ್ಯಗಳನ್ನು ಉಚ್ಚರಿಸುವವರೆಗಿನ ಅವಧಿಯ ವ್ಯಾಪ್ತಿ ಹಲವಾರು ತಿಂಗಳಷ್ಟಿರುತ್ತದೆ. ಆದ್ದರಿಂದ ಈ ಕಲಿಕೆಯ ಅಧ್ಯಯನದ ವಿಧಾನ ಕೂಡ ಭಿನ್ನವಾಗುತ್ತದೆ. ಅಧ್ಯಯನಕ್ಕೆ ಅವಶ್ಯವಾದ ಸಾಮಗ್ರಿಯನ್ನು ಸಂಗ್ರಹಿಸಬೇಕಾಗುತ್ತದೆ. ಕೆಲವು ತಂದೆತಾಯಂದಿರು ತಮ್ಮ ಮಕ್ಕಳ ಭಾಷಾಕಲಿಕೆಯ ದಾಖಲೆಯನ್ನು ದಿನಚರಿಯ ರೂಪದಲ್ಲಿ ಇರಿಸುವುದುಂಟು. 19ನೇ ಶತಮಾನದ ಅಧ್ಯಯನಾಸಕ್ತರು ಇಂಥ ದಾಖಲೆಗಳನ್ನು ಬಳಸುತ್ತಿದ್ದರು. ಚಾರ್ಲ್ಸ್ ಡಾರ್ವಿನ್ ಈ ಬಗೆಯ ದಿನಚರಿಗಳ ಮಾಹಿತಿಯನ್ನು ಬಳಸುತ್ತಿದ್ದನು. ಆದರೆ ಧ್ವನಿಮುದ್ರಣ ಮತ್ತು ದೃಶ್ಯಮುದ್ರಣ ಸೌಲಭ್ಯಗಳು ಸಿಗುವಂತಾದ ಮೇಲೆ ದಾಖಲೀಕರಣದ ವಿಧಾನಗಳು ಬೇರೆಯಾಗ ತೊಡಗಿದವು. ಹಾಗಾಗಿ 20ನೇ ಶತಮಾನದ ನಡುಭಾಗದ ಅನಂತರವೇ ಹೊಸ ಬಗೆಯ ದಾಖಲೀಕರಣದ ನೆರವಿನಿಂದ ಮಗುವಿನ ಭಾಷಾಕಲಿಕೆಯ ಸ್ವರೂಪವನ್ನು ತಿಳಿಯುವ ಮುಖ್ಯ ಅಧ್ಯಯನಗಳು ಆರಂಭವಾದವು.

ಮಗುವು ಭಾಷೆಯನ್ನು ಕಲಿಯುವ ಪ್ರಕ್ರಿಯೆಯನ್ನು ಅರಿಯಲು ಭಾಷಾಶಾಸ್ತ್ರಜ್ಞರು ಮನಃಶಾಸ್ತ್ರಜ್ಞರು, ಶಿಕ್ಷಣಶಾಸ್ತ್ರಜ್ಞರು ಆಸಕ್ತರಾಗಿದ್ದರು. ಇವರ ಅಧ್ಯಯನಗಳಿಗೆ ಅವಶ್ಯವಾಗುವ ಮಾಹಿತಿ ಸಾಕಷ್ಟು ಸಮಗ್ರವಾಗಿರಬೇಕು ಮತ್ತು ವಸ್ತುನಿಷ್ಠವಾಗಿರಬೇಕು. ದಿನಚರಿ ದಾಖಲೆಗಳನ್ನು ಅಸಮಗ್ರವಾಗಿರುತ್ತವೆ; ಅಲ್ಲದೆ ಮಾಹಿತಿ ಹಲವೊಮ್ಮೆ

ದಾಖಲೆಕಾರರ ದೃಷ್ಟಿಕೋನ, ಅಪೇಕ್ಷೆಗಳ ಬೆರಕೆಯಿಂದಾಗಿ ವ್ಯಕ್ತಿನಿಷ್ಠವಾಗುದುಂಟು. ಆದ್ದರಿಂದ ದೃಶ್ಯ-ಧ್ವನಿ ಮುದ್ರಣದ ನೆರವಿನಿಂದ ದೊರೆಯುವ ಮಾಹಿತಿಯು ಇಂಥ ಅಧ್ಯಯನಗಳಿಗೆ ಹೆಚ್ಚಿನ ಅವಕಾಶಗಳನ್ನು ಒದಗಿಸಿತು.

ಮಗು ಮಾತು ಕಲಿಯಲು ತೊಡಗಿದಂದಿನಿಂದ ಎಲ್ಲ ವಿವರಗಳನ್ನೂ ಬಿಡದೆ ದಾಖಲಿಸುವುದು ಪ್ರಯಾಸದಾಯಕ. ಅಲ್ಲದೆ ನಿರುಪಯುಕ್ತವೂ ಹೌದು. ಬೇಕಾದಷ್ಟು ಉಪಯುಕ್ತ ಮಾಹಿತಿಯನ್ನು ಮಾತ್ರ ದಾಖಲಿಸುವುದು ಸಾಕು. ವಯಸ್ಕ ಭಾಷಿಕರಿಂದ ಭಾಷಿಕ ಮಾಹಿತಿಯನ್ನು ಪಡೆಯಲು ಖಚಿತವಾದ ವಿಧಾನಗಳನ್ನು ರೂಪಿಸಲಾಗಿದೆ. ಆದರೆ ಮಗುವಿನ ಭಾಷಾಕಲಿಕೆಯ ಮಾಹಿತಿಸಂಗ್ರಹದಲ್ಲಿ ಈ ವಿಧಾನಗಳನ್ನು ಯಥಾವತ್ತಾಗಿ ಬಳಸುವುದು ಸಾಧ್ಯವಿಲ್ಲ. ವಯಸ್ಕರು ಪ್ರಜ್ಞಾವಂತರಾಗಿರುವುದರಿಂದ ಮಾಹಿತಿಯನ್ನು ನೀಡುವಾಗ ಆ ಮಾಹಿತಿಗಳಿಗೆ ಮಿತಿಯೊದಗುವುದಾದರೂ, ಈ ಅಂಶವನ್ನು ನಿಯಂತ್ರಿಸಲು ವಿಧಾನಗಳಿವೆ. ಮಕ್ಕಳು ಯಾವುದೇ ವಿಷಯದ ಮೇಲೆ ಗಮನವನ್ನು ಕೇಂದ್ರಿಕರಿಸಲಾರರು; ಅಲ್ಲದೆ ಮಾಹಿತಿ ಸಂಗ್ರಹಕಾರರು ನೀಡುವ ಸೂಚನೆಗಳನ್ನು ಗ್ರಹಿಸುವಷ್ಟು ಸಾಮರ್ಥ್ಯ ಅವರಲ್ಲಿ ಇನ್ನೂ ಬೆಳೆದಿರುವುದಿಲ್ಲ. ಹಾಗಾಗಿ ಮಾಹಿತಿ ಸಂಗ್ರಹ ಕಷ್ಟವಾಗುತ್ತದೆ. ಪ್ರಶ್ನಾವಳಿಗಳ ಬಳಕೆಯಂತೂ ದೂರದ ಮಾತು. ಧ್ವನಿ-ದೃಶ್ಯ ಮುದ್ರಣದ ಉಪಕರಣಗಳೆದುರು ಮಕ್ಕಳು ಮಾತಾಡುವುದಕ್ಕಿಂತ ಆಟವಾಡಲು ತೊಡಗುವುದೇ ಹೆಚ್ಚು.

ಯಂತ್ರ ಜಗತ್ತಿನ ಹೊಸ ಆವಿಷ್ಕಾರಗಳು ಇಂಥ ಸಮಸ್ಯೆಗಳನ್ನು ಕಡಿಮೆ ಮಾಡಿವೆ. ದಾಖಲೆ ಸಂಗ್ರಹಿಸುವಾಗ ಉಪಕರಣಗಳಾಗಲೀ, ಸಂಗ್ರಹಕಾರರಾಗಲೀ ಮಗುವಿಗೆ ಕಾಣದಂತೆ ಇರುವ ಗವಾಕ್ಷಿ ವಿಧಾನಗಳು ಇಂದು ಸಾಧ್ಯ. ಅಲ್ಲದೆ ಒಂದೇ ಮಗುವಿನ ವಿವಿಧ ವಯೋಮಾನದ ಭಾಷಾಬೆಳವಣಿಗೆಯನ್ನು ದಾಖಲಿಸುವುದು ಸಾಧ್ಯವಾಗಿರುವಂತೆ ವಿವಿಧ ವಯೋಮಾನದ ಮತ್ತು ಭಾಷಾ ಸಾಮರ್ಥ್ಯದ ಮಕ್ಕಳನ್ನು ಏಕಕಾಲಕ್ಕೆ ಬೇರೆ ಬೇರೆಯಾಗಿ ಇರಿಸಿ ಮಾಹಿತಿಯನ್ನು ಸಂಗ್ರಹಿಸಿ ಕ್ರೋಢೀಕರಿಸುವುದು ಕೂಡ ಸಾಧ್ಯವಾಗಿದೆ. ಭಾಷಾಸಾಮರ್ಥ್ಯ ಗಳಿಕೆಯ ಪೂರ್ವಸ್ಥಿತಿಯಲ್ಲಿ ಧ್ವನ್ಯಂಗಗಳ ಕಾರ್ಯ ವಿಧಾನವನ್ನು ಅಭ್ಯಾಸ ಮಾಡುವುದು ಈಗ ಸಾಧ್ಯವಾಗಿದೆ. ಆದ್ದರಿಂದ ಹುಟ್ಟಿನಿಂದ ಕೌಮಾರ್ಯ ಸ್ಥಿತಿಯವರೆಗಿನ ಭಾಷಾಕಲಿಕೆಯ ದಾಖಲೀಕರಣ ಅಧ್ಯಯನಕಾರರಿಗೆ ಲಭ್ಯವಾಗಿದೆ.

**ಮಾದರಿಗಳು**

ಈ ಮೊದಲೇ ಹೇಳಿದಂತೆ ಮಗುವಿನ ಭಾಷಕಲಿಕೆಯ ಅಧ್ಯಯನದಲ್ಲಿ ಭಾಷಾಶಾಸ್ತ್ರಜ್ಞರೂ ಮನಃಶಾಸ್ತ್ರಜ್ಞರೂ ಆಸಕ್ತಿ ತಳೆದಿದ್ದಾರೆ. ಅವರವರ ಅಧ್ಯಯನದ ಉದ್ದೇಶ, ವಿಧಾನಗಳು ಬೇರೆ ಬೇರೆಯಾಗಿವೆ. ಆಯಾ ಜ್ಞಾನಶಿಸ್ತುಗಳಲ್ಲೂ ಅಧ್ಯಯನದಲ್ಲಿ ಹಲವು-ವಿಕಲ್ಪಗಳ ಬೆಳೆದಿವೆ. ಅಧ್ಯಯನಕ್ಕೆ ಒಳಗಾಗುವ ಮಗುವಿನ ವಯೋಮಾನವನ್ನು ಅವಲಂಬಿಸಿಯೂ ಹಲವು ಬಗೆಯ ಅಧ್ಯಯನ ಮಾದರಿಗಳು ಬೆಳೆದಿವೆ.

ಸಹಜ ವಾತಾವರಣ ಮಾದರಿ: ಮಗು ದಿನವೂ ಇರುವ ವಾತಾವರಣದಲ್ಲೇ ಮಾಹಿತಿಯನ್ನು ಸಂಗ್ರಹಿಸಲಾಗುವುದು. ಅಲ್ಲಿ ಮಗುವಿಗೆ ಅಪರಿಚಿತವಾದದ್ದು, ಮುಜುಗರವನ್ನು ಉಂಟು ಮಾಡುವುದು ಏನೂ ಇರುವುದಿಲ್ಲ. ಆದರೆ ಇಂಥ ಸಂದರ್ಭದಲ್ಲಿ ಧ್ವನಿಮುದ್ರಣದ ಗುಣ ಯಾವಾಗಲೂ ಒಂದೇ ರೀತಿಯಲ್ಲಿ ಇರುವುದೆಂದು ಹೇಳಲು ಬರುವುದಿಲ್ಲ. ಹೀಗಿದ್ದರೂ ಮಗು ಪಾಲಕರೊಡನೆ, ತನ್ನ ವಯೋಮಾನದ ಇತರ ಮಕ್ಕಳೊಡನೆ ಇರುವಂತೆ ಮಾಡಿ ಹೆಚ್ಚು ಸಹಜವಾದ ವಾತಾವರಣವನ್ನು ರೂಪಿಸುವುದು ಸಾಧ್ಯ

ಸಾಕಷ್ಟು ಪ್ರಮಾಣದಲ್ಲಿ ಇಂಥ ಮಾಹಿತಿ ದೊರಕಿದಂತೆ ಅಧ್ಯಯನಕಾರರಿಗೆ ಅದರಿಂದ ಉಪಯೋಗವಾಗುತ್ತದೆ. ಆದರೆ ಮಗುವಿನ ಭಾಷಾಬಳಕೆಗಳು, ಉಚ್ಚಾರಣೆಗಳು ಮಾತ್ರ ಇಂಥ ದಾಖಲೀಕರಣದಲ್ಲಿ ಲಭ್ಯವಾಗುತ್ತವೆ; ಭಾಷಾ ಸಾಮಗ್ರಿಯನ್ನು ಮಗು ಅರ್ಥಮಾಡಿಕೊಳ್ಳುವ, ಕೇಳಿಸಿಕೊಂಡದ್ದಕ್ಕೆ ಪ್ರತಿಕ್ರಿಯಿಸುವ ಅಂಶಗಳು ದಾಖಲಾಗುವುದಿಲ್ಲ. ಭಾಷಾಬಳಕೆಯಲ್ಲಿಯೂ ಮಗುವಿನ ಭಾಷಾಸಾಮರ್ಥ್ಯದ ಎಲ್ಲ ಅಂಶಗಳೂ ದಾಖಲೆಗೆ ಲಭಿಸುವುದೆಂದು ಹೇಳಲಾಗದು. ಅಂಥ ಕೆಲವು ಸಾಮರ್ಥ್ಯಗಳನ್ನು ಬಳಸುವ ಅವಕಾಶಗಳು ದಾಖಲೀಕರಣದ ಸಂದರ್ಭದಲ್ಲಿ ಮಗುವಿಗೆ ಒದಗದೇ ಹೋಗಬಹುದು. ಈ ದಾಖಲೆಗಳು ಇನ್ನೂ ಒಂದು ರೀತಿಯಲ್ಲಿ ಅಪೂರ್ಣವಾಗುವುದು ಸಾಧ್ಯ. ಪ್ರಾಸಂಗಿಕವಾದ ಮಾಹಿತಿಗಳು ಪೂರ್ಣವಾಗಿದ್ದರೂ ಮಗುವಿನಲ್ಲಾಗುತ್ತಿರುವ ಭಾಷಾಸಾಮರ್ಥ್ಯದ ಬೆಳವಣಿಗೆಯನ್ನ ಗುರುತಿಸಲು ಇಂಥ ಮಾಹಿತಿಯಿಂದ ಒದಗುವ ನೆರವು ಅತ್ಯಲ್ಪ. ಇನ್ನಿತರ ವಿಧಾನಗಳಿಂದ ಮಾಹಿತಿಯನ್ನು ಪಡೆದು ಈ ಕೊರತೆಗಳನ್ನು ತುಂಬಿಸಿಕೊಳ್ಳಬೇಕಾಗುತ್ತದೆ.

**ಪ್ರಯೋಗ ವಿಧಾನ:** ಮನಃಶಾಸ್ತ್ರಜ್ಞರು ಪ್ರಯೋಗಗಳನ್ನು ರೂಪಿಸಿ ಮಾಹಿತಿಯನ್ನು ಸಂಗ್ರಹಿಸುತ್ತಾರೆ. ಪ್ರಯೋಗಗಳನ್ನು ಆಧರಿಸಿದ ಅನ್ವೇಷಣೆಗಳಿಗೆ ಸಾಮಾನ್ಯವಾದ ವಿಧಾನದಂತೆ ಇಲ್ಲಿಯೂ ಮಕ್ಕಳ ಭಾಷಾಕಲಿಕೆಯನ್ನು ಕುರಿತಂತೆ ಆಧಾರಕಲ್ಪನೆಯನ್ನು ರೂಪಿಸುತ್ತಾರೆ. ಈ ಆಧಾರಕಲ್ಪನೆಯ ಸಾಧುತ್ವವನ್ನು ಪರಿಶೀಲಿಸಲು ಅನುಕೂಲವಾಗುವ ಪ್ರಯೋಗವಿಧಾನವನ್ನು ರಚಿಸುವುದು ಅವಶ್ಯಕ. ಹಲವು ಮಕ್ಕಳನ್ನು ನಿರ್ದಿಷ್ಟ ಬಗೆಯಲ್ಲಿ ಆಯ್ದು ಈ ಪ್ರಯೋಗವನ್ನು ಜಾರಿಗೆ ನೀಡಲಾಗುತ್ತದೆ. ಆಗ ದೊರಕಿದ ಮಾಹಿತಿಯನ್ನು ಸಾಂಖ್ಯಿಕವಾಗಿ ವಿಶ್ಲೇಷಿಸಿ ಆಧಾರಕಲ್ಪನೆಯ ನೆಲೆಗಳು ಸರಿಯೇ ಎಂದು ತಾಳೆ ನೋಡುತ್ತಾರೆ. ಈ ವಿಶ್ಲೇಷಣೆಯ ಆಧಾರಕಲ್ಪನೆಯನ್ನು ಯಾವಾಗಲೂ ನಿಜವೆಂದು ಸಾಬೀತುಪಡಿಸಬೇಕೆಂದಿಲ್ಲ. ಆಧಾರಕಲ್ಪನೆಯಲ್ಲಿ ದೋಷವಿದೆಯೋ ಅಥವಾ ಪ್ರಯೋಗ ವಿಧಾನದಲ್ಲಿ ದೋಷವಿದೆಯೋ ಎಂಬುದನ್ನು ಕಂಡುಕೊಂಡು ಅದಕ್ಕನುಗುಣವಾಗಿ ಪರಿವರ್ತನೆಗಳನ್ನು ಮಾಡಲಾಗುತ್ತದೆ.

ಈ ವಿಧಾನಗಳನ್ನು ಅನುಸರಿಸಿ ಅಧ್ಯಯನಕಾರರು ವಿವಿಧ ವಯೋಮಾನದ ಮಕ್ಕಳ ಭಾಷಾಕಲಿಕೆಯ ಬಗ್ಗೆ ಕೆಲವು ಸಿದ್ಧಾಂತಗಳನ್ನು ಮಂಡಿಸಲಾಗಿದೆ. ಮಕ್ಕಳು ಭಾಷೆಯನ್ನು ಹೇಗೆ ಬಳಸುತ್ತಾರೆ, ಮತ್ತು ಭಾಷಿಕವಾಗಿ ಹೇಗೆ ಗ್ರಹಿಸುತ್ತಾರೆ ಎಂಬ

ಎರಡೂ ನೆಲೆಗಳನ್ನು ಈ ಸಿದ್ಧಾಂತಗಳು ಒಳಗೊಳ್ಳುತ್ತವೆ. ಎಲ್ಲ ಪ್ರಯೋಗವಿಧಾನಗಳಿಗೂ ಇರುವ ಮಿತಿಗಳು ಇಲ್ಲಿಯೂ ಇರುತ್ತವೆ. ನಿಯಂತ್ರಿತ ಗುಂಪೊಂದರ ಅಧ್ಯಯನದಿಂದ ಸಿದ್ಧಗೊಂಡ ಸಂಗತಿಗಳನ್ನು ಸಾಮಾನ್ಯೀಕರಿಸುವುದು ಸುಲಭವಲ್ಲ. ಪ್ರಯೋಗದ ಸಂದರ್ಭದಲ್ಲಿ ನಿಜವೆಂದು ಕಂಡದ್ದು ವಾಸ್ತವವಾಗಿ ಇಲ್ಲದೆಯೂ ಇರಬಹುದು. ಅಲ್ಲದೆ ಭಿನ್ನ ಪ್ರಯೋಗಗಳು, ಭಿನ್ನ ವಿಕಲ್ಪಗಳು ಹಾಗೂ ಭಿನ್ನ ವಿಶ್ಲೇಷಣೆಗಳು ಒದಗಿಸುವ ಸಿದ್ಧಾಂತಗಳೂ ಬೇರೆ ಬೇರೆಯಾಗಿರಬಹುದು. ಖಚಿತವಾದ ಸಿದ್ಧಾಂತಗಳನ್ನು ಪಡೆಯಲು ಹತ್ತಾರು ವರ್ಷಗಳವರೆಗೆ ಪ್ರಯೋಗಗಳನ್ನು ನಡೆಸಬೇಕಾಗುತ್ತದೆ. ಅಧ್ಯಯನ ಸಂದರ್ಭದ ಎಲ್ಲ ವಿಕಲ್ಪಗಳನ್ನೂ ಗಮನಿಸಲಾಗಿದೆ, ಮತ್ತು ಆ ಮೂಲಕ ಪಡೆಯಲಾದ ನಿರ್ಧಾರಗಳು ಸೂಕ್ತವಾಗಿವೆ ಎಂದು ಒಪ್ಪಿತವಾಗಬೇಕಾದರೆ ಅಗಾಧ ತಾಳ್ಮೆಯಿಂದ ಈ ಹಾದಿಯಲ್ಲಿ ಸಾಗಬೇಕು.

ಮಕ್ಕಳ ಭಾಷಾಕಲಿಕೆಯ ಅಧ್ಯಯನದಲ್ಲಿ ತೊಡಗುವವರು ಒಂದು ಮುಖ್ಯ ಸಮಸ್ಯೆಯನ್ನು ಎದುರಿಸುತ್ತಾರೆ. ಮಾಹಿತಿಯನ್ನು ಹೇಗೆ ಸಂಗ್ರಹಿಸುವುದು ಎನ್ನುವ ಸಮಸ್ಯೆಯ ಜೊತೆಗೆ ಎಷ್ಟು ಮಕ್ಕಳನ್ನು ಆಯ್ದುಕೊಳ್ಳಬೇಕು, ಮಾಹಿತಿಸಂಗ್ರಹಗಳ ಅವಧಿ, ಪ್ರಮಾಣ ಎಷ್ಟಿರಬೇಕು ಎಂಬ ಪ್ರಶ್ನೆಗಳೂ ಸೇರಿಕೊಳ್ಳುತ್ತವೆ. ಸಾಮಾನ್ಯವಾಗಿ ಎರಡು ದಿಕ್ಕಿನಲ್ಲಿ ಉತ್ತರ ಕಂಡುಕೊಳ್ಳಲಾಗುತ್ತದೆ. ಒಂದು ಮಗು ಇಲ್ಲವೇ ಮಕ್ಕಳ ಚಿಕ್ಕಗುಂಪೊಂದನ್ನು ಆಯ್ಕೆ ಮಾಡುವುದು; ಮಾಹಿತಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಸಂಗ್ರಹಿಸುವುದು; ಮತ್ತು ಮಾಹಿತಿ ಸಂಗ್ರಹಗಳ ನಡುವೆ ಕಡಿಮೆ ಕಾಲದ ಅಂತರವಿರುವಂತೆ ನೋಡಿಕೊಳ್ಳುವುದು–ಇದು ಒಂದು ವಿಧಾನ. ಇನ್ನೊಂದು ವಿಧಾನವೆಂದರೆ ಹೆಚ್ಚಿನ ಸಂಖ್ಯೆಯ ಮಕ್ಕಳನ್ನು ಆಯ್ದುಕೊಳ್ಳುವುದು; ಮಾಹಿತಿಯನ್ನು ಕಡಿಮೆ ಪ್ರಮಾಣದಲ್ಲಿ ಸಂಗ್ರಹಿಸುವುದು ಮತ್ತು ಮಾಹಿತಿ ಸಂಗ್ರಹಣೆಗಳ ನಡುವೆ ಅವಧಿ ಹೆಚ್ಚು ಕಾಲದ ಅಂತರವಿರುವಂತೆ ಇಟ್ಟುಕೊಳ್ಳುವುದು. ಈ ಎರಡೂ ವಿಧಾನಗಳಲ್ಲಿ ಒಳ್ಳೆಯ ಅಂಶಗಳಿರುವಂತೆ ಮಿತಿಗಳೂ ಇವೆ.

ಮೊದಲ ವಿಧಾನದಲ್ಲಿ ಭಾಷಾಸಾಮರ್ಥ್ಯ ಕಿಂಚಿತ್ತೂ ಇಲ್ಲದ ಸ್ಥಿತಿಯಿಂದ ನಿಧಾನವಾಗಿ ಭಾಷಾಕಲಿಕೆಯು ಸಾಧ್ಯವಾಗುತ್ತಾ ಹೋಗುವುದನ್ನು ಗುರುತಿಸಬಹುದು. ಆದರೆ ಅಧ್ಯಯನದಲ್ಲಿ ಒಳಗಾದ ಮಕ್ಕಳ ಸಂಖ್ಯೆ ಕಡಿಮೆಯಿರುವುದರಿಂದ ಪ್ರಯೋಗದ ನಿರ್ಣಯಗಳನ್ನು ಸಾಧಾರಣೀಕರಿಸುವುದು ಸಾಧ್ಯವಾಗುವುದಿಲ್ಲ. ಎರಡನೇ ವಿಧಾನದಲ್ಲಿ ಮಕ್ಕಳ ಸಂಖ್ಯೆ ಬಹಳವಾಗಿರುವುದರಿಂದ ನಿರ್ಣಯಗಳ ಸಾಧಾರಣೀಕರಣ ಸಾಧ್ಯವಾಗುವುದು. ಆದರೆ ಮಾಹಿತಿಯು ಕಡಿಮೆಯಿದ್ದು ದೀರ್ಘಕಾಲದ ಅಂತರಗಳಲ್ಲಿ ಸಂಗ್ರಹಗೊಂಡಿರುವುದರಿಂದ ಭಾಷಿಕಸಾಮರ್ಥ್ಯದ ಕೆಲವು ಮಹತ್ವದ ಕೊಂಡಿಗಳು ಗೋಚರವಾಗದೇ ಹೋಗಬಹುದು. ಯಾವ ವಿಧಾನವನ್ನು ಅನುಸರಿಸಲಾಗುವುದೋ ಅದಕ್ಕನುಗುಣವಾಗಿ ಮಾಹಿತಿಯನ್ನು ಸಂಗ್ರಹಿಸುವ ಅವಧಿಯನ್ನು ನಿರ್ಧರಿಸಲಾಗುತ್ತದೆ. ಮಕ್ಕಳು ಚಿಕ್ಕವರಾಗಿದ್ದು ಅವರಲ್ಲಿ ಭಾಷಾಸಾಮರ್ಥ್ಯದ ಬೆಳವಣಿಗೆ ತೀವ್ರಗತಿಯಲ್ಲಿ ನಡೆಯುತ್ತಿದ್ದರೆ ಆಗ ಮಾಹಿತಿಯ ಸಂಗ್ರಹ ನಡೆಸುವ ಸಂದರ್ಭಗಳ ನಡುವೆ ಕೇವಲ

ಕೆಲವೇ ದಿವಸಗಳ ಅಂತರವನ್ನು ಇರಿಸಿಕೊಳ್ಳಲಾಗುವುದು. ಈ ಅಂತರ ಮುಂದೆ ಮೂರು ತಿಂಗಳಷ್ಟು ವಿಸ್ತಾರಗೊಳ್ಳಲೂಬಹುದು.

**ಕೆಲವು ನಿದರ್ಶನಗಳು:** ಅಮೆರಿಕದ ಮನೋವಿಜ್ಞಾನಿ ರೋಜರ್ ಬ್ರೌನ್ 1960ರಲ್ಲಿ ಕೇವಲ ಮೂರು ಮಕ್ಕಳನ್ನು ಆಯ್ದು ಅಧ್ಯಯನ ನಡೆಸಿದ್ದಾನೆ. ಪ್ರತಿವಾರವೂ ಅರ್ಧಗಂಟೆ ಕಾಲ ಒಟ್ಟು ತಿಂಗಳಿಗೆ ಎರಡು ಗಂಟೆಗಳ ಅವಧಿಯ ಮಾಹಿತಿಯನ್ನು ಆತ ಸಂಗ್ರಹಿಸಿದಂತೆ ವರದಿಯಾಗಿದೆ. 1970ರಲ್ಲಿ ಬ್ರಿಟನ್ನಿನ ಮನೋಭಾಷಾಶಾಸ್ತ್ರಜ್ಞ ಗೋರ್ಡನ್ ವೆಲ್ಸ್ ಹಿಡಿದ ಹಾದಿ ಬೇರೆ. ಆತ ಆಯ್ಕೆ ಮಾಡಿದ್ದು 128 ಮಕ್ಕಳನ್ನು. ಪ್ರತಿ ಮೂರು ತಿಂಗಳಿಗೊಮ್ಮೆ ಅರ್ಧಗಂಟೆ ಕಾಲದ ಮಾಹಿತಿಯನ್ನು ಪ್ರತಿ ಮಗುವಿನಿಂದಲೂ ಸಂಗ್ರಹಿಸಿದನು. ಇದಕ್ಕಿಂತಲೂ ಹೆಚ್ಚು ಸಂಖ್ಯೆಯ ಮಕ್ಕಳನ್ನು ಆಯ್ದು ಅಧ್ಯಯನ ನಡೆಸಿದ ನಿದರ್ಶನಗಳಿವೆ. ಆದರೆ ಇಂಥ ಸಂದರ್ಭಗಳಲ್ಲಿ ಮಕ್ಕಳ ಭಾಷಾಕಲಿಕೆಯ ಎಲ್ಲ ಅಂಶಗಳನ್ನೂ ಅಧ್ಯಯನ ಮಾಡಲು ಸಾಧ್ಯವಾಗುವುದಿಲ್ಲ. ಕೇವಲ ಕೆಲವು ಭಾಷಾಂಶಗಳಿಗೆ ಸೀಮಿತಗೊಳಿಸಿಕೊಂಡು ಅಧ್ಯಯನ ನಡೆಸುವುದು ಅನಿವಾರ್ಯವಾಗುತ್ತದೆ. ಮಕ್ಕಳ ಸಂಖ್ಯೆ ಹೆಚ್ಚಾದಂತೆ ಎಲ್ಲ ಭಾಷಾಂಶಗಳಿಗೆ ಸಂಬಂಧಿಸಿದ ಮಾಹಿತಿಯು ಸಿಗಬಹುದೆಂದು ತಿಳಿದರೆ ಅದು ಹುಸಿಯಾಗುತ್ತದೆ. ವೆಲ್ಸ್ ನಡೆಸಿದ ಪ್ರಯೋಗದಲ್ಲಿಯೇ ಹೀಗಾದದ್ದುಂಟು. ಅಕರ್ಮಕ ಕ್ರಿಯಾರೂಪಗಳನ್ನು ಮಕ್ಕಳು ಬಳಸುವ ಬಗೆಗೆ ಮಾಹಿತಿಯನ್ನು ಹುಡುಕಲು ಹೊರಟದ್ದಕ್ಕೆ ಆತನ ಸಂಗ್ರಹದಿಂದ ಸಿಕ್ಕಿದ್ದು ಅತಿ ಕನಿಷ್ಠ ಸಂಖ್ಯೆಯ ಪ್ರಯೋಗಗಳು. ಮೂರರಿಂದ ಮೂರೂವರೆ ವರ್ಷಗಳ ವಯಸ್ಸಿನ ಅವಧಿಯಲ್ಲಿ ಮೂರು ಬಾರಿ ಮಾಹಿತಿಯನ್ನು ಸಂಗ್ರಹಿಸಿದ್ದನು. ಭಾಗವಹಿಸಿದ್ದ ಮಕ್ಕಳು 60. ಸಂಗ್ರಹದಲ್ಲಿ 18000 ಬಾರಿ ಈ ಭಾಷಾಂಶವನ್ನು ಬಳಸಿದ್ದರು. ಈ ಭಾಷಾಂಶವನ್ನು ಮಕ್ಕಳು ಗಳಿಸುವ ಮತ್ತು ಬಳಸುವ ಕ್ರಮವನ್ನು ವಿವರಿಸಲು ಈ ಮಾಹಿತಿ ಸಾಕಾಗುವುದಿಲ್ಲ.

ಮಾಹಿತಿಯನ್ನು ಹೇಗಾದರೂ ಸಂಗ್ರಹಿಸಲಿ ಅಥವಾ ಎಷ್ಟು ಪ್ರಮಾಣದಲ್ಲಾದರೂ ಸಂಗ್ರಹಿಸಲಿ ಗಮನಿಸಬೇಕಾದ ಅಂಶವೆಂದರೆ ಅಧ್ಯಯನಕ್ಕೆ ಒಳಗಾಗುವ ಮಗುವಿನ ಭಾಷಾಕಲಿಕೆಯ ಪ್ರಗತಿಯು ಹೆಚ್ಚು ಸಮಗ್ರ ಮತ್ತು ಪ್ರಾತಿನಿಧಿಕವಾಗಿರುವಂತೆ ನೋಡಿಕೊಳ್ಳುವುದು ಅವಶ್ಯ. ಮಾಹಿತಿಯನ್ನು ದಿನದ ಯಾವ ವೇಳೆಯಲ್ಲಿ ಸಂಗ್ರಹಿಸಲಾಯಿತು. ಆಗಿನ ವಾತಾವರಣ ಮಗುವಿನ ಭಾಷಾ ಚಟುವಟಿಕೆಗಳಿಗೆ ಪೂರಕವಾಗಿತ್ತೇ ಇಲ್ಲವೇ ಆಗ ಅಲ್ಲಿದ್ದವರು ಯಾರೂ ಎಂಬಿತ್ಯಾದಿ ಅಂಶಗಳನ್ನೆಲ್ಲವನ್ನೂ ಪರಿಗಣಿಸಿದ ಮೇಲೇ ಮಾಹಿತಿಯಲ್ಲಿ ಆಯ್ಕೆ ಮಾಡಬೇಕಾಗುತ್ತದೆ.

ಮಕ್ಕಳಿಂದ ಭಾಷಾಕಲಿಕೆಯ ಮಾಹಿತಿಯನ್ನು ಸಂಗ್ರಹಿಸುವಾಗ ಒಂದೇ ಮಕ್ಕಳ ಗುಂಪನ್ನು ಅಧ್ಯಯನದ ಉದ್ದಕ್ಕೂ ಬಳಸುವ ವಿಧಾನ ಕೆಲವರದು. ಅಧ್ಯಯನ ಮಾಡುತ್ತಿರುವ ಭಾಷಾಂಶಗಳನ್ನು ಅದೇ ಮಕ್ಕಳ ಗುಂಪಿನಿಂದಲೇ ಸಂಗ್ರಹಿಸಲಾಗುತ್ತದೆ. ಇದಕ್ಕೆ ಬದಲಾಗಿ ಒಂದು ನಿರ್ದಿಷ್ಟ ಭಾಷಾಂಶವನ್ನು ಬೇರೆ ಬೇರೆ ವಯೋಮಾನದ ಮಕ್ಕಳ ಹಲವು ಗುಂಪುಗಳನ್ನು ಆಧರಿಸಿ ಅಧ್ಯಯನ ಮಾಡುವುದು ಇನ್ನೊಂದು

ವಿಧಾನ. ಎರಡನೇ ವಿಧಾನದಲ್ಲಿ ಅಧ್ಯಯನದ ಅವಧಿ ಕಡಿಮೆ: ಭಾಗವಹಿಸುವ ಮಕ್ಕಳು ಹೆಚ್ಚು. ಮೊದಲ ವಿಧಾನದಲ್ಲಿ ಅಧ್ಯಯನದ ಅವಧಿ ಹೆಚ್ಚು; ಭಾಗವಹಿಸುವ ಮಕ್ಕಳ ಸಂಖ್ಯೆ ಕಡಿಮೆ. ಇವೆರಡೂ ವಿಧಾನಗಳನ್ನು ಬೆರೆಸುವುದು ಮತ್ತೂ ಒಂದು ಸಾಧ್ಯತೆ.

ಮಕ್ಕಳ ಭಾಷಾಕಲಿಕೆಯ ಮಾಹಿತಿ ಸಂಗ್ರಹದಲ್ಲಿ ಇನ್ನೂ ಕೆಲವು ತೊಡಕುಗಳನ್ನು ಎದುರಿಸಬೇಕಾಗುತ್ತದೆ. ಮಾಹಿತಿಯನ್ನು ಸಂಗ್ರಹಿಸುವ ಸಂದರ್ಭದಲ್ಲಿ ಪಾಲಕರು ಇದ್ದರೆ, ಮಗುವಿನ ಮಾತುಗಳಿಗೆ ಅವರು ಅರ್ಥ ಹೇಳುವುದು ಕಂಡುಬರುತ್ತದೆ. ಅದರಲ್ಲೂ ಸಂಗ್ರಹಕಾರರು ಹಾಜರಿದ್ದಾಗ ಈ ಅರ್ಥೈಸುವಿಕೆ ಹೆಚ್ಚಾಗುತ್ತದೆ. ಸಂಗ್ರಹಕಾರರು ಮರೆಯಾಗಿದ್ದರೆ, ಪಾಲಕರು ಮಗುವಿನ ಉಕ್ತಿಗೆ ಅರ್ಥಹೇಳುವುದನ್ನು ನಿಲ್ಲಿಸುತ್ತಾರೆ. ಈ ರೀತಿ ಉಕ್ತಿಯನ್ನು ಅರ್ಥೈಸುವುದು ಮಗುವಿನ ಭಾಷಾಸಾಮರ್ಥ್ಯವನ್ನು ಗ್ರಹಿಸುವುದಕ್ಕೆ ನೆರವಾಗುವ ಬದಲು ಅಡ್ಡಿಯನ್ನುಂಟು ಮಾಡಬಹುದು. ಆದ್ದರಿಂದ ಸಂಗ್ರಹಕಾರರು ಮಾಹಿತಿ ಸಂಗ್ರಹಕಾಲದಲ್ಲಿ ಖುದ್ದಾಗಿ ಹಾಜರಿದ್ದರೆ, ಅದರ ಪರಿಣಾಮ ಮಗುವಿಗಿಂತ ಪಾಲಕರ ಮೇಲೆ ಹೆಚ್ಚಾಗಿ ಆಗುವಂತೆ ಕಂಡುಬಂದಿದೆ. ಅದರಲ್ಲೂ ತಾಯಂದಿರು ಮಕ್ಕಳ ಮಾತನ್ನು ವಿವರಿಸಲು ಮುಂದಾಗುವುದು ಹೆಚ್ಚು.

ಈ ಮೊದಲು ಉಲ್ಲೇಖಿಸಿದ ವೆಲ್ಸ್‌ನ ಅಧ್ಯಯನದಲ್ಲಿ ಮಕ್ಕಳು ಮತ್ತು ಪಾಲಕರು ಇರುವಲ್ಲಿ ಅಧ್ಯಯನಕಾರರು ಇರಲಿಲ್ಲ. ಪ್ರತಿ 20 ನಿಮಿಷಗಳಿಗೊಮ್ಮೆ ಮಕ್ಕಳ ಮಾತುಗಳನ್ನು ಧ್ವನಿಮುದ್ರಿಸಿಕೊಳ್ಳುವ ಸ್ವಯಂಚಾಲಿತ ವ್ಯವಸ್ಥೆಯಿತ್ತು. ಈ ಶೋಧಗಳಿಂದ ಅನ್ಯರು ಎದುರಿಗಿಲ್ಲದಿದ್ದರೆ ಪಾಲಕರು ಮಕ್ಕಳ ಮಾತುಗಳಿಗೆ ವಿವರಣೆ ನೀಡುವುದು ಇಲ್ಲವಾಗುತ್ತದೆಂಬ ಅಂಶ ತಿಳಿದುಬಂದಿದೆ. ಮನೆಗೆ ಬೇರೆ ಯಾರಾದರೂ ವಯಸ್ಕರು ಬಂದಿದ್ದಾಗ ಈ ವಿವರಣೆಗಳು ಹೆಚ್ಚಾಗುತ್ತವೆ. ಇದರಿಂದ ಮಕ್ಕಳ ಭಾಷಾಕಲಿಕೆಯ ವಿಧಾನವನ್ನು ತಿಳಿಯಲು ಸೂಚನೆಗಳು ದೊರಕುತ್ತವೆ. ಮಕ್ಕಳು ಮಾತಾಡಲು ತೊಡಗಿದಾಗ ಪಾಲಕರು ಆಡುವ ವಿವರಣೆಯ ರೂಪದ ಮಾತುಗಳು ಮಗುವಿನ ಕಲಿಕೆಗೆ ನೆರವಾಗುವ ಮಾಹಿತಿಯೆಂದು ಸಾಮಾನ್ಯವಾಗಿ ತಿಳಿಯಲಾಗುವುದಷ್ಟೆ. ಆದರೆ ವೆಲ್ಸ್‌ನ ಶೋಧನೆಗಳು ತಿಳಿಸುವಂತೆ ಈ ವಿವರಣೆಗಳು ಅನ್ಯರಿಗೆ ನೆರವಾಗುವ ಉದ್ದೇಶವನ್ನು ಹೊಂದಿರುವ ಸಾಧ್ಯತೆ ಹೆಚ್ಚು. ಮಗುವಿನ ಕಲಿಕೆಯ ಅಧ್ಯಯನಕ್ಕೆ ಆ ವಿವರಣೆಗಳಿಂದ ಯಾವ ನೆರವೂ ದೊರೆಯುವುದಿಲ್ಲ. ಆ ಉದ್ದೇಶವೂ ಆ ವಿವರಣೆಗಳಿಗೆ ಇದ್ದಂತಿಲ್ಲ.

ಮಕ್ಕಳ ಮಾತಿನ ಮಾಹಿತಿಯನ್ನು ಸಂಗ್ರಹಿಸುವಲ್ಲಿ ಇರುವ ಎಡರುತೊಡರುಗಳನ್ನು ನಿವಾರಿಸಲು ಹಲವು ರೀತಿಯ ಪ್ರಯೋಗಗಳನ್ನು ಕೈಗೊಳ್ಳಲಾಗಿದೆ. ಅಂಥದೊಂದು ಪ್ರಯೋಗ ಹೀಗಿದೆ; ಈ ಪ್ರಯೋಗ ಮಕ್ಕಳಲ್ಲಿರುವ ಆಟದ ಆಸಕ್ತಿ, ಕುತೂಹಲಗಳನ್ನು ಬಳಸಿಕೊಳ್ಳಲು ಯೋಜಿಸುತ್ತದೆ. ಒಂದು ಕೊಠಡಿಯಲ್ಲಿ 'ಪಾಂಡಾ' ಎಂಬ ಪ್ರಾಣಿಯ ದೊಡ್ಡಗಾತ್ರದ ಬೊಂಬೆಯನ್ನು ಇರಿಸಿರುತ್ತಾರೆ. ಪಾಶ್ಚಾತ್ಯ ನಾಡಿನ ಮಕ್ಕಳಿಗೆ ಇದೊಂದು ಪ್ರೀತಿಯ ಪ್ರಾಣಿ. ಈ ಪಾಂಡಾ ಬೊಂಬೆ ಮಾತಾಡಲು ಕಲಿಯುತ್ತಿದೆಯೆಂದೂ

ಅದು ಚೆನ್ನಾಗಿ ಮಾತಾಡಲು ಮಕ್ಕಳು ಸಹಾಯ ಮಾಡಬೇಕೆಂದೂ ಪ್ರಯೋಗದಲ್ಲಿ ಪಾಲ್ಗೊಳ್ಳುವ ಮಕ್ಕಳಿಗೆ ತಿಳಿಯ ಹೇಳುತ್ತಾರೆ. ಇದೊಂದು ಆಟವೆಂದು ತಿಳಿದು ಮಕ್ಕಳು ಸಹಕರಿಸಲು ಮುಂದಾಗುವರು.

ಈ ಪ್ರಯೋಗದಲ್ಲಿ ಮಾಹಿತಿ ಸಂಗ್ರಾಹಕರು ಇಬ್ಬರಿರುತ್ತಾರೆ. ಒಬ್ಬರು ಬೊಂಬೆ ಮತ್ತು ಮಗುವಿನ ಜತೆಯಲ್ಲಿ ಇದ್ದರೆ, ಮತ್ತೊಬ್ಬರು ಕೊಠಡಿಯ ಹೊರಗೆ ಇರುತ್ತಾರೆ. ಈ ಕೊಠಡಿ ವಿಶೇಷ ಬಗೆಯದ್ದು. ಹೊರಗಿನಿಂದ ಒಳಗೆ ಏನಾಗುತ್ತಿದೆ ಎಂಬುದನ್ನು ನೋಡಲು ಸಾಧ್ಯ. ಆದರೆ ಹೊರಗೇನಿದೆ ಎಂಬುದು ಒಳಗಿರುವವರಿಗೆ ತಿಳಿಯುವುದಿಲ್ಲ. ಮಗು ಪಾಂಡಾ ಬೊಂಬೆಯೊಡನೆ ಮಾತಾಡುವಾಗ ಪಾಂಡಾ ಬೊಂಬೆಯ ಉತ್ತರಗಳನ್ನು ನೀಡುವವರು ಹೊರಗಿರುವ ಮಾಹಿತಿ ಸಂಗ್ರಾಹಕರು. ಅಲ್ಲಿ ಅವರಾಡಿದ ಮಾತು ಇಲ್ಲಿರುವ ಮಗುವಿಗೆ ಪಾಂಡಾ ಮಾತಾಡಿದಂತೆ ತೋರುತ್ತದೆ.

ಈ ಪ್ರಯೋಗದ ಮುಖ್ಯ ಉದ್ದೇಶವಿಷ್ಟು:

ಮಕ್ಕಳು ಅನ್ಯರಾಡುವ ಮಾತಿನಲ್ಲಿ ದೋಷಗಳನ್ನು ಗುರುತಿಸಲು ಶಕ್ತರಾಗಿರುತ್ತಾರೆಯೇ ಎಂದು ತಿಳಿಯುವುದು. ಪಾಂಡಾ ಬೊಂಬೆ ಮಾತು ಕಲಿಯುತ್ತಿದೆಯೆಂದು ಮಕ್ಕಳು ತಿಳಿದಿರುವುದರಿಂದ ಆ ಬೊಂಬೆಯ ಮಾತನ್ನು ತಿದ್ದಲು ಮುಂದಾಗುವುದು ಸಾಧ್ಯ. ಈ ಆಧಾರಕಲ್ಪನೆಯನ್ನು ಇರಿಸಿಕೊಂಡು ಪ್ರಯೋಗ ನಡೆಯುತ್ತದೆ.

ಪ್ರಯೋಗದ ಉದ್ದಕ್ಕೂ ಹೊರಗಿರುವ ಮಾಹಿತಿ ಸಂಗ್ರಾಹಕರು ಉದ್ದೇಶ ಪೂರ್ವಕವಾಗಿ ತಪ್ಪುಗಳಿರುವ ವಾಕ್ಯಗಳನ್ನು ಪಾಂಡಾ ಮೂಲಕ ಹೇಳುತ್ತಾರೆ. ಮಕ್ಕಳು ಅಂಥ ವಾಕ್ಯಗಳನ್ನು ಕೇಳಿ ಹೇಗೆ ತಿದ್ದುತ್ತಾರೆ ಎನ್ನುವುದನ್ನು ಒಳಗಿರುವ ಸಂಗ್ರಾಹಕರು ಗುರುತಿಸಿಕೊಳ್ಳುತ್ತಾರೆ. ಈ 'ತಪ್ಪುಗಳು' ವ್ಯಾಕರಣಕ್ಕೆ ನೇರವಾಗಿ ಸಂಬಂಧಿಸಿರುವುದಿಲ್ಲ. ಪಾಂಡಾ ಮತ್ತು ಮಕ್ಕಳ ಎದುರು ಒಂದು ಚಿತ್ರವಿದೆಯೆಂದು ತಿಳಿಯೋಣ. ಈ ಚಿತ್ರದಲ್ಲಿ ಕೆಲವು ಮಕ್ಕಳು ಕುದುರೆಗಳ ಮೇಲೆ ಕುಳಿತಿದ್ದರೆ ಒಂದಿಬ್ಬರು ನೆಲದ ಮೇಲೆ ನಿಂತಿರುತ್ತಾರೆ. ಆ ಚಿತ್ರವನ್ನು ನೋಡುತ್ತಾ ಪಾಂಡಾ ಬೊಂಬೆ "ಎಲ್ಲ ಮಕ್ಕಳೂ ಮೇಲೂ ಮಕ್ಕಳಿದ್ದಾರೆ" ಎಂದು ಹೇಳುವುದೆಂದುಕೊಳ್ಳಿ. ಅಥವಾ "ಎಲ್ಲ ಮಕ್ಕಳೂ ಕುದುರೆಗಳ ಮೇಲಿದ್ದಾರೆ" ಎಂದು ಒಂದು ಪರ್ಯಾಯ ವಾಕ್ಯವನ್ನು ಹೇಳುವುದೆಂದು ತಿಳಿಯೋಣ. ಮೊದಲ ವಾಕ್ಯ ಸರಿ. ಎರಡನೆಯದು ತಪ್ಪು. ಈ ತಪ್ಪು ವ್ಯಾಕರಣಕ್ಕೆ ಸಂಬಂಧಿಸಿಲ್ಲವೆಂದು ಗಮನಿಸಬೇಕು. ಎರಡನೆಯ ವಾಕ್ಯವನ್ನು ಕೇಳಿದ ಮಗು ಅಲ್ಲಿನ ತಪ್ಪನ್ನು ತಿದ್ದುವುದಾದರೆ ಆ ತಿದ್ದುಪಡಿಯನ್ನು ದಾಖಲು ಮಾಡಿಕೊಳ್ಳಲಾಗುವುದು.

ಈ ಮೇಲಿನ ಪ್ರಯೋಗದ ಫಲಿತಾಂಶ ನಮಗಿಲ್ಲಿ ಮುಖ್ಯವಲ್ಲ. ಮಕ್ಕಳ ಮಾತಿನ ಮಾಹಿತಿಯನ್ನು ಹೆಚ್ಚು ಸಹಜವಾದ ರೀತಿಯಲ್ಲಿ ಪಡೆದುಕೊಳ್ಳುವ ಸಾಧ್ಯತೆ ಇಂಥ ಪ್ರಯೋಗಗಳಿಂದ ಹೆಚ್ಚುವುದು. ಮಾತಾಡುವುದು, ಕೇಳಿದ್ದನ್ನು ಅರ್ಥಮಾಡಿಕೊಳ್ಳುವುದು, ಪರಸ್ಪರ ಮಾತುಕತೆಗಳಲ್ಲಿ ತೊಡಗುವುದು ಇವೆಲ್ಲ ನೆಲೆಗಳಲ್ಲೂ ಉಪಯುಕ್ತ ಮಾಹಿತಿಯ ಲಭ್ಯತೆ ಈಗ ಹೆಚ್ಚಾಗಿದೆ.

ಮಕ್ಕಳ ಭಾಷಾಕಲಿಕೆಯ ಮಾಹಿತಿಯು ಅಧ್ಯಯನಕ್ಕೆ ಲಭಿಸಿದ್ದು ಪಾಲಕರು ಮಾಡಿಕೊಳ್ಳುತ್ತಿದ್ದ ಟಿಪ್ಪಣಿಗಳಿಂದ ಎಂಬುದನ್ನು ಈಗಾಗಲೇ ಗಮನಿಸಿದ್ದೇವೆ. ಅನಂತರ ಅಧ್ಯಯನಕಾರರು ನಿಯತವಾಗಿ ಮಕ್ಕಳ ಮಾತಿನ ದಾಖಲಾತಿ ನಡೆಸಲು ಉಪಕ್ರಮಿಸಿದರು. ಈ ದಾಖಲಾತಿಗಳು ಧ್ವನಿಮುದ್ರಣದ ರೂಪದಲ್ಲಿರುತ್ತಿದ್ದವು. ಈ ಧ್ವನಿಮುದ್ರಿತ ಸುರುಳಿಗಳಿಂದ ಮಾಹಿತಿಗಳನ್ನು ಲಿಖಿತರೂಪಕ್ಕೆ ತರುವುದು ಕಠಿಣಪರಿಶ್ರಮವನ್ನು ಬಯಸುವ ಕೆಲಸ. ಮತ್ತೆ ಮತ್ತೆ ಕೇಳಿಸಿಕೊಂಡು ಲಿಪೀಕರಿಸಿ ತಪ್ಪುಗಳನ್ನು ನಿವಾರಿಸಿಕೊಳ್ಳಲು ಸಾಕಷ್ಟು ಎಚ್ಚರಿಂದ ಕೆಲಸ ಮಾಡಬೇಕಾಗುತ್ತದೆ.

ಹೀಗೆ ಲಿಪೀಕರಿಸಿದ ಮಾಹಿತಿ ವಿಶ್ಲೇಷಣೆಗೆ ಸಿದ್ಧವಾಗುತ್ತದೆ. ಲಿಪೀಕರಣದಲ್ಲಿ ನಡೆಯುವ ದೋಷಗಳಿಂದ ವಿಶ್ಲೇಷಣೆಯ ಫಲಿತಾಂಶಗಳು ದೋಷಯುಕ್ತವಾಗುತ್ತವೆ. ಅಲ್ಲದೆ ಮೂಲಧ್ವನಿ ಮಾಹಿತಿಯು ಸುಲಭವಾಗಿ ಎಲ್ಲ ಅಧ್ಯಯನಕಾರರಿಗೂ ದೊರಕುವಂತಾದರೆ ಆಗ ಆ ಮಾಹಿತಿಯನ್ನು ಆಧರಿಸಿ ಹಲವು ರೀತಿಯ ವಿಶ್ಲೇಷಣೆಗಳು ಸಾಧ್ಯವಾಗುತ್ತವೆ. ದೋಷಪ್ರಮಾಣ ಕಡಿಮೆಯಾಗುತ್ತದೆ. ಈ ಅಂಶಗಳನ್ನು ಮನಗಂಡು 1984ರಿಂದ ಈಚೆಗೆ ಮಕ್ಕಳ ಭಾಷಾಕಲಿಕೆಯ ಮಾಹಿತಿಯನ್ನು ವಿನಿಮಯ ಮಾಡಿಕೊಳ್ಳುವ ವ್ಯವಸ್ಥೆಯೊಂದು ಜಾರಿಗೆ ಬಂದಿದೆ. ಈ ವ್ಯವಸ್ಥೆಯ ಹೆಸರು CHILDES (ಚಿಲ್ಡ್ರನ್ ಲಾಂಗ್ವೇಜ್ ಡಾಟಾ ಎಕ್ಸ್‌ಚೇಂಜ್ ಸಿಸ್ಟಮ್) ಈಗ ಲಭ್ಯವಿರುವ ಗಣಕಗಳ ಜಾಲದಲ್ಲಿ ಈ ಕ್ಷೇತ್ರದ ಅಧ್ಯಯನಕಾರರು ತಮ್ಮ ಮಾಹಿತಿಯನ್ನು ಒದಗಿಸುತ್ತಾರೆ. ಆಸಕ್ತಿಯುಳ್ಳ ಯಾರಾದರೂ ಈ ಮಾಹಿತಿಯ ಉಪಯೋಗ ಪಡೆಯಬಹುದಾಗಿದೆ. ಹೀಗಿದ್ದರೂ ಸಮಸ್ಯೆಗಳು ತೀರಿದವು ಎನ್ನುವಂತಿಲ್ಲ. ಮಾಹಿತಿಯಷ್ಟೇ ವಿಶ್ಲೇಷಣೆಗೆ ಸಾಲದು. ಆ ಮಾಹಿತಿ ಪಡೆಯಲು ರೂಪಿಸಿಕೊಂಡ ಆಧಾರಕಲ್ಪನೆ, ಪ್ರಯೋಗ ವಿಧಾನ ಇತ್ಯಾದಿಗಳ ಬಗೆಗೂ ತಿಳುವಳಿಕೆ ಅವಶ್ಯ. ಏಕೆಂದರೆ ಮಾಹಿತಿಯನ್ನು ಬಳಸುವವರು ಆ ಮಾಹಿತಿಯನ್ನು ಹೆಚ್ಚು ವ್ಯಾಪಕವಾದ ಹಿನ್ನೆಲೆಯಲ್ಲಿ ತಿಳಿಯವುದು ಅನಿವಾರ್ಯ.

ಮೊದಮೊದಲ ಹಂತದಲ್ಲಿ ಮಕ್ಕಳ ಮಾತಿನ ಧ್ವನಿಮುದ್ರಣರೂಪಗಳು ಮಾತ್ರ ಲಭ್ಯವಿದ್ದವು. ಈ ಧ್ವನಿಮುದ್ರಿತ ಮಾಹಿತಿಯಲ್ಲಿ ಕೇವಲ ಭಾಷಿಕ ಅಂಶಗಳು ಮಾತ್ರ ದೊರಕುತ್ತವೆ. ಎಷ್ಟೋ ವೇಳೆ ಮಗು ಮಾತಾಡುವುದಕ್ಕೆ ಭಾಷಿಕ ಪ್ರಚೋದನೆ ಮಾತ್ರ ಕಾರಣವಾಗಿರುವುದಿಲ್ಲ. ಭಾಷೇತರವಾದ ಸಂಗತಿಗಳಿಗೆ ಪ್ರತಿಕ್ರಿಯೆಯಾಗಿಯೂ ಮಗು ಮಾತಾಡಿರುವುದು ಸಾಧ್ಯ. ಧ್ವನಿಮುದ್ರಿತ ರೂಪದಲ್ಲಿ ಮಗುವಿನ ಮಾತಿಗೆ ಕಾರಣವಾದ ಸಂಗತಿಗಳು ದಾಖಲಾಗುವುದಿಲ್ಲ. ಇದೇ ರೀತಿ ಮಗುವಿನ ಆಂಗಿಕ ಚಲನವಲನಗಳು ಮಾತಿಗೆ ಪೂರಕವಾಗಿರುತ್ತವೆ. ಮಾತಿನ ಸಂದರ್ಭವನ್ನು ಸ್ಪಷ್ಟಪಡಿಸುತ್ತವೆ. ಈ ಮಾಹಿತಿ ಕೂಡ ಧ್ವನಿಮುದ್ರಿತ ದಾಖಲಾತಿಯಲ್ಲಿ ಒದಗುವುದಿಲ್ಲ. ಈಗ ದೃಕ್–ಶ್ರವ್ಯ ಮುದ್ರಣದ ಅವಕಾಶಗಳಿರುವುದರಿಂದ ಹೆಚ್ಚು ಪೂರಕಮಾಹಿತಿಗಳು ಲಭಿಸುತ್ತವೆ. ಮಗುವಿನ ಭಾಷೆಯನ್ನು, ಅದರ ವಿಕಾಸವನ್ನು ಅಧ್ಯಯನ ಮಾಡಲು ಇಂಥ ಪೂರಕ ಮಾಹಿತಿಗಳು ಅತ್ಯವಶ್ಯಕವಾಗಿವೆ. ಹೆಚ್ಚು ಸಹಜವಾದ ಭಾಷಿಕಮಾಹಿತಿಗಳು ಅಧ್ಯಯನಕಾರರಿಗೆ ಈಗ ದೊರಕುತ್ತಿವೆ.

ಒಂದೊಂದೇ ತೊಡಕನ್ನು ನಿವಾರಿಸಿಕೊಳ್ಳುತ್ತಾ ಬಂದರೂ, ಎಲ್ಲ ಸಮಸ್ಯೆಗಳೂ ತೀರಿವೆ ಎನ್ನುವ ಹಾಗಿಲ್ಲ. ಮಗುವಿನ ಭಾಷಾಸಾಮರ್ಥ್ಯವನ್ನು ತಿಳಿಯಲು ಉದ್ದೇಶಿಸಿದ ಪ್ರಯೋಗವೊಂದನ್ನು ಗಮನಿಸಿದರೆ, ಅಧ್ಯಯನಕಾರರು ಯಾವ ಯಾವ ಬಗೆಯ ಸಮಸ್ಯೆಗಳನ್ನು ಎದುರಿಸಬೇಕಾಗುವುದೆಂದು ತಿಳಿಯುತ್ತದೆ.

ಈ ಪ್ರಯೋಗದಲ್ಲಿ ಅಧ್ಯಯನಕಾರರು ಮಗುವಿಗೆ ಕೆಲವು ಕೆಲಸಗಳನ್ನು ಮಾಡಲು ಭಾಷಿಕ ಸೂಚನೆಗಳನ್ನು ನೀಡುತ್ತಾರೆ. ಮಗು ಈ ಸೂಚನೆಗಳನ್ನು ಸರಿಯಾಗಿ ಗ್ರಹಿಸಿದರೆ ಉದ್ದೇಶಿಸಿದ ಕೆಲಸಗಳನ್ನು ಮಾಡಲು ಸಾಧ್ಯ. ಮಗು ಈ ಕೆಲಸಗಳನ್ನು ಹೇಗೆ ಮುಗಿಸುವುದೆಂಬ ಸಂಗತಿಯನ್ನು ಆಧರಿಸಿ ಆ ಮಗುವಿನ ಭಾಷಾಸಾಮರ್ಥ್ಯಗಳನ್ನು ಅಭ್ಯಸಿಸುತ್ತಾರೆ. ಅಂದರೆ ಇಲ್ಲಿ ಕೆಲವು ಸಮಸ್ಯೆಗಳಿವೆ. ಮಗುವಿಗೆ ನೀಡುವ ಭಾಷಿಕ ಸೂಚನೆಗಳು ಗೊಂದಲಗಳನ್ನು ಉಂಟುಮಾಡಬಾರದು. ಒಂದು ವೇಳೆ ಹಾಗೆ ಗೊಂದಲಗಳು ಉಂಟಾಗಿ ಮಗು ಕೆಲಸಗಳನ್ನು ಸರಿಯಾಗಿ ನಿರ್ವಹಿಸದೇ ಹೋದರೆ ಆಗ ಅಧ್ಯಯನಕಾರರು ಮಗುವಿನ ಭಾಷಾಸಾಮರ್ಥ್ಯ ಸೂಕ್ತವಾಗಿ ಬೆಳೆದಿಲ್ಲವೆಂದು ತೀರ್ಮಾನಿಸುತ್ತಾರೆ. ಆದರೆ ಮಗು ಉದ್ದೇಶಿತ ಕೆಲಸಮಾಡದಿರಲು ಅದಕ್ಕೆ ನೀಡಲಾದ ಭಾಷಿಕಸೂಚನೆಗಳೇ ಕಾರಣವಾಗಿರುತ್ತವೆ.

ಮಗು








ಮಾಹಿತಿ ಸಂಗ್ರಾಹಕ

**ಚಿತ್ರವನ್ನು ಗಮನಿಸಿ:** ಮೊದಲ ಚಿತ್ರದಲ್ಲಿ ಮಾಹಿತಿ ಸಂಗ್ರಾಹಕರು ಮಗುವಿನ ಎದುರು ಕುಳಿತಿದ್ದಾರೆ. ಅವರಿಬ್ಬರ ನಡುವೆ ಇರುವ ಟೇಬಲ್ ಮೇಲೆ ಒಂದು ಕಾರಿನ

ಬೊಂಬೆ ಇದೆ. ಈಗ ಮಗುವಿನ ಕೈಯಲ್ಲಿ ಚೆಂಡನ್ನು ಕೊಟ್ಟು ಅದನ್ನು 'ಕಾರಿನ ಹಿಂದುಗಡೆ ಇಡಲು' ಸೂಚನೆ ನೀಡುವುದಾದರೆ ಮಗು ಬಾಲನ್ನು ಎಲ್ಲಿ ಇಡಬೇಕು? ಅಧ್ಯಯನಕಾರರು X ಗುರುತು ಮಾಡಿರುವಲ್ಲಿ ಇಡಬೇಕೆಂದು ನಿರೀಕ್ಷಿಸುತ್ತಾರೆ. ಆದರೆ ಮಗು 'ಹಿಂದುಗಡೆ' ಎನ್ನುವ ಮಾತನ್ನು ಅರ್ಥಮಾಡಿಕೊಳ್ಳುವಾಗ ಗೊಂದಲಕ್ಕೆ ಒಳಗಾಗಬಹುದು. ತನ್ನನ್ನು ಗಮನದಲ್ಲಿಟ್ಟುಕೊಂಡು ಕಾರಿನ ಹಿಂದುಗಡೆ ಎಂದರೆ `A' ಎಂದು ಗುರುತು ಮಾಡಿದ ಜಾಗದಲ್ಲಿ ಇರಿಸಬಹುದು. ಅಥವಾ ಸೂಚನೆ ನೀಡುವವರನ್ನು ಗಮನದಲ್ಲಿಟ್ಟು B ಎಂದು ಗುರುತು ಮಾಡಿದ ಜಾಗದಲ್ಲಿ ಚೆಂಡನ್ನು ಇಡಬಹುದು. 'A' ಬದಲು 'B' ಗುರುತಿನ ಕಡೆ ಚೆಂಡನ್ನು ಇರಿಸಿದರೆ ಅಧ್ಯಯನಕಾರರು ಮಗುವಿನ ಭಾಷಾಸಾಮರ್ಥ್ಯದಲ್ಲಿ ಕುಂದುಗಳಿವೆಯೆಂದು ತೀರ್ಮಾನಿಸಿದರೆ ಅದು ತಪ್ಪು. ಏಕೆಂದರೆ ಈ ಗೊಂದಲಕ್ಕೆ ಕಾರಣ ಮೇಲೆ ಹೇಳಿದಂತೆ ಸೂಚನೆಯಲ್ಲೇ ಅಡಗಿದೆ. ಈ ಎಲ್ಲ ವಿವರಣೆಯ ಉದ್ದೇಶವಿಷ್ಟೆ. ಮಗುವಿನ ಭಾಷಾಕಲಿಕೆಯ ಅಧ್ಯಯನಗಳಲ್ಲಿ ಮಾಹಿತಿಸಂಗ್ರಾಹಕರು ಎಷ್ಟು ಎಚ್ಚರವಹಿಸಿದರೂ, ಈವರೆಗೂ ಗುರುತಾಗದಿದ್ದ ಸಮಸ್ಯೆಗಳು ಎದುರಾಗುವುದು ಸಾಧ್ಯ. ಈ ತಿಳುವಳಿಕೆ ಅಧ್ಯಯನ ಮಾಡುವವರಲ್ಲಿ ಇರಬೇಕು.

ಮಗುವಿನ ಭಾಷೆಯನ್ನು ಕಲಿಯುವುದನ್ನು ಅಧ್ಯಯನ ಮಾಡುವವರು ಎರಡು ಗುರಿಗಳನ್ನು ಇರಿಸಿಕೊಂಡಿರುತ್ತಾರೆ. ಒಂದು: ಮಗು ಹೇಗೆ ಮಾತಾಡುತ್ತದೆ, ಮಾತಿನಲ್ಲಿ ಭಾಷೆಯ ಧ್ವನಿರಚನೆ, ಪದರಚನೆ, ವಾಕ್ಯರಚನೆ ಮತ್ತು ಅರ್ಥರಚನೆಗಳು ಯಾವ ಬಗೆಯಲ್ಲಿ ಕಂಡುಬರುತ್ತಿವೆ ಎಂದು ತಿಳಿಯುವುದು. ಎರಡು: ಅನ್ಯರು ಆಡುವ ಮಾತುಗಳನ್ನು ಮಗು ಅರ್ಥಮಾಡಿಕೊಳ್ಳುತ್ತಿದೆಯೇ ಎಂದು ಗುರುತಿಸುವುದು. ಎರಡೂ ಪರಸ್ಪರ ಪೂರಕ ಗುರಿಗಳೇ ಆಗಿವೆ. ಏಕೆಂದರೆ ಭಾಷಾಸಾಮರ್ಥ್ಯದಲ್ಲಿ ಇವೆರಡೂ ನೆಲೆಗಳು ಸೇರಿರುತ್ತವೆ. ಮೊದಲ ಗುರಿಯ ಸಾಧನೆಗೆ ನಡೆಸುವ ಅಧ್ಯಯನಕ್ಕೆ ಹೋಲಿಸಿದರೆ ಎರಡನೆಯ ಗುರಿಯ ಅಧ್ಯಯನ ಸಾಕಷ್ಟು ಕಷ್ಟದ್ದು. ಕಾರಣವಿಷ್ಟೆ: ಮಗು ಮಾತಾಡಿದ್ದಕ್ಕೆ ದಾಖಲೆಗಳಿರುತ್ತವೆ. ಆದರೆ ಅರ್ಥಮಾಡಿಕೊಂಡಿದ್ದಕ್ಕೆ ಸ್ಪಷ್ಟವಾದ ದಾಖಲೆಗಳನ್ನು ಪಡೆದುಕೊಳ್ಳುವ ಕೆಲಸ ದುಸ್ಸಾಧ್ಯ.

ಎಷ್ಟೋ ವೇಳೆ ಮಗು ಅನ್ಯರ ಮಾತನ್ನು ಗ್ರಹಿಸಿ ಅರ್ಥ ಮಾಡಿಕೊಂಡರೂ ಬೇರೆ ಹಲವು ಕಾರಣಗಳಿಂದ ಯಾವುದೇ ಭಾಷಿಕ ಅಥವಾ ಭಾಷೇತರ ಪ್ರತಿಕ್ರಿಯೆಯನ್ನು ನೀಡದೆಯೂ ಇರುವುದು ಸಾಧ್ಯ. ಆಗಂತೂ ಮಗುವಿನ ಭಾಷಾಗ್ರಹಿಕೆಯ ಮಟ್ಟವನ್ನು ಗುರುತಿಸುವುದು ಆಗದ ಮಾತು. ಕೆಲವು ಸಂದರ್ಭದಲ್ಲಿ ಮಗು ಅನ್ಯರು ಆಡಿದ ಮಾತನ್ನು ಅರ್ಥಮಾಡಿಕೊಂಡು ಸೂಕ್ತವಾಗಿ ಪ್ರತಿಕ್ರಿಯಿಸುತ್ತದೆ ಎಂದುಕೊಳ್ಳೋಣ. ಆಗ ಮಗು ತಾನು ಕೇಳಿಸಿಕೊಂಡು ಭಾಷಾರಚನೆಯನ್ನು, ಅದರ ಹಿಂದಿನ ನಿಯಮಗಳನ್ನು ಅರಿತುಕೊಳ್ಳಲು ಸಮರ್ಥವಾಗಿದೆಯೆಂದು ತೀರ್ಮಾನಿಸಲು ಸಾಧ್ಯವಿಲ್ಲ. ಏಕೆಂದರೆ ಆ ಭಾಷಾರಚನೆಯಲ್ಲಿ ಬಂದ ಯಾವುದೋ ಒಂದು ಪದವನ್ನು ಸಂದರ್ಭಾನುಸಾರ ಅರ್ಥಮಾಡಿಕೊಂಡು ಅದಕ್ಕೆ ತಕ್ಕಂತೆ ಪ್ರತಿಕ್ರಿಯೆ ನೀಡಿರುವುದು ಸಾಧ್ಯ. ವಾಕ್ಯವನ್ನು 'ಕೇಳಿಸಿ'ಕೊಂಡಿದ್ದರೂ ಅದನ್ನು ಅರ್ಥಮಾಡಿಕೊಳ್ಳಲು ಮಗು ತನ್ನದೇ ಆದ ಉಪಯುಕ್ತ

ತಂತ್ರಗಳನ್ನು ರೂಪಿಸಿಕೊಂಡಿರುತ್ತದೆ. ಮಗುವಿನ ಸೀಮಿತ ಜಗತ್ತಿಗೆ ಈ ತಂತ್ರಗಳು ಯೋಗ್ಯವೇ ಆಗಿರುತ್ತದೆ. ಬಾಗಿಲು ತೆರೆದು ಒಳಗೆ ಬರುತ್ತಿರುವ ವ್ಯಕ್ತಿಗಳನ್ನು ನೋಡಿ 'ಅಪ್ಪ ಬಂದರು' ಎಂದು ತಾಯಿ ಹೇಳಿದರೆ ಮಗು 'ಬಂದರು' ಕ್ರಿಯಾಪದದ ರಚನೆಯನ್ನು ಗ್ರಹಿಸುವುದು ಅವಶ್ಯವಾಗಿರುವುದಿಲ್ಲ. ಏಕೆಂದರೆ, ಆ ಸಂದರ್ಭದಲ್ಲಿ ಸುಮ್ಮನೆ 'ಅಪ್ಪ' ಎಂದು ಹೇಳಿದರೂ ಮಗುವಿನ ಪ್ರತಿಕ್ರಿಯೆಯಲ್ಲಿ ಬದಲಾವಣೆ ಏನೂ ಇರುವುದಿಲ್ಲ.

ಮಗು ಮಾತಾಡಲು ಕಲಿಯುವುದು, ಮತ್ತು ಕೇಳಿದ ಮಾತನ್ನು ಅರ್ಥಮಾಡಿಕೊಳ್ಳುವುದು ಇವೆರಡರ ನಡುವೆ ಇರುವ ಸಂಬಂಧವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಮಾತಾಡುವ ಸಾಮರ್ಥ್ಯಕ್ಕಿಂತ ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಮೊದಲು ಮಗುವಿಗೆ ಒದಗುತ್ತದೆ. ಅಲ್ಲದೆ ಈ ಅರಿಯುವ ಸಾಮರ್ಥ್ಯ ಸಾಕಷ್ಟು ಪ್ರಮಾಣದಲ್ಲಿ ದೃಢವಾಗಿರುತ್ತದೆ. ಈ ಸಾಮಾನ್ಯ ತಿಳುವಳಿಕೆಯನ್ನು ಆಧರಿಸಿ ಹೇಳುವುದಾದರೆ, ಮಗು ಅರಿತ ಹೊರತು ಮಾತಾಡಲಾರದೆಂದು ತೀರ್ಮಾನಿಸಬೇಕು. ಬಹುಕಾಲದಿಂದಲೂ ಈ ಸಿದ್ಧಾಂತವನ್ನೇ ಒಪ್ಪುತ್ತ ಬಂದಿರುವುದು ಸ್ಪಷ್ಟವಾಗಿದೆ. ಆದರೆ ಹಲವು ಅಧ್ಯಯನಗಳು ಈಗ ನಡೆದಿವೆಯಾಗಿ, ಪಾರಂಪರಿಕ ತಿಳುವಳಿಕೆಯನ್ನು ಒಪ್ಪಲೇಬೇಕಾದ ಪ್ರಮೇಯವಿಲ್ಲ. ಏಕೆಂದರೆ ಎಷ್ಟೋ ಸಂದರ್ಭಗಳಲ್ಲಿ ಇವೆರಡೂ ಪ್ರತ್ಯೇಕವಾಗಿರುವಂತೆ ತೋರಿಬಂದಿದೆ. ಅಂದರೆ ಮಗು ತಾನಾಡುವ ಭಾಷಾರಚನೆಗಳಲ್ಲಿರುವ ನಿಯಮಗಳನ್ನು ಮೊದಲೇ ಅರಿತಿರಬೇಕೆಂದು ಸಾಧಿಸಲು ಪುರಾವೆಗಳು ಸಾಲದಾಗಿವೆ. ಈ ಎರಡೂ ಸಾಮರ್ಥ್ಯಗಳು ಸಮಾನಾಂತರವಾಗಿ ಒಂದಕ್ಕೊಂದು ಸಂಬಂಧವಿಲ್ಲದಂತೆ ಬೆಳೆಯುವ ಸಾಧ್ಯತೆಗಳೇ ಹೆಚ್ಚಿರುವಂತೆ ತೋರುತ್ತದೆ. ಇವು ಸಮಾನವೇಗದಲ್ಲಿ ಸಮಪ್ರಮಾಣದಲ್ಲಿ ಬೆಳೆಯುತ್ತವೆಂದು ಹೇಳಬರುವುದಿಲ್ಲ.

ಮಕ್ಕಳು ಭಾಷೆಯನ್ನು ಕಲಿಯುವಾಗ ಮಾತಾಡಲು, ಆಲಿಸಿ ಅರ್ಥಮಾಡಿಕೊಳ್ಳಲು ಸಮರ್ಥರಾಗುವಾಗ ಅನುಸರಿಸುವ ಕಲಿಕೆಯ ವಿಧಾನಗಳಲ್ಲಿ ಅನುಕರಣೆಯೂ ಒಂದಾಗಿದೆ. ಚಾಲ್ತಿಯಲ್ಲಿರುವ ಭಾಷಾಕಲಿಕೆಯ ಸಿದ್ಧಾಂತಗಳಲ್ಲಿ ಅನುಕರಣೆಯ ಸಿದ್ಧಾಂತವೇ ಹೆಚ್ಚು ಪ್ರಚಾರದಲ್ಲಿದೆ. ದೊಡ್ಡವರು ಆಡಿದ ಮಾತುಗಳನ್ನು ಮರಳಿ ತಾವೂ ಆಡಲು ಯತ್ನಿಸುವ ಮೂಲಕ ಮಕ್ಕಳು ಮಾತು ಕಲಿಯುವರು. ಇದನ್ನು ಮಕ್ಕಳೊಡನೆ ದೊಡ್ಡವರು ಮಾತಾಡುವ ಸನ್ನಿವೇಶಗಳನ್ನು ಗಮನಿಸುವ ಯಾರಾದರೂ ಗುರುತಿಸಬಹುದು. ಮಕ್ಕಳು ತಮ್ಮ ಉಚ್ಚಾರಣೆಗಳನ್ನು ಅನುಕರಿಸುತ್ತಾರೆಂಬ ನಂಬಿಕೆ, ಅನುಸರಿಸಬೇಕೆಂಬ ಉದ್ದೇಶ ದೊಡ್ಡವರಲ್ಲಿ ಇರುತ್ತದೆ. ಮಕ್ಕಳು ಮುಖ್ಯವಾಗಿ ಧ್ವನಿಗಳನ್ನು, ಧ್ವನಿ ವಾಕ್ಯರಚನೆಯನ್ನು ಅನುಕರಿಸುವುದು ನಿಜ. ಆದರೆ ಮಕ್ಕಳು ಇಡೀ ರಚನೆಗಳನ್ನು ಯಥಾಕ್ರಮದಲ್ಲಿ ಅನುಕರಿಸುವುದು ತೋರುತ್ತದೆ. ಅವರಲ್ಲೇ ವಾಕ್ಯರಚನೆಯ ನಿಯಮಗಳು ಆಕಾರ ತಳೆದ ಮೇಲೆ ಸ್ವತಂತ್ರ ವಾಕ್ಯಗಳನ್ನು ರಚಿಸುವುದಕ್ಕೆ ಬಯಸುವರೇ ಹೊರತು ಅನ್ಯರ ವಾಕ್ಯಗಳ ಅನುಕರಣೆಯನ್ನಲ್ಲ. ಹೀಗಾಗಿ ಭಾಷಾಕಲಿಕೆಯಲ್ಲಿ ಅನುಕರಣೆಗೆ ಸೀಮಿತವಾದ ಪಾತ್ರವಿದೆ.

ವಾಕ್ಯರಚನೆ ಮತ್ತು ಪದರಚನೆಯ ನೆಲೆಯಲ್ಲಿ ಅನುಕರಣೆಯ ಪಾತ್ರ ಗಣನೀಯವಲ್ಲವೆಂಬುದನ್ನು ತಿಳಿಯಲು ಕೆಲವು ಮಾಹಿತಿಗಳನ್ನು ನೋಡಬಹುದು. ಮಕ್ಕಳ ಮಾತಿನಲ್ಲಿ ಈ ಮಾಹಿತಿ ದೊರಕುತ್ತವೆ. ಈ ಮಾಹಿತಿಗಳು ಎರಡು ಬಗೆಯಲ್ಲಿ ಇರುತ್ತವೆ. ಒಂದು ಬಗೆಯ ಮಾಹಿತಿ ಮಕ್ಕಳು ನಿಯಮಗಳನ್ನು ಬಳಸಿ ರೂಪಿಸಿದ ರಚನೆಗಳಲ್ಲಿ ದೊರಕುತ್ತವೆ. ಇನ್ನೊಂದು ಬಗೆಯ ಮಾಹಿತಿ ಮಕ್ಕಳು ನಿಯಮಗಳನ್ನು ಬಳಸದಿರುವ ರಚನೆಗಳಲ್ಲಿ ಲಭ್ಯ.

ಮೊದಲ ಬಗೆಗೆ ಇಂಗ್ಲಿಶ್ ಭಾಷೆಯನ್ನು ಕಲಿಯುತ್ತಿರುವ ಮಕ್ಕಳ ಮಾತಿನಿಂದ ನಿದರ್ಶನಗಳನ್ನು ನೋಡೋಣ. ಇಂಗ್ಲಿಶ್‌ನಲ್ಲಿ ಕ್ರಿಯಾಪದಗಳಲ್ಲಿ ಕೆಲವಕ್ಕೆ ಭೂತಕಾಲದಲ್ಲಿ ಬೇರೆ ರೂಪಗಳೇ ಬಳಕೆಯಾಗುತ್ತವೆ. talk, talked; walk, walked ಮಾದರಿ ಸಾಮಾನ್ಯ. ಆದರೆ go, went;take, took; sleep, slept ರೂಪಗಳೂ ಇವೆ. ಇಂಗ್ಲಿಶ್ ಕಲಿಯುವ ಮಕ್ಕಳು ಒಂದು ಹಂತದಲ್ಲಿ goed, taked, sleeped ರೂಪಗಳನ್ನು ತಮ್ಮ ಮಾತಿನಲ್ಲಿ ಬಳಸುತ್ತಾರೆ. ಅನುಕರಣೆ ಭಾಷಾಕಲಿಕೆಗೆ ಕಾರಣವೆನ್ನುವುದಾದರೆ ಮಕ್ಕಳು ಇಂಥ ರೂಪಗಳನ್ನು ಬಳಸುವುದಕ್ಕೆ ಹೇಗೆ ಸಾಧ್ಯವಾಯಿತು? ಏಕೆಂದರೆ ದೊಡ್ಡವರು ಯಾರೂ ಇಂಥ ರೂಪಗಳನ್ನು ಬಳಸುವುದಿಲ್ಲವಲ್ಲ. ಮಕ್ಕಳು ತಾವು ಬಳಸುತ್ತಿರುವ ಇತರ ಕ್ರಿಯಾಪದಗಳ ಭೂತಕಾಲರೂಪಗಳ ಮಾದರಿಯಲ್ಲಿ goed, takes, sleeped ರೂಪಗಳನ್ನು ರಚಿಸಿಕೊಳ್ಳುವರೆಂದು ಹೇಳುವುದು ಸರಿ. ಇಲ್ಲಿ ಇತರರ ಅನುಕರಣೆ ಎಂಬುದಿಲ್ಲ.

ಕೆಲವೊಮ್ಮೆ ಮಕ್ಕಳ ಮಾತನ್ನು ತಿದ್ದುವಾಗ ಹಿರಿಯರು ಸರಿಯಾದ ರಚನೆಯನ್ನು ತಾವು ಹೇಳಿ, ಅದನ್ನು ಅನುಕರಿಸಿ ಉಚ್ಚರಿಸಲು ಮಗುವಿಗೆ ಸೂಚನೆ ಕೊಡುವುದುಂಟು. ಎಷ್ಟೋ ಸಂದರ್ಭದಲ್ಲಿ ಮಕ್ಕಳು ಇಂಥ ಸೂಚನೆಗಳನ್ನು ನಿರಾಕರಿಸುತ್ತವೆ. ತಾವು ಹೇಳುತ್ತಿದ್ದ ತಪ್ಪು ರಚನೆಗಳಿಗೇ ಅಂಟಿಕೊಳ್ಳುತ್ತವೆ; ಅಥವಾ ತಮಗೆ ಸರಿಯೆನಿಸಿದ ತಿದ್ದುಪಡಿಗಳನ್ನು ಮಾಡಿಕೊಳ್ಳುತ್ತವೆ. ಈ ತಿದ್ದುಪಡಿಗೆ ದೊಡ್ಡವರು ಹೇಳಿದ ಸರಿರಚನೆ ನೇರವಾಗಿ ಕಾರಣವಲ್ಲ. ಪದೋಚ್ಚಾರಣೆಗೆ ಸಂಬಂಧಿಸಿದ ನಿದರ್ಶನವೊಂದನ್ನು ಗಮನಿಸಿ.

ಮಗು : ಅಕ್ಕಿ ಬಡ್ಡ
ತಾಯಿ : ಅಲ್ಲ, ಅಕ್ಕಿ ಡಬ್ಬ, ಹೇಳು
ಮಗು : ಅಕ್ಕಿ ಬಡ್ಡ
ತಾಯಿ : ಅಕ್ಕಿ
ಮಗು : ಅಕ್ಕಿ
ತಾಯಿ : ಡಬ್ಬ
ಮಗು : ಡಬ್ಬ
ತಾಯಿ : ಅಕ್ಕಿ ಡಬ್ಬ
ಮಗು : ಅಕ್ಕಿ ಬಡ್ಡ

ಗಮನಿಸಿ: ಮಗು ಈ ರಚನೆಯಲ್ಲಿ 'ಡಬ್ಬ'ಪದವನ್ನು 'ಬಡ್ಡ' ಎಂದು ಉಚ್ಚರಿಸಲು ಬೇರೆ ಏನೋ ಕಾರಣವಿರುತ್ತದೆ. ಪದಾದಿಯಲ್ಲಿ 'ಡ'ಕಾರವನ್ನು ಉಚ್ಚರಿಸಲು ಬೇಕಾದ ಮಾಹಿತಿ ದೊರೆತಿರುವುದಿಲ್ಲ. ಅಲ್ಲದೆ ಉಚ್ಚಾರಣೆಯ ಎಲ್ಲ ನಿಯಮಗಳನ್ನು ಇನ್ನೂ ಕಲಿಯದಿರುವುದು ಅಂಥ ಒಂದು ಕಾರಣ. ಅದಿರಲಿ. ಮಗು ಸೂಚನೆ ಕೊಟ್ಟರೂ ಅನುಕರಿಸುತ್ತಿಲ್ಲವೆನ್ನುವುದು ನಮಗೆ ಮುಖ್ಯ.

ಇದರಿಂದ ತಿಳಿಯುವುದಿಷ್ಟು: ಮಕ್ಕಳ ಭಾಷಾಕಲಿಕೆಯಲ್ಲಿ ಅನುಕರಣೆಗೆ ಸ್ಥಾನವಿದೆ. ಆದರೆ ಇದು ನಿರ್ಣಾಯಕ ಪಾತ್ರವಲ್ಲ. ಮಗುವಿನ ಭಾಷಾಕಲಿಕೆಯನ್ನು ಅರಿಯಲು ಕೇವಲ ಅನುಕರಣೆಯ ಸಿದ್ಧಾಂತ ಮಾತ್ರ ಸಾಲುವುದಿಲ್ಲ.

ಮಕ್ಕಳು ಅನುಕರಣೆಯಿಂದ ಭಾಷೆಯನ್ನು ಕಲಿಯುವುದಿಲ್ಲವೆನ್ನುವುದಾದರೆ ಅವರ ಭಾಷಾಕಲಿಕೆಯನ್ನು ವಿವರಿಸಲು ಬೇರೊಂದು ಸಿದ್ಧಾಂತದ ಅವಶ್ಯಕತೆಯಿದೆ. 1960ರಿಂದ ಈಚೆಗೆ ಬೆಳೆದು ನಿಂತ ವೃದ್ಧಿವ್ಯಾಕರಣ ತತ್ತ್ವದ ನೆರವಿನಿಂದ ಇನ್ನೊಂದು ಚಿಂತನಾಕ್ರಮ ಮೈದಳೆದಿದೆ. ಅದರಂತೆ ಮಕ್ಕಳು ಹುಟ್ಟುವಾಗಲೇ ಹಲವಾರು ಬಗೆಯ ಕಲಿಕೆಗಳಿಗೆ ಸನ್ನದ್ಧರಾಗಿರುತ್ತಾರೆ. ಭಾಷಾಕಲಿಕೆಗೂ ಈ ಬಗೆಯ ಸನ್ನದ್ಧತೆ ಮಗುವಿನಲ್ಲಿ ಇರುತ್ತದೆ. ಇತರ ಕಲಿಕೆಗೂ ಭಾಷಾಕಲಿಕೆಗೂ ಹೋಲಿಕೆಗಳಿವೆಯೋ ಅಥವಾ ಅವೆರಡೂ ಸಂಪೂರ್ಣವಾಗಿ ಬೇರೆ ಬೇರೆಯೋ ಎಂಬ ಪ್ರಶ್ನೆ ಆಸಕ್ತಿದಾಯಕ. ಆದರೆ ಸದ್ಯ ಆ ಬಗ್ಗೆ ವಿವರಗಳು ಬೇಡ.

ಮಗುವಿನ ಮೆದುಳಿನಲ್ಲಿ ಹೀಗೆ ಭಾಷೆಯನ್ನು ಕಲಿಯಲು ಅನುವು ಮಾಡಿಕೊಡುವ ಸಾಮರ್ಥ್ಯ ಅಂತಸ್ಥವಾಗಿರುತ್ತದೆ. ಪರಿಸರದಿಂದ ಸೂಕ್ತಕಾಲದಲ್ಲಿ ಭಾಷಿಕಮಾಹಿತಿ ಸಿಗತೊಡಗಿದಾಗ ಈ ಸಾಮರ್ಥ್ಯವು ಜಾಗ್ರತವಾಗಿ ಭಾಷೆಯ ಕಲಿಕೆಗೆ ಸನ್ನದ್ಧವಾಗುತ್ತದೆ. ಈ ಸಾಮರ್ಥ್ಯವನ್ನು ಭಾಷಾಗ್ರಹಣ ಸಜ್ಜು(ಲ್ಯಾಡ್-ಲಾಗ್ವೇಜ್ ಅಕ್ವೈರಿಂಗ್ ಡಿವೈಸ್) ಎನ್ನುವರು.

ಮಗು ತನ್ನಲ್ಲಿರುವ ಈ ಲ್ಯಾಡ್‌ನ ನೆರವಿನಿಂದ ಮೊದಲು ದೊರೆತ ಮಾಹಿತಿಯನ್ನು ವಿಶ್ಲೇಷಿಸಿ ಕೆಲವು ಸಾಮಾನ್ಯ ಸೂತ್ರಗಳನ್ನಾಗಿ ಪರಿವರ್ತಿಸಿಕೊಳ್ಳುತ್ತದೆ. ಈ ಸೂತ್ರಗಳು ಮಗುವಿನಲ್ಲಿ ಆಯಾ ಭಾಷೆಯ ವ್ಯಾಕರಣವಾಗುತ್ತದೆ. ಮಗು ಅನಂತರ ತಂತಾನೇ ಸ್ವತಂತ್ರವಾಗಿ ಭಾಷೆಯನ್ನು ಬಳಸಲು ಸಮರ್ಥವಾಗುತ್ತದೆ. ಇಷ್ಟು ಸರಳವಾಗಿ ಈ ಪ್ರಕ್ರಿಯೆಯನ್ನು ವಿವರಿಸಿದ್ದರೂ, ನಿಜವಾಗಿ ಇದು ತುಂಬಾ ಸಂಕೀರ್ಣವಾಗಿರುತ್ತದೆ. ಸೂತ್ರಗಳನ್ನು ಏಕಾಏಕಿ ರೂಪಿಸುವುದಕ್ಕೆ ಸಾಧ್ಯವಾಗುವುದಿಲ್ಲ. ನಡುವೆ ತಾತ್ಪೂರ್ತಿಕವಾದ ಹಂತಗಳಿರುತ್ತವೆ. ಆ ಹಂತದ ಸೂತ್ರಗಳನ್ನು ಮುಂದೆ ಸಂಪೂರ್ಣವಾಗಿ ಮಗು ನಿರಾಕರಿಸಬಹುದು. ಇಲ್ಲವೇ ಸೂಕ್ತ ತಿದ್ದುಪಡಿಗಳೊಡನೆ ಅಳವಡಿಸಿಕೊಳ್ಳುತ್ತದೆ.

ಲ್ಯಾಡ್‌ನ ಸ್ವರೂಪವೇನು? ಅದರ ಕೆಲಸಗಳೇನು? ಈ ಪ್ರಶ್ನೆಗಳಿಗೆ ಹಲವು ಉತ್ತರಗಳಿವೆ. ಎಲ್ಲರೂ ಸಮ್ಮತಿ ನೀಡುವ ವಿವರಣೆಗಳಿಲ್ಲ. ಮುಖ್ಯವಾಗಿ ಲ್ಯಾಡ್‌ನಲ್ಲಿ ಮಗುವಿಗೆ ಹಲವಾರು ಭಾಷಾಸಾರ್ವತ್ರಿಕ ಅಂಶಗಳು ಲಭ್ಯವಿರುತ್ತದೆ. ಮಗು ಅವುಗಳಲ್ಲಿ

ತಾನು ಕಲಿಯುತ್ತಿರುವ ಭಾಷೆಗೆ ಸೂಕ್ತವಾದವುಗಳನ್ನು ಆಯ್ಕೆ ಮಾಡಿಕೊಳ್ಳುತ್ತದೆ. ಇದು ಒಂದು ಪಕ್ಷದ ವಾದ. ಉದಾಹರಣೆಗೆ, ಜಗತ್ತಿನ ಎಲ್ಲ ಭಾಷೆಗಳಲ್ಲೂ ವಾಕ್ಯದಲ್ಲಿ ವಿವಿಧ ವ್ಯಾಕರಣ ವರ್ಗದ ಪದಗಳು ನಿರ್ದಿಷ್ಟ ಅನುಕ್ರಮದಲ್ಲಿ ಬರುತ್ತದೆ. ಕನ್ನಡದಲ್ಲಿ ವಿಷಯ(ಕೆಲವೊಮ್ಮೆ ಕರ್ತೃವೆಂದೂ ಕರೆಯುತ್ತಾರೆ)ಕರ್ಮ ಮತ್ತು ಕ್ರಿಯಾಪದಗಳು ಅನುಕ್ರಮವಾಗಿ ಬಂದರೆ, ಇಂಗ್ಲಿಶ್‌ನಲ್ಲಿ ಕ್ರಿಯಾಪದ ನಡುವೆ ಬಂದು ಕರ್ಮಪದ ವಾಕ್ಯದ ಕೊನೆಯಲ್ಲಿ ಬರುತ್ತದೆ. ಈ ಅಳವಡಿಕೆಯ ಸಾಧ್ಯತೆಗಳು ಸೀಮಿತ ಸಂಖ್ಯೆಯಲ್ಲಿರುತ್ತವೆ. ಲ್ಯಾಡ್‌ನಲ್ಲಿ ಮಗುವಿಗೆ ಈ ಸಾಧ್ಯತೆಗಳೆಲ್ಲವೂ ಲಭ್ಯವಿದ್ದು, ಅವುಗಳಲ್ಲಿ ತಾನು ಕಲಿಯುತ್ತಿರುವ ಭಾಷೆಗೆ ಹೊಂದುವುದನ್ನು ಮಗು ಆಯ್ದುಕೊಳ್ಳುತ್ತದೆ. ಇನ್ನೊಂದು ವಾದದ ತಿರುಳು ಹೀಗಿದೆ: ಲ್ಯಾಡ್ ಮಗುವಿಗೆ ಭಾಷೆಯಲ್ಲಿರುವ ನಿಯಮಗಳನ್ನು ರಚಿಸಲು ಬೇಕಾದ ವಿಧಾನಗಳನ್ನು ಒದಗಿಸುತ್ತದೆ. ಅಂದರೆ ಮಗುವಿಗೆ, ಪರಿಸರದಿಂದ ಲಭಿಸುವ ಭಾಷಿಕಸಾಮಗ್ರಿಯನ್ನು ಆಧರಿಸಿ ವ್ಯಾಕರಣ ನಿಯಮಗಳನ್ನು ರೂಪಿಸುವುದು ಹೇಗೆ ಎನ್ನುವುದನ್ನು ಲ್ಯಾಡ್ ತಿಳಿಸಿಕೊಡುತ್ತದೆ. ಏನೇ ಇರಲಿ. ಮಗು ಎಷ್ಟು ವೇಗವಾಗಿ ಭಾಷೆಯ ಬಳಕೆಯ ಎಲ್ಲ ಸಾಮರ್ಥ್ಯಗಳನ್ನು, ಅಂದರೆ ಆಲಿಸಿ ಅರಿಯುವ ಮತ್ತು ಮಾತಾಡುವ ಸಾಮರ್ಥ್ಯಗಳನ್ನು ಪಡೆದುಕೊಳ್ಳುವುದೆಂದರೆ ಮಗುವಿಗೆ ಲ್ಯಾಡ್‌ನಂಥ ಅಂತಸ್ಥ ರಚನೆಯ ನೆರವು ಇರುವುದನ್ನು ಒಪ್ಪುವುದು ಅನಿವಾರ್ಯ. ಜಗತ್ತಿನಾದ್ಯಂತ ಬೇರೆ ಬೇರೆ ಭಾಷೆಗಳ ಸಂದರ್ಭಗಳಲ್ಲಿ ಮಕ್ಕಳು ಭಾಷೆಯನ್ನು ಕಲಿಯುವ, ವ್ಯಾಕರಣ ಪ್ರಕ್ರಿಯೆಯನ್ನು ರೂಪಿಸಿಕೊಳ್ಳುವ ಕ್ರಮದಲ್ಲಿ ಸಮಾನ ಅಂಶಗಳಿರುತ್ತವೆ. ಈ ಸಮಾನತೆಯನ್ನು ವಿವರಿಸಲು ಕೂಡ, ಎಲ್ಲ ಮಕ್ಕಳೂ ಹುಟ್ಟುವಾಗಲೇ ಈ ಲ್ಯಾಡ್‌ನಂಥ ಸಾಮರ್ಥ್ಯವನ್ನು ಪಡೆದಿರುತ್ತಾರೆಂದು ತಿಳಿಯುವುದು ಸೂಕ್ತ. ಲ್ಯಾಡ್ ಇಲ್ಲದಿದ್ದಲ್ಲಿ ಕೇವಲ ಪರಿಸರದ ಭಾಷಾಸಾಮಗ್ರಿಯನ್ನು ಕೇಳಿಯೇ ಮಗು ಭಾಷೆಯನ್ನು ಕಲಿಯುವುದೆಂದು ವಾದಿಸಬೇಕಾಗುತ್ತದೆ. ಆದರೆ ಇದು ಸೂಕ್ತವಲ್ಲ. ಏಕೆಂದರೆ ಭಾಷೆಯ ಪರಿಪೂರ್ಣ ವ್ಯಾಕರಣವನ್ನು ರಚಿಸಲು ಅವಶ್ಯವಿರುವಷ್ಟು ಭಾಷಾಸಾಮಗ್ರಿ ಮಗುವಿಗೆ ಆ ವಯೋಮಾನದಲ್ಲಿ ದೊರಕುವುದಿಲ್ಲ. ದೊರಕುವಷ್ಟು ಸಾಮಗ್ರಿ ಕೂಡ ಅವ್ಯವಸ್ಥಿತವಾಗಿರುತ್ತದೆ; ಗೋಜಲಾಗಿರುತ್ತದೆ. ಆ ಸಾಮಗ್ರಿಯನ್ನು ಸೂಕ್ತ ರೀತಿಯಲ್ಲಿ ಅಳವಡಿಸಿಕೊಂಡು ಸಾಮಾನ್ಯ ಸೂತ್ರವನ್ನು ರಚಿಸಲು, ಲ್ಯಾಡ್‌ನಂಥ ವ್ಯವಸ್ಥೆ ಇಲ್ಲದಿದ್ದಲ್ಲಿ, ಸಾಧ್ಯವಾಗುವುದಿಲ್ಲ. ಈಗ ನಡೆಯುತ್ತಿರುವ ಅಧ್ಯಯನಗಳು ಮಗುವಿನಲ್ಲಿರುವ ಲ್ಯಾಡ್‌ನ ಲಕ್ಷಣಗಳನ್ನು ಅರಿಯಲು, ಅದು ಯಾವ ವಯೋ ಅವಧಿಯಲ್ಲಿ ಜಾಗ್ರತವಾಗಿ ಕಲಿಕೆಗೆ ನೆರವಾಗುವುದೆಂದು ತಿಳಿಯಲು ಅನುಕೂಲವಾಗುವಂತಿದೆ.

ಭಾಷಾಕಲಿಕೆಗೆ ನೆರವಾಗುವ ಬೇರೆ ಯಾವುದಾದರೂ ಸಾಮರ್ಥ್ಯ ಮಗುವಿನಲ್ಲಿ ಇರುವುದೋ? ಲ್ಯಾಡ್‌ಗೆ ಬದಲಾಗಿ ಬೇರೊಂದು ಕಲಿಕೆಯ ವ್ಯವಸ್ಥೆಯನ್ನು ಕಲ್ಪಿಸಲು ಪ್ರಯತ್ನಗಳು ನಡೆದಿವೆ. ಮಕ್ಕಳಲ್ಲಿ ಗ್ರಹಿಕೆಯ ಕ್ರಮವೊಂದು ರೂಪುಗೊಳ್ಳುತ್ತದೆ. ಇದು ಪ್ರಧಾನವಾಗಿ ಐಂದ್ರಿಯಿಕ ಅನುಭವಗಳಿಂದ ಬೆಳೆಯುವುದು. ಅಂದರೆ ನೋಡಿ, ಕೇಳಿ, ಮುಟ್ಟಿ, ರುಚಿನೋಡಿ, ವಾಸನೆ ಹಿಡಿದು ಪರಿಸರದ ಪ್ರತಿ ಸಂಗತಿಯನ್ನೂ ತನ್ನ

ಅನುಭವದ ಭಾಗವನ್ನಾಗಿ ಮಾಡಿಕೊಳ್ಳಲು ಮಗು ಯತ್ನಿಸುತ್ತದೆ. ಈ ಅನುಭವಗಳನ್ನು ಪರಸ್ಪರ ಸಂಯೋಜಿಸುವ ವ್ಯವಸ್ಥೆಯೂ ಮಗುವಿನಲ್ಲಿರುತ್ತದೆ. ಈ ವ್ಯವಸ್ಥೆಯೇ ಭಾಷೆಯ ಕಲಿಕೆಯಲ್ಲಿ ಮಗುವಿಗೆ ನೆರವಾಗುವುದೆಂದು ವಾದಿಸುವವರಿದ್ದಾರೆ. ಈ ಗ್ರಹಿಕೆಯ ಸಾಮರ್ಥ್ಯ ಮಗುವಿನಲ್ಲಿ ಮೊದಲು ಆಕಾರ ಪಡೆಯುತ್ತದೆ. ಇದರ ನೆರವಿನಿಂದ ಮಗು ಭಾಷೆಯನ್ನು ಕಲಿಯಲು ಸಮರ್ಥವಾಗುತ್ತದೆಂದು ಈ ಸಿದ್ಧಾಂತದ ಸಮರ್ಥಕರು ಹೇಳುತ್ತಾರೆ. ಉದಾಹರಣೆಯೊಂದನ್ನು ಗಮನಿಸೋಣ. ಮಗು ಚೆಂಡನ್ನು ನೋಡುತ್ತದೆ. ಅದು ಕಣ್ಣಿನ ಮೂಲಕ ಒಂದು ಅನುಭವವಾಗಿ ಮಗುವಿನಲ್ಲಿ ಉಳಿಯುತ್ತದೆ. ಹಲವಾರು ಬಾರಿ ಆ ಚೆಂಡನ್ನು ನೋಡಿದಾಗ ಪ್ರತಿಬಾರಿಯ ಅನುಭವವೂ ಪೂರ್ವಾನುಭವದ ದೃಢೀಕರಣಕ್ಕೆ ನೆರವಾಗುತ್ತದೆ. ಇದರಿಂದ ಚೆಂಡನ್ನು ಕುರಿತು ಕೆಲವು ಸಾಮಾನ್ಯ ಲಕ್ಷಣಗಳನ್ನು ಮಗು ಗ್ರಹಿಸಿರುತ್ತದೆ. ಆಗ ಹೊಸ ಚೆಂಡನ್ನು ಕಂಡಾಗ ಆಗುವ ಅನುಭವವನ್ನು ಪೂರ್ವಸಿದ್ಧವಾದ ಸಾಮಾನ್ಯ ಲಕ್ಷಣಗಳೊಡನೆ ಹೋಲಿಸಿ ಈ ಹೊಸ ವಸ್ತುವೂ ಚೆಂಡು ಎಂದು ಮಗು ತಿಳಿಯುತ್ತದೆ. ಈ ತಿಳುವಳಿಕೆ ಮೂಡುವ ಮೊದಲು ಬಣ್ಣ, ಗಾತ್ರ ಚಲನೆ ಮುಂತಾದ ಲಕ್ಷಣಗಳಿಗೆ ಸಂಬಂಧಿಸಿದಂತೆ ಅಸ್ಪಷ್ಟ ಸ್ಥಿತಿಗಳು ಇರುತ್ತವೆ. ಕೆಂಪು ಬಣ್ಣದ ಚೆಂಡನ್ನು ಮಾತ್ರ ನೋಡಿದ ಮಗು ಹಸುರು ಬಣ್ಣದ ಚೆಂಡನ್ನು ಬೇರೆಯೇ ವಸ್ತುವೆಂದು ತಿಳಿಯುತ್ತದೆ. ಮುಂದುವರೆದ ಹಂತದಲ್ಲಿ ಅವೆರಡೂ ಅನುಭವಗಳನ್ನು ಸಂಯೋಜಿಸಿ 'ಚೆಂಡುತನ'ವೆಂಬ ಆಕೃತಿಯನ್ನು ರೂಪಿಸಿಕೊಳ್ಳುತ್ತದೆ. ಮಗುವಿನಲ್ಲಿ ಬೆಳೆಯುವ ಈ ಅನುಭವ ಸಂಯೋಜನೆಯ ಸಾಮರ್ಥ್ಯವೇ ಭಾಷೆಯನ್ನು ಕಲಿಯಲು, ಸೂತ್ರಗಳನ್ನು ರೂಪಿಸಿಕೊಳ್ಳಲು ನೆರವಾಗುತ್ತದೆ.

ಪರಿಸರದ ಅನುಭವಗಳ ಗ್ರಹಿಕೆಯ ನೆಲೆಯಲ್ಲಿ ಮಗು ಬೆಳೆಸಿಕೊಳ್ಳುವ ಸಾಮರ್ಥ್ಯಕ್ಕೂ ಭಾಷಾಸಾಮರ್ಥ್ಯಕ್ಕೂ ಇರುವ ಸಂಬಂಧ ಸ್ಪಷ್ಟವಾಗಿಲ್ಲ. ಹಾಗಾಗಿ ಗ್ರಹಿಕೆಯ ಸಾಮರ್ಥ್ಯವೇ ಭಾಷಾಕಲಿಕೆಗೆ, ಪೂರ್ಣಪ್ರಮಾಣದ ಭಾಷಾಸಾಮರ್ಥ್ಯಕ್ಕೆ, ಕಾರಣವಾಗುವುದನ್ನು ಸಾಧಿಸಲು ಸಾಧ್ಯವಾಗಿಲ್ಲ. ಕೆಲವು ಭಾಷಾಂಶಗಳ ಕಲಿಕೆಯನ್ನು ವಿವರಿಸಲು ಈ ಸಿದ್ಧಾಂತ ನೆರವಾಗಬಹುದು. ಮೊದಲು ಹೇಳಿದ ಉದಾಹರಣೆಯನ್ನೇ ಗಮನಿಸುವುದಾದರೆ 'ಚೆಂಡು' ಎಂಬ ವಸ್ತುವಿಗೂ 'ಚೆಂಡು' ಪದಕ್ಕೂ ಸಂಬಂಧ ರೂಪಿಸಿ ಅನಂತರ ಕೇವಲ 'ಚೆಂಡು' ಪದದ ಉಚ್ಚಾರಣೆಯಿಂದಲೇ ಪೂರ್ವಾನುಭವವನ್ನು ಮರಳಿ ಗ್ರಹಿಸಲು ಮಗುವಿಗೆ ಈ ಸಾಮರ್ಥ್ಯ ನೆರವಾಗುತ್ತದೆ. ಏನೇ ಆಗಲಿ, ಭಾಷಾಸಾಮರ್ಥ್ಯ ಅತ್ಯಂತ ಸಂಕೀರ್ಣ ರಚನೆ. ಇದನ್ನು ಮಗು ಪಡೆದುಕೊಳ್ಳುವ ಕ್ರಮವನ್ನು ಗ್ರಹಿಕೆಯ ಸಾಮರ್ಥ್ಯದ ಮೂಲಕವೇ ವಿವರಿಸಲು ಇನ್ನೂ ಸಾಧ್ಯವಾಗಿಲ್ಲ.

ಮಗು ಅನುಕರಣೆಯಿಂದ ಭಾಷೆಯನ್ನು ಕಲಿಯುವುದಿಲ್ಲ. ತನ್ನೊಳಗೇ ಇರುವ ವಿಶೇಷ ಭಾಷಾಕಲಿಕೆಯ ವ್ಯವಸ್ಥೆಯೊಂದರ ನೆರವಿನಿಂದಷ್ಟೇ ಭಾಷೆಯನ್ನು ಪಡೆದುಕೊಳ್ಳುತ್ತದೆನ್ನುವ ಸಿದ್ಧಾಂತಗಳು ಬಲವಾಗುತ್ತಾ ಹೋದಂತೆ ಮಗು ತನ್ನ ಪರಿಸರದಿಂದ ಕೇಳಿಸಿಕೊಳ್ಳುವ ಭಾಷೆಯ ಮಹತ್ವ ಕಡಿಮೆಯಾಯಿತು. ಈ ಸಾಮಗ್ರಿ

ಭಾಷೆಯ ಕಲಿಕೆಗೆ ಹೇಗಾದರೂ ನೆರವಾಗುವುದು ಸಾಧ್ಯವೇ ಎಂಬ ಪ್ರಶ್ನೆ ಹಿಂದೆ ಸರಿಯಿತು. ಆದರೆ ಮಕ್ಕಳು ಭಾಷೆಯನ್ನು ಕಲಿಯುವಾಗ ಕೇಳಿಸಿಕೊಳ್ಳುವ ಭಾಷೆ ಸಾಮಾನ್ಯವಾಗಿ ತಿಳಿದಂತೆ ವಯಸ್ಕರಾಡುವ ಭಾಷೆಯಂತೆ ಇರುವುದಿಲ್ಲ. ಪಾಲಕರು, ಮಗು ಭಾಷೆ ಕಲಿಯುವ ಸಂದರ್ಭದಲ್ಲಿ ಅದರ ಆಸುಪಾಸಿನಲ್ಲಿರುವ ಇತರರು ಮಗುವಿನೊಡನೆ ವಿಶೇಷ ರೂಪದ ಭಾಷೆಯನ್ನು ಬಳಸುತ್ತಾರೆ. ಈ ವಯಸ್ಕರು ಮಗುವಿಗೆ 'ಅನುಕೂಲ'ವಾಗಲೆಂದು ತಮ್ಮ ವಯಸ್ಕ ಭಾಷೆಯನ್ನು ಹೊಂದಿಸಿಕೊಳ್ಳುತ್ತಾರೆ. ಈ ಹೊಂದಾಣಿಕೆ ಧ್ವನಿರಚನೆ, ಪದರಚನೆ, ವಾಕ್ಯರಚನೆ ಹೀಗೆ ಹಲವು ಹಂತಗಳಲ್ಲಿ ತೋರಿಬರುತ್ತದೆ. ಕ್ಲಿಷ್ಟವಾದ ಧ್ವನಿಗಳನ್ನು (ಉದಾ:ರ) ಧ್ವನಿ ಸಂಯೋಜನೆಗಳನ್ನು (ಉದಾ:ವಿಜಾತೀಯ ದ್ವಿತ್ವಗಳು) ಕೈಬಿಡುತ್ತಾರೆ. ಪದಗಳ ರೂಪದಲ್ಲಿ ಬದಲಾವಣೆ ಮಾಡಿಕೊಳ್ಳುತ್ತಾರೆ(ಆಯಿ, ಲಾಲು/ಹಾಲು, ಮಂಮಂ/ಅನ್ನ, ಅಬ್ಬಿ/ಗಾಯ, ಅತ್ತ/ಏಟು, ಬೂಚಿ/ಗುಮ್ಮ) ಹಾಗೆಂಯೇ ವಾಕ್ಯಗಳಲ್ಲೂ ರಾಚನಿಕವಾಗಿ ಕೆಲವು ಹೊಂದಾಣಿಕೆಗಳಿರುತ್ತವೆ. ಇಂಥ ಮಾದರಿಯ ಮಾತುಗಳನ್ನು ಮಕ್ಕಳೊಡನೆ ಮಾತಾಡುವುದನ್ನು ನಾವೆಲ್ಲ ಗಮನಿಸಿದ್ದೇವೆ. ಈ ಮಾತಿನ ಬಗೆಯನ್ನು ಇಂಗ್ಲಿಶಿನಲ್ಲಿ ಮದರೀಸ್ ಎಂದಿದ್ದಾರೆ.

'ಮದರೀಸ್' ಎಂಬ ಪದದ ಬಳಕೆಗೆ ಕೆಲವರ ಆಕ್ಷೇಪಗಳಿವೆ. ತಂದೆಯೂ ಈ ಮಾತಿನ ಮಾದರಿಯನ್ನು ಬಳುಸವುದರಿಂದ ಪೇರಂಟೀಸ್ ಎನ್ನಬೇಕೆ? ಅಧ್ಯಯನಗಳಿಂದ ದೃಢಪಟ್ಟಿರುವ ಸಂಗತಿಯೆಂದರೆ ತಂದೆ ಬಳಸುವ ಮಾತಿನ ಮಾದರಿಗೂ (ಮದರೀಸ್) ತಂದೆ ಬಳಸುವ ಮಾದರಿಗೂ (ಫಾದರೀಸ್) ಸಾಕಷ್ಟು ವ್ಯತ್ಯಾಸಗಳಿರುತ್ತವೆ. ಹಾಗೆ ನೋಡಿದರೆ ಮಗುವಿನ ಜೊತೆ ಇರುವ ಕೊಂಚ ಬೆಳೆದ ಮಕ್ಕಳೂ ಇಂಥದೇ ಮಾದರಿಯ ಭಾಷೆಯನ್ನು ಮಗುವಿನೊಡನೆ ಆಡುತ್ತಿರುತ್ತಾರೆ. ಎಷ್ಟೋ ಸಂಗತಿಗಳಲ್ಲಿ ಪಾಲಕರಿಗಿಂತ ಹೆಚ್ಚಾಗಿ ವಯಸ್ಸಾದ ಮಕ್ಕಳು, ಅಕ್ಕ-ಅಣ್ಣಂದಿರು ಮಗುವಿಗೆ ಭಾಷಿಕ ಸಾಮಗ್ರಿಯನ್ನು ಒದಗಿಸುವವರಾಗಿರುತ್ತಾರೆ. ಹಾಗಾಗಿ ಈ ಮಾದರಿಯ ಭಾಷೆಗೆ 'ಅದರೀಸ್'(ಅನ್ಯರ ಮಾತು) ಎನ್ನಬಹುದೆಂದು ಕೆಲವರ ವಾದ. ಮಕ್ಕಳೊಡನೆ ತಾಯಂದಿರು ಮಾತಾಡುವ ಮಾತಿನ ಬಗೆಯನ್ನು ಸರಿಯಾಗಿ ಅಧ್ಯಯನ ಮಾಡಿಲ್ಲ. ರಚನೆಯನ್ನು ಸರಳಗೊಳಿಸುವ ವಿಧಾನದಲ್ಲಿ ಎಲ್ಲಾ ಭಾಷಿಕರೂ ಮಾತಾಡುವುದಿಲ್ಲ. ಆಕೆ ಬೆಳೆದ ಮಗುವಿನೊಡನೆ ಮಾತಾಡಿದರೆ ಆ ಮಗು ಭಾಷೆ ಕಲಿಯುತ್ತಿರುವ ಮಗುವಿನೊಡನೆ ಮಾತಾಡುತ್ತದೆ. ಇವೆಲ್ಲ ಸಂಗತಿಗಳನ್ನು ಗಮನಿಸಿ ಮಗುವಿಗೆ ಒದಗುವ ಮಾತಿನ ಮಾದರಿಗಳ ಸ್ವರೂಪವನ್ನು ಅರಿತರೆ ಆಗ ಈ ಮಾದರಿಗಳು ಭಾಷಾಕಲಿಕೆಯಲ್ಲಿ ಮಗುವಿಗೆ ಹೇಗೆ ನೆರವಾಗುತ್ತಿವೆಯೆಂದು ತಿಳಿಯುವುದು ಸಾಧ್ಯ.

# ವಯಸ್ಕ ಭಾಷಾಕಲಿಕೆ

ನಮ್ಮ ದೇಶದ ಸಾಕ್ಷರತೆಯ ಪ್ರಮಾಣವನ್ನು ಹೆಚ್ಚಿಸಲು ಆಡಳಿತಗಾರರು ಹಲವಾರು ಯೋಜನೆಗಳನ್ನು ಜಾರಿಗೊಳಿಸುತ್ತಿದ್ದಾರೆ. ಸಾಕ್ಷರತೆಯ ಪ್ರಮಾಣ ಕಡಿಮೆ ಇರಲು ಸಾಮಾಜಿಕ ಕಾರಣಗಳಿರುವಂತೆ ರಾಜಕೀಯ ಕಾರಣಗಳೂ ಇವೆ. ಕಡ್ಡಾಯ ಪ್ರಾಥಮಿಕ ಶಿಕ್ಷಣದ ಜವಾಬುದಾರಿ ರಾಜ್ಯ ಸರ್ಕಾರಗಳ ಮೇಲಿದೆ. ಹಾಗೂ ಶಿಕ್ಷಣ ನೀಡುವ ಬಗ್ಗೆ ರಾಜ್ಯಾಂಗದ ನಿರ್ದೇಶಕ ಸೂತ್ರಗಳಲ್ಲಿ ಮಾತ್ರ ಹೇಳಲಾಗಿದೆ. ಇದರಿಂದ ರಾಜ್ಯಗಳಿಗೆ ತಮ್ಮ ಜವಾಬುದಾರಿಯನ್ನು ನಿರ್ವಹಿಸುವುದು ಕಡ್ಡಾಯವಾಗಿಲ್ಲ. ಪ್ರಾಥಮಿಕ ಶಿಕ್ಷಣದ ವ್ಯಾಪ್ತಿಯನ್ನು ವಿಸ್ತರಿಸುವುದು ಸರ್ಕಾರಗಳಿಗೆ ಸಾಧ್ಯವಾಗಿಲ್ಲ. ಹಾಗಾಗಿ ಜನರು ಒತ್ತಾಯ ಪೂರ್ವಕವಾಗಿ ನಿರಕ್ಷರಿಗಳಾಗುತ್ತಿದ್ದಾರೆ. ಈಗ ಈ ನಿರಕ್ಷರಿಗಳನ್ನು ಸಾಕ್ಷರರನ್ನಾಗಿ ಮಾಡುವ ಬೃಹದ್ ಪ್ರಮಾಣದ ಸಾಮಾಜಿಕ ಕಾರ್ಯಕ್ರಮ ನಡೆಯುತ್ತಿದೆ. ಈ ಕಾರ್ಯಕ್ರಮದ ವ್ಯಾಪ್ತಿಯಲ್ಲಿ ಕಲಿಯುತ್ತಿರುವವರು ಬಹುಮಟ್ಟಿಗೆ ವಯಸ್ಕರು. ಆದ್ದರಿಂದ ಇಲ್ಲಿನ ಕಲಿಕೆ, ಬೋಧನೆಗೆ ವಯಸ್ಕ ಕಲಿಕೆಯ ತತ್ವಗಳನ್ನು ಅನುಸರಿಸುವುದು ಅನಿವಾರ್ಯ.

ವಯಸ್ಕ ಭಾಷಾಕಲಿಕೆಗೆ ಔಪಚಾರಿಕ, ಅನೌಪಚಾರಿಕ ಎಂಬ ಎರಡು ಬಗೆಗಳಿವೆ. ವಲಸೆಗಾರರು ಸಾಮಾನ್ಯವಾಗಿ ಅನೌಪಚಾರಿಕ ಬಗೆಯಲ್ಲಿ ಕಲಿಯುತ್ತಾರೆ. ಅವರ ಭಾಷಾ ಕಲಿಕೆಗೆ ಮಿತಿಗಳಿವೆ. ಬಹುಮಟ್ಟಿಗೆ ಅವರು ಕೆಲವು ಭಾಷಾ ಕೌಶಲಗಳನ್ನು ಸೀಮಿತ ಸಾಮರ್ಥ್ಯವನ್ನು ಗಳಿಸುತ್ತಾರೆ. ಅವರ ಮೊದಲ ಭಾಷೆ, ಅಥವಾ ಪರಿಸರದ ಮತ್ತೊಂದು ಪ್ರಬಲ ಭಾಷೆ ಕಲಿಕೆಯಲ್ಲಿ ಪ್ರಭಾವ ಬೀರುತ್ತದೆ. ಗೂರ್ಖಾಗಳು, ಮಲೆಯಾಳಿ ವ್ಯಾಪಾರಿಗಳು, ತಮಿಳು ಕೆಲಸಗಾರರು, ಮಾರವಾಡಿಗಳು ಮಾತನಾಡುವ ಕನ್ನಡವನ್ನು ಕೇಳಿದರೆ ಮೇಲಿನ ಮಾತು ಸ್ಪಷ್ಟವಾಗುತ್ತದೆ. ಪರಿಸರದ ಪ್ರಬಲ ಭಾಷೆಗಳಾದ ಹಿಂದಿ ಇಲ್ಲವೇ ಇಂಗ್ಲಿಶ್ ಕೂಡ ಅವರ ಕನ್ನಡ ಕಲಿಕೆಯನ್ನು ನಿಯಂತ್ರಿಸುತ್ತಿರುತ್ತದೆ.

ವಯಸ್ಕರ ಔಪಚಾರಿಕ ಭಾಷಾಕಲಿಕೆ ಸ್ವಭಾಷಿಕರಲ್ಲಿ ಮತ್ತು ಅನ್ಯಭಾಷಿಕರಲ್ಲಿ ಹೇಗೆ ನಡೆಯುತ್ತದೆಂಬುದನ್ನು ಭಾಷಾಶಾಸ್ತ್ರಜ್ಞರು ಅಧ್ಯಯನ ಮಾಡಿದ್ದಾರೆ. ನಮ್ಮ ಸಾಕ್ಷರ ಕಾರ್ಯಕ್ರಮದಲ್ಲಿ ಭಾಗಿಯಾಗುವವರು ಕನ್ನಡವನ್ನು ಕಲಿಯುವುದಾದರೆ ಹೀಗೆ ಕಲಿಯುವವರಲ್ಲಿ ಸ್ವಭಾಷಿಕರೇ ಆಗಿರುತ್ತಾರೆ. ಅಂದರೆ ಅವರಿಗೆ ಕನ್ನಡದ ಆಡು ಪ್ರಭೇದದ ಕೌಶಲಗಳು ಗೊತ್ತಿರುತ್ತವೆ. ಸಂವಹನ ಕೌಶಲಗಳನ್ನು ಕಲಿಯುವುದು

ಅವಶ್ಯ. ಇನ್ನು ಬರೆವಣಿಗೆ ಮತ್ತು ಓದು. ಈ ಎರಡೂ ಕೌಶಲ್ಯಗಳನ್ನು ಕಲಿಸುವುದು ಸಾಕ್ಷರತಾ ಕಾರ್ಯಕ್ರಮಗಳಲ್ಲಿ ಮುಖ್ಯವಾಗುತ್ತದೆ. ಓದುವ ಕೌಶಲ್ಯವನ್ನು ಕಲಿಯುವುದು ಅವಶ್ಯ. ಇದು ಮುಖ್ಯವಾಗಿ ಕಣ್ಣು, ಮೆದುಳುಗಳಿಗೆ ಸಂಬಂಧಿಸಿದ ಚಟುವಟಿಕೆ. ಗಟ್ಟಿ ಓದನ್ನು ಕಲಿಸುವುದಾದರೆ ಬಾಯಿಯ (ಅಂದರೆ ಧ್ವನ್ಯಂಗಗಳ) ಚಟುವಟಿಕೆಯೂ ಆಗುತ್ತದೆ. ಅದು ಓದಿನ ಕೊನೆಯ ಹಂತದಲ್ಲಿ ಧ್ವನ್ಯಂಗಗಳ ಕೆಲಸ ಇಲ್ಲವಾಗುತ್ತದೆ. ನಾವು ಯಾರೂ ಓದುವಾಗ ಗಟ್ಟಿಯಾಗಿ ದನಿ ಮಾಡಿ ಓದುವುದಿಲ್ಲವಷ್ಟೆ. ಏನೇ ಇರಲಿ ಓದಿನ ಕಲಿಕೆಯಲ್ಲಿ ಭಾಗಿಯಾಗುವ ವಯಸ್ಕರು ತಮ್ಮ ಭಾಷಾ ಸಾಮರ್ಥ್ಯ ಮತ್ತು ಕೆಲವು ಚಟುವಟಿಕೆಗಳನ್ನು ಹೊಂದಿಸಿಕೊಳ್ಳಬೇಕಾಗಿರುತ್ತದೆ. ಅದು ಅನಿವಾರ್ಯ.

ವಯಸ್ಕ ಭಾಷಾ ಕಲಿಕೆಯಲ್ಲಿ ಮಾನವನಿಗೆ ಸಹಜವಾದ ಭಾಷಾಕಲಿಕೆಯ ನಿಯಮಗಳು ಬಳಕೆಯಾಗುವುದಿಲ್ಲ. ಇತರ ಸಾಮಾನ್ಯ ಕಲಿಕೆಯ (ಮನೋದೈಹಿಕ ಸಾಮರ್ಥ್ಯಗಳ ಸಮರ್ಥ ಬಳಕೆ) ನಿಯಮಗಳೇ ಇಲ್ಲಿ ಕೆಲಸಕ್ಕೆ ಬರುತ್ತವೆ. ಇದೊಂದು ಬಯಸುವ ಕ್ರಿಯೆ. ಆದರೆ ವಯಸ್ಕರಿಗೆ ಭಾಷಾಕೌಶಲಗಳು ಮೊದಲೇ ತಿಳಿದಿರುತ್ತವೆ. ಸಾಕ್ಷರ ಕಾರ್ಯಕ್ರಮದಲ್ಲಿ ಅವರು ಬರೆಹದ ನೆಲೆಗೆ ತಮ್ಮನ್ನು ತಾವು ಒಗ್ಗಿಸಿಕೊಳ್ಳಬೇಕಾಗುತ್ತದೆ. ಮುಖ್ಯವಾಗಿ ಓದುವ ಸಾಮರ್ಥ್ಯವನ್ನು ತಡೆಯಬೇಕಾಗುತ್ತದೆ. ಎಲ್ಲ ವಯಸ್ಕರಿಗೂ ಅಕ್ಷರ ಬರೆಯುವ ಕೌಶಲ್ಯ ಕಲಿಸಬೇಕೇ?

ಅಕ್ಷರ ಬರೆವಣಿಗೆಯನ್ನು ಔಪಚಾರಿಕ ಭಾಷಾ ಕಲಿಕೆಯಲ್ಲಿ ಒಂದು ಮುಖ್ಯ ಸಾಮರ್ಥ್ಯವೆಂದು ತಿಳಿದು ಕಲಿಸಲಾಗುತ್ತದೆ. ಬರೆವಣಿಗೆ ಒಂದು ನರ ಮತ್ತು ದೈಹಿಕ ಚಟುವಟಿಕೆಗಳ ಮೊತ್ತ. ಇದನ್ನು ಕಲಿಯಲು ನಾವು ಬಳಸುವ ನರ–ದೇಹ ಸಾಮರ್ಥ್ಯಕ್ಕೂ ಭಾಷಾ ಕಲಿಕೆಗೂ ನೇರವಾದ ಸಂಬಂಧವಿಲ್ಲ. ವಯಸ್ಕರಿಗೆ ಇಂಥ ಚಟುವಟಿಕೆಗಳ ಮೂಲಕ ಬರೆವಣಿಗೆಯನ್ನು ಕಲಿಯುವುದು ಕಷ್ಟದ ಕೆಲಸ. ಈ ಕಲಿಕೆಯಲ್ಲಿ ಆಗುವ ಅಡ್ಡಿ ಆತಂಕಗಳು ಪರೋಕ್ಷವಾಗಿ ಭಾಷಾ ಕಲಿಕೆಯ ಮೇಲೂ ಪ್ರಭಾವವನ್ನು ಬೀರುತ್ತವೆ. ಅಲ್ಲದೆ ಭಾಷಾ ಬಳಕೆಯಲ್ಲಿ ಎಷ್ಟು ಜನರಿಗೆ ಬರೆವಣಿಗೆಯ ಉಪಯೋಗ ಬೀಳುತ್ತದೆ. ನಾವು ಸುಮ್ಮನೆ ಗಮನಿಸಿದರೂ ಭಾಷಾ ಸಾಮರ್ಥ್ಯಗಳೆಲ್ಲವನ್ನು ಬಳಸಬಲ್ಲವರೂ ಕೂಡ ಬರೆವಣಿಗೆಯಲ್ಲಿ ತೊಡಗುವ ಸಂದರ್ಭಗಳು ಕಡಿಮೆ. ಹಾಗೆ ಬರೆವಣಿಗೆ ಮಾಡಲು ಬಂದರೂ ಅನ್ಯರನ್ನು (ಅಂದರೆ ಬೆರಳಚ್ಚುಗಾರರನ್ನು)ಆಶ್ರಯಿಸಬೇಕಾಗಿ ಬರುವ ಸಂದರ್ಭಗಳು ಹೆಚ್ಚು. ಅಂದರೇನಾಯ್ತು? ವಯಸ್ಕ ಭಾಷಾ ಕಲಿಕೆಯಲ್ಲಿ ಬರೆವಣಿಗೆಯ ಕಲಿಕೆಯನ್ನು ಕೈಗೆತ್ತಿಕೊಳ್ಳಬೇಕಾದ ಅವಶ್ಯಕತೆ ಇಲ್ಲ. ಅವರಲ್ಲಿ ಹೆಚ್ಚಿನ ಆಸಕ್ತಿ ಇದ್ದವರಿಗೆ, ಅವಶ್ಯವಿದ್ದರೆ ಎರಡನೇ ಹಂತದಲ್ಲಿ ಸಾಕ್ಷರೋತ್ತರ ಕಾರ್ಯಕ್ರಮದ ಭಾಗವನ್ನಾಗಿ ಇರಿಸಿಕೊಳ್ಳಬಹುದಾಗಿದೆ.

ಹೀಗೆ ಬರೆವಣಿಗೆಯ ಕಲಿಕೆಯನ್ನು ಒತ್ತಾಯ ಪೂರ್ವಕವಾಗಿ ಸೇರಿಸುವುದನ್ನು ಕೈಬಿಟ್ಟರೆ ಅಪಾರ ಪ್ರಮಾಣದ ಶ್ರಮದ ಕಾಲ ಮತ್ತು ಹಣದ ಉಳಿತಾಯವಾಗುತ್ತದೆ. ವಯಸ್ಕ ಕಲಿಕೆಯ ಕಾರ್ಯಕ್ರಮಗಳ ಯಶಸ್ಸಿನ ಪ್ರಮಾಣವೂ ಹೆಚ್ಚಾಗುತ್ತದೆ.

ಬರೆಯಲು ಕಲಿಯದಿದ್ದ ಮೇಲೆ ಸಾಕ್ಷರತೆಯ ಗುರಿಯನ್ನು ಸಾಧಿಸಿದಂತೆ ಆಗಲಿಲ್ಲವೆಂದು ಕೊರಗುವುದು ಬೇಡ. ಸಾಕ್ಷರರೆಲ್ಲರೂ ಬರೆಯಲು ಕಲಿಯುವ ಅವಶ್ಯಕತೆ ಇಲ್ಲ. ಏಕೆಂದರೆ ಆ ಕೌಶಲ್ಯವನ್ನು ಅವರು ಬಳಸುವ ಸಂದರ್ಭಗಳು ಇಲ್ಲವೆನ್ನುವಷ್ಟು ಕಡಿಮೆ. ಈಗಾಗಲೇ ವಯಸ್ಕರಾಗಿರುವವರು ಈ ಬಳಸದ ಕೌಶಲ್ಯವನ್ನು ಕಲಿಯಲು ವೃಥಾ ಶ್ರಮವನ್ನು ವಹಿಸುವುದು ಅವಶ್ಯವೇ? ಆದ್ದರಿಂದ ವಯಸ್ಕ ಭಾಷಾ ಕಲಿಕೆಯಲ್ಲಿ ಬರೆವಣಿಗೆ ತರಬೇತಿಯನ್ನು ಎರಡನೆಯ ಹಂತಕ್ಕೆ ಮತ್ತು ಅವಶ್ಯವಿದ್ದವರಿಗೆ ಮಾತ್ರ ಸೀಮಿತಗೊಳಿಸುವುದು ಸೂಕ್ತ.

# ಭಾಷೆ ಮತ್ತು ದೈಹಿಕ ಚಹರೆಗಳು

ಈ ಲೋಕದಲ್ಲಿ ಒಬ್ಬರಂತೆ ಇನ್ನೊಬ್ಬರಿರುವುದು ಅಪರೂಪ. ಅವಳಿಗಳಲ್ಲೂ ಗುರುತಿಸಲು ಪ್ರಯತ್ನಿಸಿದರೆ ಕಾಣಸಿಗುವ ವ್ಯತ್ಯಾಸಗಳಿರುತ್ತವೆ. ಹೀಗೆ ಒಬ್ಬರಿಂದ ಇನ್ನೊಬ್ಬರು ಬೇರೆ ಎಂಬುದನ್ನು ಗುರುತಿಸಲು ಸಾಧ್ಯ. ವಯಸ್ಸು, ಲಿಂಗ, ಎತ್ತರ, ಚರ್ಮದ ಬಣ್ಣ, ಕೂದಲಿನ ಸ್ವರೂಪ, ಮುಖದ ಲಕ್ಷಣ ಇವೆಲ್ಲವೂ ಸಾಮಾನ್ಯವಾಗಿ ವ್ಯಕ್ತಿಗಳನ್ನು ಬೇರ್ಪಡಿಸಲು ನೆರವಾಗುವ ಅಂಶಗಳು. ಧ್ವನಿಯನ್ನು ಗಮನಿಸಿಯೂ ವ್ಯಕ್ತಿಗಳ ಭಿನ್ನತೆಯನ್ನು ನಾವು ಗುರುತಿಸುತ್ತೇವೆ. ಹೀಗೆ ಪ್ರತಿಯೊಬ್ಬರೂ ಇನ್ನೊಬ್ಬರಿಂದ ಹೇಗೆ ಭಿನ್ನವಾಗಿರುತ್ತಾರೆ ಎಂದು ಭೌತಿಕ ಚಹರೆಗಳ ನೆರವಿನಿಂದ ಕಂಡುಕೊಳ್ಳುತ್ತಿರುವಾಗಲೇ, ವ್ಯಕ್ತಿ ಸಮುದಾಯಗಳನ್ನು ವರ್ಗೀಕರಿಸುವುದಕ್ಕೂ ಯತ್ನಿಸುತ್ತೇವೆ. ಭೌತಿಕ ಚಹರೆಗಳನ್ನು ಬಳಸಿ ನಡೆಸುವ ವರ್ಗೀಕರಣದಲ್ಲಿ ಗಂಡು ಮತ್ತು ಹೆಣ್ಣು ಮಕ್ಕಳು, ವಯಸ್ಕರು ಮತ್ತು ವೃದ್ಧರು ಎಂಬ ಸಾಮಾನ್ಯ ನೆಲೆಗಳಿವೆ. ಜತೆಗೆ ಜನಾಂಗಗಳನ್ನಾಗಿ ವರ್ಗೀಕರಿಸುವ ವಿಧಾನವಿದೆ. ಭೌತಿಕ ಚಹರೆಗಳನ್ನು ಗಮನಿಸಿ ನೀಗ್ರೋಲಾಯ್ಡ್, ಮಂಗೋಲಿಯನ್, ಕಕೇಸಿಯನ್, ಆಸ್ಟ್ರೋಲಾಯ್ಡ್ ಎಂಬಂಥ ಜನಾಂಗಗಳನ್ನು ರೂಪಿಸಿಕೊಳ್ಳಲಾಗಿದೆ. ವ್ಯಕ್ತಿಗಳ ಅನನ್ಯತೆಯಾಗಲೀ, ಅವರು ಯಾವ ಜನಾಂಗಕ್ಕೆ ಸೇರಿದವರೆಂಬುದಾಗಲೀ, ಅವರು ಬಳಸುವ ಭಾಷೆಯನ್ನು ಪ್ರಭಾವಿಸುವುದೇ ಎಂಬುದು ಮುಂದಿನ ಪ್ರಶ್ನೆ. ಬೇರೆ ಬೇರೆ ಭಾಷೆಗಳ ನಡುವಣ ವ್ಯತ್ಯಾಸಕ್ಕೂ, ಅಥವಾ ಭಾಷೆಯೊಳಗೇ ಇರುವ ವಿಕಲ್ಪಗಳಿಗೂ, ವ್ಯಕ್ತಿಗಳ ಭೌತಿಕ ಲಕ್ಷಣ ಮತ್ತು ಜನಾಂಗ ಚಿಹ್ನೆಗಳಿಗೂ, ಏನಾದರೂ ಸಂಬಂಧವಿರಬಹುದೇ? ಈಗಾಗಲೇ ಭಾಷಾವಂಶಗಳನ್ನು ಜನಾಂಗಗಳೊಡನೆ ಜೋಡಿಸುವ ಪ್ರವೃತ್ತಿ ಬೆಳೆದಿದೆ. ಆರ್ಯಭಾಷೆಗಳು, ದ್ರಾವಿಡ ಭಾಷೆಗಳು, ಸೆಮೆಟಿಕ್ ಭಾಷೆಗಳು ಎನ್ನುವಾಗ ಈ ಅಂಶ ಸ್ಪಷ್ಟವಾಗಿದೆ. ಈ ಜೋಡಣೆ ಆಕಸ್ಮಿಕವಾಗಿರಬಹುದು ಅಥವಾ ಭೌತಿಕ ಚಹರೆಗಳನ್ನು ಅವಲಂಬಿಸಿದ ಈ ವರ್ಗೀಕರಣಕ್ಕೂ ಭಾಷೆಗಳಿಗೂ ಯಾವುದಾದರೊಂದು ಬಗೆಯ ಸಂಬಂಧವಿದ್ದಿರಲೂಬಹುದು.

## ದೈಹಿಕ ವಿವರ

ಎತ್ತರಕ್ಕೆ ದಪ್ಪಗಿರುವ ವ್ಯಕ್ತಿ ಕೀಚಲು ದನಿಯಿಂದ ಮಾತನಾಡಿಸಿದರೆ ನಮಗೆ ಆಶ್ಚರ್ಯವಾಗತ್ತದೆ. ಹಾಗೆಯೇ ಕೆಲವೊಮ್ಮೆ ವ್ಯಕ್ತಿಯ ಧ್ವನಿಯನ್ನು ಕೇಳಿದಾಗ ಅವರ ದೈಹಿಕ ವಿವರಗಳನ್ನು ಸ್ಥೂಲವಾಗಿ ಊಹಿಸಿರುತ್ತೇವೆ. ಏಕೆಂದರೆ ಮುಖತಃ ಆ ವ್ಯಕ್ತಿಯನ್ನು

ಕಂಡಾಗ, ಅವರ ಧ್ವನಿಯನ್ನು ಆಲಿಸಿ ಅವರ ದೈಹಿಕ ವಿವರಗಳನ್ನು ನಾವು ಊಹಿಸಿದ್ದು ತಪ್ಪಾಗಿಬಿಟ್ಟಿದ್ದರೆ ಆಗಲೂ ನಮಗೆ ಆಶ್ಚರ್ಯವಾಗುತ್ತದೆ. ಸ್ಥೂಲಕಾಯದ ವ್ಯಕ್ತಿ ಗಡಸುಧ್ವನಿಯಲ್ಲಿ ಮಾತನಾಡುವರೆಂದು, ಕೃಶಕಾಯದ ವ್ಯಕ್ತಿ ಪೀಚಲು ಇಲ್ಲವೇ ಕೀರಲು ಧ್ವನಿಯಲ್ಲಿ ಮಾತನಾಡುವರೆಂದು ಊಹಿಸುವುದು, ಕಲ್ಪಿಸಿಕೊಳ್ಳುವುದು ತಪ್ಪಲ್ಲವಾದರೂ ನಮ್ಮ ಊಹೆಗೆ ಸತಾರ್ಕಿಕ ಕಾರಣಗಳನ್ನು ನೀಡುವುದು ಕಷ್ಟ. ಧ್ವನಿಯ ಈ ಲಕ್ಷಣಗಳಿಗೂ ದೈಹಿಕ ಲಕ್ಷಣಗಳಿಗೂ ಇರಬಹುದಾದ ಸಂಬಂಧವನ್ನು ಹೊರತುಪಡಿಸಿದರೆ, ಭಾಷೆ ಮತ್ತದರ ಯಾವುದೇ ವಿಕಲ್ಪಕ್ಕೂ ದೇಹರಚನೆಗೂ ನೇರ ಸಂಬಂಧ ಇರುವುದು ಅಸಂಭವ.

ಉಚ್ಚಾರಣಾಂಗಗಳ ರಚನೆಯಲ್ಲಿ ಇರುವ ವ್ಯತ್ಯಾಸಗಳು ವ್ಯಕ್ತಿಗಳ ಇಲ್ಲವೇ ಜನಾಂಗಗಳ ಭಾಷೆಯನ್ನು ಪ್ರಭಾವಿಸಬಲ್ಲುದೆಂದು ತಿಳಿಯಲು ಯಾವ ಪುರಾವೆಗಳೂ ಇಲ್ಲ. ಉಂಟಾಗಬಹುದಾದ ಅಲ್ಪಸ್ವಲ್ಪ ವ್ಯತ್ಯಾಸವೂ ಗಣನೀಯವಲ್ಲ. ಬಹುಮಟ್ಟಿಗೆ ಎಲ್ಲರಲ್ಲೂ ಉಚ್ಚಾರಣಾಂಗಗಳ ಆಕಾರ ಮತ್ತು ಪ್ರಮಾಣ ಒಂದೇ ಸಮನಾಗಿರುತ್ತದೆ; ವ್ಯತ್ಯಾಸ ಅತ್ಯಲ್ಪ, ನಾಸಾಕುಹರ, ಆಸ್ಯಕುಹರ, ಗಂಟಲು ನಾಳ ಇತ್ಯಾದಿಗಳ ಆಕಾರದಲ್ಲಿ ಪರಿಗಣಿಸಬಹುದಾದ ವ್ಯತ್ಯಾಸಗಳಿರುವುದಿಲ್ಲ. ಆದರೆ ಕೆಲವು ಉಚ್ಚಾರಣಾಂಗಗಳ ಉದ್ದ, ಗಾತ್ರಗಳು ವ್ಯಕ್ತಿಯಿಂದ ವ್ಯಕ್ತಿಗೆ ಬದಲಾಗುತ್ತ ಹೋಗಬಹುದು. ಉದಾಗೆ ನಾಲಿಗೆಯ ಉದ್ದ. ಕೆಲವರಲ್ಲಿ ನಾಲಿಗೆ ಉದ್ದವಾಗಿದ್ದು ಒಳಕ್ಕೆ ಬಾಗಿಸಿದಾಗ ಕಿರುನಾಲಿಗೆಯನ್ನು ಮುಟ್ಟುವಂತಿರುತ್ತದೆ. ಮತ್ತೆ ಕೆಲವರಲ್ಲಿ ಕಠಿಣತಾಲನ್ನು ನಾಲಿಗೆಯ ತುದಿಯಿಂದ ಮುಟ್ಟುವುದು ಕಷ್ಟ. ಅಂಗಳು ಕೆಲವರಲ್ಲಿ ಬಾಗಿ ಎತ್ತರದಲ್ಲಿದ್ದರೆ ಮತ್ತೆ ಕೆಲವರಲ್ಲಿ ಆ ಎತ್ತರ ಕಡಿಮೆ ಇರುತ್ತದೆ. ಮೇಲ್ದಂತ ಸಾಲಿನ ಹಿಂಬದಿಯ ಬಾಗುವಿಕೆ ಕೂಡ ಬೇರೆ ಬೇರೆ ರೀತಿ ಇರುವುದು ಸಾಧ್ಯ. ಇಷ್ಟೆಲ್ಲ ವ್ಯತ್ಯಾಸಗಳಿದ್ದರೂ, ಈ ವ್ಯತ್ಯಾಸಗಳು ಮಾತನಾಡುವ ಕ್ರಮವನ್ನು ಪ್ರಭಾವಿಸಲಾರವು; ಅಂದರೆ ಭಾಷೆಯ ವಿಕಲ್ಪಗಳಿಗೆ ಕಾರಣಗಳಾಗಲಾರವು. ಅಷ್ಟೇ ಅಲ್ಲ. ವ್ಯಕ್ತಿಯು ಮಾತನಾಡುವುದನ್ನು ಕಲಿಯುವಾಗಾಗಲೀ ಅಥವಾ ಕಲಿತು ಮುಂದೆ ಮಾತಾಡುವಾಗಾಗಲೀ ಮೇಲೆ ಹೇಳಿದ ಏರುಪೇರುಗಳು ಯಾವ ಗಣನೀಯ ಪ್ರಭಾವವನ್ನೂ ಬೀರಲಾರವು.

ವ್ಯಕ್ತಿ ವ್ಯಕ್ತಿಗಳ ಉಚ್ಚಾರಣಾಂಗಗಳಲ್ಲಿ ಇರುವ ವ್ಯತ್ಯಾಸಗಳು ಮಾತಿನ ಲಕ್ಷಣವನ್ನು ಪ್ರಭಾವಿಸಲಾರವು ಎಂದು ತಿಳಿದೆವು. ಜನಾಂಗಗಳನ್ನು ಕಲ್ಪಿಸುವಾಗ ದೈಹಿಕ ರಚನೆಯ ಕೆಲವು ಸಮಾನ ಲಕ್ಷಣಗಳನ್ನು ವರ್ಗೀಕರಣಕ್ಕೆ ಆಧಾರವಾಗಿರಿಸಿಕೊಳ್ಳಲಾಗುವುದಷ್ಟೆ. ಈ ಸಮಾನಲಕ್ಷಣಗಳು ಆಯಾ ಜನಾಂಗದ ಭಾಷಾಸ್ವರೂಪದ ವೈಶಿಷ್ಟ್ಯಗಳನ್ನು ನಿರ್ಧರಿಸಬಹುದೇ? ಈ ನಿಟ್ಟಿನಲ್ಲಿ ಯಾವ ಖಚಿತ ನಿರ್ಣಯವೂ ಸಾಧ್ಯವಿಲ್ಲ. ಆದರೂ ಲಭ್ಯ ಮಾಹಿತಿಯನ್ನು ಆಧರಿಸಿ ಜನಾಂಗದ ಸಮಾನ ದೈಹಿಕ ಲಕ್ಷಣಗಳು, ಅದರಲ್ಲೂ ಉಚ್ಚಾರಣಾಂಗಗಳಿಗೆ ಸಂಬಂಧಿಸಿದ ಸಮಾನಾಂಶಗಳು ಅವರು ಮಾತಾಡುವ ವಿಧಾನವನ್ನು, ಭಾಷಾಬಳಕೆಯ ಸ್ವರೂಪವನ್ನು ಹೆಚ್ಚು ಪ್ರಭಾವಿಸುವುದಿಲ್ಲವೆಂದು ಅಧ್ಯಯನಕಾರರು ತಿಳಿಯುತ್ತಾರೆ. ಬ್ರೊಸ್ನಹನ್. ಎಫ್ (1961) ಎಂಬುವವರು ನಡೆಸಿದ

ಒಂದು ಅಧ್ಯಯನದ ವಿವರಗಳು ಕುತೂಹಲಕಾರಿಯಾಗಿವೆ. ಒಂದು ಜನಾಂಗದ ಸದಸ್ಯರ ಉಚ್ಚಾರಣಾಂಗಗಳ ಲಕ್ಷಣಗಳು ಇನ್ನೊಂದು ಜನಾಂಗದ ಸದಸ್ಯರ ಉಚ್ಚಾರಣಾಂಗಗಳ ಲಕ್ಷಣಕ್ಕಿಂತ ಭಿನ್ನವಷ್ಟೆ. ಈ ಅಧ್ಯಯನದಲ್ಲಿ ನಾಲಿಗೆಯ ಉದ್ದವನ್ನೂ ಆಧಾರವಾಗಿರಿಸಿ ಕೊಳ್ಳಲಾಯಿತು. ಜಪಾನೀಯರು, ಮಲೇಶಿಯನ್ನರು ಮತ್ತು ಕಪ್ಪು ಜನರನ್ನು ಈ ಅಧ್ಯಯನದ ವ್ಯಾಪ್ತಿಗೆ ತರಲಾಗಿದೆ. ಕಪ್ಪುಜನರಿಗೆ ನಾಲಗೆ ಉದ್ದ(ಸರಾಸರಿ 97 ಮಿ.ಮಿ. (ಕನಿಷ್ಠ ಮತ್ತು ಗರಿಷ್ಠ ಉದ್ದ 73–113ಮಿ.ಮಿ) ಮಲೇಶಿಯನ್ನರ ನಾಲಿಗೆ ಸರಾಸರಿ ಉದ್ದ 84 ಮಿ.ಮಿ (ಕನಿಷ್ಠ ಮತ್ತು ಗರಿಷ್ಠ ಉದ್ದ 70–110 ಮಿ.ಮಿ) ಮತ್ತು ಜಪಾನೀಯರ ನಾಲಿಗೆಯ ಸರಾಸರಿ ಉದ್ದ 73 ಮಿ.ಮಿ(ಕನಿಷ್ಠ ಮತ್ತು ಗರಿಷ್ಠ ಉದ್ದ 55–90ಮಿ.ಮಿ) ಈ ಉದ್ದ ಇತರರಿಗಿಂತ ಕಡಿಮೆಯಾಗಿರುವುದರಿಂದ ಅವರು ಆಡುಮಾತನ್ನು ಕಲಿಯಲು ಕಷ್ಟಪಡುತ್ತಾರೆ, ತಡವಾಗಿ ಕಲಿಯುತ್ತಾರೆ ಎನ್ನಲು ಸಾಧ್ಯವೆ? ಇಂಥ ಯಾವ ನಿರ್ಧಾರವೂ ಸಾಧ್ಯವಿಲ್ಲ. ಏಕೆಂದರೆ ಯಾವುದೇ ಎರಡು ಸಂಗತಿಗಳಿಗೆ ಕಾರ್ಯ–ಕಾರಣ ಸಂಬಂಧವನ್ನು ಕಲ್ಪಿಸಲು ಅವಶ್ಯವಿರುವಷ್ಟು ಬಲವಾದ ಆಧಾರ ಇಲ್ಲಿ ದೊರಕುವುದಿಲ್ಲ.

ಹುಟ್ಟಿನಿಂದಲೇ ನಿರ್ಧಾರಗೊಳ್ಳುವ ಜನಾಂಗವಿಶಿಷ್ಟ ದೈಹಿಕ ಲಕ್ಷಣಗಳನ್ನು ಆಯಾ ಜನಾಂಗದ ಭಾಷಾಸ್ವರೂಪವನ್ನು, ಅದರಲ್ಲೂ ಆ ಭಾಷೆಯ ಆಡುರೂಪವನ್ನು ಹೇಗೆ ಪ್ರಭಾವಿಸಬಲ್ಲವೆಂಬುದನ್ನು ತಿಳಿಯುವುದು ಕಷ್ಟ. ಇಂಥ ಅಧ್ಯಯನಗಳು ಹೆಚ್ಚು ನಡೆದಿಲ್ಲ. ಅಂಥದೊಂದು ಪ್ರಭಾವ ಸಾಧ್ಯವೆಂಬ ಆಧಾರ ಕಲ್ಪನೆಯೊಡನೆ ಅಧ್ಯಯನವನ್ನು ಮೊದಲು ಮಾಡುವುದು ಅಶಕ್ಯ. ಏಕೆಂದರೆ ಗಣನೆಗೆ ದೊರಕುವ ಮಾಹಿತಿಯು ಅಂಥದೊಂದು ಆಧಾರಕಲ್ಪನೆಗೆ ಅವಕಾಶ ನೀಡುವುದಿಲ್ಲ. ಅಲ್ಲದೆ ಒಂದು ಜನಾಂಗದ ಸದಸ್ಯರು ತಮ್ಮ ಉಚ್ಚಾರಣಾಂಗಗಳಲ್ಲಿ, ಅನ್ಯ ಜನಾಂಗದೊಡನೆ ಹೋಲಿಸಿದಾಗ ಇರಬಹುದಾದ 'ಕೊರತೆ'ಯನ್ನು ಬೇರೊಂದು ರೀತಿಯಲ್ಲಿ ನಿವಾರಿಸಿಕೊಳ್ಳುತ್ತಿರಲೂಬಹುದು; ಉಚ್ಚಾರಣಾಂಗವನ್ನು ಯೋಜಿತವಾಗಿ ಬಳಸುವುದು ಇಂಥ ನಿವಾರಣೋಪಾಯಗಳಲ್ಲಿ ಇನ್ನೊಂದು.

ಒಂದು ಜನಾಂಗದ ವಿಶಿಷ್ಟದೈಹಿಕ ಲಕ್ಷಣಗಳನ್ನು ಹೊಂದಿರುವ ವ್ಯಕ್ತಿಯು ಇನ್ನೊಂದು ಜನಾಂಗದ ಭಾಷೆಯನ್ನು ಕಲಿತಾಗ ಏನಾಗಬಹುದು? ಉಚ್ಚಾರಣಾಂಗಗಳ ವೈಶಿಷ್ಟ್ಯವು ಮಾತಾಡುವ ಕ್ರಮವನ್ನು ಪ್ರಭಾವಿಸುವುದು ನಿಜವಾಗಿದ್ದರೆ ಇನ್ನೊಂದು ಜನಾಂಗದ ಭಾಷೆಯನ್ನು ಉಚ್ಚರಿಸುವಾಗ ಕೆಲವು ಏರುಪೇರುಗಳನ್ನು ನಿರೀಕ್ಷಿಸಬೇಕಾಗುತ್ತದೆ. ಮೇಲುನೋಟಕ್ಕೆ ಇದು ನಿಜವೆನಿಸುತ್ತದೆ. ಏಕೆಂದರೆ ನಮ್ಮದಲ್ಲದ ಭಾಷೆಯನ್ನು ನಾವು ನಮ್ಮ ಭಾಷೆಗೆ ಸಹಜವಾದ 'ಕಾಕು' ಬಳಸಿ ಉಚ್ಚರಿಸುತ್ತೇವೆ. ಇಂಗ್ಲಿಶ್‌ಗೆ ಸಹಜವಾದ ಘಾತ ಕನ್ನಡಿಗರ ಇಂಗ್ಲಿಶ್ ಉಚ್ಚಾರಣೆಯಲ್ಲಿ ಇರುವುದಿಲ್ಲ. ಕೆಲವೊಮ್ಮೆ ಒಂದು ಭಾಷೆಯನ್ನು ಉಚ್ಚರಿಸುವ ವ್ಯಕ್ತಿಯ ಮೂಲಭಾಷೆ ಅಥವಾ ಮೊದಲ ಭಾಷೆ ಯಾವುದೆಂದು ನಾವು ಸರಿಯಾಗಿಯೇ ಊಹಿಸಿರುತ್ತೇವೆ. ಆದರೆ ಈ ವಿವರಗಳಿಂದ ಸಮಸ್ಯೆ ಪರಿಹಾರವಾಗಿಲ್ಲ. ಇನ್ನೊಂದು ಭಾಷೆಯನ್ನು ಉಚ್ಚರಿಸುವಾಗ

ಉಂಟಾಗುವ ಏರುಪೇರುಗಳಿಗೆ ನಮ್ಮ ಭಾಷೆಯ ಲಕ್ಷಣಗಳು ಮುಖ್ಯ ಕಾರಣವೇ ಹೊರತು ನಮ್ಮ ಉಚ್ಚಾರಣಾಂಗಗಳ ರಚನೆಯಲ್ಲಿರುವ ಜನಾಂಗವಿಶಿಷ್ಟ ಲಕ್ಷಣಗಳಲ್ಲ. ಈ ಮಾತನ್ನು ಸಮರ್ಥಿಸಲು ಸಾಕಷ್ಟು ಪುರಾವೆಗಳಿವೆ. ಯತ್ನಶೀಲರಾದರೆ ವ್ಯಕ್ತಿಗಳು ಇನ್ನೊಂದು ಭಾಷೆಯನ್ನು ಆ ಭಾಷೆಯನ್ನಾಡುವವರಷ್ಟೇ ಸಹಜವಾಗಿ ಉಚ್ಚರಿಸಲು ಸಾಧ್ಯವಿದೆ. ಲಂಡನ್ನಿನ ಬಸ್ಸಿನಲ್ಲಿ ಪ್ರಯಾಣ ಮಾಡುವಾಗ ಹಿಂದೆ ನಿಂತ ನಿರ್ವಾಹಕರ ಭಾಷಾಬಳಕೆಯನ್ನು ಗಮನಿಸಿ ಕೇಳಿ ಆ ವ್ಯಕ್ತಿ ದಕ್ಷಿಣ ಲಂಡನ್ನಿನ ಮೂಲ ನಿವಾಸಿ ಎಂದುಕೊಂಡು ಹಿಂದಿರುಗಿ ನೋಡಿದಾಗ ನಮ್ಮ ಕಣ್ಣಿಗೆ ವೆಸ್ಟ್ ಇಂಡೀಸ್ ಇಲ್ಲವೇ ಆಫ್ರಿಕಾದಿಂದ ಬಂದ ವಲಸೆಗಾರ ನಿರ್ವಾಹಕರು ಕಂಡಾರು. ಅಂದರೇನಾಯ್ತು? ಪ್ರಯತ್ನಪಟ್ಟು ನಮ್ಮದಲ್ಲದ ಭಾಷೆಯನ್ನು ಮೂಲಭಾಷಿಕರಿಗೆ ಸರಿಸಾಟಿಯಾಗುವಂತೆ ಕಲಿಯಬಹುದು. ಆದ್ದರಿಂದ ನಮ್ಮ ಉಚ್ಚಾರಣಾಂಗಗಳ ಲಕ್ಷಣ ನಮ್ಮ ಉಚ್ಚಾರಣೆಯ ಸ್ವರೂಪವನ್ನು ನಿಯಂತ್ರಿಸಲಾರದು. ಅಷ್ಟಿಷ್ಟು ಮೇಲುನೋಟದ ವ್ಯತ್ಯಾಸಗಳನ್ನು ಮರೆತರೆ ಲೋಕದಲ್ಲಿರುವವರೆಲ್ಲರ ಧ್ವನ್ಯಂಗಗಳ ರಚನೆ ಒಂದೇ ರೀತಿಯಲ್ಲಿರುತ್ತದೆ. ಇರುವ ವ್ಯತ್ಯಾಸಗಳನ್ನೂ ಮೂಲರೂಪದ ಒಂದು ವಿಕಲ್ಪವೆಂದೇ ಪರಿಗಣಿಸಲು ಸಾಧ್ಯ. ಧ್ವನಿಶಾಸ್ತ್ರದ ಪರಿಕಲ್ಪನೆಗಳು, ಅಧ್ಯಯನ ವಿಧಾನಗಳು ಮಾನವರೆಲ್ಲರಿಗೂ ಸಮಾನವಾದ ಲಕ್ಷಣಗಳುಳ್ಳ ಧ್ವನ್ಯಂಗಗಳಿರುತ್ತವೆಂಬ ಪೂರ್ವಕಲ್ಪನೆಯನ್ನು ಆಧರಿಸಿವೆ. ಧ್ವನಿಗಳ ಉಚ್ಚಾರಣಾ ಸ್ವರೂಪ, ಧ್ವನಿಗಳ ಇತರ ಲಕ್ಷಣಗಳನ್ನು ವಿವರಿಸುವಾಗ ಧ್ವನಿಶಾಸ್ತ್ರಜ್ಞರು ಈ ಆದರ್ಶ ಧ್ವನ್ಯಂಗ ರಚನೆಯನ್ನೇ ಗಮನದಲ್ಲಿರಿಸಿಕೊಂಡಿರುತ್ತಾರೆ. ಧ್ವನ್ಯಂಗಗಳ ನೆರವಿನಿಂದ ಮಾನವರು ಅಸಂಖ್ಯಾತ ಧ್ವನಿಗಳನ್ನು ಹೊರಡಿಸಬಲ್ಲರು. ಅವುಗಳಲ್ಲಿ ಅಲ್ಪಪ್ರಮಾಣದ ಧ್ವನಿಗಳು ಮಾತ್ರ ಭಾಷೆಯಲ್ಲಿ ಉಪಯೋಗಕ್ಕೆ ಬರುತ್ತವೆ. ಮಾನವರ ಧ್ವನ್ಯಂಗಗಳ ಧ್ವನಿ ಉತ್ಪಾದನೆಯ ಸಾಮರ್ಥ್ಯದ ಆಳ ಹರವುಗಳು ನಮಗಿನ್ನೂ ತಿಳಿದಿಲ್ಲ. ಪೋಲಿಶ್ ಭಾಷಾಶಾಸ್ತ್ರಜ್ಞ ಯಾನ್ ಬಾವ್ದೊರ್ ಯಿನ್‌ದ ಕೊರ್ತ್ನೆ (1845–1929)ಯವರು ಮಾನವಧ್ವನಿಶಾಸ್ತ್ರವೆಂಬ ವಿಶೇಷ ಅಧ್ಯಯನ ಶಾಖೆಯನ್ನೇ ರೂಪಿಸಿದರು. ಈ ಶಾಖೆಯಲ್ಲಿ ಮನುಷ್ಯರಿಗೆ ಉತ್ಪಾದಿಸಲು ಸಾಧ್ಯವಿರುವ ಧ್ವನಿಗಳ ಲಕ್ಷಣಗಳನ್ನು ಅಭ್ಯಾಸಮಾಡಲಾಗುವುದು.

### ದೈಹಿಕ ಸ್ಥಿತಿ

ನೆಗಡಿಯಾದಾಗ, ಗಂಟಲು ಕಟ್ಟಿದ್ದಾಗ ನಮ್ಮ ಧ್ವನಿಯಲ್ಲಿ ವ್ಯತ್ಯಾಸವಾಗುತ್ತವೆ. ಮಾತಿನ ರೀತಿಯಲ್ಲಿ ಗುರುತಿಸಬಹುದಾದಷ್ಟು ಬದಲಾವಣೆಗಳಾಗುತ್ತವೆ. ಹೀಗೇ ಆಯಾಸವಾದಾಗ, ಉದ್ವೇಗಕ್ಕೆ ಒಳಗಾದಾಗ ನಮ್ಮ ದೈಹಿಕ ಸ್ಥಿತಿಯಲ್ಲಾಗುವ ವ್ಯತ್ಯಾಸಗಳು ಮಾತನ್ನು ಪ್ರಭಾವಿಸುತ್ತವೆ. ಆದ್ದರಿಂದ ದೈಹಿಕ ಸ್ಥಿತಿಗಳು ನಾವು ಮಾತಾಡುವ ಸ್ಥಿತಿಯನ್ನು ಪ್ರಭಾವಿಸುವುದು ನಿಜವೆಂದಾಯ್ತು. ಮೇಲೆ ವಿವರಿಸಿದ ದೈಹಿಕ ಸ್ಥಿತಿಪಲ್ಲಟಗಳು ತಾತ್ಕಾಲಿಕವಾದವು; ಆಕಸ್ಮಿಕವೂ ಆಗಿರಬಹುದು. ಆದರೆ ನಿರಂತರವಾಗಿ ದೈಹಿಕ ಸ್ಥಿತಿಯಲ್ಲಿ ಆಗುವ ಪಲ್ಲಟಗಳೂ ಕೆಲವಿರುತ್ತದೆ. ಸದಾ ಮೂಗಿನಲ್ಲಿ ಮಾತಾಡುವವರನ್ನು ನಾವು ನೋಡಿದ್ದೇವೆ; ಅಥವಾ ಕೆಲವರು ಮಾತಾಡುವ ಬಗೆಯನ್ನು ನಾವು ಹಾಗೆ ವಿವರಿಸುತ್ತೇವೆ. ಇದಕ್ಕೆ ಸಾಮಾನ್ಯವಾಗಿ ಒಂದು ದೈಹಿಕ ನ್ಯೂನತೆಯೇ ಕಾರಣ. ಕಿರುನಾಲಿಗೆಯ

ಉದ್ದ ಕಡಿಮೆ ಇದ್ದರೆ ಅದು ಗಲಕುಹರದ ಗೋಡೆಯನ್ನು ತಾಕಲಾರದು. ಆಗ ಗಂಟಲಿನಿಂದ ಹೊರ ಬಂದ ಗಾಳಿಯು ಮೂಗಿನಲ್ಲಿ ಹೋಗದಂತೆ ತಡೆಯುವುದು ಸಾಧ್ಯವಾಗದು. ಮಾತಾಡುವಾಗಲೆಲ್ಲ ಗಾಳಿಯು ಮೂಗಿನಲ್ಲಿ ಹಾಯ್ದುಹೋಗುತ್ತದೆ. ಧ್ವನಿಗೆ ಒಂದು ವಿಶಿಷ್ಟ ಲಕ್ಷಣ ಇದರಿಂದ ಒದಗುತ್ತದೆ. ಹಲ್ಲುಗಳು ಕಳಚಿಬಿದ್ದಾಗ, ಹಲ್ಲುಸಾಲು ಉಬ್ಬಿ ಮುಂದೆ ಬಂದಾಗ ಹೀಗೆ ಧ್ವನಿಯ ಸ್ವರೂಪದಲ್ಲಿ ವ್ಯತ್ಯಾಸಗಳಾಗುತ್ತವೆ. ದೇಹ ರಚನೆಯ ಈ ನ್ಯೂನತೆಗಳು ಕೇವಲ ಉಚ್ಚಾರಣೆಯನ್ನು ಮಾತ್ರವಲ್ಲ, ಭಾಷಾಗ್ರಹಿಕೆ, ಶ್ರವಣ, ಬರೆವಣಿಗೆ ಮುಂತಾದ ಇನ್ನಿತರ ಚಟುವಟಿಕೆಗಳನ್ನೂ ಪ್ರಭಾವಿಸಬಲ್ಲವು. ಇಂಥ ನ್ಯೂನತೆಗಳಿಗೂ ಅವು ಉಂಟುಮಾಡುವ ಉಚ್ಚಾರಣಾ ವ್ಯತ್ಯಾಸಗಳಿಗೂ ಖಚಿತವಾದ ಸಂಬಂಧವಿರುತ್ತದೆ. ಎಷ್ಟೋ ವೇಳೆ ಧ್ವನಿಗಳನ್ನು ಕೇಳಿಯೇ ನಾವು ಆ ಧ್ವನಿಗಳನ್ನು ಉಚ್ಚರಿಸಿದ ವ್ಯಕ್ತಿಯ ದೈಹಿಕ ನ್ಯೂನತೆಗಳನ್ನು ಸಾಕಷ್ಟು ಖಚಿತವಾಗಿ ಊಹಿಸಬಹುದು. ಭಾಷೆಯ ಪ್ರತಿಯೊಂದು ಘಟಕವೂ ಹೀಗೆ ಒಂದಿಲ್ಲೊಂದು ಬಗೆಯಲ್ಲಿ ದೈಹಿಕ ಸ್ಥಿತಿಯ ವ್ಯತ್ಯಯದಿಂದ ಪ್ರಭಾವಿತವಾಗುತ್ತವೆ.

**ವಯಸ್ಸು**

ದನಿಯನ್ನು ಕೇಳಿ ನಾವು ಆ ದನಿ ಮಗುವಿನದೋ, ಹುಡುಗನದೋ, ಹುಡುಗಿಯದೋ, ಗಂಡಸಿನದೋ, ಹೆಂಗಸಿನದೋ, ವಯಸ್ಸಾದವರದೋ ಎಂಬುದನ್ನು ಸಾಕಷ್ಟು ಕರಾರುವಾಕ್ಕಾಗಿ ಹೇಳಲು ಸಾಧ್ಯ. ನಿರ್ದಿಷ್ಟ ವಯೋವಾನಕ್ಕೂ ದನಿಗೂ ಸಂಬಂಧವಿದೆಯೆಂದು ತಿಳಿಯಲು ಅಡ್ಡಿಯಿಲ್ಲ. ಆದರೆ ಭಾಷೆಯು ಇಡಿಯಾಗಿ ವಯಸ್ಸಾಗುತ್ತ ಹೋದಂತೆ ಹೇಗೆ ಬದಲಾಗುತ್ತದೆ ಎಂಬುದು ಇನ್ನೂ ಸ್ಪಷ್ಟವಾಗಿಲ್ಲ. ನಮ್ಮ ವಿವಿಧ ಭಾಷಾಸಾಮರ್ಥ್ಯಗಳಿಗೂ ನಮ್ಮ ವಯಸ್ಸಿಗೂ ಸಂಬಂಧವಿರಬಹುದೇ? ಅಂಥ ಸಂಬಂಧವಿದ್ದರೆ ಅದರ ಸ್ವರೂಪವೇನು? ಈ ಪ್ರಶ್ನೆಗಳಿಗೆ ಉತ್ತರಗಳು ಇನ್ನೂ ದೊರಕಿಲ್ಲ.

ಮಗು ಹೇಗೆ ಭಾಷೆಯನ್ನು ಕಲಿಯುತ್ತದೆ, ವಿವಿಧ ಭಾಷಾಸಾಮರ್ಥ್ಯಗಳನ್ನು ಹೇಗೆ ಪಡೆದುಕೊಳ್ಳುತ್ತದೆ ಎಂಬುದನ್ನು ತಿಳಿಯಲು ಸಾಕಷ್ಟು ಅಧ್ಯಯನಗಳು ನಡೆದಿವೆ. ಇದರಿಂದಾಗಿ ಮಗುವಿನ ವಿವಿಧ ವಯೋಮಾನಗಳಿಗೂ ಅದು ಬಳಸುವ ಭಾಷೆಗೂ ಇರುವ ಸಂಬಂಧಗಳ ಸ್ವರೂಪ ನಮಗೆ ಗೊತ್ತಾಗುವಂತಿದೆ. ವ್ಯವಸ್ಥಿತ ಅಧ್ಯಯನಗಳು ಮಾತ್ರವಲ್ಲದೆ ಮಗುವಿನ ಭಾಷಾಬೆಳವಣಿಗೆಯಲ್ಲಿ ಆಸಕ್ತರಾದ ಹಲವರು ಉಪಯುಕ್ತ ಕ್ಷೇತ್ರಮಾಹಿತಿಯನ್ನು ದಾಖಲಿಸಿದ್ದಾರೆ. ಇದರಿಂದಾಗಿಯೂ ಮಗುವಿನ ವಯೋಮಾನ ಮತ್ತು ಭಾಷಾಸಾಮರ್ಥ್ಯಗಳ ಸಂಬಂಧವನ್ನು ತಿಳಿಯಲು ಅವಕಾಶಗಳಿವೆ.

ದೊಡ್ಡವರಾಗುತ್ತ ಹೋದಂತೆ ವಯಸ್ಸು, ವ್ಯಕ್ತಿಗಳ ಭಾಷೆಯನ್ನು ಹೇಗೆ ನಿಯಂತ್ರಿಸುತ್ತದೆಂಬುದು ಇನ್ನೂ ಖಚಿತವಾಗಿ ಗೊತ್ತಾಗಿಲ್ಲ. ದನಿಯಗುಣ, ಪದಕೋಶ, ಮಾತಾಡುವ ರೀತಿ ಇವೆಲ್ಲವೂ ವಯಸ್ಸಿನೊಂದಿಗೆ ಬದಲಾಗುತ್ತಾ ಹೋಗುತ್ತದೆ. ಇದನ್ನು ನಮ್ಮ ದೈನಂದಿನ ಅನುಭವಗಳಿಂದಲೇ ಗ್ರಹಿಸಬಹುದು. ಆದರೆ ವಯೋಮಾನವು ಈ ಎಲ್ಲ ಭಾಷಾಸಾಮರ್ಥ್ಯಗಳನ್ನು ಪ್ರಭಾವಿಸುವ ರೀತಿ, ಪ್ರಮಾಣ,

ಗತಿ ಇತ್ಯಾದಿಗಳು ತಿಳಿದಿಲ್ಲ. ಈ ದಿಕ್ಕಿನಲ್ಲಿ ನಡೆದಿರುವ ಅಧ್ಯಯನಗಳೂ ಕಡಿಮೆ. ವಯೋವೃದ್ಧರು ಮಾತಾಡುವ ಬಗೆ, ಮಾತಾಡಿದ್ದನ್ನು ಗ್ರಹಿಸಿಕೊಳ್ಳುವ ರೀತಿ ಇವೆಲ್ಲವೂ ವಯೋಮಾನದಿಂದ ಪ್ರಭಾವಿತವಾಗುವುದನ್ನು ಅಧ್ಯಯನ ಮಾಡಬೇಕಾಗಿದೆ.

ಧ್ವನ್ಯಂಗಗಳ ಸಾಮರ್ಥ್ಯದಲ್ಲಾಗುವ ಕ್ಷೀಣತೆಯು ಮಾತಾಡುವ ಬಗೆಯನ್ನು ಪ್ರಭಾವಿಸುತ್ತದೆ. ಎದೆಯ ಸ್ನಾಯುಗಳು ಬಲಗುಂದುತ್ತದೆ. ಶ್ವಾಸಕೋಶಗಳ ಸ್ಥಿತಿಸ್ಥಾಪಕತ್ವ ಕಡಿಮೆಯಾಗುತ್ತದೆ. ಕಿಬ್ಬದಿಯ ಕೀಲುಗಳು ಪೆಡಸಾಗುತ್ತದೆ. ಇದರಿಂದಾಗಿ ಸುಮಾರು 75ವರ್ಷ ವಯಸ್ಸಾಗುವ ವೇಳೆಗೆ ಉಸಿರಾಡುವ ಸಾಮರ್ಥ್ಯವು 30ನೇ ವಯಸ್ಸಿನಲ್ಲಿ ಇದ್ದುದಕ್ಕಿಂತ ಬಹಳ ಕಡಿಮೆಯಾಗಿ ಸುಮಾರು ಅರ್ಧಪ್ರಮಾಣದಲ್ಲಿರುತ್ತದೆ. ಇದರಿಂದಾಗಿ ವೃದ್ಧರಿಗೆ ಗಟ್ಟಿಯಾಗಿ ಮಾತಾಡುವುದು ಕಷ್ಟವಾಗುತ್ತದೆ;ಮಾತಿನ ಲಯ ಒಂದೇ ರೀತಿಯಲ್ಲಿ ಇರದು, ದನಿ ಕೂಡ ಕುಗ್ಗುತ್ತದೆ. ಗಂಟಲು ನಾಳದ ಮಣಿಗಳು, ಪದರುಗಳು, ಕೀಲುಗಳು, ಸ್ನಾಯುಗಳು ಬಲಹೀನವಾಗುತ್ತವೆ. ಗಂಡಸರಲ್ಲಿ ಈ ಬಲಹೀನತೆಯ ಪ್ರಮಾಣ ಹೆಚ್ಚು. ಹೀಗಾದಾಗ ದನಿ ನಡುಗತೊಡಗುತ್ತದೆ. ದೂರಕ್ಕೆ ದನಿ ಕೇಳಿಸದು. ಮಾತಾಡುವಾಗಲೇ ಏದುಸಿರು ಬರ ತೊಡಗುತ್ತದೆ. ಮುಖದಲ್ಲಿ ಕೆಳದವಡೆಯ ಚಲನೆಯ ವೇಗ ಕುಗ್ಗುತ್ತದೆ. ಇದರಿಂದಾಗಿ ನಾಲಿಗೆಯನ್ನು ಅಂಗಳಿನವರೆಗೆ ಒಯ್ಯುವ ವೇಗವೂ ಕಡಿಮೆಯಾಗುತ್ತದೆ. ಇವೆಲ್ಲ ಅಂಶಗಳು ವೃದ್ಧರ ಮಾತಿನ ಬಗೆಯನ್ನು ನಿಯಂತ್ರಿಸುತ್ತವೆ.

ಇವೆಲ್ಲದರ ಜತೆಗೆ ವಯೋಮಾನ ಹೆಚ್ಚಿದಂತೆ ಮಾತಿನ ವೇಗ ಕಡಿಮೆಯಾಗುತ್ತದೆ. ಓಘದಲ್ಲೂ ಏರುಪೇರುಗಳಾಗುತ್ತವೆ. ಕಿವಿ ಮಂದವಾಗುತ್ತದೆ. ಅದರಿಂದ ಕೇಳಿಸಿಕೊಳ್ಳುವುದು ತ್ರಾಸದಾಯಕವಾಗುವುದು. ಸಹಜವಾಗಿಯೇ ಗ್ರಹಿಕೆ ತಡವಾಗುತ್ತದೆ. ಇಲ್ಲವೇ ಸರಿಯಾಗಿ ಗ್ರಹಿಕೆ ಆಗುವುದಿಲ್ಲ. ನೆನಪಿನ ಶಕ್ತಿ ಕುಗ್ಗುವುದು. ಗಮನವನ್ನು ಕೇಂದ್ರೀಕರಿಸುವ ಸಾಮರ್ಥ್ಯ ಕಡಿಮೆಯಾಗುತ್ತದೆ. ಇದರಿಂದ ಮಾತಾಡಿದ್ದನ್ನು ಅರ್ಥಮಾಡಿಕೊಳ್ಳಲು ವೃದ್ಧರಿಗೆ ಕಷ್ಟ. ತಡಕಾಡುತ್ತಾರೆ. ಸಂಕೀರ್ಣವಾದ ರಚನೆಗಳನ್ನು ಕೇಳಿದಾಗ ಸಂವಹನವೇ ಕುಸಿಯಬಹುದು.

ಹೀಗಿದ್ದರೂ ಎದೆಗುಂದಬೇಕಾಗಿಲ್ಲ. ಏಕೆಂದರೆ ವೃದ್ಧರು ಈ ಎಲ್ಲ ಕೊರತೆಗಳನ್ನು ಮೀರುವಂತೆ ಇತರ ಭಾಷಾಸಾಮರ್ಥ್ಯಗಳನ್ನು ಬಳಸಬಲ್ಲರು. ಪದಕೋಶದ ಸಮೃದ್ಧತೆ, ನಿರೂಪಣೆಯ ವಿವಿಧ ತಂತ್ರಗಳು ಅವರಲ್ಲಿರುವುದರಿಂದ ಸಹಜ ಮಾತುಕತೆಗಳಿಗೆ ಅಡ್ಡಿಯಾಗದು. ಅಲ್ಲದೆ ವ್ಯಾಕರಣಕ್ಕೆ ಯಾವ ಧಕ್ಕೆಯೂ ಉಂಟಾಗುವುದಿಲ್ಲ ಎಂಬುದನ್ನು ಗಮನಿಸಬೇಕು.

ಅಜ್ಜಿಯರು ಮೊಮ್ಮಕ್ಕಳಿಗೆ ದೀರ್ಘಕತೆಗಳನ್ನು ಹೇಳುವುದು; ನೆನಪಿನ ಬುತ್ತಿಯಿಂದ ಸಂಗತಿಗಳನ್ನು ಹೆಕ್ಕಿ ಹೆಕ್ಕಿ ಹೇಳುವುದು; ದೊಡ್ಡ ದೊಡ್ಡ ಪದ್ಯ ಕಥಾನಕಗಳನ್ನು ನೆನಪಿನಿಂದ ನಿರೂಪಿಸುವುದು ಮುಂತಾದ ಸಂಗತಿಗಳನ್ನು ಗಮನಿಸಿದಾಗ ವೃದ್ಧರಲ್ಲಿ ವಯೋಮಾನದ ಹೆಚ್ಚಳದೊಡನೆ ಒಂದಿಲ್ಲೊಂದು ಬಗೆಯ ಭಾಷಾಸಾಮರ್ಥ್ಯ ಪ್ರಖರವಾಗಿರುತ್ತದೆಂಬುದು ತಿಳಿಯುತ್ತದೆ.

## ಧ್ವನಿಯ ಸಾಕ್ಷಿ

ನಮಗೆ ಪರಿಚಿತವಾದವರ ದನಿಯನ್ನು ನಾವು ಎಲ್ಲಿ ಕೇಳಿದೂ ಗುರುತಿಸುತ್ತೇವೆ. ಫೋನಿನಲ್ಲಿ ದನಿ ಕೇಳಿದಾಗ, ಧ್ವನಿಮುದ್ರಿತ ಟೇಪನ್ನು ಆಲಿಸಿದಾಗ ನಾವು ಆ ದನಿ ಯಾರದ್ದೆಂದು–ಅದು ಪರಿಚಿತ ದನಿಯಾಗಿದ್ದರೆ–ಗುರುತಿಸಬಲ್ಲೆವು. ನಮ್ಮ ಊಹೆ ತಪ್ಪಾಗುವ ಸಾಧ್ಯತೆಗಳು ಇರುತ್ತವೆಯಾದರೂ ಅದರ ಪ್ರಮಾಣ ಕಡಿಮೆ. ಇಂಥವರ ದನಿ ಇದೇ ಎಂದು ನಾವು ಗ್ರಹಿಸಲು ಕಾರಣ ಆ ದನಿಯ ವಿಶಿಷ್ಟತೆ. ಈ ವಿಶಿಷ್ಟತೆ ಎನ್ನುವುದು ಕೇವಲ ನಮ್ಮ ಅನಿಸಿಕೆಯೋ ಅಥವಾ ಅದನ್ನು ವಸ್ತುನಿಷ್ಠವಾಗಿ ಗುರುತಿಸಲು ಸಾಧ್ಯವೇ? ಪ್ರಾಯೋಗಿಕ ಅಧ್ಯಯನಗಳಿಂದ ವ್ಯಕ್ತಿಗಳ ದನಿಗಳ ಅನನ್ಯತೆಯನ್ನು ಸಾಬೀತು ಮಾಡಬಹುದೇ? ಮನುಷ್ಯರ ಕೈಬೆರಳುಗಳ ಮೇಲಿನ ರೇಖೆಗಳು ಪ್ರತಿಯೊಬ್ಬರಿಗೂ ಬೇರೆ ಬೇರೆ ಎಂಬುದು ಈಗ ಸರ್ವವಿದಿತ. ವ್ಯಕ್ತಿಗಳ ಚಹರೆಯ ಅತಿ ವಿಶಿಷ್ಟ ಅಂಶವನ್ನಾಗಿ ಕೈಬೆರಳುಗಳ ರೇಖೆಯ ಗುರುತುಗಳನ್ನು ಈಗ ಪರಿಗಣಿಸಲಾಗುತ್ತಿದೆ. ಹೀಗೆಯೇ ವ್ಯಕ್ತಿಗಳ ದನಿಯ ವಿಶಿಷ್ಟತೆಯನ್ನೂ ಗುರುತಿಸಲು ಸಾಧ್ಯವೆಂದು ತಿಳಿಯಲಾಗುತ್ತದೆ. ಅಮೆರಿಕದ ಧ್ವನಿಶಾಸ್ತ್ರಜ್ಞರಾದ ಲಾರೆನ್ಸ್ ಕೆಸ್ಟಾ (1907) ಈ ನಿಟ್ಟಿನಲ್ಲಿ ವಿಶೇಷ ಅಧ್ಯಯನಗಳನ್ನು ಮೊದಲು ಮಾಡಿದರು.

ದನಿಯ ಚಿತ್ರವನ್ನು ಮೂಡಿಸುವ ಯಂತ್ರ ಸ್ಪೆಕ್ಟ್ರೋಗ್ರಾಫ್. ದನಿಯ ಏರಿಳಿತಗಳ ವಿವಿಧ ಲಕ್ಷಣಗಳನ್ನು ಈ ಯಂತ್ರ ವಿವಿಧ ರೀತಿಯ ಗೆರೆಗಳನ್ನಾಗಿ ಗ್ರಹಿಸಿಕೊಳ್ಳುತ್ತದೆ. ಯಾವ ವ್ಯಕ್ತಿಯನ್ನೇ ಪರಿಗಣಿಸಲಿ, ಅವರ ಧ್ವನಿರೂಪವು ಮತ್ತಾವುದೇ ವ್ಯಕ್ತಿಯ ಧ್ವನಿರೂಪಕ್ಕಿಂತ ಭಿನ್ನ ಎಂದು ಒಪ್ಪುವುದಾದರೆ ದಾಖಲು ಮಾಡಲೇಬೇಕಾಗುತ್ತದೆ. ಸಾಮಾನ್ಯವಾಗಿ ಬಳಕೆಯಾಗುವ ಹತ್ತು ಪದಗಳನ್ನು ಬೇರೆ ಬೇರೆ ವ್ಯಕ್ತಿಗಳು ಉಚ್ಚರಿಸಿದ್ದನ್ನು ಈ ಯಂತ್ರದಲ್ಲಿ ದಾಖಲು ಮಾಡಲಾಗುವುದೆನ್ನೋಣ. ಈ ಪದಗಳ ಧ್ವನಿಚಿತ್ರಗಳ ವಿಶ್ಲೇಷಣೆಯಿಂದ ಪ್ರತಿ ವ್ಯಕ್ತಿಗೆ ಸಂಬಂಧಿಸಿದ ಉಚ್ಚಾರಣಾ ದಾಖಲೆಯನ್ನು ಬೇರ್ಪಡಿಸುವುದು ಸಾಧ್ಯ. ಈ ಧ್ವನಿಚಿತ್ರದಲ್ಲಿ ಉದ್ದದ ಗೆರೆಗಳೂ, ಧ್ವನಿಯ ಏರಿಳಿತಕ್ಕೆ ಅನುಗುಣವಾದ ವಕ್ರಗೆರೆಗಳೂ ಇರುತ್ತವೆ. ಈ ಗೆರೆಗಳ ಸ್ವರೂಪವನ್ನು ಗ್ರಹಿಸಿ ಅವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುವುದನ್ನು ಗುರುತು ಮಾಡಲಾಗುತ್ತದೆ.

ವ್ಯಕ್ತಿಯ ಅನನ್ಯತೆಯನ್ನು ಪತ್ತೆಮಾಡಬಲ್ಲ ಯಾವುದೇ ವಸ್ತುನಿಷ್ಠ ಸಂಗತಿ ದೊರೆತರೂ ಅದರಲ್ಲಿ ಮೊದಲು ಆಸಕ್ತಿವಹಿಸುವವರು ಪೋಲಿಸರು. ಅಪರಾಧಿಗಳನ್ನು ಪತ್ತೆಮಾಡಲು ಅವರಿಗೆ ಇಂಥ ವಿಧಾನಗಳು ಅತ್ಯವಶ್ಯ. ಅಮೆರಿಕದ ನ್ಯಾಯಾಲಯಗಳಲ್ಲಿ ಮೊದಲಬಾರಿಗೆ ಸಾಕ್ಷ್ಯಗಳನ್ನು ಒದಗಿಸುವಾಗ ಆರೋಪಿಗಳ ಧ್ವನಿಚಿತ್ರಗಳನ್ನು ಒದಗಿಸಲಾಯಿತು. 1965ರಲ್ಲಿ ಟೆಲಿವಿಷನ್ ಕಾರ್ಯಕ್ರಮವೊಂದರಲ್ಲಿ ಯುವಕನೊಬ್ಬ ತಾನು ಹಲವಾರು ಅಂಗಡಿಗಳಿಗೆ ಲಾಸ್ ಎಂಜಲಿಸ್ ನಗರದಲ್ಲಿ ಬೆಂಕಿ ಹಚ್ಚಿರುವುದಾಗಿ ಹೇಳಿಕೊಂಡನು. ಟೆಲಿವಿಷನ್‌ನ ತೆರೆಯ ಮೇಲೆ ಆತನ ಮುಖ ಸ್ಪಷ್ಟವಾಗಿ ಕಾಣಿಸದಂತೆ ಮಸಕುಗೊಳಿಸಲಾಗಿತ್ತು. ಆತನ ಬಗ್ಗೆ ಯಾವುದೇ ಮಾಹಿತಿಯನ್ನು ನೀಡಲು, ಕಾರ್ಯಕ್ರಮ

ಸಿದ್ಧಪಡಿಸಿ ಪ್ರಸಾರಮಾಡಿದ ಟೆಲಿವಿಷನ್ ಸಂಸ್ಥೆಯು ನಿರಾಕರಿಸಿತು. ಜಾರಿಯಲ್ಲಿದ್ದ ಕಾನೂನಿನಂತೆ ಹಾಗೆ ಮಾಹಿತಿಯನ್ನು ನೀಡುವಂತೆ ಆ ಸಂಸ್ಥೆಯನ್ನು ಒತ್ತಾಯಿಸಲು ಬರುವಂತಿರಲಿಲ್ಲ. ಪೋಲಿಸರು ಆ ಕಾರ್ಯಕ್ರಮಗಳಲ್ಲಿ ದೊರೆತ ಕೆಲವು ಸುಳಿವುಗಳನ್ನು ಆಧರಿಸಿ ಯುವಕನನ್ನು ಪತ್ತೆ ಮಾಡಿ ಬಂಧಿಸಿ ಮೊಕದ್ದಮೆ ಹೂಡಿದರು. ನ್ಯಾಯಾಲಯದಲ್ಲಿ ಹಾಜರುಪಡಿಸಲಾದ ಯುವಕನ ಧ್ವನಿಚಿತ್ರಗಳು ಮತ್ತು ಟೆಲಿವಿಷನ್ ಕಾರ್ಯಕ್ರಮದಲ್ಲಿ ಅಪರಾಧ ಮಾಡಿರುವುದಾಗಿ ಹೇಳಿಕೊಂಡ ಯುವಕನ ಧ್ವನಿಚಿತ್ರಗಳೂ ಒಂದೇ ಆಗಿವೆಯೆಂದು ವಾದಿಸಲಾಯಿತು. ಇಂಥ ಸಾಕ್ಷ್ಯಗಳನ್ನು ಒಪ್ಪಬಾರದೆಂದು ಆರೋಪಿ ಪರ ವಕೀಲರು ವಾದಿಸಿದರೂ ನ್ಯಾಯಾಲಯವು ಆ ಸಾಕ್ಷ್ಯಕ್ಕೆ ಮನ್ನಣೆ ನೀಡಿ ಆರೋಪಿಯನ್ನು ಅಪರಾಧಿಯೆಂದು ತೀರ್ಪು ನೀಡಿತು.

ಪೋಲಿಸರು ತಮಗೆ ದೊರೆತ ಈ ಹೊಸ ಅಸ್ತ್ರವನ್ನು ಹೀಗೆಯೇ ಬಳಸುವುದು ಸುಲಭವಾಗಿರಲಿಲ್ಲ. ಈ ಬಗೆಯ ಸಾಕ್ಷ್ಯಗಳನ್ನು ಟೀಕಿಸುವ ಪ್ರವೃತ್ತಿ ಬಲವಾಗುತ್ತಿತ್ತು. ಅಮೆರಿಕದ ಧ್ವನಿವಿಶ್ಲೇಷಕರ ಸಂಘವು 1976ರಲ್ಲಿ ಆತಂಕವನ್ನು ವ್ಯಕ್ತಪಡಿಸುತ್ತ, ಧ್ವನಿಚಿತ್ರಗಳು ವ್ಯಕ್ತಿಯ ಅನನ್ಯತೆಯನ್ನು ನಿರ್ಧರಿಸಲು ಎಷ್ಟರಮಟ್ಟಿಗೆ ಶಕ್ತವಾಗಬಲ್ಲವು ಹಾಗೂ ಹಾಗೆ ನಿರ್ಧರಿಸಲು ಅನುಕೂಲವಾಗುವಂತೆ ಧ್ವನಿಚಿತ್ರ ವಿಶ್ಲೇಷಣಾ ವಿಧಾನಗಳು ಸೂಕ್ಷ್ಮವಾಗಿವೆಯೇ ಎಂಬ ಪ್ರಶ್ನೆಗಳು ಇನ್ನೂ ಹಾಗೆಯೇ ಉಳಿದಿರುವುದರಿಂದ ನ್ಯಾಯಾಲಯಗಳು ಧ್ವನಿಚಿತ್ರಗಳ ಬಗ್ಗೆ ಇಷ್ಟೊಂದು ನಂಬಿಕೆಯನ್ನು ತೋರುವುದು ಸರಿಯಲ್ಲವೆಂದಿತು.

ಧ್ವನಿಚಿತ್ರ ವಿಶ್ಲೇಷಣೆಯ ತಂತ್ರಗಳು ಪರಿಪೂರ್ಣವಲ್ಲ ಎನ್ನುವ ಟೀಕೆಯ ಜತೆಗೆ ಇನ್ನೊಂದು ವಿಚಾರ ಕೂಡ ಪರಿಶೀಲನೆಗೆ ತಕ್ಕುದಾಗಿದೆ. ಅಪರಾಧ ಪತ್ತೆ ಮಾಡುವವರು ಆರೋಪಿಯ ಕೈ ಬೆರಳುಗಳ ಮುದ್ರೆಗಳ ಗೆರೆಗಳನ್ನು ಒಂದು ಮುಖ್ಯ ಆಧಾರವಾಗಿ ಪರಿಗಣಿಸುತ್ತಾರೆ. ಪ್ರತಿ ವ್ಯಕ್ತಿಗೂ ಈ ಗೆರೆಗಳು ಪ್ರತ್ಯೇಕವೆಂಬ ತರ್ಕವನ್ನು ಯಶಸ್ವಿಯಾಗಿ ಬಳಸುತ್ತಾರೆ. ಇದೇ ಮಾದರಿಯಲ್ಲಿ ಧ್ವನಿಚಿತ್ರಗಳನ್ನು ಪರಿಗಣಿಸಬಹುದೇ? ಆಗದು. ಏಕೆಂದರೆ ಕೈ ಬೆರಳುಗಳ ಗೆರೆಗಳ ಸ್ವರೂಪ ವ್ಯಕ್ತಿಯು ಭ್ರೂಣವಾಗಿರುವಾಗಲೇ ನಿಶ್ಚಯವಾಗಿರುತ್ತದೆ. ವ್ಯಕ್ತಿ ಬೆಳೆದಂತೆ ಆ ಗೆರೆಗಳು ದೊಡ್ಡವಾಗಬಹುದೇ ಹೊರತು ಆಕಾರ ಬದಲಾಗುವುದಿಲ್ಲ. ಆದರೆ ಧ್ವನಿಯ ವಿಚಾರ ಹೀಗಲ್ಲ. ಮಾತಾಡುವುದನ್ನು ವ್ಯಕ್ತಿಗಳು ಕಲಿಯುತ್ತಾರೆ. ಬೇಕೆಂದಾಗ ತಮ್ಮ ಧ್ವನಿಯನ್ನು ಬದಲಾಯಿಸಬಲ್ಲರು. ಮತ್ತೊಬ್ಬರ ಧ್ವನಿಯನ್ನು ಅನುಕರಿಸಬಲ್ಲರು. ದೇಹದ ಬೇರೆ ಬೇರೆ ಆರೋಗ್ಯಾವಸ್ಥೆಗಳು ಕೂಡ ಧ್ವನಿಯ ಲಕ್ಷಣವನ್ನು ಬದಲಾಯಿಸಬಲ್ಲುವು. ಹೀಗಿರುವಾಗ ಧ್ವನಿಚಿತ್ರಗಳನ್ನು ವ್ಯಕ್ತಿಯ ಅನನ್ಯತೆಯ ಸೂಚಕಗಳೆಂದು ಪರಿಗಣಿಸುವುದು ಹೇಗೆ? ಮತ್ತೊಬ್ಬರ ಧ್ವನಿಯನ್ನು ಅನುಕರಿಸುವ ಸಾಧ್ಯತೆಯಂತೂ ಸಾಕ್ಷ್ಯಾಧಾರಗಳನ್ನು ಬುಡಮೇಲು ಮಾಡಬಲ್ಲದು. ಈ ಅಂಶವನ್ನು ಸಾಬೀತು ಮಾಡುವ ಪ್ರಯೋಗಗಳು ನಡೆದಿವೆ.

**ಲಿಂಗ ಭೇದ**

ಗಂಡು ಹೆಣ್ಣುಗಳ ಧ್ವನಿಯಲ್ಲಿ ವ್ಯತ್ಯಾಸವಿರುವುದನ್ನು ಯಾರಾದರೂ ಗಮನಿಸಬಹುದಾಗಿದೆ. ಕೇಳಿಸಿಕೊಳ್ಳುವ ಮೂಲಕ ಧ್ವನಿ ಗಂಡಸಿನದೋ ಅಥವಾ

ಹೆಂಗಸಿನದೋ ಎಂದು ಸಾಕಷ್ಟು ಕರಾರುವಾಕ್ಕಾಗಿ ಹೇಳಲು ಸಾಧ್ಯ. ಆದರೆ ಹಲವು ಭಾಷೆಗಳಲ್ಲಿ ಹೆಂಗಸರು ಮತ್ತು ಗಂಡಸರು ಬೇರೆ ಬೇರೆ ಮಾತಿನ ರೀತಿಗಳನ್ನು ಬಳಸುತ್ತಾರೆ. ಜಪಾನೀಸ್, ಥಾಯ್, ಕರಿಬ್, ಚುಕ್ಕಿ ಮತ್ತು ಯನ ಮುಂತಾದ ಭಾಷೆಗಳಲ್ಲಿ ಇಂಥ ಪರಿಸ್ಥಿತಿ ಇದೆ. ಈ ಭಾಷೆಗಳನ್ನು ಆಡುವ ಹೆಂಗಸರು ಮತ್ತು ಗಂಡಸರ ಮಾತಿನಲ್ಲಿ ಧ್ವನಿರಚನೆ, ಉಚ್ಚಾರಣೆ, ವ್ಯಾಕರಣ, ಶಬ್ದಕೋಶ ಮತ್ತು ಶಬ್ದಕೋಶದ ಪದಕೋಶಗಳನ್ನು ಬಳಸಬಹುದಾದ ಸಂದರ್ಭ ಇವೆಲ್ಲವೂ ಬೇರೆ ಬೇರೆಯಾಗಿರುತ್ತವೆ. ಕೋ ಆಸತಿ ಎಂಬ ಭಾಷೆಯಲ್ಲಿ ಕ್ರಿಯಾಧಾತುಗಳು/ರೂಪಗಳು ಅನುನಾಸಿಕ ಧ್ವನಿಗಳಿಂದ ಅಥವಾ ಕೆಲವು ವಿಶಿಷ್ಟ ವ್ಯಂಜನಗಳಿಂದ ಕೊನೆಯಾದರೆ ಆ ರೂಪಗಳನ್ನು ಹೆಂಗಸರು ಇರುವಂತೆಯೇ ಬಳಸುತ್ತಾರೆ; ಆದರೆ ಗಂಡಸರು ಕೊನೆಯ ಧ್ವನಿಯನ್ನು ಸ್ ಆಗಿ ಪರಿವರ್ತಿಸುತ್ತಾರೆ.

ಹಾಸ್.ಎಂ.ಆರ್ ಅವರು ಈ ಅಧ್ಯಯನವನ್ನು ಮಾಡಿದಾಗ ಈ ರೀತಿಯ ವ್ಯತ್ಯಾಸ ಮಧ್ಯವಯಸ್ಸಿನ ಗಂಡಸರು ಮತ್ತು ಹೆಂಗಸರಲ್ಲಿ ಕಾಣಬರುತ್ತಿತ್ತು. ಆದರೆ ಚಿಕ್ಕವಯಸ್ಸಿನ ಹುಡುಗಿಯರು ಗಂಡಸರು ಬಳಸುವ ರೂಪಗಳನ್ನೇ ತಾವೂ ಬಳಸುತ್ತಿದ್ದರು. ಇಂಥ ವ್ಯತ್ಯಾಸಗಳಿರುವಾಗ ಗಂಡಸರು ಮತ್ತು ಹೆಂಗಸರಿಗೆ ಎರಡೂ ಮಾತಿನ ರೀತಿಗಳು ನಿಯಮಗಳು ತಿಳಿದಿರುತ್ತವೆ. ತಮ್ಮ ತಮ್ಮ ಮಾತುಗಳಲ್ಲಿ ತಮ್ಮತಮ್ಮ ರೀತಿಗಳನ್ನು ಬಳಸಿದರೂ ಅವಕಾಶ ಬಿದ್ದಾಗ ಇನ್ನೊಂದು ಮಾತಿನ ರೀತಿಯನ್ನೂ ಬಳಸಲು ಶಕ್ತರಾಗಿರುತ್ತಾರೆ. ಉದಾಹರಣೆಗೆ ಗಂಡಸೊಬ್ಬಾತ ತನ್ನ ಮಾತಿನ ನಡುವೆ ಹೆಂಗಸೊಬ್ಬಾಕೆಯ ಮಾತುಗಳನ್ನು ಉಲ್ಲೇಖಿಸಬೇಕಾಗಿ ಬಂದರೆ ಆಗ ಆತ ಆ ಉಲ್ಲೇಖಿತ ಮಾತುಗಳಲ್ಲಿ ಹೆಂಗಸರ ಮಾತಿನ ರೀತಿಯನ್ನು ಅನುಕರಿಸುತ್ತಾನೆ.

11ನೇ ಶತಮಾನದ ವೇಳೆಗಾಗಲೇ ಜಪಾನೀಸ್ ಭಾಷೆಯಲ್ಲಿ ಗಂಡು ಮತ್ತು ಹೆಣ್ಣು ಮಾತಿನ ರೀತಿಗಳು ಆಕಾರ ಪಡೆದಿದ್ದವೆಂದು ತಿಳಿಯಲು ಆಧಾರಗಳಿವೆ. ಮೇಲ್ವರ್ಗದ ಹೆಂಗಸರಿಗೆ ಸಮಾಜದಲ್ಲಿ ವಿಶಿಷ್ಟ ಸ್ಥಾನಮಾನಗಳಿದ್ದವು. ಈ ವಿಶಿಷ್ಟತೆಯನ್ನು ಪ್ರಕಟ ಪಡಿಸಲು ಉಡುಗೆ, ತೊಡುಗೆಗಳು, ನಡಿಗೆ, ಆಚರಣೆ, ಸಾಮಾಜಿಕ ನಡಾವಳಿಗಳು ಇನ್ನಿತರ ನೆಲೆಗಳಲ್ಲಿ ವಿಶೇಷ ಪ್ರಯತ್ನಗಳನ್ನು ಮಾಡಲಾಯಿತು. ಹೆಣ್ಣುಮಕ್ಕಳಿಗೆ ಇವೆಲ್ಲವನ್ನೂ ಹೇಳಿಕೊಡುವ, ತರಬೇತಿ ನೀಡುವ ಕೈಪಿಡಿಗಳನ್ನು ರಚಿಸಲಾಯಿತು. ಇವೆಲ್ಲದರ ನಡುವೆಯೇ ಜೊಸೆಗೋ ಅಥವಾ ಒನ್ನಕೊತೊಬಾ ಎಂಬ ಹೆಸರುಳ್ಳ ಮಾತಿನ ವರಸೆಗಳನ್ನು ಇಂಥ ಹೆಂಗಸರಿಗಾಗಿಯೇ ರೂಪಿಸಿಕೊಡಲಾಯಿತು. ಈ ಮಾತಿನ ರೀತಿಯಲ್ಲಿ ವಿಶೇಷ ಪದಕೋಶ, ವ್ಯಾಕರಣಾಂಶಗಳು ಸೇರಿರುತ್ತವೆ. ನವಿರಾದ ನಡವಳಿಕೆಯನ್ನು, ಅಧೀನತೆಯನ್ನು ವ್ಯಕ್ತಪಡಿಸುವ ಅಂಶಗಳನ್ನು ಈ ಮಾತಿನ ರೀತಿಯಲ್ಲಿ ಅಳವಡಿಸಿಕೊಳ್ಳಲಾಗಿದೆ. ಸಾಂಪ್ರದಾಯಿಕವಾದ ಇಂಥ ವಿಚಾರಗಳು ಇಂದಿನ ಸಮಾಜದಲ್ಲಿ ಪರಿವರ್ತನೆಯನ್ನು ಹೊಂದುತ್ತಿವೆ. ಆದರೂ ಹೆಂಗಸರ ಮತ್ತು ಗಂಡಸರ ಸ್ಥಾನಮಾನಗಳ ವ್ಯತ್ಯಾಸ ಖಚಿತವಾಗಿರುವುದರಿಂದ ಈಗಲೂ ಭಿನ್ನ ಮಾತಿನ ರೀತಿಗಳನ್ನು ಕಾಣುವುದು ಸಾಧ್ಯ.

ಜಪಾನೀ ಹೆಂಗಸರಿಗೆ ಈ ವಿಶಿಷ್ಟ ಹೆಣ್ಣುಮಾತಿನ ರೀತಿಯ ಪರಿಚಯವಿರುತ್ತದೆ. ಎಚ್ಚರಿಕೆಯಿಂದ ಈ ಮಾತಿನ ರೀತಿಯನ್ನು ಅವರು ಬಳಸುತ್ತಾರೆ. ತಮ್ಮ ಹೆಣ್ಣುತನವನ್ನು ಪ್ರಕಟಿಸುವ ಸಂದರ್ಭಗಳಲ್ಲಿ ಈ ಮಾತಿನ ರೀತಿಯನ್ನವರು ಉಪಯೋಗಿಸಿದರೆ, ಇನ್ನಿತರ ಸಂದರ್ಭಗಳಲ್ಲಿ ಲಿಂಗಭೇದ ತೋರದ ಮಾತಿನ ರೀತಿಯನ್ನು ಬಳಸುತ್ತಾರೆ. ಹೆಂಗಸು ತನ್ನ ಮಕ್ಕಳು, ಮನೆಮಠಗಳ ವಿವರಗಳನ್ನು ಹಂಚಿಕೊಳ್ಳುವಾಗ ಹೆಣ್ಣು ಮಾತಿನ ರೀತಿಯನ್ನು ಬಳಸಿದರೆ, ಸಹೋದ್ಯೋಗಿಯೊಡನೆ ಮಾತಾಡುವಾಗ ಲಿಂಗಭೇದ ತೋರದ ರೀತಿಗೆ ಬದಲಾಗಬಹುದು. ತಮ್ಮ ಅಸ್ತಿತ್ವವನ್ನು ಸ್ಥಾಪಿಸಬೇಕಾಗಿ ಬಂದಾಗ ಹೆಂಗಸರು, ಗಡಸಾಗಿ ಗಂಡಸರ ಮಾತಿನ ರೀತಿಗಳನ್ನು ಬಳಸಿದರೂ ಆಶ್ಚರ್ಯವಿಲ್ಲ. ಈಚಿನ ದಿನಗಳಲ್ಲಿ ಗಂಡು ಹೆಣ್ಣುಗಳ ಸಮಾನತೆಯನ್ನು ಪ್ರತಿಪಾದಿಸಲು ಹೀಗೆ ಹೆಂಗಸರು ಗಂಡಸರ ಮಾತಿನ ರೀತಿಗಳಿಗೆ ಹೊರಳುವುದುಂಟು. ಶಾಲೆಗೆ ಹೋಗುವ ಹುಡುಗಿಯರು ಈಗ ಬೊಕು(ನಾನು)ರೂಪವನ್ನು ಬಳಸುವುದು ಹೆಚ್ಚಾಗಿದೆ. ಸಾಂಪ್ರದಾಯಿಕವಾಗಿ ಈ ಬೊಕು ರೂಪವನ್ನು ಗಂಡಸರು ಮಾತ್ರ ಬಳಸುತ್ತಿದ್ದರು.

ಮಾತಿನ ವರಸೆಗಳಲ್ಲಿ ಇರುವ ವ್ಯತ್ಯಾಸಗಳ ಜೊತೆಗೆ ಎರಡೂ ರೀತಿಗಳಿಗೆ ಸಮಾನವಾಗಿರುವ ಎಷ್ಟೋ ಅಂಶಗಳನ್ನು ಬಳಸುವಲ್ಲಿಯೂ ಸಾಕಷ್ಟು ವ್ಯತ್ಯಾಸಗಳನ್ನು ಕಾಣಬಹುದು. ಹೆಂಗಸರು ಮತ್ತು ಗಂಡಸರು ತಮ್ಮ ಮಾತುಕತೆಗಳಲ್ಲಿ ಗೌರವಸೂಚಕ ರೂಪಗಳನ್ನು ಬಳಸುತ್ತಾರೆ. ಆದರೆ ಪ್ರಮಾಣ ಮಾತ್ರ ಬೇರೆ ಬೇರೆ. ಹೆಂಗಸರು ಈ ರೂಪಗಳನ್ನು ಹೆಚ್ಚಾಗಿ ಬಳಸುತ್ತಾರೆ. ಜತೆಗೆ ಅವರು ಬಳಸುವ ಸಂದರ್ಭಗಳೂ ಹೆಚ್ಚು. ಗಂಡಸರು ತಮಗಿಂತ ಉನ್ನತ ಸ್ಥಾನಮಾನಗಳಲ್ಲಿ ಇರುವವರೊಡನೆ ಮಾತಾಡುವಾಗ ಮಾತ್ರ ಈ ಗೌರವಸೂಚಕ ರೂಪಗಳನ್ನು ಬಳಸಿದರೆ, ಹೆಂಗಸರು ಅಂಥ ಸನ್ನಿವೇಶಗಳಲ್ಲಿ ಮಾತ್ರವಲ್ಲದೆ ಸಮಾನಸ್ಕಂದರೊಡನೆ ಮಾತಾಡುವಾಗಲೂ ಗೌರವಸೂಚಕ ರೂಪಗಳನ್ನು ಬಳಸುತ್ತಾರೆ. ವಿನಯ ಸೂಚಕ ನಾಮಪದ, ಕ್ರಿಯಾಪದ, ವಿಶೇಷಣಗಳನ್ನು ಹೆಂಗಸರು ಹೆಚ್ಚಾಗಿ ಬಳಸುತ್ತಾರೆ.

ಮೇಲಿನ ವಿವರಣೆಯನ್ನು ಗಮನಿಸಿದರೆ ಮಾತಿನ ರೀತಿಗಳಲ್ಲಿ ಗಂಡು ಮತ್ತು ಹೆಣ್ಣು ಎಂಬ ಎರಡು ಪ್ರಭೇದಗಳಿರುತ್ತವೆ ಎನ್ನುವುದು ಕೇವಲ ವ್ಯತ್ಯಾಸ ವರ್ಣನೆಯಾಗಿಲ್ಲವೆಂಬುದು ತಿಳಿಯುತ್ತದೆ. ಏಕೆಂದರೆ ಈ ಪ್ರಭೇದಗಳಲ್ಲಿ ಹೆಣ್ಣುರೂಪವನ್ನು ಪ್ರತ್ಯೇಕಗೊಳಿಸಿ ವಿವರಿಸಲಾಗಿದೆ. ಹೆಂಗಸರು ಈ ರೂಪವನ್ನು ನಿರಾಕರಿಸುವ ಮೂಲಕವೇ ಸಮಾನತೆಯನ್ನು ಪ್ರಕಟಿಸಲು ಯೋಚಿಸುತ್ತಾರೆ. ಅಂದರೆ ಭಾಷೆಯ ಹೆಣ್ಣುಪ್ರಭೇದ ಊನತೆಯನ್ನು ಸೂಚಿಸುತ್ತದೆಂದಾಯ್ತು. ಅಧ್ಯಯನಕಾರರೂ ಹೆಂಗಸರ ಭಾಷರೂಪಗಳನ್ನು ಪ್ರತ್ಯೇಕಗೊಳಿಸಿ ಅಧ್ಯಯನ ಮಾಡಿದ್ದಾರೆ. ಗಂಡಸರ ಮಾತಿನ ರೀತಿಯನ್ನು ಹೀಗೆ ಪ್ರತ್ಯೇಕಗೊಳಿಸಿ ನೋಡಿಲ್ಲ. ಈ ಅಂಶವೇ ಮಾತಿಗೆ ಎರಡೂ ವರಸೆಗಳ ನಡುವೆ ಒಂದನ್ನು ಪ್ರಮಾಣ(ಗಂಡು)ವೆಂದೂ ಇನ್ನೊಂದನ್ನು ವ್ಯತ್ಯಯ(ಹೆಣ್ಣು)ವೆಂದೂ ಪರಿಗಣಿಸುತ್ತಿರುವುದಕ್ಕೆ ಸೂಚನೆಯಾಗಿದೆ.

**ಜಪಾನೀಸ್ ಹೆಂಗಸರ ಮಾತಿನ ರೀತಿಯ ಕೆಲವು ಲಕ್ಷಣಗಳು**

1. ವತಕುಶಿ ಎಂಬ ರೂಪದ ಬದಲು ಆತಶಿ 'ನಾನು' ರೂಪವನ್ನು ಬಳಸುವುದು
2. ವಾಕ್ಯದ ಕೊನೆಗೆ ಬಳಕೆಯಾಗುವ 'ವ' ಎಂಬ ಅವ್ಯಯವನ್ನು ದನಿಯ ಇಳಿಯಲ್ಲಿ ಉಚ್ಚರಿಸುವ ಬದಲು ಏರಿಕೆಯಲ್ಲಿ ಉಚ್ಚರಿಸುವುದು
3. ಅರ, ಮಾ, ಉವಾ ಮುಂತಾದ ಆಶ್ಚರ್ಯ ಸೂಚಕ ಪದಗಳನ್ನು ಬಳಸುವುದು
4. ಆ, ಏ ಎಂಬ ಉದ್ಗಾರವಾಚಕಗಳನ್ನು ಅತಿಕಡಿಮೆ ಬಳಸುವುದು
5. ವಾಕ್ಯಗಳು ಹೇಳಿಕೆಗಳಾಗಿದ್ದರೆ ಅವುಗಳ ಕೊನೆಗೆ ಬಳಸುವ ರೂಪ 'ಡನೊ' ಆಗಿರುತ್ತದೆ. ನದ(ಗಂಡಸರು) ಅಥವಾ ನದೆಸು(ಲಿಂಗಭೇದವಿಲ್ಲ) ರೂಪಗಳನ್ನು ಬಳಸುವುದಿಲ್ಲ.
6. ಸಕನ (ಲಿಂಗಭೇದವಿಲ್ಲ)ರೂಪದ ಬದಲು ಒಸಕನ 'ಮೀನು'ರೂಪದ ಬಳಕೆ, ಏಕೆಂದರೆ ಒಸಕನ ರೂಪ ಹೆಚ್ಚು ವಿನಯವನ್ನು ಸೂಚಿಸುತ್ತದೆ.
7. ವಾಕ್ಯಗಳ ಕೊನೆಗೆ ನೆ('ಸರಿಯಾ?' 'ಹೌದಾ?') ರೂಪವನ್ನು ಹೆಚ್ಚಾಗಿ ಬಳಸುವುದು
8. ಜೆ, ಜೊ ಎಂಬ ನಿರ್ಧಾರಸೂಚಕ ರೂಪಗಳನ್ನು ವಾಕ್ಯದ ಕೊನೆಯಲ್ಲಿ ಅತಿ ಕಡಿಮೆ ಬಳಸುವುದು.

**ಇಂಗ್ಲಿಶ್‌ನಲ್ಲಿ ಗಂಡುಹೆಣ್ಣು**

ಇಂಗ್ಲಿಶ್‌ನಲ್ಲಿ ಹೆಣ್ಣು ಮತ್ತು ಗಂಡುಮಾತಿನ ರೀತಿಯನ್ನು ಗುರುತಿಸಲು ಸೂಚನೆ ನೀಡುವ ನಿರ್ದಿಷ್ಟ ಭಾಷಾಂಶಗಳು ಕಡಿಮೆ. ಅಂದರೆ ಯಾವುದೇ ಒಂದು ಭಾಷಾಂಶವನ್ನು ತೆಗೆದು ಇದು ಹೆಂಗಸರ ಮಾತಿನಲ್ಲಿ ಮಾತ್ರ ಬರುತ್ತದೆಂದೋ, ಅಥವಾ ಮತ್ತೊಂದು ಭಾಷಾಂಶವನ್ನು ತೋರಿಸಿ ಅದು ಗಂಡಸರ ಮಾತಿನಲ್ಲಿ ಮಾತ್ರ ಕಾಣುವುದೆಂದೋ ಹೇಳಲು ಬರುವುದಿಲ್ಲ. ಆದರೆ ಕೆಲವು ಭಾಷಾಂಶಗಳನ್ನು ಹೆಂಗಸರು ಮತ್ತು ಗಂಡಸರು ಬಳಸುವ ಪ್ರಮಾಣದಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಉದ್ಗಾರವಾಚಿಗಳನ್ನು, ರಂಜಿತ ಗುಣವಾಚಕಗಳನ್ನು ಹೆಂಗಸರು ಹೆಚ್ಚು ಬಳಸುವುದನ್ನು ಗುರುತಿಸಲಾಗಿದೆ. ಹಾಗೆಯೇ ಪರಿಮಾಣವಾಚಿಗಳನ್ನು ಕೂಡ ಅವರು ಹೆಚ್ಚು ಅವಲಂಬಿಸುವರಂತೆ. ಹೀಗೆ ನಿರ್ದಿಷ್ಟ ಭಾಷಾಂಶಗಳ ಬಳಕೆಯ ಪ್ರಮಾಣದಲ್ಲಿ ಆಗುವ ವ್ಯತ್ಯಾಸಗಳು ಇಂಗ್ಲಿಶಿನಲ್ಲಿ ಮಾತ್ರವಲ್ಲದೆ ಇನ್ನಿತರ ಕೆಲವು ಐರೋಪ್ಯ ಭಾಷೆಗಳಲ್ಲಿ ಕಂಡುಬಂದಿವೆ.

ಇಂಗ್ಲಿಶ್ ಭಾಷೆಯ ಸಂಭಾಷಣೆಯಲ್ಲಿ ಆ ಭಾಷೆಯನ್ನು ಬಳಸುವ ಸಂದರ್ಭವನ್ನು ಪರಿಗಣಿಸಿದರೆ ಅಲ್ಲಿ ಹೆಂಗಸರ ಮತ್ತು ಗಂಡಸರ ಭಾಷಾಬಳಕೆಯಲ್ಲಿ ಕೆಲವು ಮುಖ್ಯ ವ್ಯತ್ಯಾಸಗಳು ಗೋಚರವಾಗುತ್ತದೆ. ಮಾತುಕತೆಗಳಲ್ಲಿ ಹೆಂಗಸರು ಹೆಚ್ಚು ಪ್ರಶ್ನೆಗಳನ್ನು, ಪ್ರಶ್ನಾರ್ಥಕ ರೂಪಗಳನ್ನು ಬಳಸುವುದುಂಟು. ಸಮರ್ಥಿಸುವ, ಪ್ರೋತ್ಸಾಹ ನೀಡುವ

ಉದ್ಗಾರಗಳನ್ನು ಹೆಚ್ಚಾಗಿ ಬಳಸುತ್ತಾರೆ. ನೀನು, ನಾನು(ಏಉ.ವಿ)ಎಂಬ ಸರ್ವನಾಮಗಳನ್ನು ಹೆಚ್ಚು ಬಳಸುತ್ತಾರೆ. ಮಾತಿನ ವರಸೆಗಳಲ್ಲಿ ಎದ್ದು ಕಾಣುವ ಲಯಬದ್ಧತೆ ಅವರ ಮಾತಿನಲ್ಲಿ ಇರುತ್ತದೆ. ಧ್ವನಿ ಏರಿಳಿತಗಳನ್ನು ಅಧಿಕವಾಗಿ ಬಳಸುತ್ತಾರೆ. ಗಂಡಸರಾದರೋ ಹೆಂಗಸರೊಡನೆ ಮಾತನಾಡುವಾಗ ಹೆಚ್ಚು ಬಾರಿ ಮಾತನ್ನು ತುಂಡರಿಸಿ ತಮ್ಮ ಮಾತನ್ನು ಮೊದಲು ಮಾಡುತ್ತಾರೆ. ಹೆಂಗಸರು ಇಂಥ ಸಂದರ್ಭಗಳಲ್ಲಿ ಮಾತಿನ ನಡುವೆ ಪ್ರವೇಶಿಸುವ ಪ್ರಮಾಣಕ್ಕಿಂತ ಗಂಡಸರ ಮೂಗುತೂರಿಸುವಿಕೆ ಮೂರುಪಟ್ಟು ಹೆಚ್ಚಿರುವುದೆಂದು ಅಧ್ಯಯನಗಳು ತೋರಿಸಿಕೊಟ್ಟಿದೆ. ಹೀಗೆ ಗಂಡಸರು ಮಾತಿನ ನಡುವೆ ತಲೆ ಹಾಕಲು ಏನು ಕಾರಣಗಳಿವೆ? ಈವರೆಗೆ ಹೇಳಲಾದ ಮಾತುಗಳನ್ನು ನಿರಾಕರಿಸಲು, ಏನು ಹೇಳಲಾಗುತ್ತಿದೆಯೋ ಅದನ್ನು ಕಡೆಗಣಿಸಲು, ಅಥವಾ ಅದೇನೂ ಅಷ್ಟು ಮಹತ್ವದಲ್ಲವೆಂದು ಸೂಚಿಸಲು, ಮಾತಿನಲ್ಲಿ ಹೊಸದಾಗಿ ಒಂದು ಅಂಶವನ್ನು ಸೇರಿಸಲು, ತಮ್ಮ ನಿಲುವೇ ಸರಿಯೆಂದು ಘೋಷಿಸಲು ಗಂಡಸರು ಈ ಕ್ರಮವನ್ನು ಕೈಗೊಳ್ಳುವರು.

ಹೆಣ್ಣುಗಂಡುಗಳ ಮಾತಿನಲ್ಲಿ ಕಂಡುಬರುವ ಈ ಬಳಕೆಯ ವ್ಯತ್ಯಾಸಗಳ ಸಾಮಾಜಿಕ ಕಾರಣಗಳನ್ನು ಹುಡುಕಲಾಗುತ್ತದೆ. ಸಾಂಪ್ರದಾಯಿಕವಾಗಿ ಗಂಡು ಮೇಲುಗೈ ಪಡೆಯುವನು. ಹೆಣ್ಣು ಅಧೀನಳು ಎಂಬುದು ಗೃಹೀತ. ಮಾತುಕತೆಯಲ್ಲಿ ಗಂಡು ತನ್ನ ಈ ಹೆಚ್ಚಳವನ್ನು ಸಾಬೀತು ಪಡಿಸಲು ಪ್ರಯತ್ನಿಸುತ್ತಾನೆ ಮತ್ತು ಹೆಂಗಸರು ತಮ್ಮ ಅಧೀನತ್ವವನ್ನು ಒಪ್ಪಿಕೊಳ್ಳುತ್ತಾರೆ. ಹೀಗೆಂದು ವಾದಿಸಲಾಗುತ್ತದೆ. ಆದರೆ ಸಾಮಾಜಿಕ ಬದಲಾವಣೆಗಳ ಸಂದರ್ಭದಲ್ಲಿ ಈ ಪರಿಸ್ಥಿತಿ ಅಷ್ಟು ಸರಳವಾಗಿಲ್ಲ. ಸನ್ನಿವೇಶಗಳನ್ನು ಸೂಕ್ಷ್ಮವಾಗಿ ಅಧ್ಯಯನ ಮಾಡಿದರೆ ಮೇಲೆ ನಿರೂಪಿಸಿದ ತೀರ್ಮಾನ ತೀರಾ ಸರಳವೆಂದು ಗೊತ್ತಾಗುತ್ತದೆ. ಬದಲಾಗುತ್ತಿರುವ ಸಾಮಾಜಿಕ ಸಂಬಂಧಗಳ ಸ್ವರೂಪಕ್ಕೂ ಭಾಷೆಯ ಬಳಕೆಗೂ ಇರುವ ನಂಟುತನವನ್ನು ಸರಿಯಾಗಿ ಗ್ರಹಿಸಬೇಕಾಗಿದೆ. ಇಲ್ಲದಿದ್ದರೆ ನಮ್ಮ ಗ್ರಹಿಕೆಗಳನ್ನೇ ಸತ್ಯವೆಂದು ತಿಳಿದು ಅದನ್ನು ಸಾಮಾಜಿಕ ಸಂದರ್ಭಕ್ಕೆ ಆರೋಪಿಸಿಬಿಡುವ ಅಪಾಯವಿದೆ.

# ಭಾಷೆ ಮತ್ತು ಅರ್ಥ

ಭಾಷೆಯ ರಚನೆಯನ್ನು ಅರಿಯಲು ಹೊರಟ ಯಾರಿಗಾದರೂ ನಾವಾಡುವ ಮಾತಿಗೆ ಶಬ್ದರಚನೆಯೊಂದು ಇರುವಂತೆ ಅರ್ಥರಚನೆಯೂ ಇರುವುದು ಗೊತ್ತಾಗುವ ವಿಷಯ. ಇವೆರಡೂ ಸ್ತರಗಳನ್ನು ಹೊರತು ಪಡಿಸಿ ಭಾಷಿಕ ರಚನೆಗಳನ್ನು ರೂಪಿಸುವುದು ಅಸಾಧ್ಯ. ಮಾತಿಗೆ ಅರ್ಥ ಲಭಿಸುವುದು ಹೇಗೆ? ಅರ್ಥವೆಂಬುದು ಮಾತಿನಲ್ಲಿ ಪ್ರತೀತಿಯಾಗುವ ಕ್ರಮ ಯಾವುದು? ಶಬ್ದ ಮತ್ತು ಅರ್ಥಗಳ ಸಂಬಂಧದ ಸ್ವರೂಪವೇನು? ಇತ್ಯಾದಿ ಪ್ರಶ್ನೆಗಳನ್ನು ಅಧ್ಯಯನ ಮಾಡಲು ಈಗ ಅರ್ಥರಚನಾಶಾಸ್ತ್ರವೆಂಬ ಪ್ರತ್ಯೇಕ ಜ್ಞಾನಶಾಖೆ ರೂಪುಗೊಂಡಿದೆ. ಈ ಜ್ಞಾನಶಾಖೆಯ ಬೇರುಗಳು ಮಾತ್ರ ಪ್ರಾಚೀನಕಾಲದಲ್ಲಿವೆ. ಸಂಸ್ಕೃತ ಭಾಷೆಯ ಮೂಲಕ ಈ ನಿಟ್ಟಿನಲ್ಲಿ ತಮ್ಮ ವಿಚಾರಗಳನ್ನು ಮಂಡಿಸಿದವರಲ್ಲಿ ಮೀಮಾಂಸಕರು, ತಾರ್ಕಿಕರು, ನೈಯಾಯಿಕರು ಮುಖ್ಯರಾಗುತ್ತಾರೆ. ಸತ್ಯದ ಸ್ವರೂಪವನ್ನು ವಿವರಿಸಲು ತೊಡಗಿದ ಎಲ್ಲ ತತ್ತ್ವಜ್ಞಾನಿಗಳೂ ಪ್ರಾಸಂಗಿಕವಾಗಿ ಅರ್ಥರಚನೆಯ ಲಕ್ಷಣಗಳನ್ನು ಕಾಣಲು ಯತ್ನಿಸಿದ್ದಾರೆ. ಗ್ರೀಕ್ ಚಿಂತಕರಲ್ಲಿ ಈ ಬಗೆಯ ಚಿಂತನೆಗಳು ಪ್ಲೇಟೋ, ಅರಿಸ್ಟಾಟಲ್ ಮುಂತಾದವರಲ್ಲೇ ಮೊದಲಾಗಿವೆ.

ಇಂದಿನ ಅರ್ಥರಚನಾಶಾಸ್ತ್ರವು ಪ್ರಾಚೀನರು ಎತ್ತಿದ ಪ್ರಶ್ನೆಗಳನ್ನು ಉತ್ತರಿಸುವ ಜತೆಗೆ ಕೆಲವು ಹೊಸ ಸಮಸ್ಯೆಗಳನ್ನು ಎತ್ತಿಕೊಳ್ಳುತ್ತದೆ. ತಾರ್ಕಿಕರು ಮುಖ್ಯವಾಗಿ ವಾಕ್ಯಾರ್ಥದ, ತಾತ್ಪರ್ಯಾರ್ಥದ ಸ್ವರೂಪವನ್ನು ವಿವೇಚಿಸಿದರು. ವಾಕ್ಯದ ಘಟಕಗಳಲ್ಲಿ ಅರ್ಥ ಹರಡುವುದೇ? ಹಾಗೆ ಅರ್ಥವು ವಾಕ್ಯದಲ್ಲಿ ಹಂಚಿಹೋಗಿದ್ದರೆ ವಾಕ್ಯಾರ್ಥ ಪ್ರತೀತಿಯಾಗುವುದು ಹೇಗೆ? ಶಬ್ದ ಮತ್ತು ಅರ್ಥಗಳ ಸಂಬಂಧವು ಘಟಕ ಮತ್ತು ರಚನೆಗಳಲ್ಲಿ ಒಂದೇ ರೀತಿಯಲ್ಲಿ ಇರುವುದೋ ಅಥವಾ ಬೇರೆ ಬೇರೆ ರೀತಿಯಲ್ಲಿಯೋ? ಸಂಪ್ರತ್ಯಯಗಳ ನಿರ್ಮಿತಿಯು ಪ್ರತಿಭಾಷೆಗೂ ವಿಶಿಷ್ಟವಾಗಿರುವುದೋ? ಅಥವಾ ಎಲ್ಲ ಭಾಷೆಗಳಿಗೂ ಸಮಾನವಾದ ಅರ್ಥರಚನಾ ಪ್ರಕ್ರಿಯೆಗಳಿವೆಯೋ? ಇವೇ ಮುಂತಾದ ಪ್ರಶ್ನೆಗಳು ಇಂದು ಮುಖ್ಯವಾಗಿವೆ.

ದಿನನಿತ್ಯದ ಮಾತುಕತೆಗಳಲ್ಲಿ ಸುರಳೀತ ಸಂವಹನ ನಡೆಯುತ್ತಿದ್ದರೆ ಅರ್ಥವನ್ನು ಕುರಿತು ಯಾರೂ ತಲೆಕೆಡಿಸಿಕೊಳ್ಳುವುದಿಲ್ಲ. ಮಾತಿನ ನಡುವೆ ಭಾಗೀದಾರರೊಬ್ಬರು 'ಏನಂದಿರಿ?ಕೇಳಿಸಲಿಲ್ಲ'ಅಂತಲೋ ಅಥವಾ 'ನೀವು ಹೇಳಿದ್ದೇನು? ಗೊತ್ತಾಗುತ್ತಿಲ್ಲ' ಅಂತಲೋ ಹೇಳಿದರೆ ಆಗ ಸಂವಹನ ಮುರಿದು ಬೀಳುವುದರಲ್ಲಿದೆಯೆಂಬ ಸೂಚನೆ

ದೊರಕುತ್ತದೆ. ಮೊದಲ ಪ್ರಶ್ನೆ ಶಬ್ದದ ಸ್ತರಕ್ಕೆ ಸೇರಿದೆ. ಮಾತಾಡಿದರೆ ಮಾತನ್ನು ಶ್ರವಣಾಂಗಗಳು ಸರಿಯಾಗಿ ಗ್ರಹಿಸಲು ಸಾಧ್ಯವಾಗದೇ ಇದ್ದಾಗ ಈ ಪ್ರಶ್ನೆ ಮೂಡುತ್ತದೆ. ಕೆಲವೊಮ್ಮೆ ಕೇಳಿದ ಮಾತಿನ ಅರ್ಥ ಅಸ್ಪಷ್ಟವಾದಾಗಲೂ ಈ ಪ್ರಶ್ನೆಯ ಮೂಲಕ ಸ್ಪಷ್ಟೀಕರಣವನ್ನು ಪಡೆಯುವುದು ಸಾಧ್ಯ. ಎರಡನೇ ಪ್ರಶ್ನೆಯಂತೂ ಅರ್ಥಕ್ಕೆ ಸಂಬಂಧಿಸಿದೆ. ಹೀಗೆ ಮಾತುಕತೆಯ ನಡುವೆ 'ಅಂದರೆ', 'ನಾನು ಹೇಳಿದ್ದು', 'ಹಾಗಲ್ಲ.....ಹೀಗೆ', ಎಂಬ ಪೂರಕಗಳ ಮೂಲಕ ಅರ್ಥಪ್ರತೀತಿಗೆ ನೆರವಾಗುವ ವಿವರಣೆಯನ್ನು ನೀಡುವುದನ್ನೂ ನಾವು ಗಮನಿಸಬಹುದು. ಎಷ್ಟೋ ವೇಳೆ ನಾವು ಒಮ್ಮೆ ಮಾತಾಡಿದ ವಿಷಯವನ್ನೇ ಬೇರೊಂದು ಬಾರಿ ಮಾತಾಡಬೇಕಾಗಿ ಬಂದರೆ ಮೊದಲು ಬಳಸಿದ ಹಲವು ಪದಗಳಿಗೆ ಬದಲಾಗಿ ಬೇರೆ, ಆದರೆ ಅದೇ ಅರ್ಥವುಳ್ಳ ಪದಗಳನ್ನು ಬಳಸುತ್ತೇವೆ. ಯಾರಾದರೂ ನಮ್ಮ ಮಾತಿನಲ್ಲಿ ಬಳಕೆಯಾದ ಪದಗಳನ್ನು ವಿವರಿಸಲು ಕೇಳಿದರೆ ಅರ್ಥ ಹೇಳುತ್ತೇವೆ. ಈ ಎಲ್ಲ ವಿವರಗಳಿಂದ ನಮ್ಮ ಭಾಷೆಗೊಂದು ಅರ್ಥರಚನೆ ಇರುವುದು ಮತ್ತು ಆ ಅರ್ಥರಚನೆಯು ನಮ್ಮ ತಿಳುವಳಿಕೆಯ ಭಾಗವಾಗಿರುವುದು ಗೊತ್ತಾಗುತ್ತದೆ.

ಪ್ರತಿಯೊಂದು ಪದಕ್ಕೂ ಒಂದು ಅರ್ಥವಿರುತ್ತದೆಂದು ನಾವು ತಿಳಿದಿರುತ್ತೇವೆ. ಲೋಕದಲ್ಲಿ ಇರುವ ಅಥವಾ ಇದೆಯೆಂದು ನಾವು ಕಲ್ಪಿಸುವ ವಸ್ತು, ಸಂಗತಿಗಳನ್ನು ಪದಗಳು ಪ್ರತಿನಿಧಿಸುತ್ತವೆಯೆಂಬ ಈ ತಿಳುವಳಿಕೆ ಎಲ್ಲ ಸಂಸ್ಕೃತಿಗಳಲ್ಲೂ ಬಹುಕಾಲದಿಂದ ರೂಢಗೊಂಡಿದೆ. ನಮ್ಮ ಭಾಷೆಯಲ್ಲಿರುವ ನಾಮರೂಪಗಳು ಈ ತಿಳುವಳಿಕೆಗೆ ಆಧಾರ. ವ್ಯಕ್ತಿಗಳಿಗೆ ಹೆಸರುಗಳಿವೆ. ಮರಗಿಡಗಳಿಗೆ, ಪ್ರಾಣಿಗಳಿಗೆ, ಊರುಗಳಿಗೆ ಹೆಸರುಗಳಿರುತ್ತವೆ. ಈ ಎಲ್ಲ ಪದಗಳೂ ತಮ್ಮನ್ನಲ್ಲದೆ ಬೇರೆ ಏನನ್ನೋ ಪ್ರತಿನಿಧಿಸುತ್ತವೆ. 'ಕೆಂಪು' ಎಂದರೆ ಕ್,ಎ,ಮ್,ಪ್, ಉ ಈ ಧ್ವನಿಗಳ ಅನುಕ್ರಮಣಿಯಿಂದ ರೂಪುಗೊಂಡ ಪದ ಮಾತ್ರವಲ್ಲ. ಅದು ನಮ್ಮ ಕಣ್ಣು ಗುರುತಿಸಬಲ್ಲ ಬಣ್ಣವೊಂದನ್ನು ಸೂಚಿಸುತ್ತದೆ. ಈ ಸೂಚನೆಯೇ ಆ ಪದದ ಅರ್ಥ.

ಆದರೆ ನಾವು ಬಳಸುವ ನೂರಾರು ಪದಗಳು ಏನು ಸೂಚಿಸುತ್ತವೆಯೆಂದು ತಿಳಿಯುವುದು, ಸ್ಪಷ್ಟಪಡಿಸುವುದು ಕಷ್ಟ. ಕ್ರಿಯಾಪದಗಳು ಏನನ್ನು ಸೂಚಿಸುತ್ತವೆ? ಚಿಕ್ಕ, ಕುಳ್ಳ, ಅಗಲ ಮುಂತಾದ ಪದಗಳಿಗೇನು ಅರ್ಥ? ನೋವು, ಚಳಿ, ಸುಖ ಎಂಬ ಪದಗಳು ಸೂಚಿಸುವ ವಸ್ತುಗಳು ಯಾವುವು? ಆದ್ದರಿಂದ ಪದಗಳು ಯಾವುದೋ ಒಂದು ಗುರುತಿಸಬಲ್ಲ ವಸ್ತುವನ್ನು ಪ್ರತಿನಿಧಿಸುತ್ತದೆಯೆಂಬ ಮಾತು, ಭಾಷೆಯಲ್ಲಿರುವ ಕೆಲವು ಪದಗಳ ವಿಷಯದಲ್ಲಿ ನಿಜ. ಹಲವು ಪದಗಳ ಅರ್ಥವನ್ನು ಈ ಸೂತ್ರದಿಂದ ವಿವರಿಸಲು ಬರುವುದಿಲ್ಲ.

ಇನ್ನೊಂದು ಚಿಂತನೆಯಂತೆ ಪದ ಮತ್ತು ವಸ್ತುಜಗತ್ತಿಗೆ ನೇರವಾದ ಸಂಬಂಧವಿರುವುದಿಲ್ಲ. ನಡುವೆ ಮತ್ತೊಂದು ಹಂತವನ್ನು ಕಲ್ಪಿಸಿಕೊಳ್ಳುವ ಅವಶ್ಯಕತೆಯಿದೆ. ನಾವು ನಿತ್ಯಜೀವನದಲ್ಲಿ ಹಲವಾರು ಮರಗಳನ್ನು ನೋಡಿರುತ್ತೇವೆ. ಈ ಎಲ್ಲ ಮರಗಳಿಗೂ ಸಮಾನವಾದ ಲಕ್ಷಣಗಳಿರುವ 'ಮರ'ದ ಚಿತ್ರವೊಂದನ್ನು ಮನಸ್ಸು ರೂಪಿಸಿಕೊಂಡಿರುತ್ತದೆ.

ಈ ಚಿತ್ರ ಈವರೆಗೆ ನಾವು ನೋಡಿರುವ, ಮುಂದೆ ನಾವು ನೋಡಬಹುದಾದ ಮರಗಳೆಲ್ಲದರ ಪ್ರತಿನಿಧಿ. ಪ್ರತಿ ಮರದ ವಿಶಿಷ್ಟ ಸಂಗತಿಗಳು ಈ ಚಿತ್ರದಲ್ಲಿ ಇರುವುದಿಲ್ಲ. ಮುಂದೆ ನಾವು 'ಮರ' ಎಂಬ ಪದವನ್ನು ಕೇಳಿದಾಗ ಈ ಚಿತ್ರವೇ ಅದರ ಅರ್ಥವಾಗಿ ಪ್ರತೀತವಾಗುತ್ತದೆ ಅಥವಾ ಲೋಕದಲ್ಲಿ ಯಾವುದೇ ಮರವನ್ನು ಕಂಡಾಗ ಮನಸ್ಸಿನಲ್ಲಿರುವ ಈ ಬಿಂಬದ ಮೂಲಕವೇ 'ಮರ' ಪದವನ್ನು ನಾವು ನೆನಪಿಸಿಕೊಳ್ಳುತ್ತೇವೆ. ಇದನ್ನೊಂದು ಅರ್ಥಪ್ರತೀತಿ ತ್ರಿಕೋನವೆನ್ನುವರು.

ಮನೋಬಿಂಬ




ಈ ಚಿಂತನೆ ಕೊಂಚಮಟ್ಟಿಗೆ ಉಪಯುಕ್ತ. ನಮ್ಮ ಒಂದೊಂದು ಅನುಭವವೂ ಮನಸ್ಸಿನಲ್ಲಿ ಪ್ರತ್ಯೇಕ ಅನುಭವವಾಗಿ ಉಳಿಯುವುದಿಲ್ಲ. ಅವುಗಳ ನಡುವೆ ಸೂಕ್ತ ಸಂಯೋಜನೆ ನಡೆದು ಅನುಪಯುಕ್ತವಾದ ಎಷ್ಟೋ ಸಂಗತಿಗಳು ಇಲ್ಲವಾಗುತ್ತವೆ. ಅಥವಾ ಮುಂಚೂಣಿಯಲ್ಲಿ ಇರುವುದಿಲ್ಲ. ಮೇಲಿನ ಉದಾಹರಣೆಯನ್ನೇ ಗಮನಿಸಿದರೆ ಮರ ಎಂಬ ಪದ ನಮ್ಮಲ್ಲಿ ನಾವು ಕಂಡ ಬಗೆಬಗೆಯ ಮರಗಳ ಒಂದೊಂದು ಬಿಂಬವನ್ನು ಉದ್ದೀಪನಗೊಳಿಸಿದರೆ ಗೊಂದಲವುಂಟಾಗುತ್ತದೆ. ಆದರೆ ಅದರ ಬದಲು 'ಮರ' ಎಂಬ ಸಾಮಾನ್ಯ ಬಿಂಬವಷ್ಟೇ ಉದ್ದೀಪನಗೊಳ್ಳುತ್ತದೆಯಾಗಿ ಈ ಗೊಂದಲ ಇಲ್ಲವಾಗುತ್ತದೆ.

ಈ ಸಿದ್ಧಾಂತವನ್ನು ಒಪ್ಪಲು ಕೆಲವು ತೊಡಕುಗಳಿವೆ. ಎಷ್ಟೋ ನಾಮಪದಗಳು ಮನೋಬಿಂಬಗಳಾಗಿ ರೂಪು ಪಡೆಯುವುದು ಅಸಾಧ್ಯ. ಉದಾ.ಗೆ 'ನೋವು' ಎಂಬ ಪದವನ್ನೇ ಗಮನಿಸೋಣ. ಈ ಪದದಿಂದ ಯಾವ ಮನೋಬಿಂಬ ಮನಸ್ಸಿನಲ್ಲಿ ಮೂಡುತ್ತದೆ? ನೋವಿನ ಅನುಭವಗಳು ಅನೇಕ; ಸಂದರ್ಭಗಳೂ ಅನೇಕ. ಕೆಲವಂತೂ ಅಮೂರ್ತ. ಅಂದರೆ ಅಂಥ ನೋವಿನ ಅನುಭವಗಳು ಯಾವುದೇ ಅಂಗಾಂಗಕ್ಕೆ ಸಂಬಂಧಿಸಿರುವುದಿಲ್ಲ. ಆದ್ದರಿಂದ 'ನೋವು' ಪದದ ಅರ್ಥವನ್ನು ಒಂದು ಮನೋಬಿಂಬದ ಮೂಲಕ ವಿವರಿಸುವುದು ಆಗದ ಮಾತು. ಇದಲ್ಲದೆ ಇನ್ನೂ ಒಂದು ತೊಡಕಿದೆ. ಒಂದು ಪದಕ್ಕೆ ಒಂದು ಮನೋಬಿಂಬ ಎನ್ನುವುದನ್ನು ಒಪ್ಪಿದರೂ ಆ ಪದವನ್ನು ಕೇಳಿದಾಗ ಅದೇ ಮನೋಬಿಂಬ ನಮ್ಮಲ್ಲಿ ಉದ್ದೀಪನವಾಗುತ್ತದೆಯೆಂದು ಎಲ್ಲ ಸಂದರ್ಭಗಳಲ್ಲೂ ಹೇಳಲು ಬರುವುದಿಲ್ಲ. ಹಲವು ಸಾಹಚರ್ಯವುಳ್ಳ ಬಿಂಬಗಳು ಒಟ್ಟಾಗಿ ಮೂಡಬಹುದು. ಇಲ್ಲವೇ ಸಾಮಾನ್ಯ ಬಿಂಬದ ಜಾಗದಲ್ಲಿ ಯಾವುದೋ ವಿಶಿಷ್ಟ ಅನುಭವದ ಬಿಂಬ ಮೂಡುವುದೂ ಸಾಧ್ಯ. ಮನೆ ಎಂಬ ಪದ ಕೇಳಿದಾಗ ಜನ, ಬೀದಿ, ಮುಂತಾದ ಬಿಂಬಗಳೂ ಜತೆಯಾಗಿ ಮೂಡುವಂತೆ, ಯಾವುದೋ ನಮಗೆ ಅತಿ ಪರಿಚಿತ ಇಲ್ಲವೇ ಪ್ರೀತಿಯ ಮನೆಯ ಚಿತ್ರವೇ ಮೂಡುವ ಅವಕಾಶಗಳಿವೆ. ಹಾಗಿದ್ದರೆ 'ಮನೆ' ಪದದ ಅರ್ಥವೇನು?

ಇನ್ನೂ ಒಂದು ರೀತಿಯಲ್ಲಿ ಅರ್ಥವನ್ನು ವಿವರಿಸಲು ಯತ್ನ ನಡೆದಿವೆ. ನಿತ್ಯ ಜೀವನದಲ್ಲಿ ಭಾಷೆಯ ಬಳಕೆಯಾದಾಗ ಅದು ಯಾವ ವರ್ತನೆಗೆ ಕಾರಣವಾಗುತ್ತದೋ ಆ ವರ್ತನೆಯನ್ನು ಗಮನಿಸಿ ಅರ್ಥವನ್ನು ತಿಳಿಯುವುದು ಸಾಧ್ಯ. ನಾವು ಮಾತಾಡಲು ನಮ್ಮ ಪರಿಸರದಲ್ಲಿ ಒಂದು ಉದ್ದೀಪಕವಿರಬೇಕು. ಆ ಉದ್ದೀಪಕಕ್ಕೆ ನಮ್ಮ ಮಾತು ಪ್ರತಿಕ್ರಿಯೆಯಾಗಿರುತ್ತದೆ. ಆ ಭಾಷಾಪ್ರತಿಕ್ರಿಯೆಯು ಕೇಳಿಸಿಕೊಂಡವರಿಗೆ ಉದ್ದೀಪಕವಾಗಿ ಕೆಲಸ ಮಾಡುತ್ತದೆ. ಕೇಳಿಸಿಕೊಂಡವರು ಆ ಭಾಷಾಉದ್ದೀಪಕಕ್ಕೆ ಸೂಕ್ತವಾದ ವರ್ತನೆಯನ್ನು ತೋರಿಸುತ್ತಾರೆ. ಸರಳವಾದ ಒಂದು ಪ್ರಸಂಗವನ್ನು ನೋಡೋಣ. A ಮತ್ತು B ಎಂಬ ಇಬ್ಬರು ವ್ಯಕ್ತಿಗಳಿದ್ದಾರೆ. A ತಾನಿರುವ ಕೊಠಡಿಯ ಮುಚ್ಚಿದ ಬಾಗಿಲನ್ನು ತೆರೆಯಬೇಕಾಗಿದೆ. ಇದು ಆ ವ್ಯಕ್ತಿಗೆ ಉದ್ದೀಪಕ ಸನ್ನಿವೇಶ. A ತಾನಿರುವಲ್ಲೇ ಇದ್ದು B ಗೆ 'ಬಾಗಿಲು ತೆಗೆ' ಎನ್ನುತ್ತಾರೆಂದುಕೊಳ್ಳಿ. ಇದು A ಯ ಭಾಷಿಕ ಪ್ರತಿಕ್ರಿಯೆ. ಈ ವಾಕ್ಯವೇ B ಗೆ ಉದ್ದೀಪಕ. B ಹೋಗಿ ಬಾಗಿಲು ತೆರೆಯುತ್ತಾರೆ. ಇದು ವರ್ತನೆ. 'ಬಾಗಿಲು ತೆಗೆ' ಎಂಬ ವಾಕ್ಯದ ಅರ್ಥ ಆ ವಾಕ್ಯವನ್ನು ಹೇಳಲು ಇದ್ದ ಸನ್ನಿವೇಶ ಮತ್ತು ಆ ವಾಕ್ಯದಿಂದ ಉಂಟಾಗುವ ಪರಿಣಾಮ ಇವೆಲ್ಲದರ ಮೊತ್ತವೇ ಆಗಿರುತ್ತದೆ.

ಭಾಷೆಯ ಸ್ವರೂಪವನ್ನು ತಿಳಿಯಲು ಬಾಷೆಯ ಬಳಕೆಯ ಸಂದರ್ಭಗಳನ್ನೇ ಅವಲಂಬಿಸಬೇಕೆಂಬ ಚಿಂತನೆಗೆ ಅನುಗುಣವಾಗಿ ಮೇಲಿನ ವಿವರಣೆ ರೂಪುಗೊಂಡಿದೆ. ಆದರೆ ಹೀಗೆ ಅರ್ಥದ ಸ್ವರೂಪವನ್ನು ಗುರುತಿಸುವುದು ಕಷ್ಟ. ಏಕೆಂದರೆ ಒಂದು ಭಾಷಿಕ ರೂಪಕ್ಕೆ ಸಿಗುವ ವರ್ತನಾತ್ಮಕ ಪ್ರತಿಕ್ರಿಯೆಯು ಆಯಾ ಸಂದರ್ಭಕ್ಕೆ ಬದ್ಧವಾಗಿರುತ್ತದೆಯೆಂದು ವಾದಿಸಲು ಬರುವುದಿಲ್ಲ. ನಾವು ವಿಶ್ಲೇಷಿಸುತ್ತಿರುವ ಸಂದರ್ಭದ ಯಾವ ಯಾವ ಅಂಶಗಳು ಭಾಷೆಯ ವಾಕ್ಯದ ಅರ್ಥವನ್ನು ನಿರ್ಧರಿಸುತ್ತವೆ ಎಂಬುದೂ ಖಚಿತವಲ್ಲ. A, 'ದಯವಿಟ್ಟು ಬಾಗಿಲು ತೆರೆಯುತ್ತೀರಾ' ಎಂದು ಹೇಳಿದಾಗ, ಅಥವಾ ಯಾರೋ ಹೊರಗಿನಿಂದ ಬಾಗಿಲು ತಟ್ಟಿದಾಗ ಕೂಡ B ಬಾಗಿಲು ತೆರೆಯಬಹುದು. ಅಂದರೆ ಇದೇ ಮಾತಿಗೆ, ಬೇರೆ ಯಾವುದೋ ಕಾರಣದಿಂದ B ಯಾವ ಬಗೆಯಲ್ಲೂ ಪ್ರತಿಕ್ರಿಯೆ ನೀಡದಿದ್ದರೆ ಆಗ ಏನು ಮಾಡುವುದು? ಒಟ್ಟಾರೆ ತಿಳಿಯುವುದಿಷ್ಟು. ಅರ್ಥವೆಂದರೇನೆಂದು ತಿಳಿಯಲು ಭಾಷೆಯ ಬಳಕೆಯ ಸಂದರ್ಭಗಳ ಪರಿಶೀಲನೆ ಮುಖ್ಯ ಸರಿ. ಅಂದರೆ ಈ ವಿಧಾನಕ್ಕೆ ಅದರದ್ದೇ ಆದ ಮಿತಿಗಳಿವೆ.

ಪದಕ್ಕೆ ಒಂದು ಅರ್ಥವಿದೆಯೆಂದು ತಿಳಿಯೋಣ. ಆ ಅರ್ಥ ಆ ಪದಕ್ಕೆ ಹೇಗೆ ಬಂತು? 'ಅನ್ನ' ಎಂಬ ಪದಕ್ಕೂ, ಇನ್ನೂ ಸ್ಪಷ್ಟವಾಗಿ ಹೇಳುವುದಾದರೆ ಆ ಪದದಲ್ಲಿರುವ ಧ್ವನಿಗಳಿಗೂ, 'ಅನ್ನ' ಎಂಬ ವಸ್ತುವಿಗೂ ಏನಾದರೂ ಸಂಬಂಧವಿದೆಯೇ? ಇದು ಹಳೆಯ ಪ್ರಶ್ನೆ. ಪದ ಮತ್ತು ಅರ್ಥಗಳ ಸಂಬಂಧ ಸಹಜ ಎನ್ನುವವರಿದ್ದಾರೆ. ಅಂದರೆ ಪದವನ್ನು ಬಿಟ್ಟು ಅರ್ಥಕ್ಕೂ ಅರ್ಥವನ್ನು ಬಿಟ್ಟು ಪದಕ್ಕೂ ಯಾವ ಅಸ್ತಿತ್ವವೂ ಇಲ್ಲ. ಅವೆರಡೂ ಒಂದರೊಡನೊಂದು ರೂಪುಗೊಂಡಿವೆ. ಹಾಗಾಗಿ ಅವುಗಳ ನಡುವಣ ಸಂಬಂಧ ಸಹಜ. ಈ ಒಂದೇ ಅರ್ಥವನ್ನು ಸೂಚಿಸಲು ಬೇರೆ ಬೇರೆ ಪದಗಳಿರುವುದು ನಮಗೆ ತಿಳಿದಿದೆ. ಒಂದೇ ಭಾಷೆಯಲ್ಲಿ ಒಂದು ಅರ್ಥವನ್ನು ಸೂಚಿಸಲು ಒಂದಕ್ಕಿಂತ ಹೆಚ್ಚು ಪದಗಳಿರುವುದೂ ಸಾಧ್ಯ. ನಾಯಿ, ಡಾಗ್, ಕುತ್ತ, ಕುಕ್ಕ, ಹುಂಡ್ ಈ ಪದಗಳು

ಬೇರೆ ಬೇರೆ ಭಾಷೆಗೆ ಸೇರಿವೆ. ಅರ್ಥ ಮಾತ್ರ ಒಂದೇ ಆಗಿದೆ. ಆದ್ದರಿಂದ ಸಹಜ ಸಂಬಂಧ ವಾದವನ್ನು ಒಪ್ಪಲು ಸಾಧ್ಯವಿಲ್ಲ. ಪರ್ಯಾಯವಾಗಿ ಪದ ಮತ್ತು ಅರ್ಥಗಳ ನಡುವೆ ಇರುವ ಸಂಬಂಧ ಕೇವಲ ಔಪಚಾರಿಕವಾದದ್ದೆಂದು ತಿಳಿಯುವುದು ಸಾಧ್ಯ ಅದೊಂದು ಆಕಸ್ಮಿಕ. ಆದರೆ ಭಾಷೆಯನ್ನಾಡುವವರು ಅವುಗಳ ನಡುವೆ ಇರುವ ಸಂಬಂಧವನ್ನು ತಾವಾಗಿ ಮುರಿಯಲಾರರು. ಒಪ್ಪಿ ಬಳಸುವುದು ಅವರಿಗಿರುವ ದಾರಿ. ಪದಗಳು ಮತ್ತು ಅವುಗಳ ಅರ್ಥಗಳ ನಡುವೆ ಸಹಜ ಸಂಬಂಧವಿರುವುದಾದರೆ ಒಂದು ಪದದ ಅರ್ಥ ಎಲ್ಲ ಕಾಲದಲ್ಲೂ ಒಂದೇ ಆಗಿರುತ್ತಿತ್ತು. ಆದರೆ ನಮಗೆ ತಿಳಿದಿರುವಂತೆ ಭಾಷೆಯಲ್ಲಿ ಅರ್ಥವ್ಯತ್ಯಾಸಗಳು ನಡೆಯುತ್ತವೆ. ಇದರಿಂದಲೂ ಔಪಚಾರಿಕ ಸಂಬಂಧ ವಾದವೇ ಸರಿಯೆಂದು ತಿಳಿಯುತ್ತದೆ.

ಅರ್ಥವೆಂಬುದು ಪದವನ್ನು ಹೊರತುಪಡಿಸಿ ಪ್ರತ್ಯೇಕವಾಗಿ ಇರುವುದಿಲ್ಲ. ಲೋಕವೊಂದಿದೆ. ಅದನ್ನು ಭಾಷೆ ಪ್ರತಿನಿಧಿಸುತ್ತದೆ. ಹೀಗೆಂದು ಒಪ್ಪಿದರೆ ಸಮಸ್ಯೆಗಳು ಮೊದಲಾಗುತ್ತದೆ. ಲೋಕವನ್ನೇ ಅರ್ಥವೆಂದು ತಿಳಿಯ ತೊಡಗುತ್ತೇವೆ. ಒಂದು ಹಂತದವರೆಗೆ ಈ ಮಾತು ಸರಿ. 'ಸೂರ್ಯ' ಪದದ ಅರ್ಥವಾಗಿ ಲೋಕದಲ್ಲಿ ಒಂದು ನಿಜವಸ್ತುವಿದೆ. ಆ ವಸ್ತುವನ್ನೇ ಸೂರ್ಯ ಎಂಬ ಪದ ಸೂಚಿಸುತ್ತದೆಯೆನ್ನುವುದೇನೋ ಸರಿ. ಆದರೆ ಈ ಸಂಬಂಧ ಮಿತವ್ಯಾಪ್ತಿಯುಳ್ಳದ್ದು. ಬಹುಪಾಲು ಸಂದರ್ಭಗಳಲ್ಲಿ ಪದಗಳು ಸೂಚಿಸುವ ಅರ್ಥಕ್ಕೆ ಲೋಕದಲ್ಲಿ ಯಾವ ಸಂವಾದಿ ವಸ್ತುವೂ ಇರುವುದಿಲ್ಲ. ಮತ್ತೆ ಕೆಲವೊಮ್ಮೆ ಆ ಪದದ ಅರ್ಥಕ್ಕೆ ಒಂದು ನಿದರ್ಶನ ಮಾತ್ರ ನಮಗೆ ಲೋಕದಲ್ಲಿ ಕಾಣಸಿಗುತ್ತವೆ. 'ಮರ'ಎಂದಾಗ ಲೋಕದಲ್ಲಿರುವ ತೆಂಗಿನ ಮರ, ಮಾವಿನಮರ, ಅಡಕೆಯ ಮರ, ಅರಳಿಯ ಮರ, ಆಲದ ಮರ, ಹೀಗೆ ಯಾವುದಾದರೊಂದನ್ನು ತೋರಿಸುವುದು ಸಾಧ್ಯ. ಆದರೆ ಅದು ಒಂದು ಬಗೆಯ ಮರವನ್ನು ತೋರಿಸಿದಂತಾಯ್ತು. 'ಮರ' ಎನ್ನುವುದೆಲ್ಲಿದೆ? ನಮ್ಮ ಅನುಭವಕ್ಕೆ ಬರುವ ಲೋಕದಲ್ಲಿ ಅದಕ್ಕೆ ಸಂವಾದಿಯಾಗಿ ಏನನ್ನೂ ತೋರಿಸುವುದಿಲ್ಲ. ಪದಗಳಿಗೆ ಅರ್ಥವಿರುವಂತೆ ವಾಕ್ಯಗಳಿಗೂ ಅರ್ಥವಿರುತ್ತದೆ. ಪದಗಳ ಅರ್ಥವೆಂದರೆ ಪದದಿಂದ ಬೇರೆಯಾದ ಸ್ವತಂತ್ರ ಅಸ್ತಿತ್ವವಿರುವ ಸಂಗತಿಯೆಂದು ತಿಳಿಯುವುದು ಸರಿಯಲ್ಲವೆಂದು ಗಮನಿಸಿದ್ದೇವೆ. ಇಂಥ ಪದಗಳಿಂದ ರೂಪುಗೊಂಡ ವಾಕ್ಯದ ಅರ್ಥಕ್ಕೂ ಪ್ರತ್ಯೇಕ ಅಸ್ತಿತ್ವವನ್ನು ಕಲ್ಪಿಸುವುದಾಗದು. 'ಅದು ಕಲ್ಲು' ಎಂಬ ವಾಕ್ಯದ ಅರ್ಥವನ್ನಾಗಿ ಲೋಕದಲ್ಲಿ ನಮ್ಮಿಂದ ದೂರ ಇರುವ ಕಲ್ಲನ್ನು ತೋರಿಸಬಹುದು. ಆದರೆ 'ಅದು ಕಲ್ಲು ಅಲ್ಲ' ಎನ್ನುವ ವಾಕ್ಯಕ್ಕೇನು ಮಾಡುವುದು?

ಈ ಮೇಲಿನ ಸಮಸ್ಯೆಗಳನ್ನು ಮನಗಂಡು ಪದಗಳಿಗೆ ಇರುವ ಅರ್ಥವನ್ನು ಲೋಕದಲ್ಲಿ ಹುಡುಕುವ ವಿಧಾನವನ್ನು ಕೈಬಿಟ್ಟಿದ್ದಾರೆ. ಅಥವಾ ಅಂಥ ಪ್ರಯತ್ನಗಳಿಗೆ ಇರುವ ಮಿತಿ ಈಗ ಗೊತ್ತಾಗಿದೆ. ಪದಗಳು ಇತರ ಪದಗಳೊಡನೆ ಭಾಷೆಯಲ್ಲಿ ಬಳಕೆಯಾದಾಗ ಆ ಪದಗಳ ಅರ್ಥಭಾವ ನಮಗೆ ಗೊತ್ತಾಗುತ್ತದೆ. ಈ ಅರ್ಥಭಾವವಷ್ಟೇ ನಮ್ಮ ಭಾಷಾವ್ಯವಹಾರಕ್ಕೆ ಅವಶ್ಯ. ಪದಗಳ ಅರ್ಥಭಾವವೆಂಬುದು ಒಂದು ಸ್ವಯಂಪೂರ್ಣ ಲೋಕ. ಅದಕ್ಕೂ ನಿಜವಾದ ಲೋಕಕ್ಕೂ ಹೊಂದಾಣಿಕೆ

ಇರಲೇಬೇಕೆಂದು ವಾದಿಸುವುದಾಗದು. ಒಂದೆರಡು ನಿದರ್ಶನಗಳನ್ನು ನೋಡೋಣ. ಕನ್ನಡದಲ್ಲಿ 'ಅಕ್ಕ', 'ತಂಗಿ' ಎಂಬ ಎರಡು ಪದಗಳಿವೆ. ಇವೆರಡೂ ರಕ್ತಸಂಬಂಧವನ್ನು ಹೊಂದಿದ ಬೇರೆ ಬೇರೆ ವ್ಯಕ್ತಿಗಳನ್ನು ಸೂಚಿಸುತ್ತವೆ. ಆದರೆ ಇಂಗ್ಲಿಶಿನಲ್ಲಿ ಸಿಸ್ಟರ್ ಎಂಬ ಪದವೊಂದೇ ಈ ಎರಡೂ ಸಂಬಂಧಗಳನ್ನು ಸೂಚಿಸುತ್ತದೆ. ಅಂದರೆ ಲೋಕದಲ್ಲಿ ನನಗಿಂತ ಹಿರಿಯರಾದ ಮತ್ತು ನನಗಿಂತ ಕಿರಿಯರಾದ ಒಡಹುಟ್ಟಿದವರು ಇರುವುದು ಸಹಜ. ಒಂದು ಭಾಷೆಯ ಪದಗಳ ಅರ್ಥಭಾವ ಇವೆರಡನ್ನೂ ಬೇರೆ ಬೇರೆಯಾಗಿ ಇರಿಸಿದರೆ ಮತ್ತೊಂದು ಭಾಷೆಯ ಪದ ಒಟ್ಟಾಗಿಸಿಕೊಳ್ಳುತ್ತವೆ. ಇನ್ನೊಂದು ನಿದರ್ಶನ.

ನಾನು

ಸೋದರಿ ಸೋದರ ತಂದೆ ತಾಯಿ ಸೋದರಿ ಸೋದರ–ಕನ್ನಡ

1. ಆಂಟ್ ಅಂಕಲ್ ಫಾದರ್ ಮದರ್ ಆಂಟ್ ಅಂಕಲ್ ಇಂಗ್ಲಿಶ್

2. ಕುರ್ನ್ತಿಲಿ ಕುಮುರು ಮಾಮ ನ್ಗುನಿತ್ಯು ನ್ಗುನಿತ್ಯು ಕುಮುರು ಪಿತ್ಯಾಂತ್ಯತ್ರ

1. ಇಂಗ್ಲಿಶ್ ಭಾಷೆಯಲ್ಲಿ ಇರುವ ನಾಲ್ಕು ಬೇರೆ ಬೇರೆ ಸಂಬಂಧವಾಚಿಗಳು ಫಾದರ್, ಮದರ್, ಆಂಟ್ ಮತ್ತು ಅಂಕಲ್.

2. ಆಸ್ಟ್ರೇಲಿಯಾದ ಪಿತ್ಯಾಂತ್ಯತ್ರರ ಭಾಷೆಯಲ್ಲಿರುವ ನಾಲ್ಕು ಸಂಬಂಧವಾಚಿ ಪದಗಳು ಮಾಮ, ನ್ಗುನಿತ್ಯು, ಕುಮುರು, ಕುರ್ನ್ತಿಲಿ.

ಈ ಪದಗಳಿಗೆ ಕಾರಣವಾಗುವ ಲೋಕದಲ್ಲಿ ಆರು ಭಿನ್ನ ವ್ಯಕ್ತಿಗಳಿದ್ದಾರೆ. ಇಂಗ್ಲಿಶ್ ಪದಗಳಲ್ಲಿ ತಂದೆ ಮತ್ತು ತಾಯಿಯರ ಸೋದರಿಯರಿಗೆ ಒಂದೇ ಪದವಿದೆ. ಹಾಗೇ ಅವರ ಸೋದರರಿಗೂ ಒಂದೇ ಪದವಿದೆ. ತಂದೆ ತಾಯಿಯರಿಗೆ ಪ್ರತ್ಯೇಕ ಪದಗಳಿವೆ. ಆದರೆ ಪಿತ್ಯಾಂತ್ಯತ್ರದಲ್ಲಿ ತಂದೆ ಮತ್ತು ತಂದೆಯ ಸೋದರನಿಗೆ ಒಂದೇ ಪದ. ಹಾಗೇ ತಾಯಿ ಮತ್ತು ತಾಯಿಯ ಸೋದರಿಗೆ ಒಂದೇ ಪದ. ತಂದೆಯ ಸೋದರಿ ಮತ್ತು ತಾಯಿಯ ಸೋದರ ಇವರಿಬ್ಬರಿಗೆ ಬೇರೆ ಪದಗಳಿವೆ. ಈ ನಿದರ್ಶನಗಳಿಂದ ತಿಳಿಯುವುದಿಷ್ಟು. ಲೋಕದ ವಿವರಗಳನ್ನು ಭಾಷೆಯ ಪದಗಳು ಯಥಾವತ್ತಾಗಿ ಸೂಚಿಸುವುದಿಲ್ಲ. ತಮ್ಮ ಅರ್ಥಭಾವದಲ್ಲಿ ಹೊಂದಿಸಿಕೊಂಡಿರುತ್ತದೆ. ಆದ್ದರಿಂದ ನಮಗೆ ಪದದ ಅರ್ಥಭಾವವೇ ಮುಖ್ಯ ಲೋಕಸತ್ಯವಲ್ಲ, ಲೋಕಸತ್ಯದ ವಿವರಣೆಗೆ ಬೇರೆ ಬೇರೆ ಜ್ಞಾನಶಾಖೆಗಳು ತಂತಮ್ಮ ವಿಧಾನದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಸಸ್ಯಶಾಸ್ತ್ರದ ಗುರಿ ಸಸ್ಯಲೋಕದ ಪ್ರತಿ ವಿವರಗಳನ್ನೂ ಅಧ್ಯಯನ ಮಾಡುವುದು. ಅದಕ್ಕಾಗಿ ವಿಶಿಷ್ಟವಾದ ಪ್ರತಿಯೊಂದನ್ನೂ ಅಲ್ಲಿ ಬೇರೆಯಾಗಿ ಇರಿಸಿ ನೋಡುವರು. ನಾವು ಮಾತಿನಲ್ಲಿ 'ಬಳ್ಳಿ' ಎನ್ನುತ್ತೇವೆ. ಲೋಕದಲ್ಲಿರುವ ನೂರಾರು ಬಗೆಯ ಬಳ್ಳಿಗಳೆಲ್ಲಾ ನಮಗೆ ಕೇವಲ 'ಬಳ್ಳಿ', ಸಸ್ಯಶಾಸ್ತ್ರಜ್ಞರಿಗೆ ಎಲ್ಲವೂ ಬೇರೆ ಬೇರೆ. ನದಿ, ಹೊಳೆ, ತೊರೆ,

ಹಳ್ಳ ಎಂಬ ಪದಗಳನ್ನೇ ನೋಡಿ. ಹರಿಯುವುದು ಯಾವುದು ತೊರೆ? ಯಾವುದು ಹಳ್ಳ? ವ್ಯಾವಹಾರಿಕವಾಗಿ ನಮಗೆ ಈ ಪದಗಳನ್ನು ಬಳಸಲು ಅಡ್ಡಿಯಿಲ್ಲ. ಏಕೆಂದರೆ ಈ ಪದಗಳು ಲೋಕದ ವಾಸ್ತವವನ್ನು ಸೂಚಿಸುತ್ತಿಲ್ಲ; ತಮ್ಮದೇ ಅರ್ಥಭಾವವನ್ನು ಹೊಂದಿವೆ. ಆ ಅರ್ಥಭಾವ ಭಾಷೆಯನ್ನು ಬಳಸುವವರಿಗೆ ತಿಳಿದಿದೆ.

ಒಂದು ಪದದ ಅರ್ಥವನ್ನು ಗುರುತಿಸುವುದು ಹೇಗೆ? ಭಾಷೆಯನ್ನಾಡುವವರು ನಾವು ಬಳಸುವ ಪದಗಳ ಅರ್ಥವನ್ನು ಹೇಳಲು ಸಿದ್ಧರಾಗಿರುತ್ತಾರೆ. ಆದರೆ ಅವರ ವಿವರಣೆಗಳು ಪೂರ್ಣವಾಗಿರುವುದಿಲ್ಲ. 'ತಲೆ'ಎಂದರೇನು? ಈ ಪ್ರಶ್ನೆಗೆ ಉತ್ತರವಾಗಿ 'ದೇಹದ ಒಂದು ಭಾಗ' ಎಂದೋ ಅಥವಾ ದೇಹದ ಆ ಭಾಗವನ್ನೇ ಬೆರಳಿನಿಂದ ತೋರಿಸುತ್ತ 'ಇದು' ಎಂದೋ ಉತ್ತರಿಸುವರು. ಆದರೆ 'ತಲೆ' ಪದದ ಅರ್ಥ ಅದಷ್ಟೇ ಅಲ್ಲ. ಕನ್ನಡ ಕಿಂಚಿತ್ತೂ ತಿಳಿಯದ ವ್ಯಕ್ತಿಯೊಬ್ಬರು ಈ ಉತ್ತರದಿಂದ 'ತಲೆ'ಯೆಂದರೆ ಮನುಷ್ಯರ ದೇಹದ ಒಂದು ಭಾಗ ಎಂದೇ ತಿಳಿಯಬಹುದು. ಆಗ ಪದದ ಸಾಮಾನ್ಯ ಅರ್ಥ ಮತ್ತು ವಿಶಿಷ್ಟ ಅರ್ಥಗಳ ನಡುವೆ ಹೀಗೆ ಗೋಜಲಾಗುವುದು. ಇನ್ನು 'ತಲೆ ಸರಿಯಿಲ್ಲ', 'ತಲೆಯಾಳು' 'ತಲೆ ಬೋಳಿಸು' ಮುಂತಾದ ಉಕ್ತಿಗಳಲ್ಲಿರುವ 'ತಲೆ'ಯ ಅರ್ಥವನ್ನು ಮೇಲಿನ ವಿವರಣೆಗೆ ಹೊಂದಿಸುವುದು ಕಷ್ಟ.

ಪದಗಳು ಬೇರೆ ಬೇರೆಯಾಗಿದ್ದರೂ ಆ ಒಂದು ಭಾಷೆಯ ಪದಗಳ ನಡುವೆ ಅರ್ಥಭಾವದ ಸಂಬಂಧ ಇರುತ್ತದೆ. ಕೆಲವು ಪದಗಳ ನಡುವೆ ನಿಕಟವಾದ ಸಂಬಂಧವಿದ್ದರೆ ಮತ್ತೆ ಕೆಲವು ಪದಗಳು ಸಂಪೂರ್ಣವಾಗಿ ದೂರದಲ್ಲಿರುತ್ತವೆ. ಸಾಮಾನ್ಯವಾಗಿ ಬುದ್ಧಿ ಪ್ರಖರತೆಯನ್ನು (IQ) ಅಳೆಯುವ ಪರೀಕ್ಷೆಗಳಲ್ಲಿ ಒಂದು ಹೀಗಿರುತ್ತದೆ. ಕೆಲವು ಪದಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಆ ಪದಗಳ ಗುಂಪಿಗೆ ಸೇರುವುದಿಲ್ಲವೆಂದೂ ಆ ಪದವನ್ನು ಗುರುತಿಸಬೇಕೆಂದೂ ಸೂಚಿಸಿರುತ್ತಾರೆ. ಉದಾ: ಮಾವು, ಬೇವು, ಕಿತ್ತಳೆ, ಬಾಳೆ, ಸಪೋಟ ಈ ಗುಂಪಿನಲ್ಲಿ 'ಬೇವು' ಪದವನ್ನು ಹೊರತೆಗೆಯುವುದು ಸುಲಭ. ಉಳಿದ ಪದಗಳೆಲ್ಲ 'ತಿನ್ನುವ ಹಣ್ಣು'ಗಳನ್ನು ಸೂಚಿಸಿದರೆ ಬೇವು ಹಾಗಲ್ಲ. ಅಂದರೆ ಅದು ಉಳಿದ ಪದಾರ್ಥಗಳಿಂದ ಅರ್ಥದ ದೃಷ್ಟಿಯಿಂದ ದೂರ. ಉಳಿದವು ಸಮೀಪ. ಇದೊಂದು ಸರಳ ನಿದರ್ಶನ. ಬೇರೊಂದು ರೀತಿಯಿಂದ ಅಥವಾ ಬೇರೆ ಪದಗಳೊಡನೆ ನೋಡಿದಾಗ 'ಮಾವು' 'ಬೇವು'ಗಳು ಸಮೀಪವೂ ಆಗಿರಲು ಸಾಧ್ಯ. ಉದಾ:ಗೆ ಈ ಮುಂದಿನ ಪದಗಳ ಗುಂಪನ್ನು ನೋಡಿ. ಮಾವು, ರಾಗಿ, ಬೇವು, ಆಲ, ಅರಳಿ, ಈ ಗುಂಪಿನಲ್ಲಿ ಸಹಜವಾಗಿಯೇ ರಾಗಿ ಹೊರಗೆ ನಿಂತು ಮಾವು, ಬೇವು ಸಮೀಪವಾಗುತ್ತವೆ. ಇದರಿಂದ ಸ್ಪಷ್ಟವಾಗುವುದಿಷ್ಟು ಪದಗಳ ಅರ್ಥವೆಂಬುದು ನಿಖರವಾದ ಸಂಗತಿಯಲ್ಲ. ಸಂದರ್ಭಾನುಸಾರ ತನ್ನ ಅರ್ಥವನ್ನು ನಿರ್ಧರಿಸಿಕೊಳ್ಳುತ್ತದೆ. ಅರ್ಥ ಎನ್ನುವುದು ಒಂದು ಲಕ್ಷಣಸಮುಚ್ಚಯ. ಪದವನ್ನು ಮಾತಿನಲ್ಲಿ ನಾವು ಬಳಸಿದಾಗ ಈ ಲಕ್ಷಣಸಮುಚ್ಚಯದ ಎಲ್ಲ ಲಕ್ಷಣಗಳನ್ನೂ ಬಳಸಿಕೊಳ್ಳುವುದಿಲ್ಲ. ಮೇಲೆ ಹೇಳಿದ ನಿದರ್ಶನಗಳನ್ನೇ ಗಮನಿಸಿದರೆ ಮೊದಲ ಗುಂಪಿನಲ್ಲಿ

'ಮಾವು' ಪದಕ್ಕೆ ಇರುವ ಹಣ್ಣು ಎಂಬ ಲಕ್ಷಣವೇ ಮುಖ್ಯವಾಗಿತ್ತು. ಎರಡನೇ ಗುಂಪಿನಲ್ಲಿ ಈ ಲಕ್ಷಣ ಮುಖ್ಯವಾಗುವುದಿಲ್ಲ. ಬದಲಾಗಿ ಮರ ಎಂಬ ಲಕ್ಷಣ ಮುಖ್ಯವಾಗುತ್ತದೆ.

ಪದಗಳ ಅರ್ಥದಲ್ಲಿ ಇರುವ ಲಕ್ಷಣಗಳು ಯಾವುವೆಂದು ತಿಳಿಯಲು ಮತ್ತು ಆ ಲಕ್ಷಣಗಳಲ್ಲಿ ಯಾವುವು ಪ್ರಮುಖವೆಂದು ಗೊತ್ತುಮಾಡಲು ಪ್ರಯೋಗಗಳನ್ನು ನಡೆಸಿದ್ದಾರೆ. ಇಂಥ ಪ್ರಯೋಗಗಳಲ್ಲಿ ಪದಪಟ್ಟಿ ಮತ್ತು ಲಕ್ಷಣಗಳ ಪಟ್ಟಿಯನ್ನು ಸಂಯೋಜಿಸಲು ಮತ್ತು ಆ ಲಕ್ಷಣಗಳಲ್ಲಿ ಪ್ರಾಮುಖ್ಯವನ್ನು ಆದ್ಯತಾನುಸಾರ ಗುರುತಿಸಲು ಭಾಷೆಯನ್ನಾಡುವವರನ್ನು ಕೋರುತ್ತಾರೆ. ಅನಂತರ ಫಲಿತಾಂಶಗಳನ್ನು ಸಂಯೋಜಿಸುತ್ತಾರೆ. ಇಂಥ ಇನ್ನೂ ಬಗೆಬಗೆಯ ಪ್ರಯೋಗಗಳು ಸಾಧ್ಯ.

ಭಾಷೆಯಲ್ಲಿ ಪದಗಳಿಗೆ ಅರ್ಥವಿರುವಂತೆ, ಆ ಪದಗಳನ್ನು ಬಳಸುವವರಲ್ಲಿ ಆ ಪದಗಳ ಬಗೆಗೆ ಕೆಲವು ಅಭಿಪ್ರಾಯಗಳೂ ಇರುತ್ತವೆ. ಇಂಥ ಅಭಿಪ್ರಾಯಗಳು ಸಾಮುದಾಯಿಕ ನೆಲೆಯಲ್ಲಿದ್ದು ಒಂದು ಅತಿರೇಕಕ್ಕೆ ಹೋದಾಗ ಆ ಪದಗಳ ಸಾರ್ವಜನಿಕ ಬಳಕೆಯೇ ನಿಷಿದ್ಧವಾಗುತ್ತದೆ. ಸಾಮಾನ್ಯ ಸಂದರ್ಭಗಳಲ್ಲಿ ಇನ್ನಿತರ ಪದಗಳನ್ನು ಕುರಿತು ಬಳಕೆದಾರರು ಹೊಂದಿರುವ ಅಭಿಪ್ರಾಯಗಳನ್ನು ಗುರುತಿಸಲು ಭಾಷಾಶಾಸ್ತ್ರಜ್ಞರು ಪ್ರಯೋಗಗಳನ್ನು ಮಾಡಿದ್ದಾರೆ. ಮೊದಲು ಕೆಲವು ಪದಗಳನ್ನು ಆಯ್ಕೆ ಮಾಡಿಕೊಳ್ಳುತ್ತಾರೆ. ಜೊತೆಗೆ ಕೆಲವು ಗುಣಗಳನ್ನು ಪಟ್ಟಿಮಾಡುತ್ತಾರೆ. ಈ ಗುಣಗಳಲ್ಲಿ ಒರಟುತನ, ಶಕ್ತತೆ, ಕ್ರಿಯಾಶೀಲತೆ, ಗಾತ್ರ, ಆಕಾರ, ನವೀನತೆ, ಹೀಗೆ ಹಲವು ಇರುತ್ತವೆ. ಪ್ರತಿ ಪದದ ಸಂದರ್ಭಕ್ಕೂ ಈ ಗುಣಗಳು ಉಪಯುಕ್ತವೋ ಅಲ್ಲವೋ ಎಂಬುದು ಮುಖ್ಯವಲ್ಲ. ಅನಂತರ ಈ ಗುಣಗಳು ಆ ಪದದಲ್ಲಿ ಇವೆಯೋ ಇಲ್ಲವೋ ಎಂಬುದನ್ನು ಗುರುತಿಸಲು ಒಂದು ಆದ್ಯತಾ ಪಟ್ಟಿಯನ್ನು ರೂಪಿಸುತ್ತಾರೆ. ಉದಾ:ಗೆ ಕ್ರಿಯಾಶೀಲ ಎಂಬ ಗುಣವನ್ನು ತೆಗೆದುಕೊಳ್ಳೋಣ. ಈ ಗುಣದ ಆದ್ಯತಾಪಟ್ಟಿ ಹೀಗಿರುತ್ತದೆ.

ಕ್ರಿಯಾಶೀಲ | * | * | * | * | * | * | * | ಜಡ

ಈ ರೇಖೆಯ ಮೇಲಿರುವ ಗುರುತುಗಳು (ಏಳು ಅವಧಿಗಳು) ಸಮಾನ ದೂರದಲ್ಲಿರುತ್ತವೆ. ಒಂದು ಪದದ ಗುಣಗಳನ್ನು ಗುರುತಿಸುವಾಗ ಅದು ಅತ್ಯಂತ ಕ್ರಿಯಾಶೀಲವೆಂದು ಭಾವಿಸಿದರೆ ಆಗ 'ಕ್ರಿಯಾಶೀಲ' ತುದಿಯ ಅವಧಿಯನ್ನು, ಅದು ಅತ್ಯಂತ ಜಡ ಎಂದು ಭಾವಿಸಿದರೆ 'ಜಡ' ತುದಿಯ ಅವಧಿಯನ್ನು ಆಯ್ಕೆ ಮಾಡುತ್ತಾರೆ. ಕ್ರಿಯಾಶೀಲತೆ ಮತ್ತು ಜಡತೆಗಳ ನಡುವೆ ಇರುವ ತರತಮ ಸ್ಥಿತಿಯನ್ನು ಗುರುತಿಸಲು ನಡುವೆ ಇರುವ ಐದು ಅವಧಿಗಳು ನೆರವಿಗೆ ಬರುತ್ತವೆ. 'ಗಾಳಿ'ಎನ್ನುವ ಪದದ ಗುಣವನ್ನು ಗುರುತಿಸುವಾಗ ಕ್ರಿಯಾಶೀಲ ತುದಿಯನ್ನು, 'ಕಲ್ಲು' ಎನ್ನುವ ಪದದ ಗುಣವನ್ನು ಗುರುತಿಸುವಾಗ ಜಡ ತುದಿಯನ್ನು ಆಯ್ಕೆ ಮಾಡುವುದು ಸಹಜವೆನ್ನೋಣ. 'ಆನೆ', 'ಬೆಕ್ಕು' ಮುಂತಾದ ಪದಗಳು ಎದುರಾದಾಗ ಭಾಷಿಕರು ಈ ಎರಡು ಅತಿಗಳ

ನಡುವೆ ಇರುವ ಅವಧಿಗಳಲ್ಲಿ ಯಾವುದಾದರೊಂದನ್ನು ಆಯ್ಕೆಮಾಡುವರು. ಇದೊಂದು ಕಲ್ಪಿತ ಉದಾಹರಣೆ. ನಿಜವಾದ ಪ್ರಯೋಗಗಳು ಇನ್ನೂ ಸಂಕೀರ್ಣವಾಗಿರುತ್ತವೆ. ಈ ಸಂಕೀರ್ಣತೆ ಪ್ರಯೋಗದ ರಚನೆಗೆ ಸಂಬಂಧಿಸಿದ್ದು. ಭಾಷೆಯನ್ನಾಡುವವರು ಪ್ರಯೋಗದಲ್ಲಿ ಯಾವ ಇಕ್ಕಟ್ಟನ್ನೂ ಅನುಭವಿಸುವುದಿಲ್ಲ. ತಮ್ಮ ಮನಸ್ಸಿಗೆ ಬಂದ ಆಯ್ಕೆಗಳನ್ನು ಗುರುತು ಮಾಡಿದರಾಯ್ತು. ಮೇಲುನೋಟಕ್ಕೆ ಈ ಪ್ರಯೋಗದಿಂದ ಎರ್ರಾಬಿರ್ರಿ ಫಲಿತಾಂಶಗಳು ಬರುವಂತೆ ತೋರುತ್ತದೆ. ಆದರೆ ನಡೆದಿರುವ ಪ್ರಯೋಗಗಳಿಂದ ಭಾಷಿಕರು ತಮಗೆ ತಿಳಿಯದಂತೆ ಪದಗಳ ಗುಣಗಳನ್ನು ಕುರಿತಂತೆ ಸಮಾನ ಅಭಿಪ್ರಾಯಗಳನ್ನು ಹೊಂದಿರುವುದು ತಿಳಿದು ಬಂದಿದೆ.

ಈ ಪ್ರಯೋಗದ ಮುಂದುವರೆದ ಹಂತವೊಂದಿದೆ. ಒಂದು ಭಾಷೆಯನ್ನಾಡುವವರು ಪದವೊಂದರ ಗುಣಗಳನ್ನು ಕುರಿತು ಹೊಂದಿರುವ ಅಭಿಪ್ರಾಯಗಳು ಇನ್ನೊಂದು ಭಾಷೆಯವರಿಗೆ ಸಲ್ಲುವುದಿಲ್ಲ. ಅವರ ಅಭಿಪ್ರಾಯಗಳೇ ಬೇರೆ ಇರುತ್ತವೆ. ಹೀಗೆ ಬೇರೆ ಬೇರೆ ಭಾಷೆಗಳಲ್ಲಿ ದೊರೆತ ಫಲಿತಾಂಶಗಳನ್ನು ಹೋಲಿಸುವ ಯತ್ನಗಳೂ ನಡೆದಿವೆ. ಈ ಕೆಳಗಿನ ಚಿತ್ರವನ್ನು ನೋಡಿರಿ. ಇದು ಹೋಪಿ, ಝುನಿ ಮತ್ತು ನವಾಹೋ ಭಾಷೆಗಳಿಂದ ದೊರೆತ ಮಾಹಿತಿಯನ್ನು ಆಧರಿಸಿದೆ. ಈ ಮೂರೂ ಉತ್ತರ ಅಮೆರಿಕದ ಮೂರು ಬೇರೆ ಬೇರೆ ಬುಡಕಟ್ಟು ಜನಾಂಗಗಳ ಭಾಷೆಗಳು.

**ಗಂಡಸು**



'ಗಂಡಸು' ಪದವನ್ನು ಆಯ್ಕೆ ಮಾಡಿದ್ದಾರೆ. ಮೂರು ಗುಣಗಳನ್ನು ಸೂಚಿಸಿದ್ದಾರೆ. ಗಂಡಸು ಒಳ್ಳೆಯವನೋ, ಕೆಟ್ಟವನೋ, ಬಲಶಾಲಿಯೋ, ದುರ್ಬಲನೋ,

ಪಟುತ್ವವುಳ್ಳವನೋ ನಿಧಾನಿಯೋ ಎಂಬುವುದು ಆಯ್ಕೆಯ ವಿಷಯಗಳು. ಫಲಿತಾಂಶಗಳನ್ನು ಗೆರೆಗಳ ಮೇಲೆ ಬಾಣದ ಗುರುತಿನಿಂದ ತೋರಿಸಿದೆ. ಮೂರು ಭಾಷೆಯ ಜನರು ಆ ಪದದ ಗುಣದ ಬಗ್ಗೆ ಹೊಂದಿರುವ ಅಭಿಪ್ರಾಯ ಬೇರೆ ಬೇರೆಯಾಗಿರುವುದು ಸ್ಪಷ್ಟ. ಆದರೂ ಹೋಪಿ ಮತ್ತು ಝುನಿ ಭಾಷೆಯವರು ಪರಸ್ಪರ ಹತ್ತಿರವಿದ್ದಾರೆ. ನವಾಹೋ ಜನ ಇವರಿಬ್ಬರಿಂದ ಕೊಂಚ ದೂರವಿದ್ದಾರೆ. ಹೀಗೆ ಪದದ ಅರ್ಥವನ್ನು ಕುರಿತು ಭಾಷಿಕರು ಹೊಂದಿರುವ ಅಭಿಪ್ರಾಯಗಳನ್ನು ತಿಳಿಯಲು ಹಲವು ಬಗೆಯ ಮತ್ತು ಹಲವು ನಿಟ್ಟಿನ ಪ್ರಯೋಗಗಳು ನಡೆದಿವೆ.

ಪದಗಳಲ್ಲಿ ಯಾವ ಗುಣಗಳು ಯಾವ ಪ್ರಮಾಣದಲ್ಲಿವೆ ಎಂಬುದನ್ನು ಭಾಷಿಕರು ಗುರುತಿಸುವ ಪ್ರಯೋಗಗಳಿಗೆ ಮಿತಿಗಳಿವೆ. ಮುಖ್ಯವಾಗಿ ಈ ಪ್ರಯೋಗಗಳು ಪದದ ಅರ್ಥವೇನೆಂಬುದನ್ನು ಗುರುತಿಸಲು ನೆರವಾಗುವುದಿಲ್ಲ. ಪದಕ್ಕೆ ಅರ್ಥವಿರುವುದನ್ನು ಮೊದಲು ಒಪ್ಪುವುದು; ಅನಂತರ ಆ ಅರ್ಥವನ್ನು ಕುರಿತು ಭಾಷಿಕರು ಯಾವ ದೃಷ್ಟಿಕೋನವನ್ನು ಹೊಂದಿದ್ದಾರೆಂದು ತಿಳಿಯಲು ಈ ಪ್ರಯೋಗಗಳು ನೆರವಾಗುತ್ತವೆ. ಪದಗಳ ಬಳಕೆ, ಆಯ್ಕೆ, ಇತರ ಪದಗಳೊಡನೆ ಸಂಯೋಜನೆ ಇವೇ ಮುಂತಾದ ಸಂಗತಿಗಳನ್ನು ಅಧ್ಯಯನ ಮಾಡುವವರಿಗೆ ಇಂಥ ಪ್ರಯೋಗಗಳು ಉಪಯುಕ್ತ ಮಾಹಿತಿಗಳನ್ನು ಒದಗಿಸುತ್ತವೆ.

ಪದಗಳಲ್ಲಿ ಧ್ವನಿಗಳಿರುತ್ತವೆ. ಆ ಧ್ವನಿಗಳು ಗೊತ್ತಾದ ಕ್ರಮದಲ್ಲಿ ಅಳವಟ್ಟಿರುತ್ತವೆ. ಈ ಪದಕ್ಕೆ ಅರ್ಥವೂ ಇರುತ್ತದೆ. ಬಹು ಹಿಂದಿನಿಂದಲೂ ಕಾಡುತ್ತಿರುವ ಪ್ರಶ್ನೆಯೊಂದಿದೆ. ಪದದ ಅರ್ಥವೆಂಬುದು ಪದದಲ್ಲಿ ಎಲ್ಲಿ ಅಡಗಿದೆ? ಪದದ ಧ್ವನಿಗಳಿಗೂ ಪದದ ಅರ್ಥಕ್ಕೂ ಇರುವ ಸಂಬಂಧ ಔಪಚಾರಿಕ. ಇದನ್ನು ತಿಳಿದ ಮೇಲೂ ನಮ್ಮ ಪ್ರಶ್ನೆ ಹಾಗೇ ಉಳಿಯುತ್ತದೆ. ಸಂಬಂಧವೇನೇ ಇರಲಿ. ಒಂದು ಪದದ ಅರ್ಥ ನಮಗೆ ಗೊತ್ತಾಗುವುದು ಯಾವಾಗ?ಆ ಪದದ ಧ್ವನಿಗಳನ್ನು ಒಂದೊಂದಾಗಿ ಉಚ್ಚರಿಸುತ್ತ ಹೋದಂತೆ ಅರ್ಥವೂ ಹಂತಹಂತವಾಗಿ ಗೋಚರವಾಗುವುದೇ? ಅಥವಾ ಎಲ್ಲ ಧ್ವನಿಗಳನ್ನೂ ಉಚ್ಚರಿಸಿಯಾದ ಮೇಲೆ ಒಟ್ಟಾಗಿ ಅರ್ಥ ನಮಗೆ ತಿಳಿಯುವುದೇ? ಭಾರತೀಯ ಚಿಂತನೆಗಳಲ್ಲಿ ಸ್ಫೋಟವಾದವೆಂಬುದೊಂದಿದೆ. ಅದರಂತೆ ಧ್ವನಿಗಳಲ್ಲಿ ಕೊನೆಯದನ್ನು ಉಚ್ಚರಿಸಿದ ಕೂಡಲೇ ನಮ್ಮ ಮನಸ್ಸಿನಲ್ಲಿರುವ ಅರ್ಥಸ್ಫೋಟವಾಗುತ್ತದೆ. ಧ್ವನಿಗಳು ಮತ್ತು ಅವುಗಳ ಕ್ರಮಬದ್ಧ ಉಚ್ಚಾರಣೆ ಈ ಅರ್ಥಸ್ಫೋಟಗೊಳ್ಳಲು ಪ್ರಚೋದಕ. ಸ್ಫೋಟವಾದವು ಅರ್ಥವು ನಮಗೆ ತಿಳಿಯುವ ಕ್ರಮವನ್ನು ವಿವರಿಸುತ್ತ ಮುಖ್ಯವಾದ ಒಳನೋಟಗಳನ್ನು ಒದಗಿಸಿದೆ.

ಒಂದು ಸಮಸ್ಯೆ ಹಾಗೆಯೇ ಉಳಿಯುತ್ತದೆ. ಪದವೆಂದಾಗ ನಾವು ಏನನ್ನು ಗಮನದಲ್ಲಿ ಇರಿಸಿಕೊಳ್ಳುತ್ತೇವೆ. ಮರ, ಮರದ, ಮರದಿಂದ, ಮರದಲ್ಲಿ, ಮರವನ್ನು, ಮರಗಳು, ಮರಗಟ್ಟು ಇವೆಲ್ಲವೂ ಪದಗಳೇ. ಇವೆಲ್ಲದರಲ್ಲೂ ಮರ ಎಂಬ ಭಾಗ ಸಮಾನವಾಗಿದೆ. ಅಲ್ಲದೆ ಅದಕ್ಕೆ ಪ್ರತ್ಯೇಕ ಅರ್ಥವೂ ಇದೆ. ಮರದ ಮತ್ತು ಮರದಿಂದ

ಎಂಬ ಪದಗಳ ನಡುವೆ ರಚನೆಯಲಿ ಮಾತ್ರವಲ್ಲ ಅರ್ಥದಲ್ಲೂ ವ್ಯತ್ಯಾಸವಿದೆ. ಈ ವ್ಯತ್ಯಾಸಕ್ಕೆ ಕಾರಣವಾಗುವ ಧ್ವನಿಗಳು ಆಯಾ ಪದದ ಭಾಗಗಳಾಗಿವೆ. ಆ ಭಾಗಗಳಿಗೆ ಸ್ವತಂತ್ರವಾದ ಅರ್ಥವಿಲ್ಲ. ಪದದ ಅರ್ಥವನ್ನು ಗುರುತಿಸುವಾಗ ಹೀಗೆ ಸ್ವತಂತ್ರವಾದ ಭಾಗವೊಂದು, ಅಧೀನ ಅಥವಾ ಆಶ್ರಿತವಾದ ಭಾಗವೊಂದು ಒಟ್ಟಾಗಿ ನೆರವಾಗುತ್ತದೆ. ಆದ್ದರಿಂದ ಪದದ ಅರ್ಥವನ್ನೂ ಘಟಕಗಳನ್ನಾಗಿ ಒಡೆಯಬಹುದೆಂದಾಯಿತು. ಈ ಸ್ವಯಂಪೂರ್ಣವಾದ ಪದಭಾಗವೊಂದನ್ನು ಗುರುತಿಸುತ್ತಾರೆ. ಮೇಲೆ ಹೇಳಿದ ಉದಾಹರಣೆಯಲ್ಲಿ ಮರ ಅಂಥದೊಂದು ಭಾಗ. ಈ ಭಾಗವನ್ನು ಪ್ರಕೃತಿಯೆಂದು ಕೆಲವರೂ, ಕಾಂಡವೆಂದು ಮತ್ತೆ ಕೆಲವರೂ ಕರೆಯುತ್ತಾರೆ. ಇನ್ನೂ ಕೆಲವೊಮ್ಮೆ ಅರ್ಥವೆಂಬುದು ಪ್ರತೀತಿಯಾಗಲು ಪದಕ್ಕಿಂತ ದೊಡ್ಡ ಘಟಕವೇ ಬೇಕಾಗುತ್ತವೆ. ಒಂದಕ್ಕಿಂತ ಹೆಚ್ಚು ಪದಗಳು ಸೇರಿದ ರಚನೆಯೊಂದನ್ನು ಗಮನಿಸೋಣ. ಉದಾ: 'ನೆಗೆದುಬೀಳು' ಈ ರಚನೆಯ ಅರ್ಥ 'ಸಾಯು'. ಆದರೆ 'ನೆಗೆದು' ಮತ್ತು 'ಬೀಳು' ಎಂಬ ಪದಗಳ ಅರ್ಥಕ್ಕೂ ಇಡಿಯಾಗಿ ದೊರಕಿದ 'ಸಾಯು' ಎಂಬ ಅರ್ಥಕ್ಕೂ ನೇರವಾಗಿ ಏನೂ ಸಂಬಂಧಿಲ್ಲ. ಅಂದರೆ ಅರ್ಥದ ದೃಷ್ಟಿಯಿಂದ 'ನೆಗೆದುಬೀಳು' ಎಂಬ ರಚನೆಯನ್ನು ಚಿಕ್ಕ ಘಟಕಗಳನ್ನಾಗಿ ಒಡೆಯುವುದು ಸಾಧ್ಯವಿಲ್ಲ.

ಭಾಷೆಯಲ್ಲಿ ಹಲವಾರು ಸಾವಿರ ಪದಗಳಿರುತ್ತವೆ. ಒಂದೊಂದೂ ಸ್ವತಂತ್ರ ಘಟಕವೇ ಸರಿ. ಅರ್ಥದ ದೃಷ್ಟಿಯಿಂದ ಒಂದೊಂದೂ ಬೇರೆ ಎನ್ನಿಸಿಲು ಕಾರಣವಾಗುವ ವಿಶಿಷ್ಟ ಗುಣಲಕ್ಷಣಗಳನ್ನು ಹೊಂದಿರುತ್ತವೆ. ಈಗಾಗಲೇ ಕೊಟ್ಟ ಉದಾಹರಣೆಯಲ್ಲಿ ಹೇಳಿದಂತೆ ಮಾವು ಮತ್ತು ಬೇವು ಪದಗಳು ಬೇರೆ ಬೇರೆ ಅರ್ಥಗಳನ್ನು ಹೊಂದಿವೆ. 'ಮರ' ಎಂಬ ಲಕ್ಷಣವನ್ನು ಲೆಕ್ಕಕ್ಕೆ ಹಿಡಿದರೆ ಅವೆರಡರಲ್ಲೂ ಸಮಾನತೆಯೂ ಇದೆ. ಈ ಅಂಶವನ್ನು ಆಧರಿಸಿ ಭಾಷೆಯ ಪದಗಳನ್ನು ಒಳಗುಂಪುಗಳನ್ನಾಗಿ ವರ್ಗೀಕರಿಸುವ ಪ್ರಯತ್ನಗಳು ಹಿಂದಿನಿಂದಲೂ ನಡೆದುಬಂದಿದೆ.

ವೈಯಾಕರಣರು ತಮ್ಮದೇ ಆದ ರೀತಿಯಲ್ಲಿ ಪದಗಳನ್ನು ವರ್ಗೀಕರಿಸಿಕೊಂಡಿದ್ದಾರೆ. ನಾಮಪದ, ಕ್ರಿಯಾಪದ, ವಿಶೇಷಣ, ಅವ್ಯಯ ಹೀಗೆ ಹಲವು ಪದವರ್ಗಗಳಿವೆ. ಇವು ಅರ್ಥಾನುಸಾರಿಯಾಗಿ ರೂಪುಗೊಂಡ ವರ್ಗಗಳಲ್ಲ; ವ್ಯಾಕರಣದ ದೃಷ್ಟಿಯಿಂದ ಈ ಪದಗಳು ಮಾಡುವ ಕೆಲಸವನ್ನು ಆಧರಿಸಿ ಇಂಥ ವರ್ಗಗಳನ್ನು ರಚಿಸಲಾಗಿದೆ. ಆದರೆ ಅರ್ಥವನ್ನು ಈ ವರ್ಗಗಳು ಯಾವಾಗಲೂ ನಿರ್ಲಕ್ಷಿಸುತ್ತವೆ ಎನ್ನುವಂತಿಲ್ಲ. ನಾಮಪದಗಳಲ್ಲಿ ಹಲವು ಉಪವರ್ಗಗಳು ಇರುತ್ತವೆ. ಕನ್ನಡದಲ್ಲಿ ಮಾನವ ಮತ್ತು ಮಾನವೇತರವೆಂಬ ಎರಡು ಉಪವರ್ಗಗಳನ್ನು ಕಲ್ಪಿಸುವುದು ಅವಶ್ಯ. ಏಕೆಂದರೆ ಬಹುವಚನ ಪ್ರತ್ಯಯಗಳಾದ–ಗಳು ಮತ್ತು –ರು ಯಾವ ನಾಮಪದಗಳಿಗೆ ಸೇರಬೇಕೆಂದು ನಿರ್ಣಯಿಸಲು ಈ ವರ್ಗೀಕರಣ ಅವಶ್ಯ. ಮಾನವ ಉಪವರ್ಗದ ನಾಮಪದಗಳಿಗೆ ಸಾಮಾನ್ಯವಾಗಿ –ರು ಪ್ರತ್ಯಯ ಮತ್ತು (ಉದಾ:ಹುಡುಗರು, ಜನರು, ಹೆಂಗಸರು)–ಗಳು ಪ್ರತ್ಯಯ ಹತ್ತಬಲ್ಲವು (ಉದಾ:ಮಂತ್ರಿಗಳು, ಗುರುಗಳು). ಮಾನವೇತರ ನಾಮಪದಗಳಿಗೆ–ಗಳು ಪ್ರತ್ಯಯವು ಮಾತ್ರ (ಉದಾ:ಗಿಡಗಳು, ಪುಸ್ತಕಗಳು)ಹತ್ತಬಲ್ಲವು.

ನಿಯಮವೇನೇ ಇರಲಿ. ಈ ಉಪ ಪದವರ್ಗಗಳನ್ನು ರೂಪಿಸುವಾಗ ಆಯಾ ನಾಮಪದಗಳ ಅರ್ಥದ ಕೆಲವು ಲಕ್ಷಣಗಳನ್ನು ಪರಿಗಣಿಸಿರುವುದು ನಿಜವಷ್ಟೆ.

ಅರ್ಥವನ್ನು ಮಾತ್ರ ಗಮನಿಸಿ ಪದಗಳನ್ನು ವರ್ಗೀಕರಿಸುವುದು ಕೂಡ ಬಳಕೆಯಲ್ಲಿದೆ. ಸಾಮಾನ್ಯ ವರ್ಗೀಕರಣ ಕ್ರಮಗಳಲ್ಲಿ ಹಲವು ನಮಗೆಲ್ಲ ಪರಿಚಿತವೇ ಆಗಿವೆ. ಉದಾಹರಣೆಗೆ ದೇಹದ ಅಂಗಾಂಗಳು, ಗೃಹೋಪಯೋಗಿ ವಸ್ತುಗಳು, ಬೆಳೆಗಳು, ನಿರ್ದಿಷ್ಟ ವೃತ್ತಿಯ ಉಪಕರಣಗಳು, ಸಂಬಂಧವಾಚಿಗಳು ಇತ್ಯಾದಿ. ಆದರೆ ಇಂಥ ವರ್ಗೀಕರಣಗಳಿಗೆ ಕೊನೆಯೆಂಬುದಿಲ್ಲ. ಒಂದೇ ಪದ ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ವರ್ಗಗಳಲ್ಲೂ ಕಾಣಿಸಿಕೊಳ್ಳುತ್ತವೆ. ಭಾಷೆಯ–ಮುಖ್ಯವಾಗಿ ಇಂಗ್ಲಿಶ್ ಭಾಷೆಯ–ಪದಗಳನ್ನು ಸಮಗ್ರವಾಗಿ ವರ್ಗೀಕರಣ ಯತ್ನವೊಂದನ್ನು ಪೀಟರ್ ಮಾರ್ಕ್ ರೊಜೆಟ್ (1779–1869)ಎಂಬಾತ ಮಾಡಿದನು. ಆತ ಇಡೀ ಪದಕೋಶವನ್ನು ಆರು ಮುಖ್ಯವರ್ಗಗಳಲ್ಲಿ ವಿಭಜಿಸಿದ್ದಾನೆ. ಅಮೂರ್ತ ಸಂಬಂಧಗಳು, ಸ್ಥಳ, ವಸ್ತು, ಬುದ್ಧಿಮತ್ತತೆ, ಸ್ವೋಪಜ್ಞತೆ ಮತ್ತು ಹಾರ್ದತೆ ಇವೇ ಆರು ವರ್ಗಗಳು. ಇವುಗಳನ್ನು ಮತ್ತೆ ಹಲವು ಉಪವರ್ಗಗಳನ್ನಾಗಿ ಒಡೆದು ಒಟ್ಟು 1,000 ಪದವರ್ಗಗಳನ್ನು ರೊಜೆಟ್ ರೂಪಿಸಿದನು.

ಮೊದಲು ಹೀಗೆ ಅರ್ಥವಲಯಗಳನ್ನು ರೂಪಿಸಿ ಅನಂತರ ಪ್ರತಿಯೊಂದು ವರ್ಗದೊಳಗೆ ಸೇರುವ ಪದಗಳನ್ನು ಗುರುತಿಸುವ ಮೂಲಕ ಒಂದು ಕೋಶವನ್ನು ರೊಜೆಟ್ ರಚಿಸಿದ. ಥೆಸಾರಸ್ ಎಂದು ಅಂಥ ಕೋಶಗಳನ್ನು ಕರೆಯುತ್ತಾರೆ. ರೋಜೆಟ್‌ನ ಮಾದರಿಯಲ್ಲಿ ಬದಲಾವಣೆಗಳನ್ನು ಮಾಡಿ ಬೇರೆ ಬೇರೆ ರೀತಿಯ ಥೆಸಾರಸ್‌ಗಳನ್ನು ಇಂಗ್ಲಿಶಿನಲ್ಲಿ ರಚಿಸಲಾಗಿದೆ. ಇಂಗ್ಲಿಶಿಗೆ ಅನ್ವಯಿಸುವ ವರ್ಗ–ಉಪವರ್ಗ ವಿಭಜನೆ ಅನ್ಯಭಾಷೆಗಳಿಗೆ ಯಥಾವತ್ತಾಗಿ ಅನ್ವಯವಾಗದೆಯೂ ಇರಬಹುದು. ಆದ್ದರಿಂದ ಪ್ರತಿಯೊಂದು ಭಾಷೆಯಲ್ಲೂ ಇಂಥ ವರ್ಗೀಕರಣ ಕೊಂಚಮಟ್ಟಿಗೆ ಸ್ವತಂತ್ರವಾಗಿಯೂ ನಡೆಯಬೇಕು.

ಥೆಸಾರಸ್‌ಗಳು ಭಾಷೆಯನ್ನು ಬಳಸುವ ಹಲವು ವಲಯಗಳಲ್ಲಿ ಉಪಯೋಗಕ್ಕೆ ಬರುತ್ತವೆ. ಆದರೆ ಅರ್ಥದ ಸ್ವರೂಪವನ್ನು ಹುಡುಕುವವರಿಗೆ ಅಷ್ಟು ಪ್ರಯೋಜನಕ್ಕೆ ಬಾರವು. ಏಕೆಂದರೆ ಅಲ್ಲಿ ಒಂದು ಪದದ ಅರ್ಥವೇನೆಂಬುದು ಇರುವುದಿಲ್ಲ. ಇತರ ಪದಗಳೊಡನೆ ಇರುವ ಅರ್ಥಸಾಮ್ಯಗಳು ಮಾತ್ರ ಕಾಣಸಿಗುತ್ತವೆ. ಅರ್ಥಸಾಮ್ಯದ ಆಧಾರದ ಮೇಲೆ ರೂಪುಗೊಂಡ ಅರ್ಥವಲಯಗಳು ಬೇರೊಂದು ರೀತಿಯಲ್ಲಿ ಉಪಯುಕ್ತವಾಗಬಲ್ಲವು. ಸಾಂಪ್ರದಾಯಿಕವಾದ ನಿಘಂಟುಗಳಲ್ಲಿ ಪದಗಳನ್ನು ಅಥವಾ ನಮೂದುಗಳನ್ನು ಅಕಾರಾದಿಯಾಗಿ ಜೋಡಿಸಿರುತ್ತಾರಷ್ಟೆ. ಈ ನಿಘಂಟುಗಳನ್ನು ನೋಡಿದರೆ ನಮ್ಮ ಮೆದುಳಿನಲ್ಲಿರುವ ಪದಕೋಶವು ಹೀಗೇ ಅಕಾರಾದಿಯಾಗಿ ಜೋಡಣೆಯಾಗಿರುವುದೆಂದು ನಂಬುವಂತಾಗುತ್ತದೆ. ಮೆದುಳಿನ ಈ ಪದಕೋಶ ಹೇಗೆ ವ್ಯವಸ್ಥೆಯಾಗಿರುವುದೆಂದು ಇನ್ನೂ ಖಚಿತವಾಗಿ ಹೇಳಲು ಬರುವುದಿಲ್ಲವಾದರೂ ಅಕಾರಾದಿಯಾಗಂತೂ ಜೋಡಣೆಯಾಗಿರುವುದಿಲ್ಲ. ಪದಗಳ ಅರ್ಥಭಾವ ಮತ್ತು ಅರ್ಥವಲಯಗಳಿಗೆ ಅನುಗುಣವಾಗಿ ಈ ಪದಗಳು ಮೆದುಳಿನಲ್ಲಿ ಅಳವಡಿಕೆಯಾಗಿರುವ ಸಾಧ್ಯತೆಗಳು ಹೆಚ್ಚು. ಪದಗಳನ್ನು ನಾವು ಬಳಸಬೇಕಾಗಿ ಬಂದಾಗ ನೆನಪಿನಿಂದ

ಪದಗಳನ್ನು ಹೇಗೆ ಹೆಕ್ಕಿಕೊಳ್ಳುತ್ತೇವೆ ಎಂಬುದು ಕುತೂಹಲದ ಪ್ರಶ್ನೆ. ಥೆಸಾರಸ್‌ಗಳಲ್ಲಿ ಮೆದುಳಿನ ಪದಕೋಶದ ರಚನೆಯ ನಿಯಮಗಳ ಸುಳಿವು ನಮಗೆ ದೊರಕುತ್ತದೆ.

ಸಾಮಾನ್ಯವಾಗಿ ಬಳಕೆಯಲ್ಲಿ ಪದಗಳ ಆಯ್ಕೆಯನ್ನು ನಿರ್ಧರಿಸುವ ಸಂಬಂಧಗಳು ಎರಡು:

1. ವಾಕ್ಯಾತ್ಮಕ ಸಂಬಧ

2. ರೂಪಾವಳಿ ಸಂಬಂಧ

'ನಾನು ದಿನವೂ ಬೆಳಿಗ್ಗೆ– ಓದುತ್ತೇನೆ'. ಈ ವಾಕ್ಯದಲ್ಲಿ ತೆರಪಾಗಿರುವ ಜಾಗದಲ್ಲಿ ಯಾವ ಪದ ಬರಬಹುದು? ಯಾವುದಾದರೂ ಸರಿ ಎನ್ನುವಂತಿಲ್ಲ. ಪೇಪರ್, ಪುಸ್ತಕ, ಕಾಗದ ಇತ್ಯಾದಿ ಪದಗಳು ಮಾತ್ರ ಬರಬಲ್ಲವು. ಅಥವಾ ನಿಂತು, ಕುಳಿತು, ಮಲಗಿ, ಓಡುತ್ತ, ನಡೆಯುತ್ತ ಎಂಬಂಥ ಅಪೂರ್ಣ ಕ್ರಿಯಾಪದಗಳು ಬರುವುದೂ ಸಾಧ್ಯ. ಹೀಗೆ ವಾಕ್ಯದ ಪದಗಳ ನಡುವೆ ರಚನೆಯಾಗುವ ಅರ್ಥಭಾವದ ಸಂಬಂಧವನ್ನು ವಾಕ್ಯಾತ್ಮಕ ಸಂಬಂಧವೆನ್ನುವರು. 'ರೈಲು ಬೆಳಿಗ್ಗೆ ಬರಬೇಕಿತ್ತು. ಅದರೆ ರಾತ್ರಿ ಬಂತು' ಎಂಬ ಎರಡು ವಾಕ್ಯಗಳಲ್ಲಿ ಬೆಳಿಗ್ಗೆ ಮತ್ತು ರಾತ್ರಿ ಎಂಬ ಪದಗಳ ನಡುವೆ ಇರುವ ಸಂಬಂಧವನ್ನು ರೂಪಾವಳಿಯ ಸಂಬಂಧವೆನ್ನುವರು. ಒಂದು ರೂಪಾವಳಿಯಲ್ಲಿ ಹಲವಾರು ಪದಗಳಿರುತ್ತವೆ. ಅವುಗಳಲ್ಲಿ ಒಂದರ ಬದಲಾಗಿ ಇನ್ನೊಂದನ್ನು ಬಳಸುವುದು ಸಾಧ್ಯ. ರೂಪಾವಳಿ ಸಂಬಂಧದಲ್ಲಿ ಕೆಲವು ಪ್ರಭೇದಗಳಿವೆ.

**ಸಮಾನಾರ್ಥಕ**

ಭಾಷೆಯಲ್ಲಿ ಸಮಾನಾರ್ಥಕ ಪದಗಳನ್ನು ಗುರುತಿಸುವುದು ಬಹು ಹಿಂದಿನಿಂದಲೂ ನಡೆದು ಬಂದ ಪದ್ಧತಿ. ಸಂಸ್ಕೃತದ ಅಮರಕೋಶ ಇದಕ್ಕೊಂದು ಉದಾಹರಣೆ. ಸೂರ್ಯ, ಭಾನು, ಆದಿತ್ಯ, ತರಣಿ, ರವಿ, ಮಾರ್ತಾಂಡ ಮುಂತಾದವು ಒಂದೇ ಅರ್ಥವನ್ನು ಹೊಂದಿವೆ. ಹಾಗಾಗಿ ಅವುಗಳಲ್ಲಿ ಒಂದರ ಜಾಗದಲ್ಲಿ ಇನ್ನೊಂದು ಬರುವುದು ಸಹಜ. ಈ ಪದಗಳು ರೂಪಾವಳಿ ಸಂಬಂಧವನ್ನು ಹೊಂದಿವೆ.

**ವಿರುದ್ಧಾರ್ಥಕ**

ಇವು ಸಮಾನ್ಯವಾಗಿ ಜೋಡಿಪದಗಳು. ಒಂದರ ಅರ್ಥಭಾವವನ್ನು ನಿರಾಕರಿಸುವ ಇನ್ನೊಂದು ಪದವನ್ನು ಗುರುತಿಸಿ ಅವೆರಡೂ ವಿರುದ್ಧಾರ್ಥಕಗಳು ಎನ್ನುತ್ತಾರೆ. ಇವುಗಳಲ್ಲಿ ಪರಿಮಾಣದ ಅಥವಾ ಗುಣ ನೆಲೆಯಲ್ಲಿ ವಿರೋಧವನ್ನು ಸೂಚಿಸುವ ಬಗೆಗಳಿವೆ. ಉದಾ:ದೊಡ್ಡ/ಚಿಕ್ಕ, ಉದ್ದ/ಅಗಲ, ಎತ್ತರ/ಕುಳ್ಳ, ಹಾಗಿಲ್ಲದೆ ಕೇವಲ ಸ್ಥಿತಿಸೂಚಕ ನೆಲೆಯ ವಿರೋಧವನ್ನುಳ್ಳ ಬಗೆಗಳಿವೆ. ಗಂಡು/ಹೆಣ್ಣು, ಸ್ವತಂತ್ರ/ಬಂಧಿ ಮತ್ತೆ ಕೆಲವು ಜೋಡಿಗಳು ಕ್ರಿಯಾ ಪರ್ಯಾಯಗಳನ್ನು ಸೂಚಿಸುತ್ತವೆ ಉದಾ: ಏಳು/ಕೂರು, ಕೊಳ್ಳು/ಮಾರು, ಶೋಷಕ/ಶೋಷಿತ, ಪಾಲಕ/ಪೋಷಿತ ಇತ್ಯಾದಿ.

ಹೀಗೆ ಇನ್ನೂ ಬೇರೆ ಬೇರೆ ಬಗೆಯ ರೂಪಾವಳಿಗಳನ್ನು ಭಾಷೆಯಲ್ಲಿ ಗುರುತಿಸಲು ಅವಕಾಶಗಳಿವೆ. ಮೆದುಳಿನಲ್ಲಿರುವ ನೆನಪಿನ ಪದಕೋಶದಲ್ಲಿ ನಮೂದುಗಳು ಆಯಾ ಪದಗಳ ಅರ್ಥವಲಯದೊಡನೆ ಸಂಬಂಧವನ್ನು ಹೊಂದಿರುತ್ತವೆಂದು ಈ ಮೇಲಿನ ವಿವರಣೆಯಿಂದ ಗೊತ್ತಾಗುತ್ತದೆ.

ವಾಕ್ಯಾರ್ಥದ್ದು ಇನ್ನೊಂದು ಲೋಕ. ವಾಕ್ಯದಲ್ಲಿ ಪದಗಳಿರುತ್ತವೆ. ಪದಗಳಿಗೆ ಇರುವ ಅರ್ಥಕ್ಕೂ ವಾಕ್ಯದ ಇಡಿಯಾದ ಅರ್ಥಕ್ಕೂ ಇರುವ ಸಂಬಂಧ ಎಂಥದು? ಪದಗಳ ಅರ್ಥಗಳನ್ನು ಒಟ್ಟಾಗಿ ಜೋಡಿಸಿದಾಗ ವಾಕ್ಯದ ಅರ್ಥ ಉತ್ಪತ್ತಿಯಾಗುವುದಿಲ್ಲ. ಆ ವಾಕ್ಯದಲ್ಲಿರುವ ಪದಗಳ ಅರ್ಥಭಾವಗಳ ಸಂಯೋಜನೆಯಿಂದ ವಾಕ್ಯಾರ್ಥ ರೂಪಗೊಳ್ಳುತ್ತದೆ. ಇದನ್ನು ತಾತ್ಪರ್ಯಾರ್ಥವೆಂತಲೂ ಹೇಳುತ್ತಾರೆ. ವಾಕ್ಯದ ತಾತ್ಪರ್ಯಾರ್ಥದಲ್ಲಿ ಹಲವು ಅಂಶಗಳು ಸೇರುತ್ತವೆ. ಪದಗಳ ಅರ್ಥವ್ಯಾಪ್ತಿಯಲ್ಲಿ ಈ ವಾಕ್ಯಕ್ಕೆ ಸಂಬಂಧಿಸಿದಂತೆ ಯಾವ ಅಂಶ ಮುಖ್ಯವೆಂದು ಸರಿಯಾಗಿ ಪರಿಗಣಿಸದಿದ್ದರೆ ತಾತ್ಪರ್ಯಾರ್ಥ ಮೂಡುವುದೇ ಇಲ್ಲ. ಸರಳವಾದ ಈ ವಾಕ್ಯವನ್ನು ನೋಡಿ: ಮಗುವಿನ ತೊದಲು ಮಾತು ಕೇಳಿ ಬಿದ್ದುಬಿದ್ದು ನಕ್ಕರು. ಇಲ್ಲಿ ಬಿದ್ದುಬಿದ್ದು ಎಂಬ ರಚನೆಯ ಅರ್ಥವನ್ನು 'ತುಂಬಾ' ಎಂದಷ್ಟೇ ಗ್ರಹಿಸದೆ ಹೋದರೆ ಈ ವಾಕ್ಯದ ಸರಿಯಾದ ಅರ್ಥ ಮೂಡುವುದೇ ಇಲ್ಲ. ಎಷ್ಟೋ ವೇಳೆ ವಾಕ್ಯದ ಪದಗಳ ತೋರಿಕೆಯ ಅರ್ಥಕ್ಕೂ ತಾತ್ಪರ್ಯಾರ್ಥಕ್ಕೂ ಪರಸ್ಪರ ವಿರೋಧವೇ ಇರುವುದು ಸಾಧ್ಯ. 'ನೀನೇ ಮಹಾ ಬುದ್ಧಿವಂತ' ಎಂಬ ವಾಕ್ಯದ ತಾತ್ಪರ್ಯಾರ್ಥ 'ನೀನು ದಡ್ಡ', ಎಂದೂ ಇರಬಹುದಷ್ಟೆ. ಹೀಗೆ ವಾಕ್ಯಾರ್ಥ ನಿರ್ಣಯ ಕ್ಲಿಷ್ಟವಾದ ಸಂಗತಿ. ಆದರೆ ವ್ಯವಹಾರದಲ್ಲಿ ಭಾಷಿಕರು ಈ ಕ್ಲಿಷ್ಟತೆಯನ್ನು ನಿವಾರಿಸಿಕೊಳ್ಳುತ್ತಾರೆ. ಅದಕ್ಕೆ ನೆರವಾಗುವ ಹಲವಾರು ಸಂಗತಿಗಳಿವೆ. ಸಾಮಾಜಿಕ ಸಂದರ್ಭ ಅಂಥದೊಂದು ಸಂಗತಿ. ವಾಕ್ಯವನ್ನು ಯಾವ ಸಾಮಾಜಿಕ ಸಂದರ್ಭದಲ್ಲಿ ಬಳಸಲಾಗಿದೆ ಎಂಬುದನ್ನು ಅವಲಂಬಿಸಿ ಆ ವಾಕ್ಯದ ತಾತ್ಪರ್ಯಾರ್ಥ ನಿಗದಿಗೊಳ್ಳುತ್ತದೆ. ಇದು ಪ್ರತ್ಯೇಕ ವಿಶ್ಲೇಷಣೆಗೆ ಅನುವು ಮಾಡಿಕೊಡುವ ವಿಷಯವಾಗಿದೆ.

# ಭಾಷೆಯೆಂಬ ಗೋಡೆ

ಭಾಷೆ ಮನುಷ್ಯರ ನಡುವೆ ಸಂಪರ್ಕ ಬೆಳೆಸಲು ಇರುವ ಮುಖ್ಯ ಸಾಧನವೆಂದು ನಾವು ತಿಳಿದಿದ್ದೇವೆ. ಆದರೆ ಭಿನ್ನ ಭಾಷಿಕ ಸಮುದಾಯಗಳಿಗೆ ಸೇರಿದ ವ್ಯಕ್ತಿಗಳ ನಡುವೆ ಅವರವರ ಭಾಷೆಗಳು ಸಂಪರ್ಕಕ್ಕೆ ನೆರವಾಗುವುದಿಲ್ಲ. ಭಾಷೆ ಅಲ್ಲಿ ಗೋಡೆ. ನಮ್ಮ ಭಾಷೆಯನ್ನಾಡದ ಜನರಿರುವ ಪ್ರದೇಶಗಳಿಗೆ ಪ್ರವಾಸಕ್ಕೆ, ಹೆಚ್ಚಿನ ಶಿಕ್ಷಣಕ್ಕೆ ವಾಣಿಜ್ಯೋದ್ದೇಶಗಳಿಗೆ ನಾವು ಹೋದಾಗ ನಮ್ಮ ಭಾಷೆ ನಮಗೆ ನೆರವಾಗುವುದಿಲ್ಲ. ಭಾರತದ ವಿವಿಧ ರಾಜ್ಯಗಳಿಗೆ ಹೋದಾಗ ಇಂಥ ಪರಿಸ್ಥಿತಿಯನ್ನು ಎದುರಿಸುವುದು ಅನಿವಾರ್ಯ. ತಮಿಳುನಾಡಿನಲ್ಲಿ ಯಾರೂ ತಮಿಳನ್ನು ಬಿಟ್ಟು ಬೇರೆ ಮಾತಾಡುವುದಿಲ್ಲ. ಎಲ್ಲಾ ಬೋರ್ಡುಗಳೂ ತಮಿಳಿನಲ್ಲಿರುತ್ತವೆ ಎಂದು ಕನ್ನಡಿಗರು ಗೊಣಗುತ್ತಾರೆ. ಬಂಗಾಳಿಗಳು ಕೇರಳಕ್ಕೆ ಬಂದರೆ, ಕೇರಳದವರು ಅಸಾಮಿಗೆ ಹೋದರೆ, ಅವರೂ ಇಂಥದೇ ಮಾತನ್ನು ಆಡುವುದರಲ್ಲಿ ಆಶ್ಚರ್ಯವಿಲ್ಲ.

ಸಾಮಾಜಿಕ ಪರಿವರ್ತನೆಯಿಂದಾಗಿ ಬೇರೆ ಬೇರೆ ಭಾಷೆಗಳನ್ನು ಬಲ್ಲವರು ಪರಸ್ಪರ ಸಂಪರ್ಕ ಬೆಳೆಸಬೇಕಾದ ಪರಿಸ್ಥಿತಿ ಈಗ ಎಂದಿಗಿಂತ ಹೆಚ್ಚಾಗಿದೆ. ದೀರ್ಘಕಾಲದ ಭಾಷಾಸಂಪರ್ಕದ ಪರಿಣಾಮಗಳು ಬೇರೆ. ನಾವಿಲ್ಲಿ ಗಮನಿಸುತ್ತಿರುವುದು ಕ್ಲುಪ್ತಕಾಲದ ಭಾಷಾಸಂಪರ್ಕದ ಸಂದರ್ಭಗಳನ್ನು. ಮೇಲೆ ಹೇಳಿದಂತೆ ಪ್ರವಾಸಿಗರು, ವಾಣಿಜ್ಯ ವ್ಯವಹಾರಗಳಿಗಾಗಿ ಬೇರೆ ಬೇರೆ ಪ್ರದೇಶಗಳಿಗೆ ಹೋಗುವವರು, ಶಿಕ್ಷಣಗಳಿಗೆ ಅನ್ಯಭಾಷಾ ಪ್ರದೇಶಗಳಿಗೆ ಹೋಗುವವರು, ವಿವಿಧ ಬಗೆಯ ಮಾಹಿತಿಗಳನ್ನು ಅನ್ವೇಷಿಸುತ್ತಿರುವವರು, ದಿನವೂ ಇಂಥ ಇಕ್ಕಟ್ಟಿನ ಸಂದರ್ಭಗಳನ್ನು ಎದುರಿಸುತ್ತಾರೆ. ಭಾಷೆಯ ತೊಡಕಿನಿಂದಾಗಿ ವ್ಯವಹಾರಗಳು ನಿಲ್ಲುವಂತಾಗಬಾರದು. ನಮ್ಮ ಗಮನಕ್ಕೆ ಬಾರದೇ ಉಳಿಯುವ ದಿನದಿನದ ಇಂಥ ಸಂದರ್ಭಗಳಿಗೆ ಪರಿಹಾರಗಳನ್ನು ಕಂಡುಕೊಳ್ಳಲಾಗುತ್ತಿದೆ.

ಸಾಮಾನ್ಯವಾಗಿ ಭಾಷೆಯು ಗೋಡೆಯಾದಾಗ, ಸಂವಹನಕ್ಕೆ ತೊಡಕುಂಟಾದಾಗ, ಎರಡು ವಿಧಾನಗಳನ್ನು ಅನುಸರಿಸಿ ಪರಿಹಾರ ಕಂಡುಕೊಳ್ಳುವ ಪರಿಪಾಠವಿದೆ. 1. ಒಂದು ಸಮಾನಭಾಷೆಯನ್ನು ಆಶ್ರಯಸುವುದು 2. ತರ್ಜುಮೆಗಳ, ತರ್ಜುಮೆಗಾರರ ಮೊರೆ ಹೋಗುವುದು. ಸಮಾನಭಾಷೆಯೆಂದರೆ ಸಂವಹನದಲ್ಲಿ ತೊಡಗಿರುವವರಿಗೆ ಪರಿಚಯವಿರುವ ಭಾಷೆ. ಇದನ್ನು ಸಂಪರ್ಕಭಾಷೆಯೆಂದೂ ಕರೆಯಬಹುದು. ಈ ಸಂಪರ್ಕಭಾಷೆ ಸಂವಹನದ ತೊಡಕನ್ನು ಎದುರಿಸುವವರ ಮೊದಲ ಭಾಷೆಯಾಗಿರಬೇಕಿಲ್ಲ.

ಕೇರಳಕ್ಕೆ ನೀವು ಹೋಗಿ ಅಲ್ಲಿಯ ಬಸ್ ನಿಲ್ದಾಣದಲ್ಲಿ ಟಿಕೇಟ್ ಪಡೆಯಲು ಯತ್ನಿಸುವಾಗ ಇಂಗ್ಲೀಶ್ ಬಳಸುವಿರಿ ಎಂದುಕೊಳ್ಳೋಣ. ನಿಮಗಾಗಲೀ ಟಿಕೇಟ್ ಕೌಂಟರಿನಲ್ಲಿ ಕುಳಿತ ವ್ಯಕ್ತಿಗಾಗಲಿ ಇಂಗ್ಲಿಶ್ ಮೊದಲ ಭಾಷೆಯಲ್ಲ. ಆದರೆ ಸಂಪರ್ಕ ಭಾಷೆಯಾಗಿ ಅದನ್ನು ಬಳಸಿ ಆ ಸಂದರ್ಭದ ಸಮಸ್ಯೆಯನ್ನು ಇಬ್ಬರೂ ಪರಿಹರಿಸಿಕೊಳ್ಳಬಹುದು.

ಸಂಪರ್ಕಭಾಷೆಯನ್ನು ಯೋಜಿತ ಮತ್ತು ಅಯೋಜಿತವೆಂಬ ಎರಡು ನೆಲೆಗಳಲ್ಲಿ ನೋಡಲು ಸಾಧ್ಯ. ವಿಭಿನ್ನ ಭಾಷಾಸಮುದಾಯಗಳನ್ನೊಳಗೊಂಡ ರಾಜ್ಯವ್ಯವಸ್ಥೆಯಲ್ಲಿ ಸರಕಾರವೇ ಸಂಪರ್ಕಭಾಷೆಯನ್ನು ಆಯ್ದು ಸೂಚಿಸಬಹುದು. ಭಾರತದಲ್ಲಿ ಇಂಗ್ಲಿಶನ್ನು ಹೀಗೆ ಸಂಪರ್ಕ ಭಾಷೆಯನ್ನಾಗಿ ಯೋಜಿಸಲಾಗಿದೆ. ರಾಷ್ಟ್ರೀಯಮಟ್ಟದ ವಿಚಾರ ಗೋಷ್ಠಿಗಳಲ್ಲಿ ಶಾಸಕಾಂಗದ ಸಭೆಗಳಲ್ಲಿ ನ್ಯಾಯಾಲಯಗಳಲ್ಲಿ ಇಂಗ್ಲಿಶನ್ನು ಅಧಿಕೃತವಾಗಿ ಬಳಸಲಾಗುತ್ತದೆ. ಬಹುಮಟ್ಟಿಗೆ ಅಂಥ ಸಂದರ್ಭಗಲ್ಲಿ ಭಾಗಿಯಾಗುವ ಯಾರಿಗೂ ಅದು(ಇಂಗ್ಲಿಶ್)ಮೊದಲ ಭಾಷೆಯಾಗಿರುವುದಿಲ್ಲ. ಅವರೆಲ್ಲರೂ ಬೇರೆ ಬೇರೆ ಭಾಷೆಗಳನ್ನಾಡುವವರಾಗಿದ್ದು ಆ ಭಾಷೆಗಳೇ ಗೋಡೆಗಳಾಗಿರುತ್ತವೆ. ಇಂಗ್ಲಿಶ್ ಬಳಸಿ ಈ ಮಿತಿಯನ್ನು ಮೀರುವ ಯತ್ನವನ್ನು ಮಾಡುತ್ತಾರೆ.

ಇದಲ್ಲದೆ ಆಯಾ ಸಂದರ್ಭಕ್ಕೆ ಅನುಗುಣವಾಗಿ ಸಂಪರ್ಕಭಾಷೆಯೊಂದನ್ನು ಅವಲಂಬಿಸುವ ವಿಧಾನವೂ ಬಳಕೆಯಲ್ಲಿದೆ. ಇದು ಆಯೋಜಿತ. ಇಂಥದೇ ಸಂಪರ್ಕ ಭಾಷೆಯನ್ನು ಬಳಸಬೇಕೆಂಬ ಪೂರ್ವಯೋಜನೆ ಈ ನಿದರ್ಶನಗಳಿಗಿರುವುದಿಲ್ಲ. ಆಯಾ ಸಂದರ್ಭದ ಅವಶ್ಯಕತೆಯುನ್ನು ಅನುಸರಿಸಿ ಪರಿಹಾರವನ್ನು ಕಂಡುಕೊಳ್ಳಲಾಗುತ್ತದೆ.

ಭಾಷೆಯ ಮಿತಿಗಳನ್ನು ಮೀರುವ ಇನ್ನೊಂದು ವಿಧಾನ ತರ್ಜುಮೆ ಮತ್ತು ತರ್ಜುಮೆಗಾರರನ್ನು ಅವಲಂಬಿಸುವುದು. ಪ್ರವಾಸಿ ಸ್ಥಳಗಳಲ್ಲಿ, ವಾಣಿಜ್ಯೋದ್ಯಮಗಳಲ್ಲಿ, ನಿರೀಕ್ಷಿತ ಭಾಷಿಕರು ವ್ಯವಹರಿಸುವುದು ಖಚಿತವಿರುವಾಗ ಮಾಹಿತಿಯ ವಿವರಗಳನ್ನು ಎಲ್ಲ ಭಾಷೆಗಳಲ್ಲೂ ತರ್ಜುಮೆ ಮಾಡಿ ದೊರಕುವಂತೆ ಮಾಡುತ್ತಾರೆ. ಹಂಪಿ ರಥ ಬೀದಿಯ ಅಂಗಡಿಗಳಲ್ಲಿ, ಹೋಟೆಲ್‌ಗಳಲ್ಲಿ ತಿಂಡಿಯ ವಿವರಗಳನ್ನು ಜರ್ಮನ್, ಫ್ರೆಂಚ್ ಭಾಷೆಗಳಲ್ಲಿ, ಕೆಲವು ಕಡೆ ಹಿಬ್ರೂ ಲಿಪಿಗಳಲ್ಲಿ ಬರೆದಿರುವುದನ್ನು ಗಮನಿಸಬಹುದು. ವಿವಿಧ ಸಾಮಗ್ರಿಗಳನ್ನು ಮಾರುಕಟ್ಟೆಗೆ ತರುವ ಕಂಪನಿಗಳು ಆಯಾ ಸಾಮಗ್ರಿಗಳ ಬಗ್ಗೆ ನೀಡುವ ಮಾಹಿತಿಗಳನ್ನು, ಬಳಕೆಯ ವಿಧಾನಗಳನ್ನು ಎಲ್ಲಾ ಗ್ರಾಹಕರ ಭಾಷೆಗಳಲ್ಲೂ ಅನುವಾದ ಮಾಡಿಕೊಡುತ್ತಾರೆ.

ಹಲವಾರು ಸಂದರ್ಭಗಳಲ್ಲಿ ತರ್ಜುಮೆಗಾರರು ಭಾಷೆಯ ಮಿತಿಗಳನ್ನು ಮೀರಲು ನೆರವಾಗುತ್ತಾರೆ. ವಿವಿಧ ದೇಶಗಳ ನಾಯಕರು ಭೇಟಿಯಾದಾಗ, ಉನ್ನತ ಮಟ್ಟದ ಸಭೆಗಳಲ್ಲಿ, ಉಪನ್ಯಾಸಗಳಲ್ಲಿ ಸಂಪರ್ಕಭಾಷೆಯಲ್ಲಿ ತರ್ಜುಮೆ ಮಾಡುವವರನ್ನು ನಿಯೋಜಿಸಲಾಗುತ್ತದೆ. ಸಂಪರ್ಕಭಾಷೆಯಿಲ್ಲದೆಯೂ ತರ್ಜುಮೆಗಾರರು ಈ ಸಂದರ್ಭಗಳನ್ನು ನಿರ್ವಹಿಸಬಲ್ಲರು, ಕನ್ನಡ ಮಾತ್ರ ಮಾತನಾಡುವ ನಾಯಕರು

ತಮಿಳು ಮಾತ್ರ ಬಳಸುವ ನಾಯಕರನ್ನು ಭೇಟಿಯಾಗಿದ್ದಾರೆಂದುಕೊಳ್ಳೋಣ. ಆಗ ಕನ್ನಡ ಮತ್ತು ತಮಿಳನ್ನು ಬಲ್ಲ ತರ್ಜುಮೆ ಮಾಡುವವರೊಬ್ಬರೂ ಇಬ್ಬರು ನಾಯಕರ ಮಾತುಗಳನ್ನೂ ತರ್ಜುಮೆ ಮಾಡಬಹುದು. ಅಥವಾ ಇಬ್ಬರು ತರ್ಜುಮೆಗಾರರು ಇರುವುದೂ ಸಾಧ್ಯ. ಕನ್ನಡದ ನಾಯಕರ ತರ್ಜುಮೆಗಾರರು ತಮಿಳಿನಿಂದ ಕನ್ನಡಕ್ಕೆ, ತಮಿಳುನಾಯಕರ ತರ್ಜುಮೆಗಾರರು ಕನ್ನಡದಿಂದ ತಮಿಳಿಗೆ ತರ್ಜುಮೆ ಮಾಡುತ್ತಿರುತ್ತಾರೆ. ಪಾರ್ಲಿಮೆಂಟ್, ವಿಶ್ವಸಂಸ್ಥೆ, ವಿವಿಧ ರಾಷ್ಟ್ರಗಳ ಶೃಂಗಸಭೆಗಳಲ್ಲಿ ಏಕಕಾಲಕ್ಕೆ ಒಂದಕ್ಕಿಂತ ಹೆಚ್ಚು ಭಾಷೆಗಳಲ್ಲಿ ತರ್ಜುಮೆ ಮಾಡುವ ಕ್ರಮವಿದೆ.

ಭಾಷೆಯ ಮಿತಿಯ ಅನುಭವ ಈಗಾಗಲೇ ಸೂಚಿಸಿದಂತೆ ಹಲವು ನೆಲೆಗಳಲ್ಲಿ ಒದುಗುತ್ತದೆ. ವಿವಿಧ ಭಾಷೆಯ ಜನರು ಈ ಅನುಭವಗಳನ್ನು ಮೀರಲು ನಡೆಸುವ ಯತ್ನಗಳು ಬೇರೆ ಬೇರೆಯಾಗಿರುತ್ತವೆ. ವಸಾಹತುಗಳಾಗಿದ್ದು ಈಗ ಸ್ವಯಮಾಡಳಿತವನ್ನು ಹೊಂದಿರುವ ದೇಶಗಳ ಜನರು ಸಂಪರ್ಕಭಾಷೆಯನ್ನಾಗಿ ವಸಾಹತುಗಾರರ ಭಾಷೆಯನ್ನೇ ಉಳಿಸಿಕೊಂಡಿರುವ ಪ್ರಸಂಗಗಳು ಹೆಚ್ಚು. ಕರ್ನಾಟಕದಲ್ಲಿ ಅಧ್ಯಯನ ಮಾಡುವವರು ಫ್ರೆಂಚ್, ಜರ್ಮನ್, ಇಟಾಲಿಯನ್ ಮುಂತಾದ ಭಾಷೆಗಳಲ್ಲಿರುವ ಮಾಹಿತಿಯನ್ನು ಇಂಗ್ಲಿಶಿನ ಮೂಲಕ ಪಡೆಯುತ್ತಾರೆ. ಹೀಗೆ ಸಂಪರ್ಕಭಾಷೆಯ ಮೂಲಕ ಮಾಹಿತಿಯನ್ನು ಪಡೆಯದಿರುವುದು ಅಧ್ಯಯನದ ಕೊರತೆಯಾಗುವುದು ಸಾಧ್ಯ. ಹಾಗಾಗಿ ಅಧ್ಯಯನಕಾರರ ಗ್ರಂಥಸೂಚಿ, ಲೇಖನಸೂಚಿಗಳಲ್ಲಿ ಬಹುಪಾಲು ಇಂಗ್ಲಿಶ್ ಭಾಷೆಗಳ ಆಕರಗಳೇ ಇರುತ್ತವೆ. ಆದರೆ ಅನ್ಯದೇಶೀಯ ಸಂದರ್ಭಗಳೆಲ್ಲವೂ ಹೀಗೆಯೇ ಇರುವುದಿಲ್ಲ. ವಿಜ್ಞಾನದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಅಧ್ಯಯನಗಳು ಏಕಕಾಲಕ್ಕೆ ಬೇರೆ ಬೇರೆ ದೇಶಗಳಲ್ಲಿ ನಡೆಯುತ್ತಿರುತ್ತವೆ. ಆ ಸಂಬಂಧಿತ ಸಂಪ್ರಬಂಧಗಳು ವಿವಿಧ ಭಾಷೆಗಳಲ್ಲಿ ಪ್ರಕಟಗೊಳ್ಳುತ್ತಿರುತ್ತವೆ. ಯುರೋಪು ಮತ್ತು ಅಮೆರಿಕಾದ ಅಧ್ಯಯನಕಾರರು ತಮ್ಮದಲ್ಲದ ಭಾಷೆಗಳಲ್ಲಿ ಹೀಗೆ ಪ್ರಕಟವಾಗುವ ಮಾಹಿತಿಯನ್ನು, ಶೋಧಗಳನ್ನು ಪರಿಚಯಮಥಿ ಬಳಕೆ ಕುರಿತ ಸಂಶೋಧನೆಗಳಿಂದ ತಿಳಿದುಬಂದಿದೆ. ಅಂದರೆ ಈ ಭಾಷಿಕರು- ಮುಖ್ಯವಾಗಿ ಇಂಗ್ಲಿಶ್ ಭಾಷಿಕರು, ತಮ್ಮ ಭಾಷೆಯ ಮಿತಿಯನ್ನು ಮೀರಲು ವಿಶೇಷವಾಗಿ ಯತ್ನಿಸುವುದಿಲ್ಲ.

**ಮಾರುಕಟ್ಟೆಯ ಜಗತ್ತು:** ಸಾಮಾನ್ಯ ಸಂತೆಯ ಮಾರಾಟಗಾರರೂ ಕೊಳ್ಳುವವರ ಭಾಷೆಯಲ್ಲಿ ತಮ್ಮ ವ್ಯವಹಾರವನ್ನು ನಡೆಸುವುದು ಲಾಭದಾಯಕವೆಂದು ಬಲ್ಲರು. ಹಲವು ಭಾಷೆಗಳಲ್ಲಿ ವ್ಯವಹಾರಕ್ಕೆ ಅವಶ್ಯವಾದ ತಜ್ಞತೆಯನ್ನು ಪಡೆದು ಅವರು ವ್ಯಾಪಾರ ನಡೆಸುತ್ತಾರೆ. ಬೃಹತ್ ಪ್ರಮಾಣದ ವ್ಯಾಪಾರ ನಡೆಸುವ ವ್ಯಾಪಾರೀ ಸಂಸ್ಥೆಗಳೂ ಈ ಸಾಮಾನ್ಯ ನಿಯಮವನ್ನು ಅನುಸರಿಸುವುದು ಅನಿವಾರ್ಯ. ಆದರೆ ವಸಾಹತುಗಳಲ್ಲಿ ಸಾಮಗ್ರಿಯನ್ನು ತಂದುತುಂಬುವ ಬಹುರಾಷ್ಟ್ರೀಯ ಕಂಪೆನಿಗಳು ಮಾರುಕಟ್ಟೆಯ ಕೆಳಸ್ತರದ ಮಾತು ಹೆಚ್ಚು ಬಳಕೆಯಾಗುವ ಸ್ತರದ ವ್ಯವಹಾರವನ್ನು ಸ್ಥಳೀಯರಿಗೆ ಹಾಗೂ ಆ ಮೂಲಕ ಸ್ಥಳೀಯ ಭಾಷೆಗಳಿಗೆ ಮೀಸಲಿರಿಸಿ, ಉನ್ನತ ಸ್ತರದಲ್ಲಿ ತಮ್ಮ ಭಾಷೆಯನ್ನು ಮುಖ್ಯವಾಗಿ ಇಂಗ್ಲಿಶ್ ಬಳಸುವುದು ವಾಡಿಕೆ. ಇದು ಒಂದು ವ್ಯಾವಹಾರಿಕ

ತಂತ್ರವಾಗಿ ಕಾಣುತ್ತದೆ. ಮಾರುಕಟ್ಟೆಗಳು ಮೊದಲು ವಸಾಹತುಗಳಾಗಿದ್ದವು. ಅದುದರಿಂದ ಸಹಜವಾಗಿಯೇ ಇಂಗ್ಲಿಶ್ ಕಲಿಕೆ ಅಲ್ಲಿ ಬೇರೂರಿತ್ತು. ವಾಣಿಜ್ಯ, ಕೈಗಾರಿಕೆ ತಂತ್ರಜ್ಞಾನದ ವಲಯಗಳಲ್ಲಿ ಇಂಗ್ಲಿಶ್‌ನಲ್ಲಿ ವ್ಯವಹರಿಸುವುದು ಒಪ್ಪಿತವಾದ ಕಾರ್ಯವಿಧಾನವೆಂಬಂತೆ ತೋರುತ್ತಿತ್ತು. ಆದರೆ ಈಗ ಪರಿಸ್ಥಿತಿ ಹಾಗಿಲ್ಲ. ಮಾರುಕಟ್ಟೆಯ ತುಯ್ತಗಳು ಬದಲಾಗಿವೆ. ಸ್ಥಳೀಯರ ಭಾಷೆಗಳನ್ನು ಸೀಮಿತ-ಬಳಕೆಗೆ ಮಾತ್ರ ಇರಿಸಿಕೊಳ್ಳುವುದು ಅಸಾಧ್ಯವೆಂದು ಕಂಪೆನಿಗಳ ಮಾಲೀಕರಿಗೆ ಅನ್ನಿಸತೊಡಗಿದೆ. ಇಂಗ್ಲಿಶ್ ಕೇಂದ್ರಿತ ದೃಷ್ಟಿಯನ್ನು ಬಿಟ್ಟುಕೊಡುವುದು ಅವಶ್ಯವಾಗಿದೆ.

ಇಂಥ ಬದಲಾವಣೆಗಳು ವ್ಯಾಪಕವಾಗಿ ನಡೆದಿಲ್ಲ. ಆದರೂ ಭಾಷೆಯ ಮಿತಿಯನ್ನು ಮೀರುವ ಪ್ರಯತ್ನಗಳು ಈಗ ಏಕಪಕ್ಷೀಯವಾಗಿಲ್ಲ. ವ್ಯವಹಾರದಲ್ಲಿ ತೊಡಗಿರುವವರಲ್ಲಿ ಪರಸ್ಪರ ಇಂಥ ಮಿತಿಗಳನ್ನು ಬೇರೆ ಬೇರೆ ಪ್ರಮಾಣದಲ್ಲಿ ಮೀರುವ ಕ್ರಮವನ್ನು ಅನುಸರಿಸುತ್ತಿದ್ದಾರೆ. ಇಂಗ್ಲಿಶ್ ಒಂದು ಪ್ರಧಾನ ಭಾಷೆಯಾಗಿಲ್ಲದ ಭೂಪ್ರದೇಶಗಳಲ್ಲಿ ವ್ಯಾವಹಾರಿಕ ಜಗತ್ತನ್ನು ವಿಸ್ತರಿಸಲು ಇಂಥ ಕ್ರಮಗಳು ಅನಿವಾರ್ಯವಾಗಿವೆ. ಇದಕ್ಕೆ ಇನ್ನೊಂದು ಬಲವಾದ ಕಾರಣವೂ ಇದೆ. ವ್ಯವಹಾರಕ್ಕೆ ತಕ್ಕಷ್ಟು ಇಂಗ್ಲಿಶ್ ಬಲ್ಲವರಿಂದ ಹೇಗೋ ವ್ಯಾಪಾರದ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬಹುದೆಂದು ತಿಳಿದಿದ್ದ ಕಾಲ ಬದಲಾಗಿದೆ. ಇಂಗ್ಲಿಶ್ ಅನ್ನು ಅನ್ಯಭಾಷೆಯನ್ನಾಗಿ ಕಲಿತವರು ಈಗ ಎಷ್ಟು ಬಗೆಯಲ್ಲಿ ಆ ಭಾಷೆಯನ್ನು ಬಳಸುತ್ತಿದ್ದಾರೆಂದರೆ ಅಂಥ ಭಾಷೆಗಳ ನಡುವೆ ಸಂವಹನ ಕೂಡ ತೊಡಕುಗಳನ್ನು ತರುವಂತಿದೆ. ಹೀಗಾಗಿ ಸಂಪರ್ಕಭಾಷೆಯ ಪರಿಕಲ್ಪನೆಯೇ ಬದಲಾಗತೊಡಗಿದೆ.

ಭಾಷೆಯ ಮಿತಿಗಳನ್ನು ಮೀರಲು ಸಂಪರ್ಕಭಾಷೆ ಮತ್ತು ತರ್ಜುಮೆಯ ವಿಧಾನಗಳನ್ನು ಈಗ ವ್ಯಾಪಕವಾಗಿ ಬಳಸಲಾಗುತ್ತಿದೆಯಷ್ಟೆ. ಇದರಿಂದಾಗಿ ಅನ್ಯಭಾಷೆಯ ಕಲಿಕೆ ಮತ್ತು ಬೋಧನೆಯ ವಿಧಾನಗಳಲ್ಲೂ ಬದಲಾವಣೆಗಳಾಗಿವೆ. ವಿಶೇಷ ಉದ್ದೇಶಕ್ಕಾಗಿ ಒಂದು ಭಾಷೆಯನ್ನು ಬಳಸಬೇಕಾಗಿ ಬರುವುದರಿಂದ ಭಾಷೆಯ ಕಲಿಕೆಗೂ ಹೊಸ ವಿಧಾನಗಳು ಅವಶ್ಯ. ಉದಾಹರಣೆಗೆ, ಪ್ರೇಕ್ಷಣೀಯ ಸ್ಥಳದಲ್ಲಿ ಮಾರ್ಗದರ್ಶಿಯಾಗಿರುವ ವ್ಯಕ್ತಿ ಹಲವು ಭಾಷೆಗಳಲ್ಲಿ ವ್ಯವಹರಿಸಬೇಕಾಗುತ್ತದೆ. ಆದರೆ ಆ ಎಲ್ಲ ಭಾಷೆಗಳಲ್ಲೂ ಪೂರ್ಣ ಪ್ರಮಾಣದ ಪರಿಣತಿ ಅವಶ್ಯವಲ್ಲ. ಪ್ರವಾಸಿಗರಿಗೆ ಮಾಹಿತಿ ನೀಡಲು, ಸ್ಥಳದ ವಿವರಗಳನ್ನು ಒದಗಿಸಲು ಅವಶ್ಯವಾದಷ್ಟು ವ್ಯವಹಾರವನ್ನು ಅಯಾ ಭಾಷೆಗಳಲ್ಲಿ ಒದಗಿಸಲು ಆ ವ್ಯಕ್ತಿಗೆ ಸಾಧ್ಯವಾಗಬೇಕು. ಇದಕ್ಕೆ ಬೇಕಾದಷ್ಟು ಭಾಷಾಸಾಮರ್ಥ್ಯವನ್ನು ಪಡೆದಿರಬೇಕು. ಇಂಥ ಪ್ರಸಂಗಗಳ ನಿರ್ವಹಣೆಗೆ ಅನುಕೂಲವಾಗಲು, ಕ್ಲುಪ್ತಕಾಲದಲ್ಲಿ ಉದ್ದೇಶಿತ ಭಾಷಾಸಾಮರ್ಥ್ಯವನ್ನು ಪಡೆಯಲು ಅವಕಾಶ ನೀಡುವ ವಿಶೇಷ ಭಾಷಾಬೋಧನಾ ವಿಧಾನಗಳು ಈಗ ಪ್ರಪಂಚಾದ್ಯಂತ ಬೆಳೆಯುತ್ತಿವೆ.

ಕನ್ನಡಭಾಷಾ ಬಳಕೆಯ ನೆಲೆಗಳನ್ನು ಸಾಂಸ್ಕೃತಿಕ ಗುರುತಿನ ಮಹತ್ವವಾಗಿ ಮಂಡಿಸುವ ಚಿಂತನೆಯು, ಜಾಗತಿಕ ಮಾರುಕಟ್ಟೆಯ ಭಾಗವಾಗಿ ಬದುಕನ್ನು ಒಂದೇ ಆಗಿ ಗ್ರಹಿಸಬೇಕೆಂಬ ಒತ್ತಾಯವಿರುವ ಇವತ್ತಿನ ಸನ್ನಿವೇಶದಲ್ಲಿ ಅತ್ಯಂತ ಜರೂರಿನದಾಗಿದೆ. ಯಾಕೆಂದರೆ, ಶಿಷ್ಟವೆಂದು ಮಾನ್ಯಮಾಡಿಕೊಂಡ ಸಮುದಾಯಗಳ ರಾಜಕಾರಣವು ಕನ್ನಡ ಭಾಷಿಕಪ್ರಭೇದಗಳನ್ನು ದೂರ ಇಡುವುದರೊಂದಿಗೆ ಕನ್ನಡಸಂಸ್ಕೃತಿಯ ಬಹುಮುಖೀ ನೆಲೆಗಳನ್ನು ಬದಿಗೊತ್ತುತ್ತಲೇ ಬಂದಿರುವುದಕ್ಕೆ ಒಂದು ಇತಿಹಾಸವೇ ಇದೆ. ಪ್ರಭುತ್ವವು ಇದಕ್ಕೆ ಹೆಗಲೆಣೆಯಾಗಿ ನಿಂತಂತೆ ಕಾಣುತ್ತದೆ. ಕನ್ನಡವನ್ನು ಶಾಸ್ತ್ರೀಯಭಾಷೆಯಾಗಿಸುವಲ್ಲಿನ ಕಾಳಜಿ, ಸಂಸ್ಕೃತಮಯವಾಗುತ್ತಿರುವ ಆಡಳಿತ ಕನ್ನಡ ಮತ್ತು ಸಂಸ್ಕೃತ ವಿಶ್ವವಿದ್ಯಾಲಯದ ಸ್ಥಾಪನೆಯು ಇಂಥದರ ಸೂಚಕಗಳಾಗಿವೆ. ಇದರೊಂದಿಗೆ, ಕನ್ನಡಭಾಷೆಯ ಓದು-ಅಧ್ಯಯನಗಳು ಸಾರ್ವಜನಿಕವಾಗಿ ಈವರೆಗೆ ಆವಾಹಿಸಿಕೊಂಡಿರುವ ಶಿಷ್ಟಪರಂಪರೆಗಳ ಬಗೆಯು, ದೂರ ಉಳಿಸಲ್ಪಟ್ಟ ಕನ್ನಡಪರಂಪರೆಗಳನ್ನು ಒಳಗೆ ತೆಗೆದುಕೊಳ್ಳಲು ನಡೆಸುತ್ತಿರುವ ಪ್ರಯತ್ನದಲ್ಲಿ ಅದೇ(ಶಿಷ್ಟ) ಭಾಷೆಯನ್ನು ಬಳಸುತ್ತಿರುವುದರಿಂದಾಗಿ ಸೋಲುತ್ತಿವೆ. ಹೀಗಾಗಿ ಕಡೆಗಣಿಸಲ್ಪಟ್ಟ ಭಾಷೆ, ಸಮುದಾಯಗಳು, ಆ ಸಮುದಾಯಗಳ ಸಂಸ್ಕೃತಿಪರಂಪರೆಗಳನ್ನು ವ್ಯಾಖ್ಯಾನಿಸುವ ಜಾಡುಗಳಲ್ಲಿ ಕಾಣುವ ಗುರುತುಗಳು ಅಂತಿಮವಾಗಿ ಅಧಿಕಾರಸ್ಥ ನೆಲೆಯಿಂದ ಬಂದವೇ ಆಗಿದ್ದು ಅಲ್ಲಿಗೇ ಕೊಂಡೊಯ್ಯುತ್ತವೆ. ಆದ್ದರಿಂದಾಗಿ ಕಡೆಗಣಿಸಲ್ಪಟ್ಟ ಪರಂಪರೆಗಳಿಗೆ ಗುರುತುಗಳು ಅವು ಭಾಷಿಕವಾಗಿ ಕಂಡುಕೊಂಡಲ್ಲದೆ-ಕಟ್ಟಿಕೊಂಡಲ್ಲದೆ ತಾನೇ ತಾನಾಗಿ ಒದಗಿಬರುವುದಿಲ್ಲವೆಂಬ ಅರಿವನ್ನು ಕೆ.ವಿ.ಎನ್ ಅವರ ಆಲೋಚನಾ ವಿಧಾನವು ಕೊಡುತ್ತದೆ. ಕನ್ನಡ ಸಮಾಜದ ಗುರುತುಗಳನ್ನು ಕಾಣಿಸುವ ಕನ್ನಡಭಾಷೆ, ಕನ್ನಡ ಸಂಸ್ಕೃತಿಯನ್ನು ಒಳಪರಂಪರೆಗಳಲ್ಲೇ ಕಂಡುಕೊಳ್ಳುವ-ಮರುಕಟ್ಟುವ ಕೆಲಸವನ್ನು ಕೆ.ವಿ.ಎನ್ ಬಹುದಿನಗಳಿಂದಲೂ ಮಾಡುತ್ತಾ ಬರುತ್ತಿದ್ದಾರೆ. ಇದನ್ನು, ಕರ್ನಾಟಕ ಭಾಷಿಕ ಭೂಗೋಳದ, ಭಾಷಿಕ ಸಮುದಾಯಗಳ ಬಗೆಗಿನ ನಿಕರವಾದ ಮಾಹಿತಿಗಳ ಬೆನ್ನುಹತ್ತಿ ಕಾಣಿಸುತ್ತಿದ್ದಾರೆ. ಅವರು, ಕಲಿಕೆಯ ನೆಲೆಯಲ್ಲಿಯೂ ಕಲಸುಮೇಲೋಗರವಾಗಿರುವ ಕನ್ನಡ ಭಾಷಾ ರಚನೆಯ ನಿಯಮಗಳನ್ನು ಸಂಸ್ಕೃತ ಭಾಷೆ ಮತ್ತು ಇಂಗ್ಲಿಶ್ ಭಾಷೆಯ ನಿಯಮಗಳಿಂದ ಬಿಡಿಸಿ ಹೇಳುವ ಬೇರುನೆಲೆಯೂ ಇದೇ ಆಗಿದೆ. ಈ ಆಲೋಚನಾಕ್ರಮವನ್ನು, ಇದು ನಮ್ಮದೆಂದು ಎದೆಮುಟ್ಟಿ ಹೇಳಬೇಕಾದರೆ ವೈಯಕ್ತಿಕವಾದ ಬೌದ್ಧಿಕ ಚಹರೆಗಳನ್ನು ಉಳಿಸಿಕೊಳ್ಳಲು ನಡೆಸುವ ಪಾರಂಪರಿಕವಾದ ವಾಡಿಕೆಯನ್ನು ಬದಿಗಿಟ್ಟು ನೋಡುವ ಜರೂರು ನಮಗಿರಬೇಕಾಗುತ್ತದೆ.

■ ಡಾ. ಆರ್. ಚಲಪತಿ

---

179




PRAGATI GRAPHICS




ರೂ.350/-